॥ ಶ್ರೀ ॥

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ, ೫೫

# ಶ್ರೀ ಗಣೇಶ ಪುರಾಣಂ

## ಸಂಪುಟ ೭

ಅನುವಾದಕ :

ಆಸ್ಥಾನ ವಿದ್ವಾನ್, ಹಾನಗಲ್

**ಯಜ್ಞೇಶ್ವರ ಶಾಸ್ತ್ರೀ**

ಮೈಸೂರು




ಶ್ರೀ ಮಲ್ಲಿಕಾರ್ಜುನ ಪ್ರೆಸ್, ಬಿ. ಬಿ. ಗಾರ್ಡ್ 824

ಮೈಸೂರು.

1956

॥ ಶ್ರೀ ಗಣೇಶಾಯ ನಮಃ

# ಮುನ್ನುಡಿ

ಶ್ರೀ ಗಣೇಶಪುರಾಣದ ೬ ನೆಯ ಸಂಪುಟವಾದ ಈ ಹೊದ್ದಿಕೆಯಲ್ಲಿ ಸುಮಾರು ೧೨೫೦ ಶ್ಲೋಕಗಳನ್ನೊಳಗೊಂಡ ೨೬ ಅಧ್ಯಾಯಗಳು ಅಡಕವಾಗಿವೆ. ಈ ಪುರಾಣದ ಪೈಕಿ ೫೨ ಅಧ್ಯಾಯಗಳು ಮಾತ್ರ ಅವಶಿಷ್ಟವಾಗಿವೆ. ಇನ್ನು ಎರಡು ಸಂಪುಟಗಳಲ್ಲೇ ಈ ಗ್ರಂಥವು ಮುಕ್ತಾಯವಾಗುವುದು.

ಹಿಂದಿನ ಸಂಪುಟದ ಕೊನೆಯಲ್ಲಿ ಸೂಚಿಸಿದಂತೆ ಪರಮಾತ್ಮನಾದ ಮಹಾಗಣಪತಿಯು ಪಾರ್ವತಿಯ ಪ್ರಾರ್ಥನೆಯಂತೆ ಅವಳಿಗೆ ಪುತ್ರನಾಗಿ ಅವತರಿಸಿ, ಲೋಕಕಂಟಕರಾದ ದುಷ್ಟದೈತ್ಯರನ್ನು ಬಹು ಬಾಲ್ಯದಲ್ಲಿಯೇ ಲೀಲೆಯಿಂದಲೇ ; ನಿಗ್ರಹಿಸಿದುದೂ, ಅನೇಕ ಪವಾಡಗಳನ್ನು ತೋರಿಸಿದುದೂ ಮತ್ತು ವಿನತೆಯ ಪ್ರಾರ್ಥನೆಯಂತೆ ಆಕೆಯ ನೂತನ ಶಿಶು; ಮಯೂರವನ್ನು ತನ್ನ ವಾಹನವನ್ನಾಗಿ ಮಾಡಿಕೊಂಡುದೂ ಮುಖ್ಯ ಕಥೆಗಳಾದರೂ ಸೂರ್ಯೋಪಾಸನೆ, ಸೂರ್ಯ—ಸಂಜ್ಞೆಯರ ಕಥೆ ಮೊದಲಾದ ಚಿತ್ತಾಕರ್ಷಕ ಇತಿಹಾಸಗಳು ಪ್ರಾಸಂಗಿಕವಾಗಿ ಅಲ್ಲಲ್ಲಿ ಬಂದಿರುತ್ತವೆ.

ಮಾನವನ ಸುಷುಪ್ತ ಸಂಸ್ಕಾರಗಳನ್ನು ಚೇತನಗೊಳಿಸಿ ಸು-ಸಂಸ್ಕೃತನನ್ನಾಗಿ ಮಾಡಲು ಪೌರಾಣಿಕ ಗ್ರಂಥಗಳು ಬಹಳ ಮಟ್ಟಿಗೆ ಉಪಕಾರಿಯಾಗಿವೆ. ಇದನ್ನು ಮನಗಂಡು ಆಬಾಲ-ಗೋಪಾಲರಿಗೂ ಇವು ಅಳವಡುವಂತಾಗಲೆಂಬ ಪರಮೋದಾರ ಭಾವನೆಯಿಂದ ಮೈಸೂರು ಮಹಾಪ್ರಭುಗಳು ತಮ್ಮ ಆಶ್ರಿತರಾದ ಅಭಿಜ್ಞರ ಮೂಲಕ ಇವನ್ನು ಕನ್ನಡ ಭಾಷೆಗೆ ತರ್ಜುಮೆಮಾಡಿಸಿ ಅಚ್ಚುಹಾಕಿಸುತ್ತಿರುವುದು ಇಂದಿನ ಹಾಗೂ ನಾಳಿನ ಜನಾಂಗದ ಪುಣ್ಯೋದರ್ಕವೆಂಬುದರಲ್ಲಿ ಯಾವ ಸಂಶಯವೂ ಇರುವುದಿಲ್ಲ. ಇದರ ಸದುಪಯೋಗವನ್ನು ಪಡೆಯತಕ್ಕದ್ದು ಪ್ರಜೆಗಳ ಕರ್ತವ್ಯ.

ಪ್ರಾತಃಸ್ಮರಣೀಯ ಚರಿತರಾದ **ಮೈಸೂರು ರತ್ನಸಿಂಹಾಸನಾಧೀಶ್ವರ ;**

ಮೇಜರ್ ಜನರಲ್ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ., ಯವರು ಪುತ್ರ-ಕಲತ್ರ-ಬಂಧುಪರಿವಾರಯುತರಾಗಿ ಚಿರ ಕಾಲ ನಮ್ಮ ನಾಡನ್ನು ಆಳುತ್ತಿರುವಂತೆ ಮಹಾಗಣಪತಿಯು ಅನುಗ್ರಹಿಸುವಂತಾಗ ಲೆಂದು ಶ್ರೀ ಸದ್ಗುರು ಚರಣಾರವಿಂದಗಳಲ್ಲಿ ಪ್ರಾರ್ಥಿಸಿ, ಈ ಸಂಪುಟವನ್ನು ಮಹಾ ಪ್ರಭುಗಳ ದಿವ್ಯ ಸನ್ನಿಧಾನಕ್ಕೆ ರಾಜಭಕ್ತಿಯೊಡನೆ ಸಮರ್ಪಿಸಿದ್ದೇನೆ.

ಮೈಸೂರು
ಮನ್ಮಥಸಂವತ್ಸರ ಫಾಲ್ಗುನ ಶುಕ್ಲ
ತೃತೀಯಾ ಗುರುವಾರ, 15-3-56

ಹಾನಗಲ್ ಯಜ್ಞೇಶ್ವರ ಶಾಸ್ತ್ರೀ,
ಆಸ್ಥಾನವಿದ್ವಾನ್.



ಶ್ರೀ ಗಣೇಶಾಯ ನಮಃ

# ವಿಷಯಾನುಕ್ರಮಣಿಕೆ.

**೬೩ ನೆಯ ಅಧ್ಯಾಯ :—**

ಮಹಾಗಣಪತಿಯು 'ಮಯೂರೇಶ್ವರ' ಎಂಬ ಹೆಸರಿನಿಂದ ಪರಶಿವನ ಮಂದಿರದಲ್ಲಿ ಅವತರಿಸಿದುದಕ್ಕೆ ಕಾರಣ ವೇನು ? ಹಾಗೂ ಆ ಅವತಾರದಲ್ಲಿ ಅವನು ನಡೆಸಿದ ಮಹತ್ಕಾರ್ಯವಾವುವು ? ಗಣಪತಿಗೆ 'ಮಯೂರೇಶ್ವರ' ಎಂದು ಹೆಸರು ಬರಲು ಕಾರಣವೇನು ? ಎಂಬ ಅಂಶ ಗಳನ್ನು ವಿಶದವಾಗಿ ತಿಳಿಸಬೇಕೆಂದು ವ್ಯಾಸರು ಬ್ರಹ್ಮದೇ ವನನ್ನು ಪ್ರಶ್ನಿಸಿದುದು. ಅದಕ್ಕೆ ಉತ್ತರವಾಗಿ 'ಸಿಂಧು' ಎಂಬ ದೈತ್ಯನ ಕಥೆಯನ್ನು ಬ್ರಹ್ಮನು ಆರಂಭಿಸಿದುದು. ಸಿಂಧುವಿನ ತಂದೆ 'ಚಕ್ರಪಾಣಿ'ಯು ಮೈಥಿಲ ದೇಶಕ್ಕೆ ರಾಜನಾಗಿದ್ದುದು. ಅವನ ಶೌರ್ಯೌದಾರ್ಯಾದಿಗಳ ಮತ್ತು ವಿಭವದ ವರ್ಣನೆ. ಅವನ ಹೆಂಡಿತಿಯಾದ 'ಉಗ್ರೆ'ಯ ರೂಪಾದಿಗಳ ಹಾಗೂ ಪಾತಿವ್ರತ್ಯಾದಿ ಸದ್ಗು ಣಗಳ ವರ್ಣನೆ. ಅಪುತ್ರವಂತನಾದ ಆ ರಾಜನು ತನ್ನ ರಾಜ್ಯ-ಕೋಶಾದಿಗಳನ್ನು ತ್ಯಜಿಸಿ ಪರಮೇಶ್ವರನನ್ನು ಕು ರಿತು ತಪಿಸಲು ಹೆಂಡತಿಯೊಡನೆ ಹೊರಡುವಷ್ಟರಲ್ಲಿ ಶೌನ ಕರು ರಾಜನ ಮನೆಗೆ ಬಂದುದು. ಋಷಿಯ ಮಹಿಮೆಯ ವರ್ಣನೆ. ರಾಜನು ತನ್ನ ಅಂತರ್ವೇದನೆಯನ್ನು ತಿಳಿ ಸಲು ಮುನಿಯು ಅವರಿಗೆ ಅಭಯವನ್ನಿತ್ತು ಒಂದು ತಿಂಗಳು ಸೂರ್ಯೋಪಾಸನೆಯನ್ನು ಮಾಡಿದರೆ ಸಂತ ತಿಯಾಗುವುದೆಂದು ತಿಳಿಸಿ, ಉಪಾಸನಾವಿಧಿಯನ್ನು

ವಿವರಿಸಿದುದು ರಾಜದಂಪತಿಗಳ ತಪಶ್ಚರ್ಯೆಯ ವರ್ಣನೆ. ಉಗ್ರೆಯು ಶುಭಸ್ವಪ್ನವನ್ನು ಕಂಡುದು. ಕಾಮೋದ್ರಿಕ್ತಳಾದ ಉಗ್ರೆಯು ವ್ರತದ ಮಧ್ಯದಲ್ಲೇ ರತಿಸುಖವನ್ನು ಬಯಸಲು ಚಕ್ರಪಾಣಿಯು ನಿಷೇಧಿಸಿದುದು. ಇದರಿಂದ ಉದ್ವಿಗ್ನಳಾದ ಉಗ್ರೆಯು ಪತಿಯ ರೂಪದಿಂದ ಬಂದ ಸೂರ್ಯನೊಂದಿಗೆ ಸ್ವಪ್ನದಲ್ಲೇ ಭೋಗವನ್ನು ಪಡೆದು ಗರ್ಭಿಣಿಯಾದುದು. ಹಾಗೂ ತನಗುಂಟಾದ ಈ ವಿಕಾರದ ಅನುಭವವನ್ನೂ ಗರ್ಭದ ಭಾರವನ್ನೂ ಪತಿಗೆ ತಿಳಿಸಿದುದು. ದೈವಾನುಗ್ರಹದಿಂದ ಉತ್ಪನ್ನವಾದ ಗರ್ಭದ ಮೂಲಕ ಸು-ಪುತ್ರನು ಉದ್ಭವಿಸುವ ಕಾರಣ ಚಿಂತಿಸಬೇಡವೆಂದು ರಾಜನು ರಾಣಿಯನ್ನು ಸಂತೈಸಿದುದು. ಗರ್ಭಧಾರಣೆಯ ನಿಮಿತ್ತ ಇವಳಿಗುಂಟಾದ ಹಿಂಸೆಯ ವರ್ಣನೆ. ಕೊನೆಗೊಂದು ದಿವಸ ಗರ್ಭಪೀಡೆಯನ್ನು ತಡೆಯಲಾರದೇ, ಸಮುದ್ರ ತೀರದಲ್ಲಿ ಅದನ್ನು ವಿಸರ್ಜಿಸಿ ಗಂಡನಿಗೆ ಸಂಗತಿಯನ್ನು ತಿಳಿಸಿದುದು.

೭ಳ **ನೆಯ ಅಧ್ಯಾಯ :—**

ಉಗ್ರೆಯು ಸಮುದ್ರತೀರದಲ್ಲಿ ಬಿಸುಟ ಗರ್ಭಪಿಂಡವು ಶಿಶುವಾಗಿ ಜನಿಸಿದುದು. ಬಾಲಕನ ಭಯಂಕರ ರೂಪ ಹಾಗೂ ಅಳುವಿನ ಶಬ್ದದ ವರ್ಣನೆ. ಸ್ತನ್ಯದಂತೆ ಬಾಲಕನು ಸಮುದ್ರದ ಜಲವನ್ನೆಲ್ಲ ಕುಡಿದು ಶೋಷಿಸಿಬಿಟ್ಟುದು. ತನ್ನ ಅಂಚಿನಲ್ಲಿ ಜನಿಸಿದ ಈ ಬಾಲಕನನ್ನು ತನ್ನ ಮಗನೆಂದೇ ಆದರಿಸಿ ಅವನನ್ನು ಚಕ್ರಪಾಣಿ-ಉಗ್ರೆಯರ ವಶಕ್ಕೆ ಸಂರಕ್ಷಣೆಗಾಗಿ ಸಮುದ್ರನು ತಂದು ಒಪ್ಪಿಸಿದುದು. ಮುದ್ದಾದ ಆ ಬಾಲಕನನ್ನು ಕಂಡು ರಾಜದಂಪತಿಗಳು ಪ್ರೇಮಾದರಗಳಿಂದ 'ಸಿಂಧು' ಎಂದು ಹೆಸರನ್ನಿಟ್ಟುದು. ಆ ಬಾಲಕನಿಗೆ ಅನೇಕರು ಅನೇಕ ರೀತಿಯ

ಹೆಸರುಗಳನ್ನಿರಿಸಿದುದು. ಬಾಲಕನ ಬೆಳವಣಿಗೆಯ ವರ್ಣನೆ. ಅವನ ಅದ್ಭುತ ಕೃತ್ಯಗಳು. ಅವನಿಗೆ ಯೌವನಾವಿರ್ಭಾವವಾದೊಡನೆಯೇ ತಪಶ್ಚರ್ಯೆಗೆ ತೆರಳಲು ತಂದೆ-ತಾಯಿಯರ ಅನುಮತಿಯನ್ನು ಬೇಡಿದುದು. ಅವರ ಅನುಜ್ಞೆಯಂತೆ ವನಕ್ಕೆ ತೆರಳಿದುದು. ಅರಣ್ಯದ ವರ್ಣನೆ. ಅವನ ತಪೋನಿಷ್ಠೆಯ ವರ್ಣನೆ. ಸೂರ್ಯನು ಅವನಿಗೆ ಪ್ರತ್ಯಕ್ಷನಾಗಿ 'ವರವನ್ನು ಬೇಡು' ಎಂದು ಸೂಚಿಸಿದುದು. ಸಿಂಧುಕೃತ ಸೂರ್ಯಸ್ತೋತ್ರ. ತನಗೆ ಮರಣವೇ ಬಾರದಿರುವಂತೆ ಅನುಗ್ರಹಿಸಬೇಕೆಂದು ರವಿರಾಯನನ್ನು ಪ್ರಾರ್ಥಿಸಿದುದು. 'ದೇವಾದಿಗಳಿಂದ ನಿನಗೆ ಮರಣ ಬಾರದಿದ್ದರೂ, ಮಯೂರೇಶ್ವರನಾಗಿ ಅವತರಿಸುವ ಮಹಾಗಣಪತಿಯು ನಿನ್ನನ್ನು ನಿಗ್ರಹಿಸುವನು. ಇದರಿಂದ ನಿನಗೆ ಮುಕ್ತಿಯೇ ಲಭಿಸುವುದು. ಪ್ರಕೃತ ತ್ರೈಲೋಕ್ಯರಾಜ್ಯವನ್ನೇ ನಿನಗೆ ಅನುಗ್ರಹಿಸಿರುವೆನು' ಎಂದು ಮುಂತಾಗಿ ಅನೇಕ ಅಮೋಘ ವರಗಳನ್ನು ಕೊಟ್ಟು ಅಂತರ್ಹಿತನಾದುದು. ಸಿಂಧು ಆ ಸಂಗತಿಯನ್ನೆಲ್ಲ ತಂದೆ-ತಾಯಿಯರಿಗೆ ತಿಳಿಸಿದುದು. 31-52

೭೫ ನೆಯ ಅಧ್ಯಾಯ :—

ಚಕ್ರಪಾಣಿ ಮಹಾರಾಜನು ಮಗನ ರಾಜ್ಯನಿರ್ವಹಣ ಸಾಮರ್ಥ್ಯಾದಿಗಳನ್ನು ಸಂಪೂರ್ಣವಾಗಿ ಅರಿತು, ತನ್ನ ವಿಶಿಷ್ಟ ರಾಜ್ಯವನ್ನೂ ಅವನ ಅಧಿಕಾರಕ್ಕೆ ಒಳಪಡಿಸಿ, ಸ್ವಾತ್ಮಾನುಸಂಧಾನಾರ್ಥವಾಗಿ ಪತ್ನಿಯೊಂದಿಗೆ ಅರಣ್ಯಕ್ಕೆ ತೆರಳಿದುದು. ಸಿಂಧುವಿನ ಮುಂದಿನ ಉದ್ಯಮದ ವರ್ಣನೆ. ಅವನ ಸೈನಿಕರ ವರ್ಣನೆ. ಸಿಂಧು ತನ್ನ ಸೇನಾಪರಿವಾರದೊಂದಿಗೆ ಲೋಕಗಳ ಮೇಲೆಲ್ಲ ಜೈತ್ರಯಾತ್ರೆಗೆ

ಹೊರಟುದು. ದೇವ-ದಾನವರ ಹೋರಾಟದ ವರ್ಣ
ನೆ. ಸಿಂಧುವಿನ ಬಲ-ಪರಾಕ್ರಮಗಳಿಗೆ ದಂಗುಬಡಿದ
ಇಂದ್ರನು ಮಹಾವಿಷ್ಣುವಿನ ಬಳಿ ಶರಣು ಬಂದುದು.
ದೇವತೆಗಳೆಲ್ಲ ಓಡಿಹೋದುದನ್ನು ನೋಡಿ ಸಿಂಧು
ದೈತ್ಯನು ದೇವತೆಗಳ ಸ್ಥಾನ-ಮಾನಗಳನ್ನೆಲ್ಲ ದೈತ್ಯ
ಪ್ರಮುಖರಿಗೆ ವಹಿಸಿಕೊಟ್ಟು ತಾನು ಎಲ್ಲರನ್ನೂ ದಕ್ಷತೆ
ಯಿಂದ ಆಳತೊಡಗಿದುದು. 53

## ೭೬ ನೆಯ ಅಧ್ಯಾಯ :—

ಯುದ್ಧರಂಗದಿಂದ ಓಡಿಹೋದ ದೇವೇಂದ್ರನು ವೈಕುಂ
ಠಕ್ಕೆ ಬಂದುದು. ಪರಮಪುರುಷನಿಗೆ ಸಂಗತಿಯನ್ನು
ವಿಜ್ಞಾಪಿಸಿದ ರೀತಿಯ ವರ್ಣನೆ. ಶ್ರೀ ಹರಿಯು
ಇಂದ್ರನನ್ನು ಸಮಾಧಾನಪಡಿಸಿ, ಗರುಡಾರೂಢನಾಗಿ
ಸಿಂಧುವಿನೊಡನೆ ಯುದ್ಧಕ್ಕೆ ತಾನೇ ಹೊರಟುದು.
ದೇವನ ದಿವ್ಯರೂಪದ ವರ್ಣನೆ. ಆ ಸಂಗತಿಯನ್ನು
ತಿಳಿದ ಸಿಂಧು ಹಯಾರೂಢನಾಗಿ ಹರಿಯನ್ನು ಎದುರಿ
ಸಿದುದು. ಯುದ್ಧದ ವರ್ಣನೆ. ಇಂದ್ರನು ಅಲ್ಲಿ
ನಿಲ್ಲಲಾರದೇ ಅದೃಶ್ಯನಾದುದು. ದೇವತೆಗಳ ಪರಾ
ಭವವನ್ನು ಕಂಡ ಹರಿಯು ಗರುಡನನ್ನು ಹೋರಾಟಕ್ಕೆ
ಪ್ರೇರಿಸಿದುದು, ಮತ್ತು ತಾನೂ ತನ್ನ ಸುದರ್ಶನದಿಂ
ದ ದೈತ್ಯಸೇನೆಯನ್ನು ಹನನಮಾಡಿದುದು. ಇದ
ರಿಂದ ದೈತ್ಯಸೇನೆಯಲ್ಲುಂಟಾದ ಹಾನಿಯ ವರ್ಣನೆ.
ದೈತ್ಯರು ನಾರಾಯಣನ ಮೇಲೆ ಯುದ್ಧವನ್ನಾರಂಭಿ
ಸಿದುದು. ಅದರ ಭೀಕರತೆಯ ವರ್ಣನೆ. ದೈತ್ಯ
ಸೇನೆಯ ವಿದ್ರಾವಣವನ್ನು ಕಂಡ ಸಿಂಧು ಸ್ವತಃ ವಿಷ್ಣು
ವಿನೊಡನೆ ಹೋರಾಡಲು ನಿಂತುದು ಮತ್ತು ತನ್ನ
ಬಲ-ವೀರ್ಯಗಳನ್ನು ಕೊಚ್ಚಿಕೊಂಡುದು. ದೇವ.

ದಾನವರ ವಾಗ್ವಾದ. 71-86

**೨೭ ನೆಯ ಅಧ್ಯಾಯ :—**

ದೇವೇಂದ್ರನ ವಾಗ್ಬಾಣದಿಂದ ಕ್ರುದ್ಧನಾದ ಸಿಂಧುದೈತ್ಯನು ವಜ್ರಮುಷ್ಟಿಯಿಂದ ಬಲರಿಪುವನ್ನು ಪ್ರಹರಿಸಿದುದು. ಅದರಂತೆ ಇತರ ದೇವತೆಗಳನ್ನೂ ಪ್ರಹರಿಸಿ ಹಿಂಸಿಸಿದುದು. ಆದರಿಂದ ದೇವತೆಗಳೆಲ್ಲ ನೆಲಕ್ಕುರುಳಿ ಮೂರ್ಛಿತರಾದುದು. ಅನಂತರ ದೈತ್ಯನು ತನ್ನ ಚಕ್ರಾಯುಧದಿಂದ ಮಾಧವನನ್ನೂ ಹೊಡೆದುದು. ಮಾಧವನು ತನ್ನ ಗದೆಯಿಂದ ಸಿಂಧುವನ್ನಪ್ಪಳಿಸಿದುದು. ಸಿಂಧು ಚಮತ್ಕಾರದಿಂದ ಆ ಏಟನ್ನು ತಪ್ಪಿಸಿಕೊಂಡು ದೇವನ ಗದೆಯು ನೂರಾರು ಚೂರಾಗುವಂತೆ ಮಾಡಿದುದು. ಸಿಂಧುವಿನ ಕೌಶಲ್ಯವನ್ನೂ ಅವನಿಗೆ ಸೂರ್ಯನಿಂದ ದೊರೆತ ವರಗಳನ್ನೂ ತಿಳಿದ ಮಧುಸೂದನನು ಯುದ್ಧವನ್ನು ಅಷ್ಟಕ್ಕೇ ನಿಲ್ಲಿಸಿ ವರವನ್ನುಬೇಡು ಎಂದು ಹೇಳಿದುದು. ನೀನು ಸರ್ವದಾ ಗಂಡಕೀ ತೀರದಲ್ಲೇ ವಾಸವಾಗಿರುವೆಯಾದರೆ ಅದೇ ನನಗ ವರವೆನಿಸುವುದು' ಎಂದು ಯಾಚಿಸಿ ದೇವನನ್ನು ಒಡಂಬಡಿಸಿದುದು. ಅನಂತರ ಸತ್ಯಲೋಕ, ಕೈಲಾಸ ಮೊದಲಾದ ಸ್ಥಾನಗಳಲ್ಲೂ ತನ್ನವರನ್ನಿರಿಸಿ, ಜಯಘೋಷದೊಡನೆ ಗಂಡಕೀ ನಗರಕ್ಕೆ ಬಂದುದು. ವಂದಿ-ಮಾಗಧರು ಅವನ ಪರಾಕ್ರಮವನ್ನು ಹೊಗಳಿದುದು. ವಿಜಯದ ಮೆರವಣಿಗೆಯಲ್ಲಿ ದೇವತೆಗಳೆಲ್ಲ ಪಾದಚಾರಿಗಳಾಗಿ ಬರುತ್ತಿರುವುದನ್ನು ಕಂಡು ನಾಗರಿಕರು ಆಶ್ಚರ್ಯಪಟ್ಟುದು. ಬಂಧಿತರಾದ ದೇವತೆಗಳೆಲ್ಲ ಶ್ರೀ ಹರಿಯ ಸಮೀಪಕ್ಕೆ ಬಂದು ತಮ್ಮ ದುಸ್ಥಿತಿಯನ್ನು ದೈನ್ಯದಿಂದ ಹೇಳಕೊಂಡುದು. ವರದೃಪ್ತನಾದ ಸಿಂಧುವಿಗೆ ಕಾಲ ತುಂಬಿ ಬರುವ

ವರೆಗೂ ನಾವು ಸಮಾಧಾನದಿಂದಲೇ ಇರಬೇಕಾದು
ದೆ'ಂದು ಹೇಳಿದುದು. ಇತ್ತ ಸಿಂಧು ತನಗೆ ದೊರೆತ ಅತ್ಯ
ದ್ಭುತ ವಿಜಯವನ್ನು ತಪೋನಿರತರಾದ ತಂದೆ-ತಾಯಿಯ
ರಿಗೆ ಅರುಹಿ ಅವರಿಂದ ಆಶೀರ್ವಾದವನ್ನು ಹೊಂದಿದುದು.
ಇಡೀ ಭುವನಗಳಲ್ಲಿರುವ ದೇವತಾಮೂರ್ತಿಗಳನ್ನೆಲ್ಲ ಭಂ
ಜಿಸಿ ಇನ್ನು ಮುಂದೆ ಆ ಆಲಯಗಳಲ್ಲಿ ತನ್ನ ಪ್ರತಿಮೆಗಳ
ನ್ನಿರಿಸಿ ಪೂಜಿಸುವಂತೆಯೂ, ಇದನ್ನು ವಿರೋಧಿಸುವವ
ರನ್ನು ಕೂಡಲೇ ಕೊಂದುಬಿಡುವಂತೆಯೂ ಆಜ್ಞೆಯ
ನ್ನಿತ್ತು, ಅದನ್ನು ಡಂಗುರದ ಮೂಲಕ ಸಾರಿಸಿದುದು.
ವಿಧಿ ಇಲ್ಲದೇ ಅನೇಕರು ದೈತ್ಯನ ಆಣತಿಯಂತೆ ನಡೆ
ಯಲಾರಂಭಿಸಿದುದು. ಪ್ರತಿಭಟಿಸಿದವರು ಮೃತ
ರಾದುದು. 87-102

೭೮ ನೆಯ ಅಧ್ಯಾಯ :—

ದೇವತೆಗಳೆಲ್ಲ ಸಭೆ ಸೇರಿ ತಮಗೊದಗಿರುವ ವಿಪತ್ಪರಿ
ಹಾರಕ್ಕೆ ಮಾರ್ಗವನ್ನು ಆಲೋಚಿಸಿದುದು. ಒಬ್ಬೊ
ಬ್ಬರು ಒಂದೊಂದು ಬಗೆಯಿಂದ ನುಡಿಯಲು, ಬೃಹ
ಸ್ಪತ್ಯಾಚಾರ್ಯರು ಶತ್ರುನಿಗ್ರಹಕ್ಕಾಗಿ ಗಣಪತಿ
ಯನ್ನು ಪ್ರಾರ್ಥಿಸಬೇಕೆಂದು ಸೂಚಿಸಿ, ಅವನ ಗುಣ
ಗಣವನ್ನು ಬಣ್ಣಿಸಿದುದು. ಅನಂತರ ದೇವತೆ
ಗಳೆಲ್ಲ ಅದಕ್ಕೆ ಒಮ್ಮನದಿಂದ ಒಪ್ಪಿ ಸಕಲವಿಧ
ಪೂಜಾಸಾಮಗ್ರಿಗಳನ್ನೂ ಸಿದ್ಧಪಡಿಸಿಕೊಂಡು ದೇವ
ನನ್ನಾರಾಧಿಸಲು ಉಪಕ್ರಮಿಸಿದುದು. ಅವರು ಏರ್ಪ
ಡಿಸಿದ ಪೂಜಾ-ವಿಭವಗಳ ವರ್ಣನೆ. ರಚಿಸಿದ ಗಣ
ಪತಿಯ ವರ್ಣನೆ. ಪೂಜೆಯು ನೆರವೇರಿದ ಬಳಿಕ
ದೇವತೆಗಳು ದೇವನನ್ನು ಸ್ತುತಿಸಿದ ಕ್ರಮ. ಅದರಿಂದ
ತೃಪ್ತನಾದ ದೇವನು ತೇಜೋರೂಪಿಯಾಗಿ ಅವರಿಗೆ

ಪ್ರತ್ಯಕ್ಷನಾದುದು. ದೇವನ ಭವ್ಯರೂಪದ ವರ್ಣನೆ. 'ಈ ರೂಪವನ್ನು ನೋಡಿದ ನಾವು ಧನ್ಯರೆಂದು ದೇವತೆಗಳು ಭಾವಿಸಿದುದು.' ನಿಮ್ಮ ಪೂಜೆಯಿಂದ ತೃಪ್ತನಾಗಿರುವೆನು. ನಿಮ್ಮ ಕಷ್ಟ ನನಗೆ ಗೊತ್ತಿದೆ. ಮಯೂರೇಶ್ವರನಾಗಿ ಅವತರಿಸಿ ಸಿಂಧುವನ್ನು ನಿಗ್ರಹಿಸುವೆನು. ಚಿಂತಿಸಬೇಡಿ' ಎಂದು ದೇವನು ಆಶ್ವಾಸನವನ್ನಿತ್ತು, ಆಯಾ ಯುಗಗಳಲ್ಲಿ ತಾನು ಯಾವ ಯಾವ ರೂಪ.ನಾಮಧೇಯಗಳಿಂದ ಅವತರಿಸುವೆನೆಂಬುದನ್ನು ವಿವರಿಸಿ ಹೇಳಿದುದು. ಮತ್ತು ಅವರು ರಚಿಸಿದ ಸ್ತೋತ್ರಪಾಠಕ್ಕೆ ಅನೇಕ ಮಹಿಮೆಗಳನ್ನನು ಗ್ರಹಿಸಿಕೊಟ್ಟುದು. 103-124

## ೭೯ ನೆಯ ಅಧ್ಯಾಯ :—

ಸಿಂಧುದೈತ್ಯನು ದೇವತೆಗಳೆನ್ನೆಲ್ಲ ಜಯಿಸಿ ತ್ರೈಲೋಕ್ಯಾಧಿಪತ್ಯವನ್ನೂ ಆಕ್ರಮಿಸಲು ಇದನ್ನು ಕೇಳಿ ಶಂಕರನು ತನ್ನ ಏಳು ಕೋಟಿ ಪ್ರಮಥರೊಂದಿಗೆ 'ತ್ರಿ-ಸಂಧ್ಯಾ' ಕ್ಷೇತ್ರಕ್ಕೆ ಬಂದು ನೆಲೆಸಿದುದು. ರಾಕ್ಷಸನಿಗೆ ಭಯಪಟ್ಟು ಗೌತಮಾದಿ ಮುನಿಗಳು ಈ ಪೂರ್ವದಲ್ಲಿಯೇ ಅಲ್ಲಿಗೆ ಬಂದು ನೆಲೆಸಿದ್ದರು, ದೇವನನ್ನು ಅವರು ಸ್ವಾಗತಿಸಿ ತಮ್ಮನ್ನು ಧನ್ಯರೆಂದು ಹೊಗಳಿಕೊಂಡು, ತಮಗೊದಗಿದ ದುಃಖವನ್ನು ಅರುಹಿ, 'ಇಲ್ಲಿಗೆ ತಾವು ಬರಲು ಕಾರಣವೇನೆಂಬುದಾಗಿ ಪ್ರಶ್ನಿಸಿದುದು ' ವರಪ್ರಭಾವದಿಂದ ಎಲ್ಲ ಲೋಕಗಳನ್ನೂ ಸಿಂಧು ಆವರಿಸಿದ್ದರಿಂದ ವಿಶ್ರಾಂತಿಗಾಗಿ ಇಲ್ಲಿಗೆ ಬಂದೆನೆಂದೂ, ನೀವು ಸಮ್ಮತಿಸುವುದಾದರೆ ಇಲ್ಲಿಯೇ ವಾಸವಾಗಿರಬೇಕೆಂದೂ ಹೇಳಲು ಮುನಿಗಳು ದೇವನ ಸರಳತನವನ್ನು ಕೊಂಡಾಡಿ, ಇಲ್ಲಿಯೇ ವಾಸಿಸುವ ಕೃಪೆಮಾಡಬೇಕೆಂದು ವಿಜ್ಞಾಪಿಸಿಕೊಂಡು, ತಪಸ್ಸಿಗೆ ಯೋಗ್ಯವಾದ ಸ್ಥಾನ ಒಂದನ್ನು ತೋರಿಸಿದುದು. ಗಂಗೆ-ಗೌರಿಯರೊಂದಿಗೆ ಋಷಿಗಳ

ನಡುವೆ ವಾಸಿಸಲಾರಂಭಿಸಿದ ಗಿರಿಶನಿಗೆ ಕೈಲಾಸಕ್ಕಿಂತ
ಲೂ ಆಶ್ರಮಭೂಮಿ ಸುಖಕರವೆನಿಸಿದುದು. ದೇವನು
ತಪೋನಿರತನಾದುದನ್ನು ಕಂಡು 'ಸರ್ವೇಶ್ವರನಾದ ನೀ
ನು ಯಾರನ್ನು ಧ್ಯಾನಿಸುತ್ತಿರುವೆ ?' ಎಂದು ಗೌರಿಯು
ಪ್ರಶ್ನಿಸಲು 'ನಿತ್ಯ, ನಿರಂಜನನಾದ ಮಹಾಗಣಪತಿಯನ್ನು
ಧ್ಯಾನಿಸುವೆನೆ'ಂದು ಹೇಳಿ, ಅವನನ್ನು ತತ್ತ್ವತಃ ವರ್ಣಿ
ಸಿದುದು. ಅದರಿಂದ ಉತ್ಸುಕಳಾದ ಗೌರಿಯು ಗುಣೇಶ
ನನ್ನು ಸಾಕ್ಷಾತ್ಕರಿಸಿಕೊಳ್ಳುವ ಸಾಧನೆಯನ್ನು ತನಗೂ
ಹೇಳಬೇಕೆಂದು ಪ್ರಾರ್ಥಿಸಲು, ತಪೋಽನುಷ್ಠಾನದ
ಹಾಗೂ ಪೂಜೆಯ ವಿಧಾನಗಳನ್ನು ಶಿವನು ಶಿವೆಗೆ ಹೇಳಿ
ದುದು. ಗೌರಿಯು ಮಂತ್ರವನ್ನು ಧ್ಯಾನಿಸುತ್ತ
ತಪಶ್ಚರಣೆಗಾಗಿ ಏಕಾಂತಪ್ರದೇಶಕ್ಕೆ ನಡೆದುದು. 125

**೮೦ ನೆಯ ಅಧ್ಯಾಯ :—**

ತಪೋವನದ ಹಾಗೂ ಪಾರ್ವತಿಯ ಏಕಾಗ್ರತೆಯ ವರ್ಣನೆ.
೧೨ ವರ್ಷಗಳ ಅವಧಿಯು ಮುಗಿದ ಬಳಿಕ ಬಳಲಿದ
ಭವಾನಿಗೆ ಭಗವಂತ, ಭಾಲಚಂದ್ರನು ದರ್ಶನವನ್ನು
ಕೊಟ್ಟುದು. ಗಣಪತಿಯ ದಿವ್ಯರೂಪದ ವರ್ಣನೆ. ಅದ್ಭು
ತವಾದ ಆ ರೂಪವನ್ನು ಕಂಡು ಚಕಿತಳಾಗಿ ನಿಂದಿದ್ದ ಗೌ
ರಿಯನ್ನು ಕುರಿತು 'ನಾನೇ ಗುಣೇಶ'ನೆಂದು ಹೇಳಿ, ತನ್ನ
ಸರ್ವವ್ಯಾಪಕತ್ವವನ್ನು ತಾನೇ ವಿವರಿಸಿ ಹೇಳಿ, 'ವರ
ವನ್ನು ಬೇಡೆ'ನಲು ದೇವನ ದಿವ್ಯದರ್ಶನದಿಂದ ತನ್ನನ್ನು
ಧನ್ಯಳೆಂದು, ಹೊಗಳಿಕೊಂಡು 'ನೀನು ನನಗೆ ಮಗನಾಗಿ
ಜನಿಸಬೇಕೆಂ'ದು ವರವನ್ನು ಬೇಡಿದಳು. 'ಹಾಗೆ
ಯೇ ಆಗಲೆ'ಂದು ನುಡಿದು, ದೇವನು ಅಂತರ್ಹಿತ
ನಾಗಲು, ಪಾರ್ವತಿಯು ವಿಷಣ್ಣಳಾಗಿ 'ತನಗೆ ಕಂಡು

ದೆಲ್ಲ ಸ್ವಪ್ನವಿರಬಹುದೇ ’ ಎಂದು ಯೋಚಿಸುವಷ್ಟರಲ್ಲಿ ಶಿವನ ಮಾತುಗಳು ಸ್ಮರಣೆಗೆ ಬರಲು, ತಾನು ಕಂಡ ದೇವನ ರೂಪದಂತಹ ಆಕೃತಿಯೊಂದನ್ನು ನಿರ್ಮಿಸಿ ಅದಕ್ಕೆ ‘ ಗಿರಿಜಾತ್ಮಜ ’ನೆಂದೂ, ತಾನು ತಪಿಸಿದ ಭೂಮಿಗೆ ‘ ಸಿದ್ಧಿಕ್ಷೇತ್ರ ’ ಎಂದೂ ಹೆಸರನ್ನಿಟ್ಟು ಆ ಕ್ಷೇತ್ರಕ್ಕೆ ಅನೇಕ ಮಹಿಮೆಗಳನ್ನು ಅನುಗ್ರಹಿಸಿದುದು, ಮತ್ತು ತಾನು ನಿರ್ಮಿಸಿ, ಸ್ಥಾಪಿಸಿದ್ದ ಗಣಪತಿಯ ಮೂರ್ತಿಯನ್ನು ಭಕ್ತಿಯಿಂದ ಪೂಜಿಸಿ, ಅನಂತರ ಬ್ರಾಹ್ಮಣೋತ್ತಮರಿಗೆ ಅನೇಕ ದಾನಾದಿಗಳನ್ನಿತ್ತು ಪುನಃ ತ್ರಿಸಂಧ್ಯಾಕ್ಷೇತ್ರಕ್ಕೆ ಬಂದುದು. ತಪೋಮಗ್ನನಾದ ಪರಶಿವನನ್ನು ಸಂಧಿಸಿ, ನಡೆದ ಸಂಗತಿಯನ್ನೆಲ್ಲ ಅರುಹಲು, ಶಿವನು ಹೃಷ್ಟಮಾನಸನಾಗಿ ಗಿರಿಜೆಯನ್ನು ಕೊಂಡಾಡಿ ಬಹಳ ಪ್ರೀತಿಯಿಂದ ದೇವಿಯನ್ನು ಬಿಗಿದಪ್ಪಲು; ಇಬ್ಬರೂ ಆನಂದಾಶ್ರುಗಳನ್ನು ಸುರಿಸಿದುದು. 143-157

**೮೧ ನೆಯ ಅಧ್ಯಾಯ :—**

ಅಂದಿನಿಂದ ಗೌರಿಯು ಸರ್ವದಾ ಗುಣೇಶನನ್ನೇ ಧ್ಯಾನಿಸುತ್ತಲಿದ್ದುದು ಇವಳ ತನ್ಮಯತೆಯು ಮಿತಿಮೀರಿದುದು. ಹಿಂದೆ ತನ್ನ ತಂದೆಯು ತನಗೆ ಬೋಧಿಸಿದ ಭಾದ್ರ ಶುಕ್ಲ ಚತುರ್ಥೀ ಗಣಪತಿಯ ವ್ರತವನ್ನು ಸ್ಮರಿಸಿಕೊಂಡು ‘ಪರಶಿವನ ಪ್ರಾಪ್ತಿಗಾಗಿ ಹಿಂದೊಮ್ಮೆ ತಾನು ಈ ವ್ರತವನ್ನಾಚರಿಸಿದಂತೆ ಈಗಲೂ ಮತ್ತೊಮ್ಮೆ ಆಚರಿಸೋಣವೆಂದು ನಿಶ್ಚಯಿಸಿ ಪೂಜೆ-ವ್ರತಗಳನ್ನಾರಂಭಿಸಿದುದು. ಪೂಜಾಸನ್ನಾಹದ ವರ್ಣನೆ ದೇವನ ಆವಿರ್ಭಾವ, ತತ್ಸ್ವರೂಪದ ವರ್ಣನೆ. ದೇವನ ಭವ್ಯ ರೂಪವನ್ನು ಕಂಡು ಗೌರಿಯು ಮೊದಮೊದಲು ಅಂಜಿದುದು. ಇವಳ ಘಾಬರಿಯ ಸ್ಥಿತಿಯನ್ನು ಕಂಡು ದೇವನು ತನ್ನ ಪ್ರಭೆಯನ್ನು ಸಂಕೋಚ

ಮುನಿಗಳು ತಾವೂ ಒಂದೊಂದು ಗಣಪತಿಯ ಮೃಣ್ಮನೆ
ಯ ಮೂರ್ತಿಯನ್ನು ನಿರ್ಮಿಸಿಕೊಂಡು ಭಕ್ತಿಯಿಂದ
ಪೂಜಿಸಿ ಅಹರ್ನಿಶಿ 'ಗುಣೇಶ, ಗುಣೇಶ' ಎಂದು ನಾಮ
ಸಂಕೀರ್ತನವನ್ನು ಮಾಡಿದುದು. ೧೧ ನೆಯ ದಿವಸ ವಿಶೇ
ಷ ಆಹ್ವಾನದ ಮೇಲೆ ಋಷಿಗಳೆಲ್ಲ ಶಿವನ ಸಮೀಪಕ್ಕೆ
ಹೋಗಿ ಶಿಶುವಿಗೆ ಶುಭವಾದ ಹೆಸರನ್ನಿಟ್ಟುದು. ಒಬ್ಬೊಬ್ಬ
ರು ಒಂದೊಂದು ಮಹಿಮೆಯನ್ನು ಗಣಪತಿಗೆ ಕೊಟ್ಟದ್ದು.
ಚತುರ್ಥೀ ದಿವಸ ಭಗವಂತ ; ಗಣಪತಿಯು ಅವತರಿಸಿ
ದುದರಿಂದ ಆ ತಿಥಿಗೆ ಅಂದಿನಿಂದ ಪ್ರಾಶಸ್ತ್ಯ ಬಂದುದು.
ಚತುರ್ಥೀವ್ರತದ ವರ್ಣನೆ. 'ಇನ್ನು ಗುಣೇಶನು ನಡೆ
ಸಿದ ಅದ್ಭುತ ಕೆಲಸಗಳನ್ನು ನಿರೂಪಿಸುವೆನೆ'ಂದು ಬ್ರಹ್ಮ
ದೇವನು ಹೇಳಿ, ಕಥೆಯನ್ನಾರಂಭಿಸಿದುದು. ಸಿಂಧುವಿನ
ದೂತರು ಗುಪ್ತರೂಪದಿಂದ ಶಿವನ ಮನೆಯಲ್ಲಿದ್ದರು.
ಶಿಶು ಜನಿಸಿದೊಡನೆಯೇ ಆ ಸಂಗತಿಯನ್ನು ತಮ್ಮ
ರಾಜನಿಗೆ ತಿಳಿಸಲು ಹವಣಿಸಿದುದು. ದೈತ್ಯನ ಸಭೆಯ
ವರ್ಣನೆ. ದೂತರು ಸಂಗತಿಯನ್ನು ತಿಳಿಸುತ್ತಿರುವಷ್ಟರಲ್ಲಿ
'ನಿನ್ನ ಹಂತಕನು ಎಲ್ಲೋ ಉದಿಸಿದ್ದಾನೆ' ಎಂದು
ಅಶರೀರವಾಣಿಯು ನುಡಿಯಲು ಅದನ್ನು ವಧಿಸುವು
ದಕ್ಕೆ ಸಿಂಧು ಸೇವಕರನ್ನು ನಿಯೋಜಿಸಿ, ವಿಫಲನಾದುದು.
ಮೃತ್ಯುಭಯೋದ್ವಿಗ್ನನಾದ ಸಿಂಧುವನ್ನು ದೈತ್ಯವೀರರು
ಆಶ್ವಾಸಿಸಿದುದು. 'ನನ್ನ ರಿಪುವಾರೋ, ಅವನನ್ನು
ಹುಡುಕಿ ಕೊಂದು ಬನ್ನಿ' ಎಂದು ಸೇವಕರಿಗೆ ಆಜ್ಞೆ
ಯನ್ನಿತ್ತುದು. ದೈತ್ಯವೀರರು ತ್ರಿ-ಸಂಧ್ಯಾಕ್ಷೇತ್ರಕ್ಕೆ
ಬಂದು ಗುಪ್ತರೂಪದಿಂದ ಬಾಲಕನನ್ನು ಹುಡುಕಲಾ
ರಂಭಿಸಿದುದು. 165.198

ದೇವನ ಹಸ್ತಸ್ಪರ್ಶದಿಂದ ಮುಕ್ತಿಯನ್ನು ಪಡೆದುದು. ಆಖುರೂಪೀ ರಾಕ್ಷಸರ ಘೋರ ರೂಪದ ವರ್ಣನೆ. ಅವನ್ನು ದೂತರು ಖಂಡಶಃ ಮಾಡಿ ಹೊತ್ತೊಯ್ದುದು. ಭೀತಳಾದ ಗೌರಿಯನ್ನು ಋಷಿಪತ್ನಿಯರು ಸಂತೈಸಿದುದು. ಮುನಿಗಳು ಮುಂದೆ ಬಂದು ಬಾಲಕನಿಗೆ ರಕ್ಷೆಯನ್ನು ಕಟ್ಟಿದುದು. ಶಿಶುವಿಗೆ 3 ನೆಯ ತಿಂಗಳು ನಡೆಯುತ್ತಿರುವಾಗ 'ಕ್ರೂರ'ನೆಂಬ ದೈತ್ಯನು ಬೆಕ್ಕಿನ ರೂಪದಿಂದ ಬಂದು ಪಾರ್ವತಿಯ ಮಗ್ಗಲಲ್ಲಿ ಮಲಗಿದ್ದ ಬಾಲಕನನ್ನು ಕೊಲ್ಲಲು ಯತ್ನಿಸಿದುದು. ಬಾಲಕನು ಬೆಕ್ಕಿನ ಎರಡು ಕಿವಿಗಳನ್ನೂ ಬಲವಾಗಿ ಹಿಡಿದು ಕಾಲುಗಳಿಂದ ಒದೆದು ಅದನ್ನು ಕೊಂದುದು. ಬಾಲಕನ ಸಾಮರ್ಥ್ಯವನ್ನು ಕಂಡು ಎಲ್ಲರೂ ವರ್ಣಿಸಿದು. ೪ ನೆಯ ತಿಂಗಳು ನಡೆಯುತ್ತಿರುವಾಗ ಮಕರ ಸಂಕ್ರಾಂತಿಯ ನಿಮಿತ್ತ ಋಷಿಪತ್ನಿಯರೆಲ್ಲ ಬಾಗಿನಗಳನ್ನು ಕೊಡಲು ಗೌರಿಯ ಮನೆಗೆ ಬಂದುದು. ಬಾಲಕನನ್ನು ನೋಡಿ ಎಲ್ಲರೂ ಗೌರಿಯನ್ನು ಅಭಿನಂದಿಸಿದುದು. ಅಷ್ಟರಲ್ಲಿ 'ಬಾಲಾಸುರ'ನು ಬಾಲಕನ ರೂಪದಿಂದ ಅಲ್ಲಿಗೆ ಬಂದು ಗಣಪನೊಂದಿಗೆ ಆಟವಾಡಲಾರಂಭಿಸಿ ಹಿಂಸಿಸಿದುದು. ಗಣಪತಿ, ಆ ಬಾಲಾಸುರ ಇಬ್ಬರೂ ಪರಸ್ಪರ ಗುದ್ದಾಡುತ್ತಿರುವಾಗ ಗಣಪನು ರಕ್ಕಸನ ಕತ್ತನ್ನು ಹಿಸುಕಿ ಕೊಂದು ಬಿಸುಟುದು. ಎಲ್ಲರೂ ಇದನ್ನು ನೋಡಿ ಗಣಪತಿಯನ್ನು ಸ್ತುತಿಸಿದುದು. 215-246

**೮೫ ನೆಯ ಅಧ್ಯಾಯ :—**

ಮೊಗುವಿಗೆ ೫ ನೆಯ ತಿಂಗಳು ನಡೆಯಲಾರಂಭಿಸಿತು. ಪರಮೇಶ್ವರನ ಮಂದಿರದಲ್ಲಿ ಮಹಾಗಣಪತಿಯು ಅವತರಿಸಿದ ಸಂಗತಿಯನ್ನು ನಾರದರ ಮೂಲಕ ತಿಳಿದ

ತಿಂಗಳು ನಡೆಯುತ್ತಿರುವಾಗ 'ಕಮಠಾಸುರ'ನು ದೇವನನ್ನು ಕೊಲ್ಲಲು ಯತ್ನಿಸಿದುದು. ಬಾಲಕನು ಚತುರ್ದಶ ಭುವನಗಳ ಭಾರದಿಂದ ಅವನನ್ನು ಹಿಸುಕಿ ಸಾಯಿಸಿದುದು. ರಾಕ್ಷಸನ ವಧೆಯು ಸಂಗತಿಯನ್ನು ಸ್ತ್ರೀಜನರು ಪಾರ್ವತಿಗೆ ತಿಳಿಸಿ ಸಂತೈಸಿದುದು. ಫಲಶ್ರುತಿ. 273-299

೮೮ ನೆಯ ಅಧ್ಯಾಯ :—

ಬಾಲರೂಪೀ ಗಣಪತಿಯ ಚರಿತ್ರೆಯನ್ನು ಮತ್ತಿಷ್ಟು ವಿವರಿಸಿ ಹೇಳಬೇಕೆಂದು ವ್ಯಾಸರು ಪ್ರಶ್ನಿಸಲು, ಬ್ರಹ್ಮದೇವನು ಒಪ್ಪಿ ಕಥೆಯನ್ನು ಮುಂದುವರಿಸಿದುದು. ಶಿಶುವಿಗೆ ೮ ನೆಯ ತಿಂಗಳು ನಡೆಯುತ್ತಿರುವಾಗ ಒಂದು ದಿನ ದೇವಿಯು ಬಿಸಿಲಿನ ಝಳವನ್ನು ತಡೆಯಲಾರದೇ ಬಾಲಕನೊಂದಿಗೆ ಉದ್ಯಾನವನಕ್ಕೆ ತೆರಳಿದುದು. ವನದ ವರ್ಣನೆ. ಅಲ್ಲಿಗೆ 'ತಲ್ಪಾಸುರ'ನು ಬಂದು ಮೊಗುವಿನೊಡನೆ ಪಾರ್ವತಿಯು ಮಲಗಿದ್ದ ಮಂಚದಲ್ಲಿ ಸೇರಿಕೊಂಡು ಗಗನಕ್ಕೆ ಅದನ್ನು ಹಾರಿಸಿದುದು. ಇದರಿಂದ ಸಖಿಯರು, ಪಾರ್ವತಿ ಎಲ್ಲರೂ ಅತ್ತುದು. ಆಗ ಬಾಲಕನು ಪದೇಪದೇ ಘಟ್ಟಿಯಾಗಿ ಗರ್ಜಿಸುತ್ತ ಮಂಚವನ್ನು ಒದೆದು ಚೂರ್ಣಮಾಡಿದುದು. ಆಗ ತಲ್ಪಾಸುರನು ಅಲ್ಲಿಂದ ಹಾರಿ ತಪ್ಪಿಸಿಕೊಳ್ಳಲು ಹವಣಿಸುತ್ತಿರುವಷ್ಟರಲ್ಲಿ ಬಾಲಕನು ಅವನನ್ನು ಹಿಡಿದು ತೂಗಾಡಿಸಿ ಒಮ್ಮೆಲೇ ನೆಲಕ್ಕೆ ಒಗೆದುದು- ತಲ್ಪಾಸುರನ ಮೃತಿ. ಇದರಿಂದ ತುಷ್ಟರಾದ ಜನರು ಬಾಲಕನನ್ನು ಪ್ರಶಂಸಿಸಿದುದು. ಗೌರಿಯು ವಿಪ್ರರಿಗೆ ದಾನಾದಿಗಳನ್ನು ಕೊಟ್ಟದ್ದು. ಅಷ್ಟರಲ್ಲಿ 'ದುಂದುಭಿ' ಎಂಬ ರಕ್ಕಸನು ಬಾಲಕನ ವೇಷದಿಂದ ಬಂದು ಗಣಪನನ್ನು

ಆಟಕ್ಕಾಗಿ ಕರೆದುದು. ಎಲ್ಲಕ್ಕೂ ಮೊದಲು ವಿಷಮಿ
ಶ್ರಿತವಾದ ಫಲವೊಂದನ್ನು ಕೊಟ್ಟು 'ತಿನ್ನು' ಎಂದು
ಒತ್ತಾಯಪಡಿಸಿದುದು. ದೇವನು ಸಂಗತಿಯ ತತ್ತ್ವ
ವನ್ನು ತಿಳಿದು ನಿರ್ಲಕ್ಷ್ಯದಿಂದ ಹಣ್ಣನ್ನು ತಿಂದು
'ಮತ್ತೊಂದನ್ನು ಕೊಡೆ'ಂದು ಪೀಡಿಸಿದುದು. ಅವನು
ಸುಮ್ಮನಿರುವುದನ್ನು ಕಂಡು ಅವನ ಜುಟ್ಟು-ಮೀಸೆ
ಗಳನ್ನು ಹಿಡಿದು ಜಗ್ಗಿಸುತ್ತ ತನ್ನ ಭಾರವನ್ನೆಲ್ಲ ಊರಿ
ಅವನ ತೊಡೆಯ ಮೇಲೆ ಕುಣಿಯತೊಡಗಿದುದು.
ಆ ಯಮಯಾತನೆಯನ್ನು ತಾಳಲಾರದೇ ಅಸುರನು
ಕೊಡವಿಕೊಂಡು ಏಳುವಷ್ಟರಲ್ಲಿ ಗಣಪನು ಅವನ ಶಿರವ
ನ್ನು ದಿಂಡದಿಂದ ಬೇರ್ಪಡಿಸಿದುದು. ಗೌರಿಯು ಮುಂದೆ
ಬಂದು ಬಾಲಕನನ್ನು ಎತ್ತಿಕೊಂಡು ಹರ್ಷದಿಂದ ಅಂತ
ರ್ಗೃಹಕ್ಕೆ ತೆರಳಿದುದು. 300.323

**೭೯ ನೆಯ ಅಧ್ಯಾಯ :—**

ಶಿಶುವಿಗೆ ೧೦ ನೆಯ ತಿಂಗಳು ನಡೆಯುತ್ತಿರುವಾಗ ಅದರ
ಚೇಷ್ಟೆ, ತೊದಲುನುಡಿ ಮುಂತಾದುದರ ವರ್ಣನೆ.
ಒಂದು ಪ್ರಭಾತದಲ್ಲಿ 'ಅಜಗರ' ನೆಂಬ ಅಸುರನು
ಬಾಲಕನ ಬಳಿಗೆ ಬಂದುದು. ಅಂಗಳದಲ್ಲಿ ಬೆಳೆದಿದ್ದ
ಒಂದು ವೃಕ್ಷದ ಅಡಿಯಲ್ಲಿ ಕುಳಿತು ಬಾಲಕನ ಬರುವಿ
ಗಾಗಿ ನಿರೀಕ್ಷಿಸುತ್ತಿದ್ದುದು. ಅವನ ಭೀಕರತೆಯ ವರ್ಣ
ನೆ. ಬಾಲ್ಯಚೇಷ್ಟೆಯಿಂದ ಗಣಪತಿಯು ಅದನ್ನು ತನ್ನ
ಕೈಗಳಿಂದ ಹಿಡಿದುಬಿಟ್ಟುದು. ಅದು ಬಾಯಿ ತೆರೆದು ಇವ
ನನ್ನು ನುಂಗಿಬಿಟ್ಟುದು. ಎಲ್ಲಿ ಹುಡುಕಿದರೂ ಗಣಪತಿ
ಯು ಕಾಣದಾಗಲು ಪಾರ್ವತಿಯು ಶೋಕಿಸಿದುದು.
ಬಾಲಕನ ಪ್ರಭಾವವನ್ನು ಜ್ಞಾಪಿಸಿ 'ಹೆದರಬೇಕಾಗಿ
ಲ್ಲ'ವೆಂದು ಸಖಿಯರು ದೇವಿಯನ್ನು ಸಮಾಧಾನಪಡಿಸಿ
ದುದು. ಹಾವಿನ ಹೊಟ್ಟೆಯನ್ನು ಹೊಕ್ಕ ಹೇರಂಬನು

ಅತಿಯಾಗಿ ಬೆಳೆದು ಶ್ವಾಸೋಚ್ಛ್ವಾಸಗಳನ್ನೇ ತಡೆದುದು. ಇದರಿಂದ ಅಜಗರವು ಮೃತವಾಗಲು ಅದರ ದೇಹವನ್ನು ಸೀಳಿಕೊಂಡು ಬಾಲಕನು ಈಚೆಗೆ ಬಂದು ಅದರ ದೇಹದ ಮೇಲೆ ನರ್ತಿಸಿದುದು. ಪ್ರಮಥ ಗಣದವರು ಈ ಸುದ್ದಿಯನ್ನು ದೇವಿಗೆ ಕೂಗಿ ಹೇಳಲು ಅವಳು ಅವನನ್ನೆತ್ತಿಕೊಂಡು ರಮಿಸಿದುದು. ಮೃತವಾದ ಅಜಗರದ ಪರಿಮಾಣದ ವರ್ಣನೆ. 'ಈ ಸ್ಥಳದಲ್ಲಿ ಎಂತೆಂತಹ ರಕ್ಕಸರಿರುವರೋ' ಎಂದು ದೇವಿಯು ಹೆದರಿ ನುಡಿದುದು- ಇತರ ಬಾಲಕರೊಂದಿಗೆ ಗಣಪತಿಯು ಕ್ರೀಡಿಸಿದುದರ ವರ್ಣನೆ. ಆ ವೇಳೆಗೆ ಸರಿಯಾಗಿ ಶಲಭಾಸುರನು ಅಲ್ಲಿಗೆ ಬರಲು ಬಣ್ಣ ಬಣ್ಣವಾಗಿದ್ದ ಆ ಚಿಟ್ಟೆಯನ್ನು ಗಣಪತಿಯು ತನ್ನ ಪುಟ್ಟ ಪುಟ್ಟ ಕೈಗಳಿಂದ ಹಿಡಿದುಬಿಟ್ಟುದು. ಅದು ತನ್ನ ಪಕ್ಕಗಳನ್ನು ಪಟ ಪಟ ಬಡಿದು ಬಾಲಕನನ್ನು ಪರಚಿದುದು. ಒಮ್ಮೆ ಬಿಟ್ಟಂತೆಯೂ ಅದು ಹಾರಲಾರಂಭಿಸಿದ ಕೂಡಲೇ ಪುನಃ ಹಿಡಿಯುತ್ತಲೂ ಹಿಂಸಿಸಿದುದು. 'ಪ್ರಾಣಿಯನ್ನು ಹಿಂಸಿಸಬಾರದೆ'ಂದು ಪಾರ್ವತಿಯು ಹೇಳುತ್ತಿರುವಷ್ಟರಲ್ಲೇ ಬಾಲಕನು ಅದನ್ನು ಒಂದು ಬಂಡೆಗೆ ಅಪ್ಪಳಿಸಿ ಪುಡಿ ಪುಡಿ ಮಾಡಿದುದು- ಈ ಅದ್ಭುತಕೃತ್ಯವನ್ನು ನೋಡಿ ಪಾರ್ವತಿಯು ಶಿಶುವನ್ನು ಎತ್ತಿಕೊಂಡು ನಡೆದದು. ಎಲ್ಲರೂ ಗಣಪತಿಯನ್ನು ಪ್ರಶಂಸಿಸುತ್ತಿರಲು ದೇವತೆಗಳು ಕುಸುಮವೃಷ್ಟಿಯನ್ನು ಕರೆದುದು. 324.339

**೯೦ ನೆಯ ಅಧ್ಯಾಯ :—**

ಮಗುವಿಗೆ ೧೨ ನೆಯ ತಿಂಗಳು ನಡೆಯುತ್ತಿರುವಾಗ ಒಂದು ದಿನ ಗಿರಿಜೆಯು ಕೂಸನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಸಖಿಯರೊಂದಿಗೆ ವಿನೋದವಾಡುತ್ತ

ಲಿದ್ದಳು. ಕೂಸು ಕುಣಿದಾಡುವುದನ್ನು ನೋಡಬೇಕೆಂಬ ಬಯಕೆ, ಆಗ ದೇವಿಗುಂಟಾಗಲು ಇದನ್ನರಿತ ಗಣಪತಿಯು ನೂಪುರಗಳಿಂದ ಮಂಜುಳವಾಗಿ ಶಬ್ದ ಮಾಡುತ್ತ ಕುಣಿಯಲಾರಂಭಿಸಿದುದು. ಈ ಶಬ್ದವನ್ನು ಕೇಳಿ ಹರನೂ, ಪುರುಷೋತ್ತಮನೂ, ಇಂದ್ರಾದಿ ದೇವತೆಗಳೂ ಹೆಚ್ಚೇನು? ಅಣು, ರೇಣು, ತೃಣ, ಕಾಷ್ಠಗಳೂ ಕುಣಿದಾಡಿದುದು. ಇದರ ಪರಿಣಾಮವಾಗಿ ಭೂಮಿಯು ಕಂಪಿಸಿದುದು. 'ಸಾಕೆಂ'ದು ಗೌರಿಯು ಎಷ್ಟು ಬಗೆಯಿಂದ ನಿಷೇಧಿಸಿದರೂ ಬಾಲಕನು ಕುಣಿತವನ್ನು ನಿಲ್ಲಿಸದಿರಲು ಇದೇ ಸಮಯದಲ್ಲಿ 'ನೂಪುರ'ನೆಂಬ ಅಸುರನು ಗಣಪತಿಯ ಕಾಲಂದಿಗೆಗಳನ್ನು ಪ್ರವೇಶಿಸಿದುದು. ಗೌರಿಯು ಮಹಾಭಾರವುಳ್ಳ ಗಣಪತಿಯನ್ನು ಎತ್ತಿಕೊಳ್ಳಲಾರದೇ ಕೆಳಕ್ಕಿಳಿಸಲು ಯತ್ನಿಸಿದಾಗ ಬಾಲಕನು ತನ್ನ ಕಾಲುಗಳನ್ನು ಬಲವಾಗಿ ಕೊಡಹಿ ರಕ್ಕಸನನ್ನು ನೆಲಕ್ಕೆ ಕೆಡಹಿದುದು. ಆಗ ದೈತ್ಯನು ಪಕ್ಷಿಯಂತೆ ಅಂತರಿಕ್ಷದಲ್ಲಿ ಹಾರಾಡುತ್ತಿರುವಾಗ ಕೆಳಕ್ಕೆ ಬಿದ್ದು ಸತ್ತುಹೋದುದು. ಇದನ್ನು ಕಂಡ ದೇವತೆಗಳು, ಋಷಿಗಳು ಎಲ್ಲರೂ ಗಣಪತಿಯನ್ನು ಸ್ತುತಿಸಿದುದು. ವಿಶ್ವರೂಪಿಯಾದ ಗಣಪನನ್ನು ಎಲ್ಲರೂ ಭಕ್ತಿಯಿಂದ ಪೂಜಿಸಿದುದು. ಮತ್ತೊಮ್ಮೆ ಗಣಪತಿಯು ಮುನಿಬಾಲಕರೊಂದಿಗೆ ಆಟವನ್ನಾಡುತ್ತಿದ್ದಾಗ ಸಿಂಧುಪ್ರೇರಿತನಾದ ದೈತ್ಯನೊಬ್ಬನು ಆಡಿನ ರೂಪದಿಂದ ಬಂದು ಗಣಪತಿಯನ್ನು ಕೊಲ್ಲಲು ಆಟ್ಟಿಸಿಕೊಂಡು ಬರುವಷ್ಟರಲ್ಲಿ ಗಣಪತಿಯು ಅದರ ಕೊಂಬುಗಳನ್ನು ಭದ್ರವಾಗಿ ಹಿಡಿದುಕೊಂಡು ಬಗ್ಗಿಸಿ ಅದರ ಮೇಲೆ ಕುಳಿತುದು. ಇಷ್ಟಾ

ದರೂ ಆಡು ಜಗ್ಗದೆ ಇತರ ಬಾಲಕರನ್ನೆಲ್ಲ ಪೀಡಿಸಲಾ
ರಂಭಿಸಿದ ರಕ್ಕಸನನ್ನು ಕಂಡು ಗಣಪನು ಕೆಳಕ್ಕೆ ನೆಗೆದು
ನಿಂತು ತನ್ನ ಬಲವನ್ನೆಲ್ಲ ಪ್ರಯೋಗಿಸಿ ಆದರ ಬೆನ್ನಿನ
ಮೇಲೆ ಒಮ್ಮೆ ಚಪ್ಪರಿಸಿ ಕೊಂದುದು. ಗೌರಿಯು
ಗಣಪತಿಗೆ ಮೊಸರನ್ನವನ್ನು ನಿವ್ವಳಿಸಿದುದು. 340-858

**೯೧ ನೆಯ ಅಧ್ಯಾಯ :—**

ಗಣಪತಿಗೆ ಎರಡನೆಯ ವರ್ಷ ನಡೆಯುತ್ತಿರುವಾಗ ಒಮ್ಮೆ
ಮುನಿಬಾಲಕರೊಂದಿಗೆ ಆಟವಾಡಲು ತೋಟಕ್ಕೆ ಹೋಗಿ
ಹಣ್ಣುಗಳನ್ನು ಕಿತ್ತು ಸ್ವೇಚ್ಛೆಯಾಗಿ ತಿಂದುದು, ಅಷ್ಟರಲ್ಲಿ
'ಕೂಟ'ನೆಂಬ ದೈತ್ಯನು ಬಂದು ಅಲ್ಲಿದ್ದ ಸರೋವರದ
ಜಲವನ್ನೆಲ್ಲ ವಿಷಮಯವನ್ನಾಗಿ ಮಾಡಲು, ಬಾಲಕರು
ಅಲ್ಲಿಗೆ ಬಂದು ಜಲಪಾನಮಾಡಿ ಮೃತರಾದುದು. ನಗರ
ರಕ್ಷಿಗಳು ಈ ಸುದ್ದಿಯನ್ನು ಊರಿನವರಿಗೆಲ್ಲ ತಿಳಿಸಲು
ಹಾಹಾಕಾರದೊಡನೆ ಎಲ್ಲರೂ ಅಲ್ಲಿಗೆ ಬಂದುದು. ಆಗ
ಗಣಪತಿಯು ತನ್ನ ಅಮೃತಪೂರ್ಣ ದೃಷ್ಟಿಕ್ಷೇಪದಿಂದ
ಬಾಲಕರನ್ನೂ, ಇತರ ಜಲಚರ ಪ್ರಾಣಿಗಳನ್ನೂ ಪುನರು
ಜ್ಜೀವನಗೊಳಿಸಿದುದು. ಈ ಅದ್ಭುತವನ್ನು ಕಂಡವರ
ನೇಕರು ಗಣಪನನ್ನು ಸ್ತುತಿಸಿದುದು. ನಾಸ್ತಿಕರು
ನಿಂದಿಸಿದುದು. ಕೂಸಿಗೆ ಮೂರನೆಯ ವತ್ಸರ ಪ್ರಾರಂ
ಭವಾಗಲು, ಬಾಲಕರ ಸಂಗಡ ದ್ವಂದ್ವ ಯುದ್ಧವಾಡಲು
ಗಣೇಶನು ಹೋದುದು. ಕೆಲಕಾಲ ಯುದ್ಧವಾಡಿದನಂತರ
ಮಹರ್ಷಿಯೊಬ್ಬರ ಆಶ್ರಮಕ್ಕೆ ತೆರಳಿ ಅಲ್ಲಿದ್ದ ಸರೋವರ
ದಲ್ಲಿ ಜಲಕ್ರೀಡೆಗಾರಂಭಿಸಿದುದು. ಆ ಸರಸ್ಸಿನಲ್ಲಿ ವಾಸವಾ
ಗಿದ್ದ ಮತ್ಸ್ಯರೂಪಿಯಾದ ಅಸುರನು ಇವರೊಂದಿಗೆ
ಆಟವಾಡುವಂತೆ ನಟಿಸಿ, ಒಮ್ಮೆಲೇ ಗಣಪತಿಯನ್ನು ಎಳೆ
ದುಕೊಂಡು ಅಗಾಧವಾದ ಮಡುವಿನೆಡೆಗೆ ಹೋದುದು.

**೯೨ ನೆಯ ಅಧ್ಯಾಯ :—**

ಶಿವನಂತೆ ಕಂಡು ಬಂದಾಗ ಅವಳು ನಾಚಿಕೆಯಿಂದ ಕೈ
ಲಿದ್ದ ಕೋಲನ್ನು ಬಿಸುಟೊಡನೆ ಪುನಃ ಓಡಿಹೋಗಿ ಹು
ಡುಗರೊಂದಿಗೆ ಆಟಕ್ಕೆ ಸೇರಿಕೊಂಡುದು. ದೇವಿಯು ಸಿಟ್ಟಿ
ನಿಂದ ಬಾಲಕರೆಡೆ ಬಂದರೂ ಗಣಪತಿಯನ್ನು ಗುರುತಿಸ
ಲಾರದೇ ಸಂಕಟ ಪಡುತ್ತಿರಲು, ಗಣಪತಿಯು ತಾನಾ
ಗಿಯೇ ಅವಳ ಕೈಗೆ ಸಿಕ್ಕುದು. ಆಗ ಅವನನ್ನು
ತನ್ನ ಪೀತಾಂಬರದ ಸೆರಗಿನಿಂದ ಬಿಗಿದುಕಟ್ಟಿ ಎಳೆ
ದೊಯ್ಯುವಾಗ ಇವನು ಹಠಮಾಡಿ ತಪ್ಪಿಸಿಕೊಂಡು ಓಡಿ
ಹೋದುದು. ಅಷ್ಟರಲ್ಲಿ 'ಕರ್ದಮಾಸುರ'ನು ಎದುರಿಗೆ
ಬಂದು 'ಗೌರಿಗೆ ಕಾಣಿಸದಂತೆ ನಿನ್ನನ್ನು ಬಚ್ಚಿಡುವೆನು'
ಎಂದು ನಂಬಿಸಿ, ಅವನನ್ನು ನುಂಗಿಬಿಟ್ಟುದು. ಗೌರಿಯು
ಮಗನನ್ನು ಕಾಣದೇ ದುಃಖಿಸುತ್ತಿರುವುದನ್ನು ನೋಡಿ
ಸಹಿಸಲಾರದೇ ಗಣೇಶನು ಅಕ್ಷತಾಂಗನಾಗಿ ಕರ್ದಮನ
ಬಾಯಿಯಿಂದ ಅವನಿಗೆ ತಿಳಿಯದಂತೆ ಈಚೆಗೆ ಹೊರಟು
ಬಂದುದು. ಇದನ್ನುಕಂಡ ಕೂಡಲೇ 'ಸುಳ್ಳುಗಾರ' ಎಂ
ದು ಅಸುರನನ್ನುಗೌರಿಯು ಆಕ್ಷೇಪಿಸುತ್ತಿರಲು ಕರ್ದಮನು
ಒಡನೆಯೇ ದೀರ್ಘಾಕಾರನಾಗಿ ಬಾಲಕನನ್ನುಅಪಹರಿಸಿ
ಕೊಂಡು ಓಡಲು ಗಣಪನು ಅವನಿಗಿಂತಲೂ ಅತಿದೀರ್ಘಾ
ಕೃತಿಯ ಶರೀರವನ್ನು ಧರಿಸಿ ಅವನನ್ನು ವಧಿಸಿದುದು.
ಎಲ್ಲರೂ ಆಗಜಾನಂದನನನ್ನು ಸ್ತುತಿಸಿದುದು. ಬಾಲಕ
ನನ್ನು ಗೌರಿಯು ಎತ್ತಿಕೊಂಡು ಮನೆಗೆ ಬರುತ್ತಿರುವಾಗ
ಇದ್ದಕ್ಕಿದ್ದಂತೆಯೇ ಗಣೇಶನು ನೆಲಕ್ಕುರುಳಿ ಒದೆದಾಡಿ
ದಂತೆ ನಟಿಸಿ ಆಕಳಿಸಿದುದು. ಪಾರ್ವತಿಯು ಘಾಬರಿ
ಯಿಂದ ಇವನ ಬಾಯಿಯಲ್ಲಿ ಬಗ್ಗಿ ನೋಡಲು, ಅವಳ
ದೃಷ್ಟಿಗೆ ಇಡೀ ವಿಶ್ವವೇ ಕಂಡುದು. ಪಾರ್ವತೀಕೃತ ತತ್ತ್ವ
ಗರ್ಭಿತ ಸ್ತೋತ್ರಗಳು. ಅನಂತರ ದೇವನು ಪೂರ್ವ

ದಂತೆ ರೂಪವನ್ನು ಧರಿಸಲು ಎಲ್ಲರೂ ಸ್ತುತಿಸಿದುದು.
ಫಲಶ್ರುತಿ. 386-410

**೯೩ ನೆಯ ಅಧ್ಯಾಯ :—**

ಮೊಗುವಿಗೆ ೫ ನೆಯ ವರ್ಷ ನಡೆಯುತ್ತಿರಲು ಒಂದು ದಿನ ಬಾಲಕರ ಸಂಗಡ ಆಟವಾಡಲು ಗಣಪತಿಯು ಹೊರಟುದು. ದೇವ-ದಾನವರಾಗಿ ಮಣ್ಣಿನ ಚಂಡುಗಳಿಂದ ಆಟವಾಡತೊಡಗಿದುದು. ಅಲ್ಲಿಗೆ 'ಖಡ್ಗ' ನೆಂಬ ದೈತ್ಯನೊಬ್ಬನು ಒಂಟೆಯ ರೂಪದಿಂದ ಬಂದು ಎಲ್ಲರನ್ನೂ ಸಂಕ್ಷೋಭಗೊಳಿಸಿದುದು. ಬಾಲಕನು ತನ್ನ ಮಿತ್ರರಿಗೆ ಉಷ್ಟ್ರದಿಂದುಂಟಾದ ತ್ರಾಸವನ್ನು ಸಹಿಸಲಾರದೇ ದೊಡ್ಡ ರೂಪವನ್ನು ಸ್ವೀಕರಿಸಿ ವಜ್ರಮುಷ್ಟಿಯಿಂದ ಅದರ ಶಿರಸ್ಸಿಗೆ ಹೊಡೆದು ಕೊಂದು ಬಿಸುಟುದು. ಬಾಲಕರು ದೇವನನ್ನು ವರ್ಣಿಸಿದುದು. ಮತ್ತೆ ಆಟವು ಆರಂಭವಾದಾಗ ಖಡ್ಗಾಸುರನ ಮಿತ್ರನು ಪ್ರತೀಕಾರ ದೃಷ್ಟಿಯಿಂದ ಛಾಯಾರೂಪವನ್ನು ಧರಿಸಿ ಬಂದು ಗಣಪತಿಯ ನೆರಳನ್ನು ಹಿಡಿದೆಳೆದು ಕೆಡಹಿದುದು. ಗಣಪತಿಯು ತನ್ನ ಜ್ಞಾನಮಹಿಮೆಯಿಂದ ವಾಸ್ತವಾಂಶವನ್ನು ತಿಳಿದು ಪರ್ವತದ ಕೋಡಿಗಲ್ಲನ್ನು ತೆಗೆದುಕೊಂಡು ಗುರಿನೋಡಿ ಆ ಛಾಯೆಗೆ ಹೊಡೆಯಲು ರಾಕ್ಷಸನು ಸತ್ತುಹೋದುದು. ಅಷ್ಟರಲ್ಲಿ 'ಚಂಚಲ' ಎಂಬ ಮತ್ತೊಬ್ಬ ರಾಕ್ಷಸನು ಬಾಲಕನ ರೂಪದಿಂದ ಬಂದು ಅವರೊಡನೆ ಆಟವಾಡುತ್ತ ಆಟದ ನಿಯಮದಂತೆ ಗಣಪತಿಯನ್ನೇರಿ ಕುಳಿತು ಹಿಂಸಿಸಿದುದು, ಗಣಪತಿಯು ಉಪಾಯಾಂತರದಿಂದ ಅವನ ಮೇಲೆ ಹತ್ತಿ ಕುಳಿತು ಅದುಮಿ ಕೊಂದುದು. 411-432

**೯೪ ನೆಯ ಅಧ್ಯಾಯ :—**

ಹೀಗೆಯೇ ಇವರು ಆಟವಾಡುತ್ತಿರುವಷ್ಟರಲ್ಲಿ ಬಾಲಕರು ಊಟದ ವೇಳೆಯಾದರೂ ಮನೆಗೆ ಬಾರದಿರುವುದನ್ನು ಅವರವರ ಮಾತಾ-ಪಿತೃಗಳು ಒಂದೊಂದು ಕೋಲನ್ನು ಹಿಡಿದುಕೊಂಡುಇವರಿದ್ದಲ್ಲಿಗೆ ಓಡಿ ಬಂದುದು. ಎಷ್ಟೇಕೋಪಗೊಂಡಿದ್ದರೂ ಬಾಲಕ;ಗಣೇಶನನ್ನುನೋಡಿದೊಡನೆಯೇ ಶಾಂತರಾದುದು. ಮತ್ತು ತಮ್ಮಲ್ಲುಂಟಾದ ಈ ಬಗೆಯ ಪರಿಣಾಮಕ್ಕಾಗಿ ತಮ್ಮಲ್ಲಿಯೇ ಆಶ್ಚರ್ಯಪಟ್ಟುದು. ಇಷ್ಟರಲ್ಲಿ ಗುಣೇಶನು ಬಾಲಕರೆಲ್ಲರನ್ನೂಗೌತಮರ ಆಶ್ರಮಕ್ಕೆ ಕರೆದೊಯ್ದು ದೇವನ ನಿವೇದನಕ್ಕಾಗಿ ಅಲ್ಲಿ ಇರಿಸಿದ್ದ ಅನ್ನವನ್ನು ಬಾಲಕರಿಗೆ ಉಣಬಡಿಸಲು, ಗೌತಮನು ಕ್ಷುಬ್ಧನಾಗಿ ಪಾರ್ವತಿಯ ಬಳಿಗೆ ಬಂದು ಚಾಡಿ ಹೇಳಿದುದು. ಪಾರ್ವತಿಯು ಕೋಲಿನಿಂದ ಬಾಲಕನನ್ನು ಬಲವಾಗಿ ಹೊಡೆದು ಒಂದು ಕೋಣೆಯಲ್ಲಿ ಕೂಡಿ ಹಾಕಿದುದು. ಗೌತಮನು ಆಶ್ರಮಕ್ಕೆ ಹಿಂದಿರುಗಿ ಬಂದು ನೋಡಲು, ಅನ್ನವು ಸಮೃದ್ಧಿಗೊಂಡುದು. ಇದನ್ನೂ, ತಾನು ಪೂಜೆಗಾಗಿ ಇರಿಸಿಕೊಂಡಿದ್ದದೇವತೆಗಳೆಲ್ಲ ಗಣಪತಿಯಂತೆ ಕಂಡುಬಂದುದನ್ನೂ ನೋಡಿ ತನ್ನ ಅವಿಚಾರಕೃತ್ಯಕ್ಕಾಗಿ ಪಶ್ಚಾತ್ತಪಿಸಿದುದು. 433-451

**೯೫ ನೆಯ ಅಧ್ಯಾಯ :—**

ಗಣಪತಿಗೆ ೬ ನೆಯ ವರ್ಷವು ನಡೆಯುತ್ತಲಿದ್ದಾಗ ಒಂದು ದಿವಸ ಬಾಲಕರೊಡನೆ ಗಣಪತಿಯು ಆಟವಾಡುತ್ತಿರಲು 'ವಿಶ್ವಕರ್ಮ'ನು ಅಲ್ಲಿಗೆ ಬಂದು ಸೂರ್ಯನ ತೇಜಸ್ಸಿನ ಕಣಗಳಿಂದ ತಾನು ನಿರ್ಮಿಸಿದ ಆಯುಧಗಳನ್ನು ಗಣಪತಿಗೆ ಸಮರ್ಪಿಸಿದುದು. ಮತ್ತು ತತ್ಪೂರ್ವ

ಯಂತೆ ವಿನತೆಯನ್ನು ಬಂಧಿಸಿ ತರುತ್ತಿರಲು ಪಕ್ಷಿಗಳು ಸರ್ಪಗಳೊಂದಿಗೆ ಕಾದಾಡಿ ಸೋತುದು. ಗರುಡನ ಆಗಮನ. ಕೊನೆಗೆ ವಾಸುಕಿಯು ವಿನತೆಯ ಮಕ್ಕಳನ್ನು ಹಿಡಿದುಕೊಂಡು ತಾಯಿಯ ಬಳಿಗೆ ಒಯ್ದುದು. ಇದರಿಂದ ಸಂತಪ್ತಳಾದ ವಿನತೆಯು ಕಶ್ಯಪರೊಂದಿಗೆ ತನ್ನ ಹೊಟ್ಟೆಯ ಸಂಕಟವನ್ನು ಹೇಳಿಕೊಳ್ಳಲು ಆವರು ಸುಮುಹೂರ್ತದಲ್ಲಿ ಪುತ್ರನೊಬ್ಬನನ್ನು ಅನುಗ್ರಹಿಸಿ ' ಈ ಪುತ್ರನು ಮೊಟ್ಟೆಯಲ್ಲೇ ಇರುವನು. ಯಾರು ಇದನ್ನು ಒಡೆವರೋ ಅವನೇ ಈತನಿಗೆ ಸ್ವಾಮಿಯಾಗುವನು ' ಎಂದು ಸೂಚಿಸಲು ವಿನತೆಯು ಅದನ್ನು ಸಂರಕ್ಷಿಸುತ್ತ ಅರಣ್ಯದ ನಡುವೆ ಕಾಲವನ್ನು ಕಾದು ಕುಳಿತುದು. 508-529

**೯೮ ನೆಯ ಅಧ್ಯಾಯ :—**

ಗಣಪತಿಗೆ ಈ ವೇಳೆಗೆ ೮ ನೆಯ ವರ್ಷ ನಡೆಯುತ್ತಿರಲು ಒಂದು ದಿನ ತನ್ನ ಸಂಗಡಿಗರಾದ ಚಿಕ್ಕ ಪುಟ್ಟ ಬಾಲಕರನ್ನೆಲ್ಲ ಸಮೀಪದಲ್ಲಿ ಕುಳ್ಳಿರಿಸಿಕೊಂಡು ಸು-ಸ್ವರದಿಂದ ವೇದಗಳನ್ನು ಉಚ್ಚರಿಸಲಾರಂಭಿಸಿದುದು. ಇದರಿಂದ ಸಕಲ ಸತ್ತ್ವಗಳೂ ಪರವಶವಾದುದು. ಈ ವೇದಧ್ವನಿಯನ್ನು ಕೇಳಲು ಪರಶಿವನೂ ಅಲ್ಲಿಗೆ ಬರಲು, ಅವನ ಕಪರ್ದದ ಮೇಲಿದ್ದ ಚಂದ್ರಮನು ಈ ಸು-ಸ್ವರಕ್ಕೆ ಮೆಚ್ಚಿ ಅಮೃತವನ್ನು ವರ್ಷಿಸಿದುದು. ತತ್ಪರಿಣಾಮವಾಗಿ ನೀಲಕಂಠನ ಕಂಠದಲ್ಲಿದ್ದ ರುಂಡಗಳೆಲ್ಲ ಚೈತನ್ಯಗೊಂಡುದು. ಇಂತಹ ಪವಿತ್ರ ಸನ್ನಿವೇಶದಲ್ಲಿ ಅಲ್ಲಿಗೊಬ್ಬ ಹೊಸ ದೈತ್ಯನು ಆರಣ್ಯಕ ಪಶುವಿನಂತೆ ಸೋಗು ಹಾಕಿಕೊಂಡು ಬಂದನು. ಈ ಪ್ರಾಣಿಯನ್ನು ನೋಡಿ ಎಲ್ಲರೂ ಗಹಗಹಿಸಿ ನಕ್ಕರು. ಅದನ್ನು ಹಿಡಿಯಬೇಕೆಂದು ಗಣಪತಿಯು ಯತ್ನಿಸಿದಷ್ಟೂ ಅದು ದೂರ

ದೂರ ಹೋಗಿ, ಅಂತೂ ಬಾಲಕನನ್ನು ಗಹನವಾದ ವಿಪಿನ ಒಂದಕ್ಕೆ ಕೊಂಡೊಯ್ದುದು. ಎಷ್ಟು ಪ್ರಯತ್ನಿಸಿದರೂ ಆ ಪ್ರಾಣಿ ಕೈಗೆ ಸಿಕ್ಕದೆ ಇರಲು, ಬಾಲಕನು ತನ್ನ ಪಾಶವನ್ನು ಬೀಸಿ ಆ ಮೃಗವನ್ನು ಹಿಡಿದು ತರಿಸಿದುದು, ಮತ್ತು ಅದರ ಕಂಠನಾಳವನ್ನು ಬಿಗಿದು ಅದನ್ನು ಕೊಂದುದು. ಪುನಃ ಬಾಲಕರು ಆಟವನ್ನಾಡುತ್ತಿರುವ ಸಮಯದಲ್ಲಿ ಗಣಪತಿಯ ದೃಷ್ಟಿಗೆ ವಿನತೆಯು ಬಚ್ಚಿಟ್ಟಿದ್ದ ಮೊಟ್ಟೆಯು ಗೋಚರಿಸಿದುದು. ಅದನ್ನು ತನ್ನ ಕೈಗಳಿಗೆ ತೆಗೆದು ಕೊಂಡು ಒಡೆಯಲು, ಒಳಕ್ಕೆ ಸುಂದರವಾದ ನವಿಲೊಂದು ಕಂಡು ಬಂದುದು. ಪಕ್ಷಿಯ ವರ್ಣನೆ. ಆ ನವಿಲು ತನ್ನ ರೆಕ್ಕೆ-ಪುಕ್ಕಗಳನ್ನು ಕೆದರಿಕೊಂಡು ಬಲವಾಗಿ ಬಡಿಯುತ್ತ ಮುನಿಬಾಲಕರನ್ನೆಲ್ಲ ಸಂತ್ರಸ್ತರನ್ನಾಗಿ ಮಾಡಲು, ಗಣೇಶನು ತಾನೂ ಅದರ ಸಂಗಡ ಹೋರಾಡಿ ಅವನ್ನು ತನ್ನ ನಾಲ್ಕೂ ಆಯುಧಗಳಿಂದ ಹೊಡೆಯಲು ಆ ನವಿಲು ಜಗ್ಗದೇ ಬಾಲಕರನ್ನೆಲ್ಲ ಎತ್ತಿಕೊಂಡು ಹಾರಿಹೋದುದು. ಗಣೇಶನೂ ಸಾಹಸವನ್ನು ತೋರಿ ಅದರ ಹಿಡಿತದಿಂದ ಬಾಲಕರನ್ನೆಲ್ಲ ಬಿಡಿಸಿ, ಅದನ್ನೇರಿ ಕುಳಿತುದು. ಅಷ್ಟರಲ್ಲಿ ವಿನತೆಯು ಅಲ್ಲಿಗೆ ಬಂದು ಬಾಲಕರೊಡನೆ ಗಣೇಶನನ್ನು ಸ್ತುತಿಸಿದುದು, ಮತ್ತು ಕಶ್ಯಪನು ಈ ಪಕ್ಷಿಯ ಬಗ್ಗೆ ಸೂಚಿಸಿದ್ದ ಭವಿಷ್ಯವನ್ನು ಅರುಹಿದುದು. 'ನಿನ್ನ ಮಕ್ಕಳನ್ನು ಬಂಧನದಿಂದ ಮುಕ್ತಿಗೊಳಿಸಿ ನಿನ್ನ ಬಳಿಗೆ ಕರೆದು ತರುವೆನು, ಚಿಂತಿಸಬೇಡ' ಎಂದು ಆಶ್ವಾಸನವನ್ನಿತ್ತು ಮಯೂರದ ಅಭಿಮತದಂತೆ ತನ್ನ ಹೆಸರನ್ನು 'ಮಯೂರೇಶ' ಎಂದು ಒಪ್ಪಿಕೊಂಡುದು ವಿನತೆಯು ಸಂತುಷ್ಟಳಾಗಿ ತನ್ನ ಆಶ್ರಮಕ್ಕೆ ಹಿಂದಿರುಗಲು 'ಮಯೂರೇಶ, ಮಯೂರೇಶ' ಎಂದು ದೇವನ ನೂತನ ನಾಮವನ್ನು

ಪಾರ್ವತಿಯನ್ನೂ, ಗಣಪತಿಯನ್ನೂ ಸ್ತುತಿಸಿದುದು. ವಿಶ್ವಕರ್ಮನು ಕೊಟ್ಟ ಆಯುಧಗಳನ್ನು ದೇವನು ಧರಿಸಿ ಉತ್ಸಾಹದಿಂದ ಒಮ್ಮೆ ಝಳುಪಿಸಿದುದು. ಇದರಿಂದ ಭೂಮಿಯು ನಡುಗಿದುದು. ವಿಶ್ವಕರ್ಮನು ಸ್ವ-ಸ್ಥಾನಕ್ಕೆ ಹಿಂದಿರುಗಿದ ಬಳಿಕ ಬಾಲಕರೊಂದಿಗೆ ಆಟವಾಡಲು ಗಣಪತಿಯು ಪುನಃ ಹೊರಟುದು. ಆಗ ಅಸುರನೊಬ್ಬನು ತೋಳದ ರೂಪದಿಂದ ಬಂದು ಎಲ್ಲರನ್ನೂ ಹಿಂಸಿಸಲು ಗಣಪತಿಯು ಅಂಕುಶದಿಂದ ಅವನನ್ನು ಘಾತಿಸಿ ಕೊಂದುದು. 452-481

೯೬ ನೆಯ ಅಧ್ಯಾಯ :—

ಒಂದು ದಿವಸ ಪಾರ್ವತಿಯು ಶಿವನ ಸಂಗಡ ವಿನೋದವಾಗಿ ಮಾತನಾಡುತ್ತ 'ಗಣಪತಿಗೆ ಉಪನಯನ ಸಂಸ್ಕಾರವನ್ನು ಮಾಡುವುದಕ್ಕೆ ಇದು ಸಕಾಲವಲ್ಲವೇ ?' ಎಂದು ಪ್ರಸ್ತಾಪಿಸಿದುದು- ಪರಶಿವನು ಈ ಸಲಹೆಯನ್ನು ಮನ್ನಿಸಿ ಗೌತಮರನ್ನು ಬರಮಾಡಿಕೊಂಡು ಒಂದು ಸುಮುಹೂರ್ತವನ್ನು ತೀರ್ಮಾನಿಸಿ, ಉಪನಯನೋಪಯೋಗಿ ಸಾಮಗ್ರಿಗಳನ್ನೆಲ್ಲ ಸಿದ್ಧಪಡಿಸಿಕೊಂಡುದು. ಈ ಮಂಗಲಮಹೋತ್ಸವಕ್ಕೆ ೮೮ ಸಹಸ್ರ ಮಂದಿ ಋಷಿಗಳೂ, ೩೩ ಕೋಟಿ ದೇವತೆಗಳೂ ಆಗಮಿಸಿದುದು- ವಟು, ಪರಮೇಶ್ವರರ ನಡುವೆ ಅಂತಃಪಟವನ್ನು ಹಿಡಿದು ಅಕ್ಷತಾರೋಪಣಕಾಲಕ್ಕೆ ಸರಿಯಾಗಿ 'ಕೃತಾಂತ ಮತ್ತು ಕಾಲ' ಎಂಬ ದೈತ್ಯರಿಬ್ಬರೂ ಗಜರೂಪಗಳನ್ನು ಧರಿಸಿ ಐರಾವತವನ್ನು ಮೊದಲು ಸದೆಬಡಿದು, ಅನಂತರ ಮಂಟಪಕ್ಕೆ ನುಗ್ಗಿದುದು. ಸಭಿಕರೆಲ್ಲರೂ ಓಡಿಹೋಗಲು ಪ್ರಮಥರು ಹಾಹಾಕಾರವನ್ನು ಮಾಡಲಾರಂಭಿಸಿದುದು. ಇದನ್ನು ನೋಡಿದ ಕೂಡಲೇ ಬಾಲಕನು ಗುಡುಗಿನಂತೆ ಒಮ್ಮೆ

ಗರ್ಜಿಸಿ ಆ ಆನೆಗಳ ಸೊಂಡಿಲನ್ನು ಭದ್ರವಾಗಿ ಹಿಡಿದು ಗಿರಿಗಿರಿ ತಿರುಗಿಸಿ ಒಂದರಿಂದ ಮತ್ತೊಂದನ್ನು ಅಪ್ಪಳಿಸಿ ಕೊಂದುದು. ಅನಂತರ ಗೌರಿಯು ಶಿಶುವನ್ನು ಎತ್ತಿ ಕೊಂಡುದು. ಉಪನಯನ ಕಾರ್ಯಗಳು ಮುಂದುವರೆ ಯಲು, ಇದಕ್ಕಾಗಿ ಬಂದವರೆಲ್ಲ ತಾವು ತಂದಿದ್ದ ಉಪಾ ಯನಗಳನ್ನು ಬಾಲಕನಿಗೆ ಅರ್ಪಿಸಿ ತಮತಮಗೆ ಸರಿ ಎನಿ ಸಿದ ಹೆಸರುಗಳನ್ನಿರಿಸಿದುದು. ಅದಿತಿ-ಕಶ್ಯಪರು ಉಡು ಗೊರೆ ಕೊಡಲು ಮುಂದೆ ಬಂದಾಗ ಬಾಲಕನು ವಿನಾಯ ಕನ ರೂಪದಿಂದ ಅವರಿಗೆ ಕಾಣಿಸಿಕೊಂಡುದು, ಮತ್ತು ಅವರನ್ನು ಮುಗ್ಧರಾಗುವಂತೆ ಮಾಡಿದುದು. 'ತನ್ನ ಮಗ'ನೆಂಬ ಬಗ್ಗೆ ಅದಿತಿ-ಅಗಜೆಯರು ವಿವದಿಸುವುದನ್ನು ಬಗೆಹರಿಸಲು ದೇವತೆಗಳು ವಟುವನ್ನು ಪರೀಕ್ಷಿಸಲು, ಬಾಲಕನು ಅವರಿಗೆ ನಾನಾರೂಪನಾಗಿ ಕಂಡುದು. ಬಾಲಕನನ್ನು ಗೌರಿ ಎತ್ತಿಕೊಳ್ಳಲು ಅದಿತಿಯು ನಿರಾ ಶಳಾದುದು. ಎಲ್ಲರೂ ಗಣಪತಿಯನ್ನು ಪೂಜಿಸಿದುದು. 482-5

## ೯೭ ನೆಯ ಅಧ್ಯಾಯ :—

'ಮಯೂರೇಶ್ವರ'ನ ಕಥೆಯನ್ನು ಹೇಳುವುದಾಗಿ ಆರಂ ಭಿಸಿ ಅದನ್ನು ಅಷ್ಟಕ್ಕೇ ನಿಲ್ಲಿಸಿಬಿಟ್ಟಿರಲ್ಲ, ಕಾರಣವೇನು? ಅದನ್ನು ಮುಂದುವರಿಸಬೇಕೆಂದು ವ್ಯಾಸರು ಪ್ರಶ್ನಿಸಲು, ಬ್ರಹ್ಮನು ಕದ್ರುವಿಗೂ, ವಿನತೆಗೂ ಉಂಟಾದ ಸವತಿ ಮಾತ್ಸರ್ಯದ ಕಥೆಯನ್ನು ಆರಂಭಿಸಿದುದು. ಕದ್ರು ತನ್ನ ಮಕ್ಕಳಾದ ಶೇಷ–ವಾಸುಕಿಯರ ಎದುರಿಗೆ ಬಂ ದು 'ವಿನತೆಯ ಮಕ್ಕಳಿಂದ ತನಗೆ ಅಪಮಾನ ಉಂಟಾ ಯಿತೆಂದೂ, ಅವರನ್ನು ಈ ಕೂಡಲೇ ನಿಗ್ರಹಿಸಬೇಕೆ'ಂ ದೂ ಹೇಳಿ ಅತ್ತುದು. ವಾಸುಕಿಯು ತಾಯಿಯ ಆಜ್ಞೆ

॥ ಶ್ರೀ ಗಣೇಶಾಯ ನಮಃ ॥

# ಮಯೂರೇಶಸ್ತೋತ್ರಮ್



ಪರಬ್ರಹ್ಮರೂಪಂ ಚಿದಾನಂದರೂಪಂ ತ್ರಿಸತ್ಯಂ
ಪರೇಶಂ ಗುಣಾಬ್ಧಿಂ ಗುಣೇಶಮ್ ॥
ಗುಣಾತೀತಮಿಶಾಂ ಮಯೂರೇಶವಂದ್ಯಂ
ಗಣೇಶಂ ನತಾಃಸ್ಮೋ ನತಾಃಸ್ಮೋ ನತಾಃಸ್ಮಃ ॥೧॥

ಜಗದ್ವಂದ್ಯಮೇಕಂ ಪರಾಕಾರಮೇಕಂ
ಗುಣಾನಾಂ ಪರಂ ಕಾರಣಂ ನಿರ್ವಿಕಲ್ಪಮ್ ॥
ಜಗತ್ಪಾಲಕಂ ಹಾರಕಂ ತಾರಕಂ ತಂ
ಮಯೂರೇಶವಂದ್ಯಂ ನತಾಃಸ್ಮೋ ನತಾಃಸ್ಮಃ ॥೨॥

ಮಹಾದೇವಸೂನುಂ ಮಹಾದೈತ್ಯನಾಶಂ
ಮಹಾಪೂರುಷಂ ಸರ್ವದಾ ವಿಘ್ನನಾಶಮ್ ॥
ಸದಾ ಭಕ್ತಪೋಷಂ ಪರಂ ಜ್ಞಾನಕೋಶಂ
ಮಯೂರೇಶವಂದ್ಯಂ ನತಾಃಸ್ಮೋ ನತಾಃಸ್ಮಃ ॥೩॥

ಅನಾದಿಂ ಗುಣಾದಿಂ ಸುರಾದಿಂ
ಶಿವಾಯಾ ಮಹಾತೋಷದಂ ಸರ್ವದಾ ಸರ್ವವಂದ್ಯಮ್ ॥
ಸುರಾರ್ಯನ್ತಕಂ ಭುಕ್ತಿ-ಮುಕ್ತಿಪ್ರದಂ ತಂ
ಮಯೂರೇಶವಂದ್ಯಂ ನತಾಃಸ್ಮೋ ನತಾಃಸ್ಮಃ ॥೪॥

ಪರಂ ಮಾಯಿನಂ ಮಾಯಿನಾಮಪ್ಯಗಮ್ಯಂ
ಮುನಿಧ್ಯೇಯಮಾಕಾಶಕಲ್ಪಂ ಜನೇಶಮ್ ॥
ಅಸಂಖ್ಯಾವತಾರಂ ನಿಜಾಜ್ಞಾನನಾಶಂ
ಮಯೂರೇಶವಂದ್ಯಂ ನತಾಃಸ್ಮೋ ನತಾಃಸ್ಮಃ

ಅನೇಕಕ್ರಿಯಾಕಾರಕಂ ಶ್ರುತ್ಯಗಮ್ಯಂ
ತ್ರಯೀಬೋಧಿತಾನೇಕಕರ್ಮಾದಿಬೀಜಮ್ ॥
ಕ್ರಿಯಾಸಿದ್ಧಿಹೇತುಂ ಸುರೇಂದ್ರಾದಿಸೇವ್ಯಂ
ಮಯೂರೇಶವಂದ್ಯಂ ನತಾಃಸ್ಮೋ ನತಾಃಸ್ಮಃ ॥೬॥

ಮಹಾಕಾಲರೂಪಂ ನಿಮೇಷಾದಿರೂಪಂ
ಕಲಾಕಲ್ಪರೂಪಂ ಸದಾಗಮ್ಯರೂಪಮ್ ॥
ಜನಜ್ಞಾನಹೇತುಂ ನೃಣಾಂ ಸಿದ್ಧಿದಂ ತಂ
ಮಯೂರೇಶವಂದ್ಯಂ ನತಾಃಸ್ಮೋ ನತಾಃಸ್ಮಃ ॥೭॥

ಮಹೇಶಾದಿದೇವೈಸ್ಸದಾ ಧ್ಯೇಯಪಾದಂ
ಸದಾ ರಕ್ಷಕಂ ತತ್ಪದಾನಾಂ ಹತಾರಿಮ್ ॥
ಮುದಾ ಕಾಮರೂಪಂ ಕೃಪಾವಾರಿಧಿಂ ತಂ
ಮಯೂರೇಶವಂದ್ಯಂ ನತಾಃಸ್ಮೋ ನತಾಃಸ್ಮಃ ॥೮॥

ಸದಾ ಭಕ್ತಿಂ ನಾಥೇ ಪ್ರಣಯಪರಮಾನಂದಸುಖದೋ
ಯತಸ್ತ್ವಂ ಲೋಕಾನಾಂ ಪರಮಕರುಣಾಮಾಶು ತನುಷೇ ॥
ಷಡೂರ್ಮೀನಾಂ ವೇಗಂ ಸುರವರ ! ವಿನಾಶಂ ನಯ ವಿಭೋ !
ತತೋ ಭಕ್ತಿಃ ಶ್ಲಾಘ್ಯಾ ತವ ಭಜನತೋಽನನ್ಯಸುಖದಾತ್ ॥೯॥

ಕಿಮಸ್ಮಾಭಿಃ ಸ್ತೋತ್ರಂ ಸಕಲಸುರತಾಪಾಲಕ ವಿಭೋ !
ವಿಧೇಯಂ ವಿಶ್ವಾತ್ಮನ್ನಗಣಿತಗುಣಾನಾಮಧಿಪತೇ ! ॥
ನ ಸಂಖ್ಯಾತಾ ಭೂಮಿಸ್ತವ ಗುಣಗಣಾನಾಂ ತ್ರಿಭುವನೇ
ನ ರೂಪಾಣಾಂ ದೇವ ! ಪ್ರಕಟಯ ಕೃಪಾಂ ನೋಽಸುರಹತೇ ॥೧೦॥

ಯ ಇದಂ ಪಠತೇ ಸ್ತೋತ್ರಂ ಸ ಕಾಮಾನ್ ಲಭತೇಽಖಿಲಾನ್ ।
ಸರ್ವತ್ರ ಜಯಮಾಪ್ನೋತಿ ಮಾನಮಾಯುಃ ಶ್ರಿಯಂ ಪರಾಮ್
॥೧೧॥

ಪುತ್ರವಾನ್ ಧನಸಂಪನ್ನೋ ವಶ್ಯತಾಮಖಿಲಂ ನಯೇತ್ ।
ಸಹಸ್ರಾವರ್ತನಾತ್ಕಾರಾಗೃಹಸ್ಥಂ ಮೋಚಯೇಜ್ಜನಮ್ ॥೧೨॥
ಅಯುತಾವರ್ತನಾನ್ಮರ್ತ್ಯೋಽಸಾಧ್ಯಂ ಯತ್ಸಾಧಯೇತ್ ಕ್ಷಣಾತ್
॥೧೩॥

## ಪರಿಶಿಷ್ಟ

॥ ಶ್ರೀ ಮಹಾಗಣಪತಿ ಪರಬ್ರಹ್ಮಣೇ ನಮಃ ॥



ಸ ಜಯತಿ ಸಿಂಧೂರವದನೋ ಯತ್ಪಾದಾಂಭೋರುಹ ಸ್ಮರಣಮ್ ।
ವಾಸರಮಣಿರಿವ ತಮಸಾಂ ರಾಶೀನ್ನಾಶಯತಿ ವಿಘ್ನಾನಾಮ್ ॥

॥ ಶ್ರೀ ಗಣೇಶಾಯ ನಮಃ ॥

ಶ್ರೀ ಸರಸ್ವತ್ಯೈ ನಮಃ ॥ ಶ್ರೀ ಗುರುಭ್ಯೋ ನಮಃ ॥

# ಶ್ರೀ ಗಣೇಶ ಪುರಾಣಮ್

## ೬ ನೆಯ ಸಂಪುಟ



## ಅಥ ತ್ರಿಸಪ್ತತಿತಮೋಽಧ್ಯಾಯಃ

**ವ್ಯಾಸ ಉವಾಚ :—**

**ಕಥಂ ಬ್ರಹ್ಮನ್ ! ಶಿವಗೃಹೇ ' ಮಯೂರೇಶ್ವರ ' ಸಂಜ್ಞಿತಃ ।**
**ಅವತೀರ್ಣಃ ಕಿಮರ್ಥಂ ? ವಾ ಕಿಂ ಚ ತಚ್ಚರಿತಂ ? ಪಿತಃ !** ॥೧॥

॥ ಶ್ರೀ ಮಂಗಲಮೂರ್ತಯೇ ನಮಃ ॥

### ೭೩ ನೆಯ ಅಧ್ಯಾಯ

ವ್ಯಾಸ :—

ಪರಮೇಷ್ಠಿನ್ ! ವಿಘ್ನರಾಜನು ಪರಶಿವನ ಮನೆಯಲ್ಲಿ ' ಮಯೂರೇಶ್ವರ ' ಎಂಬ ಅಭಿಧಾನದಿಂದ ಮುಂದೆ ಅವತರಿಸಿದನೆಂದು ಅಪ್ಪಣೆಕೊಟ್ಟಿರಲ್ಲವೇ ? ಲೋಕಜನಕ ! ಯಾವ ಮಹತ್ತ್ವದ ಕಾರ್ಯವನ್ನು ಸಾಧಿಸುವುದಕ್ಕಾಗಿ ಭಗವಂತನು ಈ ರೀತಿಯಾಗಿ ಅವತರಿಸಿದನು ? ಮತ್ತು ಆಗ ಅವನು ತೋರಿಸಿದ ಪ್ರಭಾವ ವಿಶೇಷವಾವುದು ? ಇದನ್ನು ದಯೆ ಇಟ್ಟು ವಿಸ್ತಾರವಾಗಿ ಹೇಳೋಣ ವಾಗಲಿ. ॥೧॥

ಮಯೂರೇಶ್ವರಸಂಜ್ಞಾ ಚ ಕಥಂ ಜಾತಾ ? ವಿನಾಯಕೇ ॥
ಏತನ್ಮೇ ಸರ್ವಮಾಚಕ್ಷ್ವ ಶ್ರುಣ್ವಂಸ್ತೃಪ್ಯಾಮಿ ನ ಕ್ವಚಿತ್ ॥೨॥

ಕ ಉವಾಚ :—

ತ್ರೇತಾಯುಗೇ ಮಹಾದೈತ್ಯಃ 'ಸಿಂಧು' ನಾಮಾಭವತ್ಪುರಾ ।
ಸ ಹತಸ್ತೇನ ಬಲಿನಾವತೀರ್ಣೇನ ಶಿವಾಲಯೇ ॥೩॥

ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ ।
ಶೌನಕಸ್ಯ ಚ ಸಂವಾದಂ ರಾಜ್ಞಾ ಚ ಚಕ್ರಪಾಣಿನಾ ॥೪॥

ವಿನಾಯಕನಿಗೆ 'ಮಯೂರೇಶ್ವರ' ಎಂಬ ಅಭಿದಾನ ಬರಲು ಕಾರಣ ವೇನು ? ಇದೇನು, ಸಹಜವಾದ ಹೆಸರೇ ? ಅಥವಾ ಇದಕ್ಕೆ ವಿಶೇಷ ಕಾರಣ, ಸಂದರ್ಭಗಳೇನಾದರೂ ಇವೆಯೇ ? ಈ ಎಲ್ಲ ಅಂಶಗಳನ್ನೂ ತಿಳಿದುಕೊಳ್ಳುವ ಕುತೂಹಲ ನನಗೆ ಕ್ಷಣ-ಕ್ಷಣಕ್ಕೂ ವೃದ್ಧಿಯಾಗುತ್ತಲೇ ಇದೆ. ದೇವನ ಅದ್ಭುತ ಚರಿತ್ರೆಗಳನ್ನು ಎಷ್ಟು ಸಲ ಕೇಳಿದರೂ, ಇನ್ನೂ ಕೇಳಬೇಕೆಂಬ ಉತ್ಸಾಹ ಉಂಟಾಗುವುದೇ ಹೊರತು, ತೃಪ್ತಿ ಬೇರೆ ಉಂಟಾಗುವುದಿಲ್ಲ. ॥೨॥

ಬ್ರಹ್ಮಾ :—

ವತ್ಸ, ವ್ಯಾಸ ! ನಿನಗಿರುವ ಈ ವಿಷಯಬುಭುತ್ಸೆಯನ್ನು ಕಂಡು, ನನಗೆ ಬಹಳ ಸಂತೋಷವೆನಿಸುತ್ತದೆ. ರಹಸ್ಯ ವಿಷಯಗಳನ್ನೆಲ್ಲ ನಿನ್ನಂಥವನಿಗಲ್ಲದೇ, ಮತ್ತಾರಿಗೆ ವಿವರಿಸಲಿ ? ಹಿಂದೆ ನಡೆದ ಯುಗಪರ್ಯಾಯಗಳಲ್ಲಿ ಎರಡನೆಯದಾದ ತ್ರೇತಾಯುಗದಲ್ಲಿ 'ಸಿಂಧು' ಎಂಬ ಹೆಸರಿನ ಅಸುರನೊಬ್ಬನಿದ್ದನು. ದೇವನು ಶಿವಾಲಯದಲ್ಲಿ ಮಯೂರೇಶ್ವರನಾಗಿ ಅವತರಿಸಿ ಇವನನ್ನು ನಿಗ್ರಹಿಸಿದನು. ಮೇಲ್ಕಂಡ ದೈತ್ಯನನ್ನು ವಧಿಸುವುದಕ್ಕಾಗಿಯೇ ದೇವನು ಈ ರೀತಿಯಿಂದ ಅವತರಿಸಬೇಕಾಗಿ ಬಂದಿತು. ॥೩॥

ಈ ವಿಷಯದಲ್ಲಿ ಪುರಾತನವಾದ ಒಂದು ಇತಿಹಾಸ ಹೀಗೆ ಇದೆ. ಅದನ್ನೇ

[1]ಮೈಥಿಲೇ ವಿಷಯೇ ರಾಜಾ [2]ಗಂಡಕೀ ನಗರೇ ಶುಭೇ |
ಚಕ್ರಪಾಣಿರಿತಿ ಖ್ಯಾತಃ ಸಾಕ್ಷಾದ್ವಿಷ್ಣುರಿವಾಪರಃ ||೫||

ನ ಗುಣಾ ವರ್ಣಿತುಂ ಶಕ್ಯಾಃ ಶೇಷೇಣಾಸ್ಯ ಕದಾಚನ |
ತೇಜಸಾ ಲೋಪಯೇರ್ಭಾನುಂ ಲಾವಣ್ಯೇನ ಚ ಮನ್ಮಥಮ್ ||೬||

ನಾನು ನಿನಗೆ ಹೇಳುವೆನು. ಈ ಕಥೆಯು ರಾಜನಾದ ಚಕ್ರಪಾಣಿಗೂ-ಶೌನಕ ಮಹರ್ಷಿಗೂ ನಡೆದ ಸಂವಾದವನ್ನೊಳಗೊಂಡಿದೆ. ||೪||

ವಿದೇಹ ರಾಜ್ಯಕ್ಕೆ ಹಿಂದೆ ಒಬ್ಬ ಪ್ರಖ್ಯಾತ ಬಲವಿಕ್ರಮನು ರಾಜ್ಯಾಧಿಕಾರಿಯಾಗಿದ್ದನು. ಅವನ ಹೆಸರು ‘ ಚಕ್ರಪಾಣಿ.’ ಈ ರಾಜ್ಯಕ್ಕೆ ‘ ಗಂಡಕೀ ’ ಎಂಬ ಹೆಸರಿನ ಪಟ್ಟಣವೇ ರಾಜಧಾನಿಯಾಗಿದ್ದಿತು. ಅದು ಸಕಲ ಸಮೃದ್ಧಿಗಳಿಂದಲೂ, ಶುಭಲಕ್ಷಣಗಳಿಂದಲೂ ಕೂಡಿದ್ದಿತು. ಅದಕ್ಕೆ ಒಡೆಯನಾಗಿದ್ದ ಚಕ್ರಪಾಣಿಯು ಬಹಳ ಪ್ರಭಾವಶಾಲಿಯಾಗಿದ್ದನು. ‘ ನಾವಿಷ್ಣುಃ ಪೃಥಿವೀಪತಿಃ ’ ಎಂಬಂತೆ ಲೋಕರಕ್ಷಕನೂ, ಸರ್ವದಕ್ಷನೂ ಆದ ಮಹಾವಿಷ್ಣುವಿನ ಅಂಶವಿಲ್ಲದವನು ರಾಜನಾಗಲಾರನು. ಚಕ್ರಪಾಣಿಯಲ್ಲಿದ್ದುದು ಕೇವಲ ಮಹಾವಿಷ್ಣುವಿನ ಅಂಶವಷ್ಟೇ ಅಲ್ಲ, ಅವನನ್ನು ನೋಡಿದರೆ ಇವನೂ ಒಬ್ಬ ಮಹಾವಿಷ್ಣು ಎಂಬ ಭಾವನೆಯುಂಟಾಗುವಂತೆ ಚಕ್ರಪಾಣಿಯು ಇದ್ದನು. ||೫||

ಈ ರಾಜನಲ್ಲಿದ್ದ ಸದ್ಗುಣಗಳನ್ನು ‘ ಇಷ್ಟೆಂ’ದು ಗಣಿಸಲಿಕ್ಕೆ ಸಹಸ್ರಫಣನಾದ ಆದಿಶೇಷನಿಗೆ ಸಹ ಒಮ್ಮೆಯಾದರೂ ಸಾಧ್ಯವಿರಲಿಲ್ಲ. ಇವನು ತನ್ನ ಶೌರ್ಯ-ಸಾಹಸಗಳಿಂದ ಸಹಸ್ರಕಿರಣನಾದ ಸೂರ್ಯನಾರಾಯಣನ ತೇಜಸ್ಸನ್ನೂ ಅಲ್ಲಗಳೆಯುತ್ತಿದ್ದನು. ಇವನ ದೇಹಕಾಂತಿ-ಸೌಂದರ್ಯಗಳನ್ನು ಕಂಡು, ತ್ರಿಭುವನೈಕ ಸುಂದರ ವಿಗ್ರಹನಾದ ಮೀನಕೇತನನೂ ಸಹ ಲಜ್ಜೆಗೊಳ್ಳುತ್ತಲಿದ್ದನು. ||೬||

---

ಸಂಖ್ಯಾಚಿನ್ಹಿತಗಳಿಗೆ ವಿವರಣೆಯನ್ನು ಪರಿಶಿಷ್ಟದಿಂದ ತಿಳಿಯತಕ್ಕದ್ದು.

ಮತ್ವಾ ಬೃಹಸ್ಪತಿಂ, ಸ್ಕಂದಂ ವಿಕ್ರಮೇಣ ಬಲೇನ ಚ ।
ಯೇನೇಯಂ ಸಕಲಾ ಪೃಥ್ವೀ ಕ್ಷಣೇನ ವಶವರ್ತಿನೀ ॥೭॥

ಕೃತಾ, ಸರ್ವೇ ಚ ರಾಜಾನಃ ಸೇವಾಯಾಂ ವಿನಿಯೋಜಿತಾಃ ।
ತುರಂಗಾಣಾಂ ಗಜಾನಾಂ ಚ ಪದಾತೀನಾಂ ಜಯೈಷಿಣಾಮ್ ॥೮॥

ರಥಾನಾಂ ಚ ನ ಯಸ್ಯಾಸ್ತಿ ಸಂಖ್ಯಾನಂ ಜಗತೀತಲೇ ।
ಸಾಕ್ಷಾಲ್ಲಕ್ಷ್ಮೀ ಸ್ಥಿರಾ ಯಸ್ಯ ಗೃಹೇ ದರ್ಶನಗೋಚರಾ ॥೯॥

ರಾಜನು ತನ್ನ ಕುಶಾಗ್ರಬುದ್ಧಿಯಿಂದ ಸುರಗುರುವಾದ ಬೃಹಸ್ಪತಿಯನ್ನೂ ಮೀರಿಸಿದ್ದನು. ದೇಹಶಕ್ತಿ, ಯುದ್ಧಧಾರ್ಷ್ಟ್ಯ ಇತ್ಯಾದಿ ಗುಣಗಳಿಂದ ದೇವ ಸೇನಾನಿ ಎನಿಸಿದ ಷಣ್ಮುಖನನ್ನೂ ಅತಿಕ್ರಮಿಸಿದ್ದನು. ಇವನ ಪರಾಕ್ರಮವನ್ನು ವ್ಯಾಸ ! ಎಷ್ಟೆಂದು ಬಣ್ಣಿಸಲಿ ? ಒಂದೇ ಒಂದು ಕ್ಷಣದಲ್ಲಿ ಚಕ್ರಪಾಣಿಯು ಇಡೀ ಈ ಭೂ-ಮಂಡಲವನ್ನೆಲ್ಲ ವಶವರ್ತಿಯನ್ನಾಗಿ ಮಾಡಿಕೊಂಡವನು, ॥೭॥

ಇತರ ದೇಶಗಳ ರಾಜ-ಮಹಾರಾಜರೆಲ್ಲರೂ ಈತನಿಗೆ ಮಾಂಡಲಿಕರಾದರು. ಇಷ್ಟೇ ಅಲ್ಲ, ಎಲ್ಲರೂ ಇವನನ್ನು ಸೇವಿಸುವುದಕ್ಕೆ ಭೃತ್ಯಭಾವವನ್ನು ಸಹ ಸ್ವೀಕರಿಸಿದರು. ಇವನ ಸೇನಾ ಸಮುದಾಯವನ್ನಷ್ಟು ಬಣ್ಣಿಸುವೆನು, ಕೇಳು. ರಾಜನ ಬಳಿ ಇದ್ದ ಕುದುರೆಗಳು, ಆನೆಗಳು, ಸರ್ವತ್ರ ವಿಜಯಗಳಿಸತಕ್ಕ ಪದಾತಿ ಸೈನ್ಯ, ॥೮॥

ಸರ್ವಸನ್ನಾಹ ಪರಿಪೂರ್ಣ ರಥಗಳು ಇವಕ್ಕೆ ಗಣನೆಯೇ ಸಿಕ್ಕುತ್ತಲಿರಲಿಲ್ಲ. ಒಟ್ಟಿನ ಮೇಲೆ ಹೇಳುವುದಾದರೆ, ಇಡೀ ಜಗತ್ತಿನಲ್ಲೆಲ್ಲ ಅವು ತುಂಬಿ ಹೋಗಿದ್ದವು. ರಾಜನ ಅರಮನೆಯಲ್ಲಿ ಭಾಗ್ಯದೇವತೆಯಾದ ಸಾಕ್ಷಾಲ್ಲಕ್ಷ್ಮೀದೇವಿಯೇ ನೆಲೆಸಿ ತಾಂಡವವಾಡುತ್ತಲಿದ್ದುದರಿಂದ ಅವನ ಭಂಡಾರವು ಸರ್ವದಾ ತುಂಬಿ ತುಳುಕುತ್ತಲಿದ್ದಿತು. ಆಗಿನ ಕಾಲದ ಜನರೆಲ್ಲರೂ ಮಹಾಲಕ್ಷ್ಮಿಯು ರಾಜಗೃಹದಲ್ಲಿ ವಾಸಮಾಡುತ್ತಿರುವುದನ್ನು ಪ್ರತ್ಯಕ್ಷವಾಗಿ ನೋಡಿದ್ದರು. ॥೯॥

ರತ್ನಕಾಂಚನಮುಕ್ತಾಭಿರನಿಶಂ ಭಾಸಯದಿಶಃ ।
ಭದ್ರಂ ಭದ್ರಕರಂ ಯಸ್ಯ ಲೋಕಾನಾಮಲಕೋಽಪಮಮ್ ॥೧೦॥

ಯಸ್ಯಾಮಾತ್ಯೌ ಮಹಾಬುದ್ಧೀ ಸಾಂಬಶ್ಚೈವ ಸುಬೋಧನಃ ।
ಸೇವಂತೌ ಸ್ವಾಮಿಕಾರ್ಯಾರ್ಥೇ ತೃಣೀಕೃತ್ಯ ಸ್ವಜೀವಿತಮ್ ॥೧೧॥

ಯಸ್ಯಾಸೀತ್ಪ್ರಮದಾ ರಮ್ಯಾ ನಾಮ್ನೋಗ್ರಾ ಚಾರುಹಾಸಿನೀ ।
ಕುಮುದಾನಿ ವಿಕಾಸಂತೇ ದಿವಾ ಯನ್ಮುಖಚಂದ್ರತಃ ॥೧೨॥

---

ರಾಜನು ತನ್ನ ಜನ್ಮಾಂತರ ಪುಣ್ಯಪರಿಪಾಕದಿಂದಲೂ, ವೀರ್ಯ-ದರ್ಪಗಳಿಂದಲೂ ಆರ್ಜಿಸಿದ ಸಂಪದವನ್ನು ಸ್ವಭೋಗಕ್ಕೆ ಮಾತ್ರ ಉಪಯೋಗಿಸಿಕೊಳ್ಳದೇ ಅದನ್ನು ತನ್ನ ಪ್ರಜಾವರ್ಗದ ಹಿತಸಾಧನೆಗಾಗಿ ವಿನಿಯೋಗಿಸುತ್ತಿದ್ದನಾದುದರಿಂದ ಯಾರೊಬ್ಬನೂ ಬಡತನದ ಬೇಗೆಯನ್ನು ಕಂಡರಿತಿರಲಿಲ್ಲ. ರಾಜನ ಐಶ್ವರ್ಯವು ಎಲ್ಲೆಡೆಯಲ್ಲೂ ವ್ಯಾಪ್ತವಾಗಿದ್ದುದರಿಂದ ಅವು ಎಂದರೆ ಮುತ್ತು ರತ್ನ ಸ್ವರ್ಣಗಳು ತಮ್ಮ ಉಜ್ವಲ ಕಾಂತಿಯಿಂದ ದಿಗಂತಗಳನ್ನೆಲ್ಲ ಸ್ವಚ್ಛವಾಗಿ ಬೆಳಗುತ್ತಲಿದ್ದವು. ಎಲ್ಲೆಲ್ಲಿ ನೋಡಿದರೂ ಮಂಗಲವೇ ತೋರಿಬರುತ್ತಲಿದ್ದಿತು. ಈ ಪರಿಯ ಸೊಬಗಿನಿಂದ ಕೂಡಿದ ಈ ರಾಜಧಾನಿಯನ್ನು ನೋಡಿದರೆ, 'ಇದೇನು, ಕುಬೇರನ ರಾಜಧಾನಿಯಾದ ಅಲಕಾವತಿಯೋ,' ಎಂಬಂತೆ ಭ್ರಮೆ ಬರುತ್ತಲಿದ್ದಿತು. ॥೧೦॥

ಆ ರಾಜನಿಗೆ ಬೆಂಬಲಿಗರಾಗಿ ಇಬ್ಬರು ಸಚಿವರಿದ್ದರು. ಅವರು ಬಹಳ ಬುದ್ಧಿಶಾಲಿಗಳು. 'ಸಾಂಬ, ಸುಬೋಧನ' ಎಂದು ಅವರ ಹೆಸರು. ಇವರು ಎಷ್ಟರ ಮಟ್ಟಿಗೆ ಸ್ವಾಮಿಭಕ್ತರಾಗಿದ್ದರೆಂಬುದನ್ನು ಹೇಳುವೆನು, ಕೇಳು. ಪ್ರಸಂಗ ಬಂದಿತೆಂದರೆ ತಮ್ಮ ಜೀವನವನ್ನು ಸಹ ಅತ್ಯಲ್ಪವೆಂದು ಭಾವಿಸಿ, ಅನ್ನದಾತೃವಿನ ಕಾರ್ಯಗಳನ್ನು ನಿರ್ವಹಿಸುತ್ತಲಿದ್ದರು. ಇಂತಹ ಸೇವಕರು ಪೂರ್ವಪುಣ್ಯವಿಲ್ಲದಿದ್ದರೆ ಲಭಿಸುವುದಿಲ್ಲ, ವ್ಯಾಸ ! ॥೧೧॥

ರಾಜರಮಣಿಯ ಹೆಸರು 'ಉಗ್ರೆ' ಹೆಸರನ್ನು ಕೇಳಿದೊಡನೆಯೇ ಹೆದರಿ

ಅನೇಕಭೂಷದೀಪ್ತ್ಯಾ ಯಯಾ ನಾಶಯಿತ್ವಾಖಿಲಂ ತಮಃ ।
ಪಾತಿವ್ರತ್ಯಗುಣಾನ್ ದ್ರಷ್ಟುಂ ಯಾಂತಿ ಸರ್ವಾಃ ಪತಿವ್ರತಾಃ ॥೧೩॥

ಏವಂ ರಾಜಾ ಬುಧೋ ಮಾನ್ಯಃ ಸದಾ ವಿಷ್ಣುಪರಾಯಣಃ ।
ಪುರಾಣಶ್ರವಣೇ ಸಕ್ತೋ ಧರ್ಮಶಾಸ್ತ್ರಪರಾಯಣಃ ॥೧೪॥

ಹೋಗಬೇಡ. ಅವಳ ಸೌಂದರ್ಯ–ಸದ್ಗುಣಗಳು ಸ್ವಭಾವಮಧುರವಾದವು. ಅವಳು ತಾನು ನಕ್ಕು, ಇಡೀ ಜಗವನ್ನೇ ಹರ್ಷೋನ್ಮಾದಗೊಳಿಸುತ್ತಲಿದ್ದಳು. ಅವಳ ನಗು ಕುಟಿಲವಾಗಿರಲಿಲ್ಲ. ಇತರರ ದೈಹಿಕ ಹಾಗೂ ಮಾನಸಿಕ ಯಾತನೆಗಳನ್ನು ಕೂಡಲೆ ಮಾಯಿಸುವಂತಹದು. ಇವಳ ಮುಖಕಾಂತಿ ಕಲಂಕ ರಹಿತವಾದುದು, ಆದುದರಿಂದಲೇ ಇವಳ ಮುಖಚಂದ್ರಮನನ್ನು ಕಂಡೊಡನೆಯೇ ಚಂದ್ರನ ಕಿರಣಗಳಿಗೆ ಅರಳುವ ಕುಮುದ ಕುಸುಮಗಳು ಹಗಲು ವೇಳೆಯಲ್ಲೂ ಅರಳುತ್ತಿದ್ದವು. ॥೧೨॥

ಸ್ವಭಾವಸುಂದರಾಂಗಿಯಾದ ಉಗ್ರೆಯು ತನ್ನ ಮಾಟಾದ ಅವಯುವಗಳಿಗೆ ತಕ್ಕ ಅನರ್ಘ್ಯ ರತ್ನಖಚಿತ ಆಭರಣಗಳನ್ನು ಧರಿಸುತ್ತಲಿದ್ದಳು. ಈ ಆಭರಣಗಳ ದಿವ್ಯಕಾಂತಿಯು ಜಗತ್ತಿನ ಅಂಧ್ಯವನ್ನೆಲ್ಲ ಅಡಗಿಸುತ್ತಲಿದ್ದಿತು. ಜಗತೀತಲದಲ್ಲಿದ್ದ ಪತಿವ್ರತಾಸ್ತ್ರೀಯರೆಲ್ಲರೂ ಪಾತಿವ್ರತ್ಯ ಧರ್ಮವನ್ನು ಕೂಲಂಕಷವಾಗಿ ತಿಳಿದುಕೊಳ್ಳಲು ಮತ್ತು ಉಗ್ರೆಯಲ್ಲಿದ್ದ ಸದ್ಗುಣಗಳನ್ನು ಗ್ರಹಿಸಲು ರಾಣಿಯ ಬಳಿಗೆ ಬರುತ್ತಲಿದ್ದರು. ॥೧೩॥

ಸಕಲ ಸಂಪತ್ಸಮೃದ್ಧನಾದ ಚಕ್ರಪಾಣಿಯು ಸ್ವತಃ ಉದ್ದಾಮಪಂಡಿತನಾಗಿದ್ದನು. ಎಂದಮೇಲೆ ಪಂಡಿತರನ್ನು ಸರ್ವದಾ ಯೋಗ್ಯರೀತಿಯಿಂದ ಗೌರವಿಸುತ್ತಿದ್ದನೆಂಬುದನ್ನೇನೂ ಪ್ರತ್ಯೇಕವಾಗಿ ಹೇಳಬೇಕಾಗಿಲ್ಲವಷ್ಟೇ, ಅವನು ವಿಷು ಭಕ್ತಿಪರಾಯಣನಾಗಿದ್ದನು. ದೇವತಾಮಹಿಮೆ, ಧರ್ಮ, ರಾಜಕೀಯ ಮೊದಲಾದ ಶಾಸ್ತ್ರರಹಸ್ಯಗಳನ್ನೊಳಗೊಂಡಿದ್ದ ಪುರಾಣಗಳನ್ನು ಕೇಳುತ್ತ, ವಿರಾಮಕಾಲವನ್ನು ಕಳೆಯುತ್ತಲಿದ್ದನು. ತಾನು ಮಾಡಬೇಕಾಗಿ ಬರುವ ಗೃಹಕಾರ್ಯವಾಗಲೀ, ರಾಜ್ಯಕಾರ್ಯವಾಗಲೀ ಇವನ್ನು ಧರ್ಮಶಾಸ್ತ್ರಗಳಲ್ಲಿ ಹೇಳಿದ ಪ್ರಕಾರವೇ ಮಾಡುತ್ತಲಿದ್ದನು. ॥೧೪॥

ಸಂತತ್ಯಾ ರಹಿತಃ ಸೋಽಥ ದುಃಖಮಾಪ ದಿವಾನಿಶಮ್ ।
ಅಪತ್ಯಂ ಜಾಯತೇ ಯದ್ಯತ್ತತ್ತನ್ನಶ್ಯತಿ ತತ್ಕ್ಷಣಾತ್ ॥೧೫॥

ಅನೇಕವ್ರತದಾನಾನಿ ಯಜ್ಞಾಂಶ್ಚ ಕೃತವಾನ್ ಬಹೂನ್ ।
ತತಸ್ಸ ರಾಜಾ ಕಸ್ಮಿಂಶ್ಚಿತ್ಸಮಯೇ ನಿಜಭಾರ್ಯಯಾ ॥೧೬॥

ವ್ಯಾಸ ! ಕರ್ಮಭೂಮಿಯಲ್ಲಿ ಜನಿಸತಕ್ಕ ಪ್ರಾಣಿಗಳು ಪೂರ್ವಜನ್ಮ-ಗಳಲ್ಲಿ ತಾವು ಆರ್ಜಿಸಿ ಸಂಗ್ರಹಿಸಿ ಇಟ್ಟಿರುವ ಶುಭಾಶುಭ ಕರ್ಮಗಳ ಮಿಶ್ರಫಲ ಗಳನ್ನು ಭುಜಿಸುವುದಕ್ಕಾಗಿಯೇ ಜನಿಸುವುವು. ವಿಚಾರಮಾಡಿ ನೋಡುವುದಾದರೆ, ಭಿಕ್ಷುಕನಿಂದ ಹಿಡಿದು ಭೂಪತಿಯವರೆಗೂ ಪ್ರತಿಯೊಬ್ಬನೂ ಒಂದಿಲ್ಲೊಂದು ಬಗೆಯ ಕೊರತೆಯಿಂದ ಅಳುತ್ತಲೇ ಇರುವನು. ಹೀಗೆ ಹೇಳಿದ್ದರಿಂದ ನೀನೂ ಸಹ ನನ್ನನ್ನು ಭ್ರಮಿಷ್ಟನೆಂದೇ ಗ್ರಹಿಸಬಹುದು. ಹೇಳುವೆನು, ಕೇಳು. ಪ್ರಕೃತದ ಕಥೆಯನ್ನೇ ತೆಗೆದುಕೊಳ್ಳೋಣ. ಚಕ್ರಪಾಣಿಗೆ ಇಷ್ಟೆಲ್ಲ ಭಾಗ್ಯಗಳು ಪದಾ ಕ್ರಾಂತವಾಗಿದ್ದರೂ, ಕುಟ್ಟೆಯ ಹುಳು ಮರವನ್ನು ಕೊರೆಯುವಂತೆ ಒಂದು ಕೊರತೆ ಮಾತ್ರ ಇವನ ಅಂತರಂಗವನ್ನು ಸತತವಾಗಿ ಕೊರೆಯುತ್ತಲೇ ಇದ್ದಿತು. ಇವನಿಗೆ ಸಂತತಿ ಇರಲಿಲ್ಲ. ಮಕ್ಕಳು ಜನಿಸುತ್ತಿದ್ದವು, ಆದರೆ, ತತ್ಕ್ಷಣವೇ ಮೃತಿಯ ನ್ನೈದುವುವು. ಹೀಗೆಯೇ ಎಷ್ಟೋ ಮಕ್ಕಳು ಹುಟ್ಟಿ ಸತ್ತುಹೋದವು. ॥೧೫॥

ಮೃತಪ್ರಜಾದೋಷ ಪರಿಹಾರಾರ್ಥವಾಗಿ ಅನೇಕ ವ್ರತಗಳನ್ನು ರಾಜನು ಕೈ-ಗೊಂಡನು .ವಿವಿಧ ಯಾಗಗಳನ್ನು ಮಾಡಿ, ಮಾಡಿಸಿದನು. ಎಷ್ಟೆಷ್ಟು ರೀತಿಯಿಂದ ಇವನು ಪ್ರಯತ್ನಪಟ್ಟರೂ ಸಫಲವಾಗಲಿಲ್ಲ. ಕೊನೆ ಕೊನೆಗೆ ಯಾವುದರಲ್ಲೂ ರಾಜನಿಗೆ ಪ್ರತ್ಯಾಶೆ ಉಳಿಯಲಿಲ್ಲ. ದಂಪತಿಗಳಿಬ್ಬರೂ ಮಕ್ಕಳಿಲ್ಲದ ಶೋಕ ದಿಂದ ನಿರ್ವಿಣ್ಣರಾಗಿ ಹೋದರು. ಜೀವನವು ಸಹ ಬೇಡವಾಗಿ ಹೋಯಿತು. ಇಬ್ಬರೂ ಬಹು ಪರಿಯಿಂದ ಚಿಂತಿಸಿ, ವಿರಕ್ತಿಯನ್ನು ಹೊಂದುವುದೇ ಒಳ್ಳೆಯ ದೆಂದು ನಿಶ್ಚಯಿಸಿದರು. ಆಗ ರಾಜನು ಮಂತ್ರಿವರ್ಯರಿಬ್ಬರನ್ನೂ ತನ್ನ ಸಮೀ ಪಕ್ಕೆ ಬರಮಾಡಿಕೊಂಡನು. ಅದರಂತೆ ಪೌರರಿಗೂ ಹೇಳಿ ಕಳಿಸಿದನು. ಎಲ್ಲರೂ

ಆಕಾರ್ಯ ಪ್ರಕೃತೀಃ ಪೌರಾನ್ ವಿರಕ್ತೋ ರಾಜ್ಯಸಂಪದಿ ।
ಉವಾಚ ಸರ್ವಾನ್
ರಾಜೋವಾಚ :—

ದಂಡಂ ಚ ಕೋಶಂ ರಾಜ್ಯಂ ತ್ಯಜೇऽಧುನಾ ॥೧೭॥

ಕಿಮಪುತ್ರಸ್ಯ ರಾಜ್ಯೇನ ಸ್ವರ್ಗಹೀನಸ್ಯ ಮೇऽಧುನಾ ।
ಯಾನಿ ಕರ್ಮಾಣಿ ಚ ಮಯಾ ಪುತ್ರಾರ್ಥೇ ಚರಿತಾನಿ ಚ ॥೧೮॥

ಈಶ್ವರಾರ್ಪಣಬುದ್ಧ್ಯಾ ಚೇತ್ಕೃತಾನಿ ಸ್ಯುರ್ಯದಾ ತದಾ ।
ಮುಕ್ತಿಃಸ್ಯಾದುಭಯೋಃ ಪೂರ್ವಜನ್ಮಕರ್ಮ ಕ್ಷಯೋऽಪಿ ಚ ॥೧೯॥

---

ಸಭೆಗೆ ಬಂದು ಕುಳಿತ ಬಳಿಕ, ಅವರನ್ನು ಸಂಬೋಧಿಸಿ ಹೀಗೆಂದು ತನ್ನ ನಿರ್ಧಾರವನ್ನು ತಿಳಿಸಿದನು.

ರಾಜಾ :—

ರಾಜ್ಯಕ್ಕೆ ಆಧಾರಸ್ತಂಭದಂತಿರುವ ಅಮಾತ್ಯರೇ ! ಮತ್ತು ಪ್ರಜೆಗಳೇ ! ನಾನು ಈ ಅಧಿಕಾರವನ್ನೂ, ಅಶೇಷ ಕೋಶವನ್ನೂ ಮತ್ತು ಈ ರಾಜ್ಯವನ್ನೂ ಸಹ ಸರ್ವಾತ್ಮನಾ ಪರಿತ್ಯಜಿಸಿಬಿಡಬೇಕೆಂದು ನಿಶ್ಚಯಿಸಿರುವೆನು. ॥೧೬-೧೭॥

ವಂಶಪ್ರವರ್ತಕನೂ, ನನಗೂ ಮತ್ತು ನನ್ನ ಪಿತೃಪರಂಪರೆಗೂ ಸ್ವರ್ಗತಿಯನ್ನು ಒದಗಿಸಿಕೊಡತಕ್ಕವನೂ ಆದ ಮಗನೇ ನನಗೆ ಜನಿಸಲಿಲ್ಲವೆಂದ ಬಳಿಕ, ಈ ರಾಜ್ಯ-ಕೋಶಗಳನ್ನೆಲ್ಲ ತೆಗೆದುಕೊಂಡು ನಾನು ಏನು ಮಾಡಲಿ ? ನನಗಂತೂ 'ಪುತ್' ಎಂಬ ನರಕದ ಯಾತನೆ ತಪ್ಪುವಂತಿಲ್ಲ. ಪ್ರಕೃತ ನಾನು ಗತಿಕಾಣದವನಾಗಿದ್ದೇನೆ. ಪುತ್ರಪ್ರಾಪ್ತಿಗಾಗಿ ನಾನೂ ಅನೇಕ ಸತ್ಕರ್ಮಗಳನ್ನು ಬೇಸರವಿಲ್ಲದೆ ಆಚರಿಸಿದೆ. ಶ್ರೌತ-ಸ್ಮಾರ್ತ ಶುಭ ಕರ್ಮಗಳ ಪೈಕಿ ಯಾವುದೊಂದೂ ಬಾಕಿ ಉಳಿಯಲಿಲ್ಲ. ॥೧೮॥

ಈಗೀಗ ನನಗೆ ಹೀಗೆ ಅನಿಸಹತ್ತಿದೆ. ನಾನು ಇದುವರೆಗೂ ಆಚರಿಸಿದ ಸತ್ಕರ್ಮಗಳನ್ನು ಪುತ್ರಪ್ರಾಪ್ತ್ಯರ್ಥವಾಗಿ ಮಾಡುವುದಕ್ಕೆ ಬದಲಾಗಿ 'ಪರಮೇಶ್ವರಾರ್ಪ

**ಗತಮಾಯುರ್ವೃಥಾ ಲೋಕಾ ವನಂ ಯಾಸ್ಯೇ ಮುದಾಧುನಾ ।**
**ಸರ್ವಂ ಪ್ರಕೃತಿಸಾತ್ಕೃತ್ವಾ ಯೂಯಂ ತದ್ವಾಕ್ಯಕಾರಿಣಃ ॥೨೦॥**

**ಗಮಿಷ್ಯೇಽಹಂ ವನಂ ಲೋಕಾಸ್ತಪಸ್ತಪ್ತುಂ ಹಿತಾಯ ವೈ ।**
**ಕದಾಚಿದಿಷ್ಟಸಿದ್ಧಿಶ್ಚೇತ್ಪುನರ್ಯಾಸ್ಯೇ ನಿಜಾಂ ಪುರೀಮ್ ॥೨೧॥**

---

ಣಬುದ್ಧ್ಯ ಮಾಡಿದ್ದರೆ ಖಂಡಿತವಾಗಿಯೂ ದಂಪತಿಗಳಾದ ನಮಗಿಬ್ಬರಿಗೂ ಸ್ವಾತ್ಮಾನಂದಾನುಭವರೂಪವಾದ ಅಖಂಡ ಮುಕ್ತಿಸಾಮ್ರಾಜ್ಯವೇ ಲಭಿಸುತ್ತಲಿದ್ದಿತು. ಇದರಿಂದ ನಾವು ತಿರಗಿ ಹುಟ್ಟು-ಸಾವುಗಳ ಕಾಲಚಕ್ರ ಪರಿವರ್ತನೆಗೆ ಸಿಲುಕುತ್ತಲೇ ಇರಲಿಲ್ಲ. ॥೧೯॥

ಇದುವರಗಿನ ನಮ್ಮ ಆಯುಷ್ಯವನ್ನೆಲ್ಲ ನಾವು ವ್ಯರ್ಥವಾಗಿ ಕಳೆದುಕೊಂಡಂತೆ ಆಗಿದೆ. ಇನ್ನಾದರೂ ಎಚ್ಚೆತ್ತುಕೊಳ್ಳಬೇಡವೇ ? ಪರಲೋಕಸಾಧನೆಯನ್ನು ಮಾಡಿಕೊಳ್ಳಬೇಡವೇ? ಆದುದರಿಂದ ನಾವು ಈಗ ಸಂತೋಷದಿಂದ ಅರಣ್ಯಕ್ಕೆ ಹೊರಟು ಹೋಗುವೆವು. ಅಲ್ಲಿಯೇ ಕುಳಿತು ತಪಸ್ಸನ್ನು ಮಾಡಿ, ಶೇಷಾಯುಷ್ಯವನ್ನು ಕಳೆಯಬೇಕೆಂದು ಸಂಕಲ್ಪಮಾಡಿದ್ದೇವೆ. ಎಂದರೆ ಅಲ್ಪವಾದರೂ ಪ್ರಯೋಜನವಾಗಬಹುದು. ಈ ರಾಜ್ಯದ ಹೊಣೆಯನ್ನೆಲ್ಲ ಮಂತ್ರಿಗಳ ಅಧೀನಕ್ಕೆ ವಹಿಸಿ ಹೋಗುತ್ತೇನೆ. ನೀವೆಲ್ಲರೂ ಇವರು ಹೇಳಿದಂತೆ ಕೇಳಿಕೊಂಡು ಸುಖದಿಂದ ಇರತಕ್ಕದ್ದು. ॥೨೦॥

ರಾಜ್ಯದ ಉತ್ತರಾಧಿಕಾರದ ಗತಿ ಏನು ? ಎಂಬ ಚಿಂತೆಯು ನನ್ನನ್ನು ಪೀಡಿಸುತ್ತಿರುವಂತೆ ನಿಮ್ಮನ್ನು ಸಹ ಬಾಧಿಸುತ್ತಿರಬಹುದು. ಅದಕ್ಕೆ ನಾನು ಒಂದು ಬಗೆಯಿಂದ ಆಲೋಚಿಸಿ, ಈ ರೀತಿಯಾಗಿ ತೀರ್ಮಾನಿಸಿದ್ದೇನೆ. ತಪಶ್ಚರ್ಯೆಗಾಗಿ ಈಗಂತೂ ಅರಣ್ಯಕ್ಕೆ ತೆರಳುವೆನಷ್ಟೆ? ಈ ತಪಸ್ಸೂ ಸಹ ಆತ್ಮಹಿತಸಾಧನೆಗಾಗಿಯೇ ಆಗಿದೆ. ನಿಮ್ಮೆಲ್ಲರ ಪುಣ್ಯ ; ದೈವಾನುಗ್ರಹ ಇವುಗಳಿಂದಾಗಿ, ನನ್ನ ತಪಸ್ಸಿಗೆ ಸಂತತಿರೂಪವಾದ ಸತ್ಫಲವೇನಾದರೂ ದೊರೆಯುವುದಾದರೆ, ನಾನು ಪುನಃ ಈ ಪಟ್ಟಣಕ್ಕೆ ಖಂಡಿತವಾಗಿಯೂ ಹಿಂದಿರುಗಿ ಬರುವೆನು. ॥೨೧॥

1 ಧ್ರುವಮಾಜ್ಞಾಂ ಮಮ ಪುನಃ ಪ್ರಯಚ್ಛತಾಯುತಾ ಜನಾಃ ।
ಕ ಉವಾಚ :—
ಏವಂ ಶ್ರುತ್ವಾ ನೃಪವಚಃ ಸರ್ವೇ ದುಃಖಿತಮಾನಸಾಃ ॥೨೨॥

ಅಶ್ರುಧಾರಾಃ ಪ್ರಮುಂಚಂತಃ ಪ್ರೋಚುಸ್ತಂ ನೃಪಸತ್ತಮಮ್ ।

ಪೌರಾ ಊಚುಃ :—

ಜನನೀ ಜನಕಸ್ತ್ವಂ ನಃ ಕಥಂ ನಿಷ್ಠುರತಾಂ ಗತಃ ? ॥೨೩॥

ಕಿಮರ್ಥಂ ತ್ಯಜಸೇ ನಸ್ತ್ವಮಪರಾಧಂ ವಿನಾ ಪ್ರಭೋ ! ।
ವಿನಾ ಭವಂತಂ ನೋ ಜನ್ಮ ವೃಥೈವ ಮಾತರಂ ಶಿಶೋಃ ॥೨೪॥

---

ಈ ವಿಷಯದಲ್ಲಿ ನೀವು ಸ್ವಲ್ಪವಾದರೂ ಸಂದೇಹವನ್ನಿಟ್ಟುಕೊಳ್ಳಬೇಕಾಗಿಲ್ಲ. ಜನರೇ ! ಪ್ರಕೃತ ನೀವೆಲ್ಲರೂ ಒಮ್ಮತದಿಂದಲೂ, ಸಂತೋಷದಿಂದಲೂ, ನನಗೆ ಆರಣ್ಯಕ್ಕೆ ತೆರಳಲು ಅನುಮತಿಯನ್ನು ಕೊಡಿರಿ.

ಬ್ರಹ್ಮಾ :—

ರಾಜನಾಡಿದ. ಅನೀಕ್ಷಿತ ಈ ನಿರ್ಧಾರದ ಮಾತುಗಳನ್ನು ಕೇಳಿ ನಾಗರಿಕರೆಲ್ಲರೂ ದುಃಖಿತಾಂತರಂಗರಾದರು. ॥೨೨॥

ಎಲ್ಲರ ಕಣ್ಣುಗಳಿಂದಲೂ ಧಾರಾಕಾರವಾಗಿ ಕಣ್ಣೀರು ಬಳ ಬಳ ಸುರಿಯಿತು. ರಾಜನನ್ನು ಕುರಿತು ಅಳುತ್ತಲೇ ಹೀಗೆಂದು ಬೇಡಿ ನುಡಿದರು.

ನಾಗರಿಕರು :—

ನೃಪವರ ! ನೀನು ನಮ್ಮೆಲ್ಲರ ಭಾಗಕ್ಕೆ ತಂದೆ-ತಾಯಿಗಳಾಗಿರುವೆ. ಇಂತಹ ನೀನು ಮಕ್ಕಳಾದ ನಮ್ಮ ವಿಷಯದಲ್ಲೇಕೆ ಹೀಗೆ ನೈಷ್ಠುರ್ಯವನ್ನು ತಳೆದಿರುವೆ ॥೨೩॥

ನಿನ್ನ ವಿಷಯದಲ್ಲಿ ಮೊದಲಿನಿಂದ ನಾವೆಲ್ಲರೂ ಬಹಳ ಭಕ್ತ್ಯಾದರ, ಪ್ರೇಮಗಳುಳ್ಳವರಾಗಿದ್ದೇವೆ. ಎಂತಹ ವಿಷಮ ಸಂದರ್ಭದಲ್ಲೂ ನಾವು ನಿನ್ನವಿಷಯವಾಗಿ

---

1 'ಭವಂತ ಆಜ್ಞಾಮಿ'ತಿ ಪಾಠಃ.

ವಯಮಪ್ಯನುಯಾಸ್ಯಾಮೋ ಯತ್ರ ಯಾತಿ ಭವಾನ್ಪ್ರಭೋ! ।

ಕ ಉವಾಚ :—

ಏವಂ ವದತ್ಸು ಲೋಕೇಷು ನೃಪೇಣಾಥಾಗತೋ ಮುನಿಃ ॥೨೫॥

1 ಶೌನಕೋ ಮುನಿಶಾರ್ದೂಲೋ ಜಾತವೇದಾ ಇವಾಪರಃ ।
ವೇದವೇದಾಂಗಶಾಸ್ತ್ರಾಣಾಂ ವಕ್ತಾ ತ್ರೈಲೋಕ್ಯವಿಶ್ರುತಃ ॥೨೬॥

---

ದ್ರೋಹವನ್ನೆಣಿಸಿದವರಲ್ಲ. ಹೀಗಿರುವಾಗ ನಿರಪರಾಧಿಗಳಾದ ನಮ್ಮನ್ನು ತ್ಯಜಿಸಿ, ಅನಾಥರನ್ನಾಗಿಮಾಡಿ, ನಿನ್ನ ಪಾಡಿಗೆ ನೀನು ಹೀಗೆ ಹೊರಟುಹೋಗುವುದು ರಾಜನಾದ ನಿನಗೆ ಎಂದೆಂದಿಗೂ ಉಚಿತವೆನಿಸಲಾರದು. ನೀನಿಲ್ಲದ ಮೇಲೆ, ನಮಗೆ ಜನ್ಮವೇ ವ್ಯರ್ಥವಾಗುವುದಿಲ್ಲವೇ ? ನಾವು ತಾಯಿಸತ್ತ ತಬ್ಬಲಿ ಮಕ್ಕಳಂತಾಗಿ ಹೋಗುವೆವಲ್ಲ ? ಮುಂದೇನು ಗತಿ ? ॥೨೫॥

ನಮಗೋಸ್ಕರ ನಿನ್ನನ್ನು ತಡೆಗಟ್ಟುವುದು ಉಚಿತವೂ ಅಲ್ಲ. ಆದುದರಿಂದ ನಾವೂ ಸಹ ನಿನ್ನೊಡನೆ ಅರಣ್ಯಕ್ಕೆ ಬಂದುಬಿಡುವೆವು. ಕಾಡಿನಲ್ಲಿ ನೀನು ಎಲ್ಲೆಲ್ಲಿ ತಿರುಗುವೆಯೋ, ಯಾವ ಯಾವ ರೀತಿ ವ್ಯವಹರಿಸುವೆಯೋ ನಾವೂ ಸಹ ಅದರಂತೆಯೇ ಇರುವೆವು. ನಿಮಗೆ ಸ್ವಲ್ಪವೂ ತೊಂದರೆಯನ್ನು ಕೊಡುವುದಿಲ್ಲ. ಮತ್ತು ಇದರಿಂದ ನಮಗೆ ಸ್ವಲ್ಪವೂ ಕ್ಲೇಶವೆನಿಸುವುದಿಲ್ಲ.

ಬ್ರಹ್ಮ :—

ಪ್ರಜೆಗಳು ಆರ್ತನಾದದಿಂದ ಹೀಗೆ ಬೇಡುತ್ತಿರುವಷ್ಟರಲ್ಲಿ ಮಹರ್ಷಿಯಾದ ಶೌನಕನು ರಾಜನ ಸನ್ನಿಧಿಗೆ ಬಂದನು. ॥೨೫॥

ಶೌನಕ ಮಹರ್ಷಿಯು ತಪಸ್ವಿಗಳಲ್ಲೆಲ್ಲ ಅತ್ಯಂತ ಶ್ರೇಷ್ಠ ವ್ಯಕ್ತಿ ಎನಿಸಿದವನು. ಜಿತೇಂದ್ರಿಯನಾದ ಈ ಮುನಿಯು ತನ್ನ ಬ್ರಹ್ಮಚರ್ಯ ಪ್ರಭಾವದಿಂದ ಬಹಳ ತೇಜಸ್ವಿಯಾಗಿ ತೋರುತ್ತಲಿದ್ದನು. ಇವನನ್ನು ನೋಡಿದರೆ, ಮುನಿವೇಷವನ್ನು ಧರಿಸಿ ಬಂದ ಸಾಕ್ಷಾದ್ವೈಶ್ವಾನರನೋ, ಎಂಬಂತೆ ತೋರುತ್ತಲಿದ್ದಿತು. ನಾಲ್ಕು ವೇದ, ಷಡಂಗ, ಇವೇ ಮೊದಲಾದವೆಲ್ಲ ಇವನಿಗೆ ಮುಖೋದ್ಗತವಾಗಿದ್ದವು. ಯಾರು ಯಾವುದನ್ನು ಬೇಕಾದರೂ ತಿಳಿಯಲಪೇಕ್ಷೆಪಟ್ಟು ಪ್ರಶ್ನಿಸಲಿ, ಒಡ

---

1 'ಇವರ ಪರಿಚಯ, ಹಾಗೂ ಪ್ರಭಾವಗಳ ಪರಿಚಯವನ್ನು ಪರಿಶಿಷ್ಟದಲ್ಲಿ ನೋಡಿ

**ಶಕ್ರಾದಿಸುರವಂದ್ಯೋ ಽಸೋ ಭೂತ ಭವ್ಯ-ಭವಿಷ್ಯವಿತ್ ।**
**ತಂ ದೃಷ್ಟ್ವಾ ಪುರತೋ ರಾಜಾ ನನಾಮೋತ್ಥಾಯ ಚಾಸನಾತ್ ॥೨೭॥**

**ಸ್ವಾಸನೇ ತಮುಪಾವೇಶ್ಯ ಪುಪೂಜ ಪರಯಾ ಮುದಾ ।**
**ಭುಕ್ತವಂತಂ ಚ ವಿಶ್ರಾಂತಂ ಪಾದಸಂವಾಹನಾದಿಭಿಃ ॥೨೮॥**

**ಚಕ್ರಪಾಣಿರಥೋವಾಚ**

**ರಾಜೋವಾಚ :—**

**ಪುಣ್ಯಂ ಕಿಂ ಫಲಿತಂ ಮಮ ? ।**

---

ನೆಯೇ ಸಮಂಜಸವಾಗಿ ಉತ್ತರವನ್ನುಕೊಟ್ಟು ಪ್ರಾಶ್ನಿಕರ ಸಂಶಯಗಳನ್ನು ಪರಿಹರಿಸುವನು. ಇವನ ಪ್ರಖ್ಯಾತಿಯು ಮೂರು ಭುವನಗಳಲ್ಲೂ ಹರಡಿದ್ದಿತು. ॥೨೬॥

ದೇವರಾಜನೆನಿಸಿದ ಮಹೇಂದ್ರನಾದಿಯಾಗಿ ಸಕಲ ದೇವತೆಗಳೂ ಇವನನ್ನು ವಂದಿಸಿ ಪೂಜಿಸುವರು. ಭೂತ, ಭವ್ಯ ಮತ್ತು ಭವಿಷ್ಯಗಳೆಲ್ಲವನ್ನೂ ಸ್ಪಷ್ಟವಾಗಿ ತಿಳಿದವನು. ಇಂತಹ ಮಹರ್ಷಿಯು ತನ್ನ ಅರಮನೆಗೆ ಅಕಸ್ಮಾತ್ತಾಗಿ ಅದರಲ್ಲೂ ಈ ಸಂದಿಗ್ಧ ಸಮಯದಲ್ಲಿ ಬಂದುದನ್ನು ನೋಡಿದೊಡನೆಯೇ 'ದೈವಸಂಕಲ್ಪ ಹೇಗಿದೆಯೋ' ಎಂದು ಚಿಂತಿಸುತ್ತ ರಾಜನು ಆಸನದಿಂದ ಮೇಲೆದ್ದು ಕಾಲ್ನಡಿಗೆಯಿಂದಲೇ ಮಹಾದ್ವಾರದ ವರೆಗೂ ಬಂದು, ನಮಸ್ಕರಿಸಿದನು. ॥೨೭॥

ಅನಂತರ ಆತನನ್ನು ಬಹಳ ಮರ್ಯಾದೆಯಿಂದ ಸಭಾಂಗಣಕ್ಕೆ ಕರೆದು ತಂದು, ತಾನು ಕುಳಿತಿದ್ದ ದಿವ್ಯಾಸನದ ಮೇಲೆ ಕುಳ್ಳಿರಿಸಿ, ಅರ್ಘ್ಯ-ಪಾದ್ಯಾಚಮನೀಯಾದಿಗಳನ್ನು ಸಮರ್ಪಿಸಿ, ಭಕ್ತಿಯಿಂದ ಅರ್ಚಿಸಿದನು. ಷಡ್ರಸೋಪೇತವಾದ ಆಹಾರವನ್ನು ಒದಗಿಸಿ, ಅವರಿಗೆ ದಿವ್ಯವಾದ ಭೋಜನವನ್ನು ಮಾಡಿಸಿದನು. ಭೋಜನೋತ್ತರ ಮುನಿಯು ವಿಶ್ರಮಿಸಿಕೊಳ್ಳುತ್ತಿರುವಾಗ ರಾಜನು ಋಷಿಯ ಪಾದಗಳನ್ನು ತನ್ನಕೋಮಲತರ ಕರಪಲ್ಲವದಿಂದ ಮೃದುವಾಗಿ ಒತ್ತುತ್ತಲಿದ್ದನು. ॥೨೮॥

ಹೀಗೆ ಸ್ವಲ್ಪ ಕಾಲ ಕಳೆದ ಬಳಿಕ, ರಾಜನು ಮಹರ್ಷಿಯನ್ನು ಕುರಿತು ಹೀಗೆಂದು ವಿನಯದಿಂದ ನುಡಿದನು.

ಚಕ್ರಪಾಣಿ :—

ಮಹಾತ್ಮ! ಇಂದಿಗೆ ನನ್ನ ಪುಣ್ಯವು ಪರಿಪಾಕಗೊಂಡಿತೆಂದು ತೋರು

ಯಜ್ಞಾತಂ ದರ್ಶನಂ ತೇಽದ್ಯ ಸರ್ವಪಾಪಹರಂ ಶುಭಮ್ ॥೨೯॥
ಸರ್ವಕಾಮಪ್ರದಂ ನೃಣಾಂ ದುರ್ಲಭಂ ಪಾಪಕರ್ಮಿಣಾಮ್ ।

ಕ ಉವಾಚ :—

ತತಃ ಪ್ರೋವಾಚ ಮುನಿಶ್ಚಕ್ರಪಾಣಿಂ ನೃಪತಿಸತ್ತಮಮ್ ॥೩೦॥
ಸಂತುಷ್ಟಃ ಪರಯಾ ಭಕ್ತ್ಯಾ ಪ್ರಶ್ರಯೇಣ ದಮೇನ ಚ ।

ಮುನಿರುವಾಚ :—

ಮಾ ಚಿಂತಾಂ ಕುರು ರಾಜೇಂದ್ರ ! ಮಾ ಚ ರಾಜ್ಯಂ ಪರಿತ್ಯಜ ॥೩೧॥

---

ತ್ತದೆ. ಇಲ್ಲವಾಗಿದ್ದರೆ ತಮ್ಮಂತಹ ಪವಿತ್ರಾತ್ಮರ ಸಂದರ್ಶನ ನನಗೆ ಉಂಟಾಗು ತ್ತಲಿರಲಿಲ್ಲ. ತಮ್ಮಂಥವರ ದರ್ಶನವು ಪಾಪಿಷ್ಠರ ಸಕಲ ಪಾತಕಗಳನ್ನೂ ಪರಿ ಹರಿಸತಕ್ಕದ್ದು. ॥೨೯॥

ಸತ್ಕರ್ಮಿಗಳಾದ ಮನುಜರಿಗೆ ಸಕಲ ಕಾಮನೆಗಳನ್ನೂ ಈಡೇರಿಸಿ ಕೊಡ ತಕ್ಕದ್ದು. ದುಷ್ಟಾತ್ಮರಾದ ಪಾಪಿಗಳಿಗೆ ಇದು ಸುಲಭ ಸಾಧ್ಯವಲ್ಲ.

ಬ್ರಹ್ಮಾ :—

ರಾಜನು ವಿನಯಪೂರ್ವಕವಾಗಿ ಆಡಿದ ಈ ಮಾತುಗಳನ್ನು ಕೇಳಿ ಶೌನಕ ಮುನಿಯು ಹೀಗೆಂದು ನುಡಿದನು. ॥೩೦॥

ಚಕ್ರಪಾಣಿಯು ಪ್ರಕಟಿಸಿದ ಭಕ್ತಿ, ಪ್ರಶ್ರಯ (ಅನುಸರಣೆ) ದಮ (ಇಂದಿ ಯ ನಿಗ್ರಹ) ಇವನ್ನು ಕಂಡು ಮುನಿಯು ಬಹಳ ಹರ್ಷಿತನಾದನು. ಮತ್ತು ರಾಜೇಂದ್ರನನ್ನು ಕುರಿತು ಹಿಂಗೆಂದು ನುಡಿದನು.

ಮುನಿ :—

ರಾಜೇಂದ್ರ, ಚಕ್ರಪಾಣೇ ! ಈ ಬಗ್ಗೆ ನೀನು ಚಿಂತೆಯನ್ನು ಮಾಡಬೇಡ. ರಾಜ್ಯವನ್ನೇಕೆ ವ್ಯರ್ಥವಾಗಿ ತ್ಯಜಿಸಿ, ಅರಣ್ಯವಾಸಕ್ಕೆ ಹೊರಡಲು ಸಿದ್ಧನಾಗಿ ನಿಂದಿರುವೆ ? ॥೩೧॥

**ಪುತ್ರಸ್ತೇ ಭವಿತಾ ಸಮ್ಯಙ್ಮದ್ವಾಕ್ಯಾನ್ನಾತ್ರ ಸಂಶಯಃ ।**
**ಮಯಾ ವಾಣೀ ನೋಕ್ತಪೂರ್ವಾನೃತಾ ಹಾಸೇಽಪಿ ಕರ್ಹಿಚಿತ್ ॥೩೨॥**

**ಕ ಉವಾಚ :—**

**ಏವಮಾಕರ್ಣ್ಯ ತದ್ವಾಕ್ಯಂ ಜಹೃಷೇ ರಾಜಸತ್ತಮಃ ।**
**ಅಲಂಕಾರಾನ್ ದದೌ ತಸ್ಮೈ ರತ್ನ-ಕಾಂಚನನಿರ್ಮಿತಾನ್ ॥೩೩॥**

**ವಸ್ತ್ರಾಣಿ ಚ ಮಹಾರ್ಹಾಣಿ ನ ಚ ಜಗ್ರಾಹ ವೈ ಮುನಿಃ ।**
**ಪುನಃ ಪ್ರೋವಾಚ ನೃಪತಿಂ**

---

ಇದೋ, ನಾನು ವರವನ್ನು ಅನುಗ್ರಹಿಸುವೆನು. ಖಂಡಿತವಾಗಿಯೂ ನಿನಗೆ ಸು_ಪುತ್ರನು ಜನಿಸುವನು. ಈ ವಿಷಯದಲ್ಲಿ ನೀನು ಸರ್ವಥಾ ಸಂಶಯ ಪಡಬೇಕಾಗಿಲ್ಲ. ನನ್ನ ಮಾತಿನಲ್ಲಿ ಸಂಪೂರ್ಣ ವಿಶ್ವಾಸವನ್ನಿಡು. ಕೇಳು, ಜನಿಸಿ ದಾರಭ್ಯ ಇದುವರೆಗೂ ನಾನು ಒಮ್ಮೆಯಾದರೂ, ಕೇವಲ ವಿನೋದಕ್ಕೇ ಆದರೂ ಸುಳ್ಳು ಮಾತನ್ನು ಆಡಿದವನಲ್ಲ, ತಿಳಿಯಿತೇ? ॥೩೨॥

ಬ್ರಹ್ಮಾ :—

ಮುನಿಪುಂಗವನು ಆಡಿದ ಉತ್ತೇಜನಕರವಾದ ಈ ಭವಿಷ್ಯ ವಾಣಿಯನ್ನು ಕೇಳಿ ಚಕ್ರಪಾಣಿ ಮಹಾರಾಜನು ಹರ್ಷದಿಂದ ಉಬ್ಬಿಹೋದನು ಮತ್ತು ದಿವ್ಯ ರತ್ನಗಳಿಂದ ಖಚಿತಗಳಾದ ಅನೇಕ ಕಾಂಚನಾಭರಣಗಳನ್ನು ಮುನಿವರನ ಅಡಿದಾವರೆಗಳಿಗೆ ಭಕ್ತಿಯಿಂದ ಸಮರ್ಪಿಸಿದನು. ॥೩೩॥

ಬಹಳ ಬೆಲೆಬಾಳುವ ದಿವ್ಯ ಪೀತಾಂಬರಗಳನ್ನು ಎದುರಿಗಿರಿಸಿದನು; ರಾಜನೇನೋ ತನ್ನ ಭಕ್ತಿಯನ್ನು ಪ್ರಕಟಿಸಲು ಇವನ್ನು ಇರಿಸಿದ್ದನು. ಕರ್ತುಮ್ಅಕರ್ತುಮನ್ಯಥಾಪಿ ಕರ್ತುಂ ಸಮರ್ಥರಾದ ಮಹರ್ಷಿಗಳು ಈ ಅತ್ಯಲ್ಪ ವಸ್ತುಗಳನ್ನು ತೆಗೆದುಕೊಂಡು ಏನನ್ನು ಮಾಡಿಯಾರು? ಇದಾವುದನ್ನೂ ಮುನಿಯು ಮುಟ್ಟಲಿಲ್ಲ. ಇದನ್ನು ನೋಡಿ ರಾಜನು ಸ್ವಲ್ಪ ಖಿನ್ನನಾದವನಂತೆ ಕಂಡು ಬರಲು ಆಗ ಮುನಿಯು ರಾಜನನ್ನು ಕುರಿತು ಈ ರೀತಿ ನುಡಿದನು.

**ಮುನಿರುವಾಚ :—**

**ವಯಂ ವಲ್ಕಲಧಾರಿಣಃ ||೩೪||**

**ನಿಃಸ್ಪೃಹಾಃ ಸರ್ವಭೋಗೇಷು ಸರ್ವಭೂತಹಿತೇ ರತಾಃ |**
**ಸೃಷ್ಟಿ-ಸಂಹಾರಕರಣೇ ಸಮರ್ಥಾಃ ಕರುಣಾಬ್ಧಯಃ ||೩೫||**

**ಸಾಧೂನಾಂ ದರ್ಶನರತಾಃ ಸಮಲೋಷ್ಟಾಶ್ಮಕಾಂಚನಾಃ |**
**ವಿದ್ವತ್ಸು ನೈವ ಕಮಲಾ ಸ್ಥಾನಂ ಧತ್ತೇ ಕದಾಚನ ||೩೬||**

---

ಮುನಿ :—

ರಾಜನ್ ! ನಾವು ತಪಸ್ವಿಜನರು. ತಪಸ್ಸಾಧನೆಗಾಗಿ ನಾರು ಮಡಿಗಳನ್ನು ಉಪಯೋಗಿಸತಕ್ಕವರು. ಹೀಗಿರುವಾಗ ಇಂತಹ ದಿವ್ಯ ವಸನಗಳು ನಮಗೇಕೆ ಬೇಕಾಗಿವೆ ? ||೩೪||

ನಾವು ತಪಸ್ಸಿಗೆ ಕುಳಿತುಕೊಳ್ಳುವಾಗಲೇ ಈ ಎಲ್ಲ ಆಶೆಗಳನ್ನೂ ತ್ಯಜಿಸಿಯೇ ಕುಳಿತುಕೊಂಡಿರುವೆವು. ಪರಮಪದ ಒಂದು ಹೊರತು, ಮತ್ತಾವ ವಸ್ತುವೂ ನಮಗೆ ಬೇಕಿಲ್ಲ, ಹಾಗಿದ್ದರೆ ಸಾಮಾನ್ಯ ಮಾನವರಂತೆ ಈ ಲೋಕದಲ್ಲಿ ಏತಕ್ಕಾಗಿ ವ್ಯವಹರಿಸುತ್ತಿರುವಿರಿ, ಎಂದು ನೀನು ಪ್ರಶ್ನಿಸಬಹುದು. ಈ ಜನ್ಮದಲ್ಲಿ ತಪಸ್ವಿದ್ಧರಾದರೂ, ನಾವೂ ಸಹ ಪ್ರಾರಬ್ಧಕರ್ಮ ಭೋಗಕ್ಕೆ ಅಧೀನರೇ ತಾನೇ ? ಆದರೆ, ಬರಬಹುದಾದ ಕಹಿ-ಸಿಹಿಭೋಗಗಳಿಂದ ನಾವು ಉದ್ವಿಗ್ನರಾಗುವುದಿಲ್ಲ. ಇತರರಿಗೂ ನಮಗೂ ಇರತಕ್ಕ ವ್ಯತ್ಯಾಸ ಇಷ್ಟೇ. ನಮಗೆ ಸ್ವ-ಪ್ರಯೋಜನವಾವುದೂ ಇಲ್ಲದಿದ್ದರೂ, ಬದುಕಿರುವವರೆಗೂ ಲೋಕಹಿತವನ್ನು ಸಾಧಿಸಬೇಡವೇ? ಆದುದರಿಂದಲೇ ನಾವು ನಿಂತಲ್ಲಿ ನಿಲ್ಲದೇ, ಕುಳಿತಲ್ಲಿ ಕುಳ್ಳಿರದೇ ಎಲ್ಲೆಡೆಗೂ ಹೋಗಿ ಪ್ರಸಂಗ ಒದಗಿದಾಗೆಲ್ಲ ಜನರಿಗೆ ಸನ್ಮಾರ್ಗೋಪದೇಶವನ್ನು ಮಾಡುವೆವು. ವಿಶೇಷ ಸಂದರ್ಭಗಳೇನಾದರೂ ಒದಗಿದರೆ, ಸೃಷ್ಟಿ–ಸಂಹಾರಗಳನ್ನೂ ಸಹ ಮಾಡುವಂತಹ ಸಾಮರ್ಥ್ಯ ದೈವಾನುಗ್ರಹದಿಂದ ನಮಗೆ ದೊರೆತಿರುತ್ತದೆ. ಯಾರಲ್ಲೂ ನಮಗೆ ವಿದ್ವೇಷಭಾವನೆ ಇಲ್ಲ. ನಾವು ಇಡೀ ವಿಶ್ವವನ್ನೇ ಪ್ರೀತಿಸುವಷ್ಟು ಸರಳ ಸ್ವಭಾವದವರು. ಆದುದರಿಂದಲೇ ನಮ್ಮನ್ನು 'ಕರುಣಾಸಮುದ್ರ' ಎಂದು ತಿಳಿದವರು ಕರೆಯುತ್ತಾರೆ. ||೩೫||

ಎಲ್ಲೆಲ್ಲಿ ಸಾಧು–ಸಜ್ಜನರಿರುವರೋ, ಅವರನ್ನೆಲ್ಲ ಹುಡುಕಿ, ಹುಡುಕಿ ನಾವು

**ತಸ್ಮಾನ್ನೇದಂ ಗ್ರಹೀಷ್ಯಾಮಿ ಕಾಂಚನಂ ವಸನಂ ಶುಭಮ್ ।**
**ತೀರ್ಥಯಾತ್ರಾಪ್ರಸಂಗೇನ ತ್ವಾಮಹಂ ಸಮುಪಾಗತಃ ॥೩೭॥**

ದರ್ಶನ ಮಾಡುತ್ತೇನೆ. ಕಲ್ಲು–ಮಣ್ಣು ಇವನ್ನು ನೋಡಿದರೆ ಎಷ್ಟು ಅಸಡ್ಡೆಯೋ, ಚಿನ್ನ–ಬೆಳ್ಳಿ ಮೊದಲಾದ ವಸ್ತುಗಳಲ್ಲೂ ನಮಗೆ ಅಷ್ಟೇ ಅಸಡ್ಡೆಯ ಭಾವನೆ. ಇದು ಔಪಚಾರಿಕವಾದ ಮಾತು ಎಂದೆಣಿಸಬೇಡ. ವಾಸ್ತವವಾದುದು. ಮತ್ತೊಂದು ವಿಷಯ, ರಾಜಾ ! ವಿದ್ವಾಂಸರಲ್ಲಿ ದುಡ್ಡು ಅರ್ಥಾತ್ ಲಕ್ಷ್ಮಿಯು ಎಂದೆಂದಿಗೂ ಸ್ಥಿರವಾಗಿ ನೆಲೆಸಲಾರಳು, ಮೇಲಾಗಿ ವಿದ್ವಾಂಸರಿಗೆ ಲಕ್ಷ್ಮಿಗಿಂತಲೂ ಸರಸ್ವತಿ ಅರ್ಥಾತ್ ವಿದ್ಯೆಯಲ್ಲೇ ಮಮತೆ ಹೆಚ್ಚು. ಏತಕ್ಕೆಂದರೆ ಲಕ್ಷ್ಮಿಯು ಚಂಚಲೆ ಎಂದೂ, ಅವಳು ನೆಲೆಸಿದರೆ ಮನುಷ್ಯನ ಮೆದುಳು ಕಲಕಿಹೋಗಿ, ಅವನನ್ನು ಅಧಃಪಾತಾಳಕ್ಕೆ ಅದುಮಿಬಿಡುವಳೆಂದೂ ವಿದ್ವಾಂಸರು ಚನ್ನಾಗಿ ತಿಳಿದಿದ್ದಾರೆ. ಆದುದರಿಂದಲೇ ಅವರು ತಮಗೇನಾದರೂ ದುಡ್ಡು ದೊರೆತರೆ, ಅದನ್ನು ದೀನ-ದಳಿತರಿಗೆ ಒಡನೆಯೇ ಹಂಚಿಬಿಡುತ್ತಾರೆ. ವಿದ್ವಾಂಸರೆಂದರೆ ಅಕ್ಷರಜ್ಞರೆಂದು ಮಾತ್ರ ತಿಳಿಯಬೇಡ. 'ವಿದ್ಯೆ' ಎಂದರೆ 'ಆತ್ಮಸ್ವರೂಪ ಜ್ಞಾನ' ಎಂದರ್ಥ. ಅದನ್ನು ತತ್ತ್ವತಃ ಅರಿತವರೇ ವಿದ್ವಾಂಸರು. ನೀನು ಕೊಡತಕ್ಕ ಶಾಲು, ಶಕಲಾತಿಗಳನ್ನು ಧರಿಸಿ, ಮತಸೂಚಕ ಚಿಹ್ನೆಗಳನ್ನು ಢಾಳಾಗಿ ಲೇಪಿಸಿಕೊಂಡು, ನೀನು ಕೊಡಬಹುದಾದ ಪುಡಿಗಾಸಿಗೋ ಅಥವಾ ದಾನಗಳಿಗೋ ಕೈಯೊಡ್ಡಿ, ನೀನೋ ; ನಿನ್ನವರೋ ಅವರನ್ನು ಮರ್ಮಭೇದಕ ಮೊನೆಮಾತುಗಳಿಂದ ಬೈದು ಜರಿದರೂ, ಹುಸಿನಗುವಿನಿಂದಲೇ ಅವನ್ನೆಲ್ಲ 'ಮಹಾಪ್ರಸಾದ'ವೆಂದು ಸ್ವೀಕರಿಸಿ, ಶ್ವಾನದಂತೆ ಹೊಟ್ಟೆ ಹೊರೆವ ಠಕ್ಕರನ್ನು ವಿದ್ವಾಂಸರೆನಬೇಡ. ನೀನು ಪುರಸ್ಕರಿಸಿದರೆ ಸಾಕು, ಇವರು ಮಿತಿಮೀರಿ ನಿನ್ನನ್ನು ಹೊಗಳುವರು. ನಿನ್ನ ಪರೋಕ್ಷದಲ್ಲಿ ಮನಸ್ವೀ ನಿಂದಿಸುವರು. ಅಂಥವರಲ್ಲ, ವಿದ್ವಾಂಸರೆಂದರೆ. ಇರಲಿ, ನೀನು ನಮ್ಮಂಥವರಿಗೆ ದಾನವನ್ನಿತ್ತರೆ ಪ್ರಯೋಜನವಿಲ್ಲ. ॥೩೬॥

ನೀನು ಸದ್ವೃತ್ತ. ನಿನ್ನಂಥವರನ್ನು ನೋಡುವುದೂ, ಪುತ್ರ-ಪೌತ್ರಾದಿ ಸಕಲ ಸಮೃದ್ಧಿಯಿಂದೊಡಗೂಡಿ ಚಿರಕಾಲ ಧರ್ಮದಿಂದ ಬಾಳು ಎಂದು ಆಶೀರ್ವದಿಸಿ ಅನುಗ್ರಹಿಸುವುದೂ ನಮ್ಮ ಕರ್ತವ್ಯ. ಆದುದರಿಂದ ನೀನು ಕೊಟ್ಟರ ತಕ್ಕ ಕಾಂಚನ, ವಸನಗಳನ್ನು ನಾನು ಪರಿಗ್ರಹಿಸುವುದಿಲ್ಲ. ನೀನು ಇದಕ್ಕಾಗಿ ಬೇಸರಪಡಬೇಡ. ನಾನೂ ಪುಣ್ಯತೀರ್ಥಗಳನ್ನು ಸಂದರ್ಶಿಸಿ, ಅವುಗಳಲ್ಲಿ ಸ್ನಾನ

ದಿನಾನಿ ಚ ವ್ಯತೀತಾನಿ ಬಹೂನಿ ತವ ದರ್ಶನೇ ।

ಕ ಉವಾಚ :—

ಲಜ್ಜಿತೌ ನೇಮತುಸ್ಸಮ್ಯಗ್ದಂಪತೀ ಶೌನಕಂ ಮುನಿಮ್ ॥೩೮॥

ಪಪ್ರಚ್ಛತುರುಪಾಯಂ ತಂ ಸಂತಾನೋತ್ಪಾದನೇ ಕ್ಷಮಮ್ ।
ಸರ್ವವ್ರತತಪೋಯಜ್ಞಾ ಮತ್ವಾ ದಾನಾನಿ ವೈ ವೃಥಾ ॥೩೯॥

---

ಇತ್ಯಾದಿಗಳನ್ನು ಮಾಡಬೇಕಿದ್ದಿತು. ಅದಕ್ಕಾಗಿ ನಾನು ಹೊರಟಿದ್ದೆನು. ಮಾರ್ಗ ಮಧ್ಯೇ ನಿನ್ನನ್ನು ನೋಡಿ ಕ್ಷೇಮ ಸಮಾಚಾರವನ್ನು ತಿಳಿದು ಹೋಗೋಣವೆಂದು ಇಲ್ಲಿಗೆ ಬಂದೆ. ।೩೭॥

ನಿನ್ನನ್ನೂ ನೋಡಿ ಬಹಳ ದಿವಸಗಳು ಕಳೆದಿದ್ದವಲ್ಲವೇ ?

ಬ್ರಹ್ಮಾ :—

ಶೌನಕನು ಆಡಿದ ತಾತ್ತ್ವಿಕ ಮಾತುಗಳನ್ನು ಕೇಳಿ ರಾಜದಂಪತಿಗಳು ' ಅಯ್ಯೋ ! ನಮ್ಮ ಬಳಿಗೆ ಬರುವವರನ್ನೆಲ್ಲ ಯಾಚಕರೆಂದೇ ಭಾವಿಸುವೆವಲ್ಲವೇ ? ದುಡ್ಡನ್ನು ಕೊಟ್ಟು ಪುಣ್ಯವನ್ನು ವಿನಿಮಯಮಾಡಿಕೊಳ್ಳಲು ಯತ್ನಿಸುವ ನಮ ಗಿಂತಲೂ ಅಜ್ಞರು ಮತ್ತಾರಿದ್ದಾರೆ ? ' ಎಂದು ನೊಂದು ತಮ್ಮ ಅನಜ್ಞತೆಗಾಗಿ ಬಹಳ ಲಜ್ಜಿತರಾದರು. ಮಹಾತ್ಮನಾದ ಶೌನಕಮುನಿಯ ಚರಣಕಮಲಗಳಿಗೆ ಮತ್ತೆ ಮತ್ತೆ ನಮಸ್ಕರಿಸಿದರು. ॥೩೮॥

ತಮಗೆ ಸಂತಾನವು ಪ್ರಾಪ್ತಿಯಾಗಲಿಕ್ಕೆ ಯಾವ ಅನುಷ್ಠಾನವನ್ನು ಮಾಡ ಬೇಕೆಂದು ವಿನಯದಿಂದ ಬಿನ್ನವಿಸಿದರು. ಇದುವರೆಗೂ ತಾವು ಆಚರಿಸಿದ ಅನೇಕಾ ನೇಕ ವ್ರತೋಪವಾಸ, ಯಜ್ಞ, ದಾನಾದಿಗಳೆಲ್ಲ ವ್ಯರ್ಥವಾದ ಸಂಗತಿ ಅವರ ಮೆದಳು ಗಳಲ್ಲಿ ಜಾಗೃತವಾಗಿದ್ದಿತು. ಹೊಸ ಬಗೆಯ ಅನುಷ್ಠಾನವನ್ನು ಆಚರಿಸಬೇಕೆಂದು ಹೇಳಿದರೆ, ಅದನ್ನು ಸಂತೋಷದಿಂದ ಆಚರಿಸೋಣವೆಂಬ ಕುತೂಹಲ ಅವರಿಬ್ಬ

ತತೋಽಬ್ರವೀನ್ಮುನಿಃ ಸೌರಂ ವ್ರತಂ ಸರ್ವಾರ್ಥದಂ ನೃಣಾಮ್ ।
ಅನೇಕಜನ್ಮಪಾಪಾನಾಂ ಶಮನಂ ಪುತ್ರ-ಪೌತ್ರದಮ್ ॥೪೦॥

ಮುನಿರುವಾಚ :—

ಮಾಸಮಾತ್ರಂ ವ್ರತಂ ಕಾರ್ಯಮಾರಭ್ಯ ಭಾನುಸಪ್ತಮಿ ।
ಕೃತ್ವಾಭ್ಯುದಯಿಕಂ ಶ್ರಾದ್ಧಂ ಮಾತೃಪೂಜನಪೂರ್ವಕಮ್ ॥೪೧॥

ಅಭ್ಯರ್ಚ್ಯ ಗಣನಾಥಂ ಚ ಸ್ವಸ್ತಿ ವಾಚ್ಯ ದ್ವಿಜರ್ಷಭಾನ್ ।
ಸುವರ್ಣಕಲಶೇ ಸ್ಥಾಪ್ಯ ಸೌವರ್ಣಂ ರವಿಮಂಡಲಮ್ ॥೪೨॥

ರಿಗೂ ತುಂಬಿ ಇದ್ದಿತು. ಆದುದರಿಂದಲೇ ಮೇಲ್ಕಂಡಂತೆ ಅವರು ಪ್ರಶ್ನಿಸಿದುದು. ॥೩೯॥

ಅನಂತರ ಶೌನಕ ಮುನಿಯು ಆಲೋಚಿಸಿ, ಮನುಷ್ಯರಿಗೆ ಸಕಲಾರ್ಥವನ್ನೂ ಕೊಡತಕ್ಕದ್ದು, ಅನೇಕ ಜನ್ಮಗಳಲ್ಲಿ ಅವರು ಆಚರಿಸಿದ ಸಕಲ ಪಾತಕಗಳನ್ನೂ ಕ್ಷಣ ಮಾತ್ರದಲ್ಲಿಯೇ ದಹಿಸಿಬಿಡತಕ್ಕದ್ದು ಮತ್ತು ಪುತ್ರ-ಪೌತ್ರಾದಿ ಸಕಲ ಸಾಂಸಾರಿಕ ಸತ್ಫಲಗಳನ್ನೂ ಕೊಡತಕ್ಕದ್ದು ಆದ ಸೂರ್ಯನಾರಾಯಣ ವ್ರತವನ್ನು ಉಪದೇಶಿಸಬೇಕೆಂದು ನಿಶ್ಚಯಿಸಿ, ಅವರನ್ನು ಕುರಿತು ಹೀಗೆ ನುಡಿದನು. ॥೪೦॥

ಶೌನಕ :—

ಈಗ ನಾನು ಉಪದೇಶಿಸುವ ವ್ರತವು ಒಂದು ತಿಂಗಳವರೆಗೆ ಆಚರಿಸಬೇಕಾದದ್ದು. ಸಪ್ತಮಿತಿಥಿಯು ಭಾನುವಾರದಿಂದ ಕೂಡಿದ ದಿವಸ ಈ ವ್ರತಾರಂಭಕ್ಕೆ ಬಹಳ ಶ್ರೇಷ್ಠವಾದುದು. ಆದುದರಿಂದ ಅಂದು ಮೊದಲ್ಗೊಂಡು ಈ ವ್ರತವನ್ನು ಆರಂಭಿಸತಕ್ಕದ್ದು. ವ್ರತವನ್ನಾರಂಭಿಸುವುದಕ್ಕೆ ಮೊದಲು ಅಭ್ಯುದಯಿಕ(ನಾಂದೀ) ಶ್ರಾದ್ಧವನ್ನು ಮಾಡತಕ್ಕದ್ದು. ಇದಾದ ಬಳಿಕ ಸಪ್ತ ಮಾತೃಕೆಗಳನ್ನೂ ಪೂಜಿಸಬೇಕು. ॥೪೧॥

ಸಂಕಲ್ಪಿಸಿದ ವ್ರತವು ನಿರ್ವಿಘ್ನವಾಗಿ ನೆರವೇರಲು, ಎಲ್ಲಕ್ಕೂ ಮೊದಲು ಮಹಾ ಗಣಪತಿಯನ್ನು ಭಕ್ತಿಯಿಂದ ಅರ್ಚಿಸತಕ್ಕದ್ದು. ಇದಾದ ಬಳಿಕ ಸದ್ಬ್ರಾಹ್ಮಣರನ್ನು ಬರಮಾಡಿಕೊಂಡು ಅವರ ಮೂಲಕ ಸ್ವಸ್ತಿವಾಚಕ ಮಂತ್ರಗಳನ್ನು

**ಉಪಚಾರೈಃ ಷೋಡಶಭಿರ್ಭಕ್ತಿಭಾವಸಮನ್ವಿತಃ ।**
**ರಕ್ತಚಂದನಮಿಶ್ರೈಶ್ಚ ತಂಡುಲೈಃ ಕುಸುಮೈರಪಿ　　　॥೪೩॥**

**ರಕ್ತೈರ್ನಾನಾವಿಧೈ ರತ್ನೈಃ ಫಲೈಶ್ಚ ವಿವಿಧೈರಪಿ ।**
**ಅರ್ಘ್ಯೈರ್ದ್ವಾದಶಸಂಖ್ಯೈಶ್ಚ ನಮಸ್ಕಾರೈಃ ಪರಿಕ್ರಮೈಃ　　　॥೪೪॥**

**ಸ್ತುತಿಭಿಃ ಪ್ರಾರ್ಥನಾಭಿಶ್ಚ ಪ್ರಾರ್ಥಯೇತ್ಪರಮೇಶ್ವರಮ್ ।**
**ತತೋ ಲಕ್ಷ ನಮಸ್ಕಾರಾನ್ ಕುರ್ವೀತ ಕಾರಯೀತ ವಾ　　　॥೪೫॥**

ಹೇಳಿಸಬೇಕು. ಒಂದು ಸುವರ್ಣಕಲಶದ ಮೇಲೆ ರವಿಬಿಂಬವನ್ನು ಸ್ಥಾಪಿಸಬೇಕು. ॥೪೨॥

ಧ್ಯಾನ–ಆವಾಹನ ಇತ್ಯಾದಿ ಷೋಡಶೋಪಚಾರಗಳಿಂದ ಸೂರ್ಯ ನಾರಾಯಣನನ್ನು ಅರ್ಚಿಸಬೇಕು. ಭಕ್ತಿಭಾವವು ಮುಟ್ಟಿಗೆ ಬಹಳ ಪರಿಶುದ್ಧ ವಾಗಿರಬೇಕು. ಆಡಂಬರದ ಕಡೆಗೆ ಸ್ವಲ್ಪ ಕೂಡ ಗಮನವನ್ನು ಕೊಡಬಾರದು. ರವಿಯ ಪೂಜೆಗೆ ಕೆಂಪುವರ್ಣದ ಗಂಧ, ಮಂತ್ರಾಕ್ಷತೆ ಮತ್ತು ಪುಷ್ಪಗಳು ಬಹಳ ಶ್ರೇಷ್ಠವಾದ್ದರಿಂದ ಪ್ರಯತ್ನಪೂರ್ವಕವಾಗಿ ಅವನ್ನೇ ಸಂಗ್ರಹಿಸಿ ತಂದು ಅರ್ಚಿಸ ಬೇಕು. ॥೪೩॥

ಇದೇ ರೀತಿ ದೇವನಿಗೆ ಅಲಂಕರಿಸಲು ಕೆಂಪು ವರ್ಣದ ರತ್ನಗಳನ್ನೇ ಉಪ ಯೋಗಿಸಬೇಕು. ಹಣ್ಣುಗಳು ನಾನಾ ಬಗೆಯಾದುವಾಗಿರಬೇಕು. ಅವೂ ಸಹ ಕೆಂಪು ವರ್ಣವುಳ್ಳವೇ ಇದ್ದರೆ ಬಹಳ ಶ್ರೇಷ್ಠ. ಹನ್ನೆರಡು ಬಾರಿ ಅರ್ಘ್ಯಗಳನ್ನು ಕೊಡಬೇಕು. ಮಿತ್ರ, ರವಿ, ಸೂರ್ಯ, ಭಾನು, ಖಗ, ಪೂಷಾ, ಹಿರಣ್ಯಗರ್ಭ, ಮರೀಚಿ, ಆದಿತ್ಯ, ಸವಿತೃ, ಅರ್ಕ ಮತ್ತು ಭಾಸ್ಕರ ಎಂಬ ದ್ವಾದಶ ನಾಮಗಳನ್ನು ಉಚ್ಚರಿಸಿ, ಒಂದೊಂದು ನಾಮದ ಉಚ್ಚಾರಣಾಂತ್ಯದಲ್ಲೂ 'ನಮಃ' ಎಂದು ಹೇಳಿ, ಒಂದೊಂದು ನಮಸ್ಕಾರವನ್ನು ಮಾಡಬೇಕು. ಸ್ಥಂಡಿಲದಲ್ಲಿ ಸ್ಥಾಪಿತ ವಾಗಿರುವ ಕಲಶಕ್ಕೆ ಪ್ರದಕ್ಷಿಣೆ ಬಂದು ನಮಸ್ಕರಿಸಬೇಕು. ॥೪೪॥

'ಧ್ಯೇಯಸ್ಸದಾ ಸವಿತೃಮಂಡಲಮಧ್ಯವರ್ತೀ, ನಾರಾಯಣಸ್ಸರಸಿಜಾಸನ ಸನ್ನಿವಿಷ್ಟಃ । ಕೇಯೂರವಾನ್ ಮಕರಕುಂಡಲವಾನ್ ಕಿರೀಟೀ ಹಾರೀ ಹಿರಣ್ಮಯ ವಪುರ್ಧೃತಶಂಖ–ಚಕ್ರಃ' ಎಂದರೆ ಜಗಜ್ಜೀವಾತುವಾದ ಈ ತೇಜೋಮಂಡಲದ

**ಪ್ರತ್ಯಹಂ ಲಕ್ಷವಿಪ್ರಾಂಸ್ತು ಭೋಜಯೋತ್ಪರಯಾ ಮುದಾ।**
**ಗಾಮೇಕಾಂ ಪ್ರತ್ಯಹಂ ದದ್ಯಾದ್ವೇದಜ್ಞಾಯ ಕುಟುಂಬಿನೇ ॥೪೬॥**

ಹೃತ್ಪುಂಡರೀಕವನ್ನೇ ಆಸನವನ್ನಾಗಿ ಮಾಡಿಕೊಂಡು ಕುಳಿತಿರುವನು ಸರ್ವಾಂತರ್ಯಾಮಿಯಾದ ಸಾಕ್ಷಾನ್ನಾರಾಯಣನು. (ನರಾ ಏವ ನಾರಾಃ= ಎಲ್ಲ ಲಕ್ಷ ಬಗೆಯ ಜೀವರು. ತೇಷಾಂ ಅಯನಂ= ಇವರೆಲ್ಲರಿಗೂ ಅಧಿಷ್ಠಾನವಾದುದಾವುದೋ, ಅದೇ ನಾರಾಯಣ ಶಬ್ದಾರ್ಥ= ಸಚ್ಚಿದಾನಂದಸ್ವರೂಪವಾದ ಶುದ್ಧ ಚೈತನ್ಯ' ಈ ಅರ್ಥವನ್ನು ಶ್ರೀಮಚ್ಛಂಕರ ಭಗವತ್ಪಾದಾಚಾರ್ಯರು ಶ್ರೀ ಭಗವದ್ಗೀತೆಗೆ ಭಾಷ್ಯವನ್ನು ಬರೆವಾಗ ' ನಾರಾಯಣಃ ಪರೋಽವ್ಯಕ್ತಾದಂಡಮವ್ಯಕ್ತಸಂಭವಮ್....॥' ಎಂಬ ಶ್ಲೋಕವನ್ನು ಮಂಗಲಾಚರಣೆಗಾಗಿ ರಚಿಸಿ, ಈ ಪದ್ಯದಲ್ಲಿ ಅಡಕವಾಗಿರುವ 'ನಾರಾಯಣ' ಎಂಬ ಮುತ್ತಿನಂತಹ ಪದಕ್ಕೆ ಈ ರೀತಿ ಅರ್ಥವನ್ನು ತಾವೇ ವಿವರಿಸಿದ್ದಾರೆ.) ಕೇಯೂರ, (ತುರಾಯಿ) ಮರಕತಮಣಿಮಂಡಿತ ಕುಂಡಲ, ದಿವ್ಯವಾದ ಕಿರೀಟ. ಹಾರ ಇವೇ ಮೊದಲಾದ ಅನೇಕ ದಿವ್ಯ ಆಭರಣಗಳನ್ನು ಆಯಾ ಅವಯವಗಳಲ್ಲಿ ಒಪ್ಪುವಂತೆ ಧರಿಸಿ ರಂಜಿಸುತ್ತಿರುವನು. ಕರಕಮಲಗಳಲ್ಲಿ ಶಂಖ,-ಚಕ್ರ ಮೊದಲಾದುವನ್ನು ಧರಿಸಿದವನು. ಸ್ವರ್ಣ ಛಾಯೆಯಂತೆ ಹೊಂಬಣ್ಣದಿಂದ ಹೊಳೆವ ಭಗವಂತನನ್ನು ಧ್ಯಾನಿಸಬೇಕು. ಇವೇ ಮುಂತಾದ ಅರ್ಥವುಳ್ಳ ಸ್ತೋತ್ರಗಳಿಂದಲೂ ಮತ್ತು ಪ್ರಾರ್ಥನಾಪರ ಅನೇಕ ವೇದ ವಾಕ್ಯಗಳಿಂದಲೂ ಸರ್ವೇಶ್ವರನಾದ ಜಗಜ್ಜ್ಯೋತಿಯನ್ನು ಮೊದಲು ಪ್ರಾರ್ಥಿಸಬೇಕು. ' ನಮಸ್ಕಾರಪ್ರಿಯೋ ರವಿಃ ' ಎಂದು ಹೇಳಿರುವುದರಿಂದ ಅನಂತರ ಒಂದು ಲಕ್ಷ ಸಂಖ್ಯೆಯಲ್ಲಿ ದೀರ್ಘದಂಡ ನಮಸ್ಕಾರಗಳನ್ನು ಮಾಡಬೇಕು. ತನ್ನ ದೇಹದಲ್ಲಿ ಸಾಮರ್ಥ್ಯವಿಲ್ಲದಿದ್ದರೆ, ನಮಸ್ಕಾರರೂಪ ಈ ಸೇವೆಯನ್ನು ತನಗಾಗಿ ಮಾಡುವಂತಹ ಮಂತ್ರಜ್ಞರೂ, ಸದಾಚಾರ ಸಂಪನ್ನರೂ ಮತ್ತು ಪರಮ ಸಾತ್ತ್ವಿಕ ಸ್ವಭಾವದವರೂ ಆದ ಬ್ರಾಹ್ಮಣೋತ್ತಮರ ಮೂಲಕ ಮಾಡಿಸಬಹುದು, ಇವೆರಡರ ಪೈಕಿ ತಾನೇ ಶ್ರದ್ಧಾ-ಭಕ್ತಿಗಳಿಂದ ಕೂಡಿದವನಾಗಿ ನಮಸ್ಕಾರಗಳನ್ನು ಮಾಡುವುದು ಸರ್ವಶ್ರೇಷ್ಠ ಎಂಬುದರಲ್ಲಿ ಯಾವ ಅಭ್ಯಂತರವೂ ಇರುವುದಿಲ್ಲ. ॥೪೫॥

ಸೂರ್ಯೋಪಾಸನೆಯ ಈ ವ್ರತ ಮುಗಿಯುವ ವರೆಗೂ ಪ್ರತಿ ದಿವಸ ಒಂದು

**ಬ್ರಹ್ಮಚರ್ಯೇಣ ತಿಷ್ಠೇಚ್ಚ ಸಪತ್ನೀಕೋ ನೃಪೋತ್ತಮ ! ।**
**ದೀನಾಂಧಕೃಪಣೇಭ್ಯಶ್ಚ ದದ್ಯಾದನ್ನಂ ದಯಾನ್ವಿತಃ ॥೪೭॥**

**ಮಾಸಾಂತೇ ಸರ್ವಸಂಭಾರಾನ್ ಬ್ರಾಹ್ಮಣಾಯ ಸಮರ್ಪಯೇತ್ ।**
**ಏವಂ ವ್ರತೇ ಕೃತೇ ರಾಜನ್ ! ಪುತ್ರಸ್ತೇ ಮತ್ಪ್ರಸಾದತಃ ॥೪೮॥**

---

ಲಕ್ಷ ಸಂಖ್ಯೆಯಲ್ಲಿ ಬ್ರಾಹ್ಮಣರಿಗೆ ಇಚ್ಛಾಭೋಜನವನ್ನು ಮಾಡಿಸತಕ್ಕದ್ದು. ಯಾವುದೋ ಒಂದು ಬಗೆಯ ಒತ್ತಾಯಕ್ಕೆ ಸಿಲುಕಿ, ಈ ವ್ರತವನ್ನಾರಂಭಿಸಿ ವ್ಯಯಾಧಿಕ್ಯವನ್ನು ಸಹಿಸಲಾರದೆ ವ್ರತೋಪದೇಷ್ಟೃವನ್ನೂ, ಇದಕ್ಕೆ ಆಹೂತರಾಗಿ ಬಂದಿರಬಹುದಾದ ವಿಪ್ರರನ್ನೂ ಅಂತರಂಗದಲ್ಲಿಯೇ ಶಪಿಸುತ್ತ ಈ ವ್ರತವನ್ನು ಅನುಷ್ಠಿಸಬಾರದು. ವ್ರತಿಯು ಹೃತ್ಪೂರ್ವಕವಾಗಿ ಸಂತೋಷ–ಉತ್ಸಾಹಗಳಿಂದಲೇ ಈ ಕಾರ್ಯಗಳನ್ನು ನೆರವೇರಿಸತಕ್ಕದ್ದು. ವೇದವನ್ನರಿತವನೂ, ಕುಟುಂಬಿಯೂ ಆಗಿರತಕ್ಕ ಒಬ್ಬೊಬ್ಬ ವಿಪ್ರನಿಗೆ ಪ್ರತಿ ದಿನ ಒಂದೊಂದರಂತೆ ಸಾಲಂಕೃತ, ಸವತ್ಸ, ಪಯಸ್ವಿನಿಗಳನ್ನು ಯೋಗ್ಯ ದಕ್ಷಿಣೆಯೊಡನೆ ದಾನಮಾಡಬೇಕು, ॥೪೬॥

ವ್ರತಿಯಾದವನು ಸಪತ್ನೀಕನಾಗಿ ವ್ರತಪರಿಸಮಾಪ್ತಿಗೊಳ್ಳುವ ವರೆಗೂ ಬ್ರಹ್ಮಚರ್ಯೆಯನ್ನು ನಿಷ್ಠೆಯಿಂದ ಪರಿಪಾಲಿಸಬೇಕು. ಇದರಲ್ಲಿ ಸ್ವಲ್ಪವೂ ಲೋಪ ಬರಬಾರದು, ತಿಳಿಯಿತೇ ? ರಾಜನ್ ! ಇವನು ದೀನರೂ, ಅಂಧರೂ ಮತ್ತು ಕೃಪಣರೂ ಆದವರ ವಿಷಯದಲ್ಲಿ ಬಹಳ ದಯಾಳುವಾಗಿದ್ದು, ಅವರಿಗೆ ಯಥೇಷ್ಟವಾಗಿ ಅನ್ನವನ್ನು ದಾನಮಾಡಬೇಕು. ॥೪೭॥

ಹೀಗೆ ಒಂದು ತಿಂಗಳ ವರೆಗೆ ಸ್ವಲ್ಪವೂ ಬೇಸರಪಡದೇ ಈ ವ್ರತವನ್ನಾಚರಿಸಿ, ತಿಂಗಳ ಕೊನೆಯಲ್ಲಿ ಎಂದರೆ ವ್ರತವು ಮುಗಿದ ಬಳಿಕ ಕಲಶ, ವಸ್ತ್ರ ಮೊದಲಾದ ಸಕಲ ಸಂಭಾರಗಳನ್ನೂ ವ್ರತೋಪದೇಶಕನಾದ ಬ್ರಾಹ್ಮಣೋತ್ತಮನಿಗೆ ದಾನವಾಗಿ ಕೊಡಬೇಕು. ಮಹಾರಾಜ! ವ್ರತಗಳು ಕಾಮ್ಯಕರ್ಮವೆನಿಸುವುವು. ಇವನ್ನು ಬಹಳ ಜಾಗರೂಕತೆಯಿಂದ ಯಥಾವತ್ತಾಗಿ ಆಚರಿಸಿದರೆ ಮಾತ್ರವೇ ಯಾ ವ್ರತದ ಫಲಗಳು ಸಂದೇಹವಿಲ್ಲದೆ ಫಲಿಸುವುವು. ಇದರಲ್ಲಿ ಪ್ರಮಾದದಿಂದ ನ್ಯೂನತೆ ಏನಾದರೂ ಸಂಭವಿಸುವುದಾದರೆ, ದೊರೆಯುವ ಫಲವು ದುಷ್ಪರಿಣಾಮಕಾರಿಯಾಗಬಹುದು.

ಭವಿಷ್ಯತಿ ಮಹಾಖ್ಯಾತಃ ಸೂರ್ಯಭಕ್ತಿಯುತಃ ಶುಚಿಃ

ಕ ಉವಾಚ :—

ಏವಂ ವ್ರತಂ ಸಮಾದಿಶ್ಯ ಶೌನಕೋಽಂತರ್ಹಿತಸ್ತದಾ ||೪೯||

ತತಶ್ಚಕಾರ ನೃಪತಿರ್ಯಥಾದಿಷ್ಟಂ ವ್ರತಂ ತು ತತ್ |
ಪತ್ನ್ಯಾ ಸಹ ವಿನೀತಾತ್ಮಾ ಸೂರ್ಯಭಕ್ತಿಪರಾಯಣಃ ||೫೦||

ಆದುದರಿಂದ ನೀನು ಈ ವ್ರತವನ್ನು ಬಹಳ ಜಾಗರೂಕತೆಯಿಂದ ಸಾಂಗೋಪಾಂಗ ವಾಗಿ ಒಂದು ತಿಂಗಳು ನಡೆಸಿದೆಯಾದರೆ, ನನ್ನ ಅನುಗ್ರಹದಿಂದ ನಿನಗೆ ಸುಪುತ್ರನು ಜನಿಸುವನು. ||೪೮||

ಜನಿಸುವ ಮಗನು ಮಹಾಖ್ಯಾತಿವಂತನಾಗಿ ಬಾಳುವನು. ಅವನು ಸೂರ್ಯನಾರಾಯಣನಲ್ಲಿ ಬಹಳ ಭಕ್ತಿಯುಳ್ಳವನಾಗುವನು. ತ್ರಿ-ಕರಣಗಳಿಂದಲೂ ಅವನು ಶುಚಿಯಾಗಿರುವನು.

ಬ್ರಹ್ಮ:

ಶೌನಕನು ಈ ರೀತಿಯಾಗಿ ಸೂರ್ಯೋಪಾಸನೆಯ ವ್ರತದ ಪ್ರಕ್ರಿಯೆಯನ್ನೆಲ್ಲ ವಿವರವಾಗಿ ಉಪದೇಶಿಸಿ, ತತ್ಕ್ಷಣದಲ್ಲಿಯೇ ಅಂತರ್ಧಾನವನ್ನು ಹೊಂದಿದನು. ||೪೯||

ಅನಂತರ ನರಪತಿಯು ಶೌನಕನು ಉಪದೇಶಿಸಿದ ವಿಧಾನಕ್ಕೆ ಸ್ವಲ್ಪವೂ ಲೋಪವಾಗದಂತೆ ಪತ್ನಿಯೊಡನೆ ಈ ವ್ರತವನ್ನು ಆಚರಿಸಿದನು. ಅಮೋಘವೂ, ಅತ್ಯಪೂರ್ವವೂ ಆದ ಇಂತಹ ವ್ರತವನ್ನು ತಾನು ಆಚರಿಸುವೆನು ಎಂಬ ಅಹಂಕಾರಭಾವವಾಗಲೀ, ಅಥವಾ ಈ ವ್ರತಾನುಷ್ಠಾನಕ್ಕೆ ವಿಶೇಷವಾಗಿ ದ್ರವ್ಯ ವ್ಯಯವಾಗುವುದಲ್ಲ ಎಂಬ ಆಂತರಿಕ ವೇದನೆಯಾಗಲೀ ಆ ಮಹಾತ್ಮನಲ್ಲಿ ಉಂಟಾಗಲಿಲ್ಲ. ರಾಜದಂಪತಿಗಳು ಒಬ್ಬರನ್ನೊಬ್ಬರು ಮೀರಿಸಲು ಪೈಪೋಟಿಯ ಮೇಲೆ ಯತ್ನಿಸುವರೋ ಎಂಬಂತೆ ನಿಯಮವನ್ನು ಪರಿಪಾಲಿಸತೊಡಗಿದರು. ಮತ್ತು ಭಗವಾನ್ ಸೂರ್ಯನಾರಾಯಣನೇ ಸರ್ವಸ್ವ ಎಂಬ ದೃಢಭಾವನೆಯುಳ್ಳವರಾಗಿದರು.|| ||೫೦||

**ಬ್ರಾಹ್ಮಣಾನ್ ಭೋಜಯಾಮಾಸ ಯಥೇಚ್ಛಂ ಲಕ್ಷ ಸಂಖ್ಯಯಾ ।**
**ಉಪವಾಸಯುತಃ ಪತ್ನ್ಯಾ ಮಾಸಮಾತ್ರಂ ಬಭೂವ ಸಃ ॥೩೧॥**

**ಗೋದಾನಂ ಚ ನಮಸ್ಕಾರಾಂಶ್ಚಕ್ರೇ ಚಾಕಾರಯದ್ದ್ವಿಜೈಃ ।**
**[1]ಸೂರ್ಯಮಂತ್ರಂ ಜಪನ್ನಿತ್ಯಂ ತನ್ನಾಮಸ್ಮರಣಂ ಸದಾ ॥೩೨॥**

**ತತಃ ಕದಾಚಿತ್ತತ್ಪತ್ನೀ ರಾತ್ರೌ ಸ್ವಪ್ನೇ ದದರ್ಶ ತಮ್ ।**
**ನಿಜಭರ್ತೃದ್ವಿಜಂ ರೂಪಂ ಸೇವಿತಾರಂ ಮನೋರಮಮ್ ॥೩೩॥**

---

ರಾಜನು ಪ್ರತಿ ದಿನವೂ ಲಕ್ಷ ಸಂಖ್ಯೆಯಲ್ಲಿ ಬ್ರಾಹ್ಮಣರಿಗೆ ಇಚ್ಛಾಭೋಜನವನ್ನು ಏರ್ಪಡಿಸಿ ತೃಪ್ತಿಪಡಿಸುತ್ತಿದ್ದನು. ತಾನು, ತನ್ನ ಹೆಂಡಿತಿ ಮಾತ್ರ ಒಂದು ತಿಂಗಳ ವರೆಗೂ ಉಪವಾಸ ವ್ರತವನ್ನು ಬಹಳ ಕಠಿಣ ರೀತಿಯಿಂದ ಪಾಲಿಸುತ್ತಿದ್ದರು. ॥೩೧॥

ಪ್ರತಿ ದಿವಸವೂ ಸಾಲಂಕೃತ ಗೋವುಗಳನ್ನು ಸವತ್ಸವಾಗಿ, ಶ್ರೋತ್ರಿಯ ಕುಟುಂಬಿ ವಿಪ್ರರಿಗೆ ದಾನಮಾಡುತ್ತಿದ್ದನು. ಸ್ವತಃ ನಮಸ್ಕಾರಗಳನ್ನು ಮಾಡುತ್ತಿದ್ದುದಲ್ಲದೇ ಮಂತ್ರಜ್ಞರಾದ ಸದ್ಬ್ರಾಹ್ಮಣರ ಮೂಲಕವೂ ನಮಸ್ಕಾರಗಳನ್ನು ಮಾಡಿಸುತ್ತಲಿದ್ದನು. ಭಾಸ್ಕರನ ನಾಮಸ್ಮರಣವು ಶ್ವಾಸೋಚ್ಛ್ವಾಸಗಳಂತೆ ನಿರರ್ಗಳವಾಗಿ ಸರ್ವದಾ ನಡೆಯುತ್ತಲೇ ಇದ್ದಿತು. ॥೩೨॥

ವ್ಯಾಸ ! 'ಭವಿತವ್ಯತಾ ಹಿ ಬಲವತೀ' ಎಂಬಂತೆ ಪ್ರಾರಬ್ಧ ಕರ್ಮದ ಒತ್ತಡವನ್ನು ತಡೆಗಟ್ಟಲಿಕ್ಕೆ ಯಾರು, ಎಷ್ಟು ಪರಿಯಿಂದ ಪ್ರಯತ್ನಿಸಿದರೂ ಅದು ಸಾಧ್ಯವಾಗುವುದಿಲ್ಲ. 'ತಾದೃಶೀ ಜಾಯತೇ ಬುದ್ಧಿಃ ವ್ಯವಸಾಯಸ್ತು ತಾದೃಶಃ॥ ಸಹಾಯಾಸ್ತಾದೃಶಾಶ್ಚೈವ ಯಾದೃಶೀ ಭವಿತವ್ಯತಾ' ಎಂದರೆ ಮನುಷ್ಯನ ಕರ್ಮವು ಯಾವ ಯಾವ ರೀತಿಯಿಂದ ಫಲಗಳನ್ನು ಕೊಡಲು ಆರಂಭವಾಗಿರುವುದೋ, ಯಾರೊಬ್ಬರ ಒತ್ತಾಯವೂ ಇಲ್ಲದೇ ಅವನ ಬುದ್ಧಿಯು ಭವಿತವ್ಯತೆಗೆ ಅನುಗುಣವಾಗಿಯೇ ಪ್ರಚೋದಿತವಾಗುವುದು. ಇವನ ಪ್ರಯತ್ನಗಳೂ ಅದನ್ನೇ ಸಾಧಿಸುವಂತಿರುವವು. ಇಷ್ಟೇ ಅಲ್ಲದೇ ಸುತ್ತ-ಮುತ್ತಣ ಸಹಾಯ

---

1 ವಿವರಣೆಗೆ ಪರಿಶಿಷ್ಟವನ್ನು ನೋಡಿರಿ.

**ಚಕಮೇ ಕಾಮರೂಪಂ ತಂ ಮದನಾಗ್ನಿಪ್ರಪೀಡಿತಾ ।**
**ಉವಾಚ ಪರಿತಪ್ತಾಙ್ಗೀ**
**ರಾಜಪತ್ನ್ಯುವಾಚ :—**
**ಕಾಮೋ ಮೇ ಬಾಧತೇ ಭೃಶಮ್ ॥೩೪॥**

ಸಂಪತ್ತಿ, ವಾತಾವರಣ ಇವು ಸಹ ಇವನ ಆ ಬಗೆಯ ಬುದ್ಧಿಯನ್ನೇ ಉತ್ತೇಜಿಸು ವವು. ಎಂತಹ ಮನೋದಾರ್ಢ್ಯ ಉಳ್ಳವನಾದರೂ ಪ್ರಾರಬ್ಧವನ್ನು ಮುಟ್ಟಿಗೆ ಮಾರ ಲಾಗುವುದಿಲ್ಲ. ಮನುಷ್ಯನು ವಿವೇಕಿಯೂ, ವ್ಯವಸಾಯಿಯೂ ಆಗಿದ್ದರೆ ಮುಂದಾಗು ವುದನ್ನು ತಿಳಿದು, ಅದರಿಂದುಂಟಾಗಬಹುದಾದ ಸುಖ-ದುಃಖ ಭೋಗಗಳಲ್ಲಿ ಆಸಕ್ತ ವಾಗದಂತೆ ತನ್ನ ಮನೋವೃತ್ತಿಯನ್ನು ಬಿಗಿಹಿಡಿಯಬಲ್ಲನು. ಚಂಚಲಚಿತ್ತನಾಗಿ ದ್ದರೆ ಆಗು-ಹೋಗುಗಳಿಗೆ ಬಹು ಸುಲಭವಾಗಿ ಬಲಿಯಾಗಿ ತಾತ್ಕಾಲಿಕ ಸುಖ-ದುಃಖ ಭೋಗಗಳಿಗೆ ಹೊಂದಿಕೊಳ್ಳುತ್ತ ಮತ್ತೆ ಮತ್ತೆ ಹುಟ್ಟಿ, ಸಾಯುವನು. ಪ್ರಕೃತ ಚಕ್ರಪಾಣಿ ಮಹಾರಾಜನ ಪತ್ನಿಯ ಪರಿಸ್ಥಿತಿಯಾದರೂ ಹೀಗೆಯೇ ಆಯಿತು. ರಾಣಿಗೆ ಒಂದು ರಾತ್ರಿ ಸ್ವಲ್ಪ ಜಂಪು ಹತ್ತಿತು. ಎಷ್ಟಾದರೂ ಅವಳು ರಾಜಸ್ತ್ರೀ. ಸೂರ್ಯನ ಬೆಳಕನ್ನು ಸಹ ಕಂಡರಿತವಳಲ್ಲ. ನಿಟ್ಟುಪವಾಸ ಮೊದಲಾದ ನಿಯಮಗ ಳಿಂದ ಅವಳ ಕೋಮಲ ಶರೀರಕ್ಕೆ ಬಹಳ ಬಳಲಿಕೆಯುಂಟಾದ್ದಿತು. ಅದು ಸ್ವಾಭಾ ವಿಕವಾದ ನಿದ್ರೆಯೋ, ಅಥವಾ ಭವಿಷ್ಯವನ್ನು ನೆರವೇರಿಸಲು ಬಂದ ದೈವೀ ಮಾಯೆಯೋ, ಅಂತೂ ಅವಳು ನಿದ್ರಾಸಕ್ತಳಾಗಿದ್ದಳು. ಅವಳಿಗೊಂದು ವಿಚಿತ್ರ ರೀತಿಯ ಕನಸು ತೋರಿತು. ತನ್ನ ಪತಿಯಾದ ಚಕ್ರಪಾಣಿಯಂತೆ ಅತಿ ಮನೋಹರ ವಾದ ರೂಪದಿಂದೊಪ್ಪುವ ಬ್ರಾಹ್ಮಣನೊಬ್ಬನನ್ನು ಕನಸಿನಲ್ಲಿ ಕಂಡಳು. ಅವನು ತನ್ನನ್ನು ಸೇವಿಸುತ್ತಿರುವಂತೆಯೂ ಭಾಸವಾಗಲು. ಇದುವರೆಗೂ ವ್ರತನಿಮಿತ್ತವಾಗಿ ಬಲಾತ್ಕಾರದಿಂದ ಅದುಮಿಟ್ಟಿದ್ದ ಕಾಮವಿಕಾರವು ಒಮ್ಮೆಲೆ ಭುಗಿಲೆದ್ದು, ಅವಳನ್ನು ಬಹಳಮಟ್ಟಿಗೆ ಪೀಡಿಸಿ, ನಿರ್ವಿಣ್ಣಳನ್ನಾಗಿ ಮಾಡಿತು. ರಾಣಿಯು ತಂದ್ರೀದಶೆ ಯಲ್ಲಿರುವಾಗಲೇ ತನ್ನ ರಮಣನನ್ನು ಕುರಿತು

ರಾಣೀ :—

ನಾಥ! ನನ್ನನ್ನು ಮದನನು ಅತಿಯಾಗಿ ಬಾಧಿಸುತ್ತಲಿದ್ದಾನೆ. ॥೩೩-೩೪॥

**ಋತುಂ ಮೇ ದೇಹಿ ಭರ್ತಸ್ತ್ವಂ ನೋ ಚೇನ್ಮೃತ್ಯುರ್ಭವೇನ್ಮಮ ।**

**ಕ ಉವಾಚ :—**

**ಸೋऽಪಿ ವಂಧ್ಯಂ ವಿನಿಶ್ಚಿತ್ಯ ತತ್ಪತಿಂ ಕಾಮುಕಾಂ ಚ ತಾಮ್ ॥೫೫॥**

**ಸ್ವಪ್ನ ಏವ ಭರ್ತೃರೂಪೀ ಸವಿತಾ ತಾವೃತುಂ ದದೌ ।**

**ಸಾ ಪ್ರಬುದ್ಧಾ ತತಃ ಪ್ರಾಹ ಸಮುತ್ಥಾಪ್ಯ ನಿಜಂ ಪತಿಮ್ ॥೫೬॥**

ಈ ಸಮಯದಲ್ಲಿ ಯಾವ ಆಲೋಚನೆಯನ್ನೂ ಮಾಡತಕ್ಕದ್ದಲ್ಲ. ಮೊದಲು ನನಗೆ ಕಾಮತೃಪ್ತಿಯನ್ನೂ ಮಾಡು. ಅನಂತರ ಎರಡನೆಯ ಮಾತು. ನಾಥ ! ಹೆಚ್ಚು ಹೇಳಲಾರೆ. ನೀನೇನಾದರೂ ವ್ರತದ ವ್ಯಾಜದಿಂದ ನನ್ನ ಬೇಡಿಕೆಯನ್ನು ನಿರಾಕರಿಸಿದೆಯಾದರೆ ನಾನು ಪ್ರಾಣಗಳೊಂದಿಗೆ ಉಳಿಯುವಂತೆಯೇ ಇಲ್ಲ.

ಬ್ರಹ್ಮಾ :-

ವ್ರತಿಯಾದ ಚಕ್ರಪಾಣಿರಾಜನು ತನ್ನ ಪತ್ನಿಯ ಬಡಬಡಿಕೆ (ಕನವರಿಕೆ) ಯನ್ನು ಕೇಳಿದಾಗ್ಯೂ ವ್ರತಭಂಗದ ಭಯದಿಂದಲೂ, ಅವಳ ನುಡಿ ಸ್ವಾಪ್ನಿಕವಾದುದರಿಂದ ವಾಸ್ತವವಲ್ಲವೆಂಬ ನಿಶ್ಚಯ ಈತನಿಗೆ ತೋರಿ ಬಂದುದರಿಂದಲೂ ಇದನ್ನು ಗಣಿಸದೇ ಮೊದಲಿನಂತೆ ಸುಮ್ಮನೆ ನಿದ್ರಿಸಿದನು. ಈ ಸನ್ನಿವೇಶವನ್ನು ಕೂಲಂಕಷವಾಗಿ ವಿಮರ್ಶಿಸಿದ ಸೂರ್ಯನಾರಾಯಣನು ' ಕಾಮಾರ್ತಳಾದ ಕಾಮುಕಿಯನ್ನು ಈ ಸಮಯದಲ್ಲಿ ತೃಪ್ತಿಪಡಿಸದಿದ್ದರೆ ಇವಳು ಬಂಜೆಯಾಗುವಳು. ರಾಜನು ಸಕಲವನ್ನೂ ತಿಳಿದವನಾಗಿದ್ದರೂ ಈ ಸನ್ನಿವೇಶದಲ್ಲಿ ಏನೂ ತಿಳಿಯದ ಮೂಢನಂತೆ ಸುಮ್ಮನಿರುವುದನ್ನು ನೋಡಿದರೆ, ಇವನಿಗೆ ಪುಂಸ್ತ್ವವೇ ಇಲ್ಲವೆಂದು ತೋರುತ್ತದೆ. ಶೌನಕಮಹರ್ಷಿಯಾದರೋ ಈ ವ್ರತಾನುಷ್ಠಾನದಿಂದ ನಿನಗೆ ಸುಪುತ್ರನು ಜನಿಸುವನೆಂದು ವರವನ್ನಿತ್ತಿದ್ದಾನೆ. ಅವನ ಮಾತೂ ಸುಳ್ಳಾಗಬಾರದು. ಇರಲಿ, ಇವರು ಇಷ್ಟು ದಿವಸಗಳ ವರೆಗೂ ಶ್ರಮಿಸಿ, ಕಠಿಣಸಾಧ್ಯವಾದ ರೀತಿಯಲ್ಲಿ ನನ್ನನ್ನು ಕುರಿತು ತಪಸ್ಸನ್ನಾಚರಿಸಿದ್ದಾರೆ. ಈ ಸಮಯದಲ್ಲಿ ಅವರ ಕೈಯನ್ನು ಬಿಡಬಾರದು ಎಂದು ನಿಶ್ಚಯಿಸಿ, ಚಕ್ರಪಾಣಿಯ ರೂಪದಂತೆ ಆಕೃತಿಯನ್ನು ಬದಲಾಯಿಸಿಕೊಂಡುಬಂದು ರತಿವಿಲಾಸದಿಂದ ರಾಜಮಹಿಷಿಯನ್ನು

ಪತ್ನ್ಯುವಾಚ :—

ನಿಯಾವುಸ್ಥೇನ ಕಿಂ ಬ್ರಹ್ಮಂಸ್ತ್ವಯಾ ಮೇ ಖಂತುರರ್ಪಿತಃ ? ।

ಕ ಉವಾಚ :—

ಸ ಉವಾಚ ತತಸ್ತಾಂ ತು

ರಾಜೋವಾಚ :—

ನಾಹಂ ವ್ರತಮನಾಃ ಶುಭೇ ! ॥೫೭॥

ತೃಪ್ತಿಪಡಿಸಿದನು. ಕೆಲವು ಕಾಲ ಕಳೆದ ಬಳಿಕ ರಾಣಿಯು ಎಚ್ಚೆತ್ತು, ತನ್ನ ಸ್ವಾಪ್ನಿಕ ಭೋಗಾನುಭವವನ್ನು ನಿಜವೆಂದೇ ತಿಳಿದು, ಅಲ್ಲಿಯೇ ಮಲಗಿದ್ದ ರಾಜನನ್ನು ಎಚ್ಚರಗೊಳಿಸಿ, ಅವನನ್ನು ಕುರಿತು ಹೀಗೆ ನುಡಿದಳು. ॥೫೭॥

ರಾಜಪತ್ನೀ :—

ಆರ್ಯಪುತ್ರ ! ಬ್ರಾಹ್ಮಣನ ರೂಪವನ್ನು ಧರಿಸಿ ಬಂದು ನನ್ನೊಡನೆ ಭೋಗಿಸಿದೆಯಲ್ಲವೇ ? ನೀನು ವ್ರತಸ್ಥನೆಂಬುದನ್ನು ಮರೆತುಬಿಟ್ಟೆಯ ? ಈ ವ್ರತ ಪರಿಸಮಾಪ್ತಿಗೊಳ್ಳುವ ವರೆಗೂ ಬ್ರಹ್ಮಚರ್ಯವನ್ನು ಬಹಳ ಕಠಿಣವಾಗಿ ಪರಿಪಾಲಿಸಬೇಕೆಂದು ಮಹಾತ್ಮರಾದ ಶೌನಕ ಮಹರ್ಷಿಗಳು ಹೇಳಿ ಎಚ್ಚರಿಸಿದುದು ನಿನಗೆ ಈ ಸಮಯದಲ್ಲಿ ಜ್ಞಾಪಕಕ್ಕೆ ಬರಲಾರದೇ ಹೋಯಿತೇ ? ಹೀಗೇಕೆ ಮಾಡಿಬಿಟ್ಟೆ ?

ಬ್ರಹ್ಮಾ :—

ಎಂದು ಘಾಬರಿಯಿಂದ ಕೇಳಿದಳು. ರಾಣಿಯಾಡಿದ ಅಸಂಭಾವಿತವಾದ ಈ ಬಗೆಯ ನುಡಿಯನ್ನು ಕೇಳಿ ರಾಜನು ಚಕಿತನಾಗಿ ಅವಳನ್ನು ಕುರಿತು ಹೀಗೆ ಉತ್ತರಿಸಿದನು.

ರಾಜಾ :—

ಪ್ರೇಯಸಿ ! ನಾನು ವ್ರತದ ಪಾರಿಶುದ್ಧ್ಯತೆಯನ್ನು ಕಾಪಾಡುವುದರಲ್ಲೇ

ಉಪವಾಸರತಃ ಕ್ಷೀಣೋ ರರಾಮ ರವಿಭಕ್ತಿಮಾನ್ ।

ಕ ಉವಾಚ :—

ತತಃ ಪುನಃ ಪ್ರಾಹ ಸತೀ

ಪತ್ನ್ಯುವಾಚ !—

ನಾನ್ಯಂ ಜಾನೇ ಕಥಂಚನ ॥೫೮॥

ತ್ವದ್ರೂಪೇಣೈವ ಧ್ಯಾಯಾಮಿ ಸವಿತಾರಂ ವ್ರತೇ ಸ್ಥಿತಾ ।
ಋತುಜೇನ ಚ ದಗ್ಧಾಹಂ ವಹ್ನಿನಾಂತರ್ಗತೇನ ಹ ॥೫೯॥

ಆಸಕ್ತಮನಸ್ಕನಾಗಿರುವೆನಲ್ಲವೇ ? ॥೫೭॥

ಒಂದು ತಿಂಗಳಿಂದಲೂ ಯಾವ ಆಹಾರವನ್ನೂ ಸ್ವೀಕರಿಸದೇ ಇರುವುದರಿಂದ ನನ್ನ ದೇಹದ ಶಕ್ತಿಯು ಕುಂಠಿತವಾಗಿ ಹೋಗಿದೆ. ನಾನು ಬಹಳ ಮಟ್ಟಿಗೆ ಕ್ಷಯಿಸಿ ಹೋಗಿದ್ದೇನೆ. ಹೀಗಿರುವಾಗ ನನಗೆ ಕಾಮವಾಸನೆ ಎಂದಿಗಾದರೂ ಉಂಟಾದೀತೇ? ಮೇಲಾಗಿ ನಾವು ಕೈಗೊಂಡಿರುವ ವ್ರತವೋ, ಅತ್ಯಸಾಧಾರಣವಾದುದು. ಸರ್ವದಾ ನಾನು ಭಗವಾನ್ ದಿನಕರನನ್ನು ಸ್ಮರಿಸುತ್ತಲೇ ಇರುವೆನು. ನಿನಗೆಲ್ಲೋ ಕನಸು ಬಿದ್ದಿರಬಹುದು.

ಬ್ರಹ್ಮ:—

ಈ ಮಾತುಗಳನ್ನು ಕೇಳಿದ ಮೇಲಂತೂ ರಾಣಿಯು ಒಮ್ಮೆಲೇ ಬೆಚ್ಚಿಬಿದ್ದಳು. ತಾನು ಅನುಭವಿಸಿದ ಭೋಗವು ಸ್ವಾಪ್ನಿಕವಲ್ಲವೆಂಬುದಂತೂ ಅವಳಿಗೆ ಮನದಟ್ಟಾಗಿದ್ದಿತು. ಎಂದ ಮೇಲೆ ಇದರ ಅರ್ಥವೇನು ? ಎಂದು ಅತಿಯಾಗಿ ಚಿಂತಿಸಿದಳು. ಯಾವ ಅಚಾತುರ್ಯ ನಡೆದುಹೋಯಿತೋ ಎಂದು ಬಹಳ ಹೆದರಿ ನಡುಗಿದಳು. ಬಹಳ ಕಾಲ ಕಳೆದ ಬಳಿಕ ಇದ್ದುದರಲ್ಲೇ ಸ್ವಲ್ಪ ಸಮಾಧಾನವನ್ನು ತಂದುಕೊಂಡು ಅವನತಮುಖಿಯಾಗಿ ಗಂಡನನ್ನು ಕುರಿತು ಹೆದರುತ್ತ ಮೆಲ್ಲಗೆ ಹೀಗೆ ನುಡಿದಳು.

ರಾಣೀ :-

ಪತಿದೇವ! ಮತ್ತಾರೂ ಇಲ್ಲಿಗೆ ಬಂದಂತೆ ಕಾಣಿಸಲಿಲ್ಲ? ಎಷ್ಟೆಷ್ಟು ಸೂಕ್ಷ್ಮರೀತಿ

ಕ ಉವಾಚ :—

ತತಃ ಪುನಶ್ಚಕ್ರಪಾಣಿರೂಚೇ ತಾಂ ಪ್ರಿಯಭಾಷಿಣೀಮ್ ।

ನೃಪ ಉವಾಚ :—

ತುಷ್ಟೋಽಸೌ ಸವಿತಾ ಕಾಂತೇ । ನಮಸ್ಕಾರೈಶ್ಚ ಭೋಜನೈಃ ॥೬೦॥

---

ಯಿಂದ ಜ್ಞಾಪಿಸಿಕೊಂಡರೂ ನೀನೊಬ್ಬನೇ ನನಗೆ ದೃಗ್ಗೋಚರನಾದವನೇ ಹೊರತು, ಬೇರಾರೂ ಆಗಿರಲಾರರು. ಈ ವ್ರತವನ್ನಾರಂಭಿಸಿದ ಲಾಗಾಯಿತು ಶ್ರೀ ಸೂರ್ಯನಾರಾಯಣನನ್ನು ನಿನ್ನ ರೂಪದಿಂದಲೇ ಧ್ಯಾನಿಸುತ್ತಲಿದ್ದೆನು. ಈ..... ಈ..... ಘಟನೆಯು ತತ್ಪರಿಣಾಮವಾಗಿದ್ದರೂ ಆಗಿರಬಹುದು. ಏನೇ ಇರಲಿ, ನಾನಂತೂ ಗರ್ಭವನ್ನು ಧರಿಸಿರುವೆನು. ಈ ಗರ್ಭವೋ ತಪ್ತಾಯಃಪಿಂಡ (ಕಾದ ಕಬ್ಬಿಣ) ದಂತೆ, ನನ್ನ ಉದರವನ್ನು ಎಡೆ ಬಿಡದೆ, ದಹಿಸುತ್ತಲಿರುವುದು. ॥೫೯॥

ಬ್ರಹ್ಮಾ :—

ತನ್ನ ಪ್ರಿಯಪತ್ನಿಯು 'ನಾನು ಗರ್ಭವತಿಯಾಗಿರುವೆನು' ಎಂದು ನುಡಿದ ಸಂತೋಷದ ಸುದ್ದಿಯನ್ನು ಕೇಳಿ ರಾಜನಾದ ಚಕ್ರಪಾಣಿಯು ಬಹಳ ಹರ್ಷಿತನಾದನು. ಸರಳಾಂತಃಕರಣಿಯೂ ದೈವ, ಬ್ರಾಹ್ಮಣ ಮತ್ತು ಮಂತ್ರಗಳಲ್ಲಿ ಸಂಪೂರ್ಣ ವಿಶ್ವಾಸ ಉಳ್ಳವನೂ ಆದ ರಾಜನು 'ಮತ್ತೊಬ್ಬನಿಂದ ಗರ್ಭ ಉದಿಸಿತಲ್ಲ' ಎಂದು ರಾಣಿಗೆ ಉಂಟಾದ ಕೈಂಕೃತಿ (ಮಾನಸಿಕ ವೇದನೆ) ಯನ್ನು ತಪ್ಪಿಸಲಿಕ್ಕಾಗಿ ಮೃದು-ಮಧುರ ಮಾತುಗಳಿಂದ ದೇವಿಯನ್ನು ಸಂತೈಸತೊಡಗಿದನು.

ರಾಜಾ :—

ಕಾಂತೇ! ನಾವು ಭಕ್ತಿಯಿಂದ ಆಚರಿಸಿದ ಸೂರ್ಯಮಂತ್ರಜಪ, ನಮಸ್ಕಾರ ಮತ್ತು ಬ್ರಾಹ್ಮಣಭೋಜನ ಇವೇ ಮೊದಲಾದ ನಿಯಮಿತಾನುಷ್ಠಾನಗಳಿಂದ ದಿನಮಣಿಯು ಸಂತುಷ್ಟನಾಗಿದ್ದಾನೆ. ॥೬೦॥

ಬ್ರಾಹ್ಮಣಾನಾಂ ಗವಾಂ ದಾನೈರುಪವಾಸೈರ್ಜಪೈರಪಿ ।
ಆವಾಂ ಸಿದ್ಧಿಂ ದದೌ ಸಮ್ಯಕ್ಪುತ್ರಸ್ತವ ಭವಿಷ್ಯತಿ　　॥೬೦॥

ಕ ಉವಾಚ :—

ದಿನೇ ದಿನೇ ಗರ್ಭವೃದ್ಧೌ ತಸ್ಯಾಸ್ತಾಪೋಽಭಿವರ್ಧತೇ ।
ಸಾ ಮುಮೂರ್ಷುಶ್ಚಂದನಾನಿ ಸೋಶೀರಾಣಿ ನಿಷೇವತೇ　　॥೬೨॥

ಲಿಲೇಪಾಙ್ಗೇ ಚ ಕರ್ಪೂರಂ ತಾಪೋ ನಾಸ್ಯಾಃ ಶಶಾಮ ಚ ।
ನ ಚಾರ್ದ್ರವಸ್ತ್ರಪವನೈಸ್ತಸ್ಯಾ ಸಖಿಭಿಃ ಸಹ　　॥೬೩॥

ಬ್ರಾಹ್ಮಣರನ್ನು ಅರ್ಚಿಸಿ ತೃಪ್ತಿಪಡಿಸುವುದರಲ್ಲಾಗಲೀ, ಸಾಲಂಕೃತ ಗೋಗಳನ್ನು ದಾನಮಾಡುವುದರಲ್ಲಾಗಲೀ, ಉಪವಾಸ, ನಾಮಜಪ ಈ ಆಚರಣೆಯಲ್ಲಾಗಲೀ ನಾವು ಎಳ್ಳಷ್ಟೂ ನ್ಯೂನಮರೆತಿರುವುದಿಲ್ಲ. ಆದುದರಿಂದಲೇ ಅಗಣಿತ ಗುಣಪರಿಪೂರ್ಣನಾದ ಅರ್ಯಮನು ನಮಗೆ ಸಿದ್ಧಿಯನ್ನು ಅನುಗ್ರಹಿಸಿದ್ದಾನೆ. ನಿನಗೆ ಸು-ಪುತ್ರನು ಜನಿಸುವನು ॥೬೦॥

ಬ್ರಹ್ಮಾ:—

ವ್ಯಾಸ ! ಮುಂದಿನ ಅದ್ಭುತವನ್ನಾದರೂ ಕೇಳು. ರಾಣಿಯ ಗರ್ಭಕೋಶವನ್ನು ಪ್ರವೇಶಿಸಿದ ರವಿಯ ರೇತವು ದಿನೇ ದಿನೇ ಅಭಿವೃದ್ಧಿಯನ್ನು ಹೊಂದಲಾರಂಭಿಸಿತು. ಇದು ಪಿಂಡರೂಪವಾಗಿ ವೃದ್ಧಿಯಾದಂತೆಲ್ಲ ರಾಣಿಗೆ ಸಂತಾಪವು ಹೆಚ್ಚತೊಡಗಿತು. ಇದರಿಂದ ರಾಣಿಯು ಮೃತ್ಯುಮುಖರಾದವರಂತೆ ಮಿತಿಮೀರಿದ ಯಾತನೆಯನ್ನು ಅನುಭವಿಸಲಾರಂಭಿಸಿದಳು. ಅಂತಸ್ತಾಪವನ್ನು ತಡೆದುಕೊಳ್ಳಲಾರದೇ, ತನುವಾದ ಚಂದನವನ್ನು ದೇಹಕ್ಕೆಲ್ಲ ಸರ್ವದಾ ಲೇಪಿಸಿಕೊಳ್ಳುವಳು. ॥೬೨॥

ಪಚ್ಚಕರ್ಪೂರವನ್ನು ಆ ಚಂದನದ ಲೇಪದ ಮೇಲೆ ಒತ್ತಿಕೊಂಡಳು. ಯಾವ ಯಾವ ಬಗೆಯಿಂದ ಪ್ರತೀಕಾರವನ್ನು ಇವಳು ಮಾಡಿದರೂ ತಾಪವು ಕಡಿಮೆಯಾಗ

ತತ್ಯಾಜ ಸಿಂಧುತೀರೇ ತಂ ಗರ್ಭಂ ಗತ್ವಾ ಮಹತ್ತರಮ್ ।
ಆಯಯೌ ಸಾಥ ವಿಶ್ರಾಂತಾ ಸಖೀಭಿರ್ನಿಜಮಂದಿರಮ್ ॥೩೪॥

ನಿವೇದ್ಯ ಭರ್ತ್ರೇ ತ್ಯಕ್ತಂ ತಂ ಗೃಹಕಾರ್ಯರತಾಭವತ್ ॥೩೫॥

ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ 'ಸಿಂಧೂತ್ಪತ್ತಿವರ್ಣನಂ'
ನಾಮ-ತ್ರಿ-ಸಪ್ತತಿತಮೋಽಧ್ಯಾಯಃ ಸಮಾಪ್ತಃ

---

ಲೊಲ್ಲದು. ಒದ್ದೆಯಾದ ವಸ್ತ್ರವನ್ನು ಉಟ್ಟು-ತೊಟ್ಟು ನೋಡಿದಳು. ಲಾವಂಚದ ಬೀಸಣಿಗೆಗಳನ್ನು ತೋಯಿಸಿ, ತನ್ನ ಸುತ್ತಲೂ ನಿಂತು ಗಾಳಿಯನ್ನು ಯಾವಾಗಲೂ ಬೀಸುತ್ತಿರುವಂತೆ ನೂರಾರು ದಾಸಿಯರನ್ನು ನಿಯಮಿಸಿದಳು. ಯಾವ ಯಾವ ಉಪಾಯವೂ ಫಲಿಸದಂತಾಗಲು ಕೊನೆಗೆ ಸಖಿಯರೊಡನೆ ಸಿಂಧೂನದೀತೀರಕ್ಕೆ ವಿಹಾರಾರ್ಥವಾಗಿ ಹೊರಟುಹೋದಳು. ॥೩೪॥

ಪರ್ವತದಷ್ಟು ಗುರುತರವಾದ ಗರ್ಭವನ್ನು ಧರಿಸಿರಲಿಕ್ಕೆ ಇವಳಿಂದ ಮುಂದೆ ಒಂದು ಕ್ಷಣ ಕಾಲ ಸಹ ಶಕ್ಯವಾಗಲಿಲ್ಲ. ಆಗ ರಾಣಿಯು ವಿಧಿ ಇಲ್ಲದೇ ಅದನ್ನು ಬಲಾತ್ಕಾರದಿಂದ ಸಿಂಧೂನದಿಯ ತೀರದಲ್ಲಿ ಒಂದೆಡೆ ತ್ಯಜಿಸಿಬಿಟ್ಟಳು. ಇದರಿಂದ ರಾಣಿಯ ದೇಹ, ಮನಸ್ಸುಗಳೆರಡೂ ಬಹಳ ಹಗುರಾದವು. ಗರ್ಭಪಾತದಿಂದುಟಾದ ವಿಶೇಷ ಶ್ರಮವನ್ನು ಸಖಿಯರ ಸಮಯೋಚಿತ ಉಪಚಾರ, ಚಿಕಿತ್ಸೆಗಳಿಂದ ಪರಿಹರಿಸಿಕೊಂಡು, ಅವರಿಂದೊಡಗೂಡಿ ತನ್ನ ಮನೆಗೆ ಹಿಂದಿರುಗಿ ಬಂದಳು.

ಅರಮನೆಗೆ ಬಂದಕೂಡಲೇ ತನ್ನರಮಣನನ್ನು ಸಂಧಿಸಿ, ತಾನು ಗರ್ಭವನ್ನು ಸಿಂಧೂನದಿಯ ತೀರದಲ್ಲಿ ವಿಧಿ ಇಲ್ಲದೇ ತ್ಯಜಿಸಿದ ಯಥಾರ್ಥ ಸಂಗತಿಯನ್ನು ಅರುಹಿ, ಎಂದಿನಂತೆ ಗೃಹಕಾರ್ಯಗಳಲ್ಲಿ ನಿರತಳಾದಳು. ॥೩೫॥

ಇಲ್ಲಿಗೆ ಶ್ರೀ ಗಣೇಶಪುರಾಣದ ಉತ್ತರಖಂಡದಲ್ಲಿ ' ಸಿಂಧೂತ್ಪತ್ತಿ ವರ್ಣನೆ '
ಎಂಬಲ್ಲಿಗೆ ಎಪ್ಪತ್ತುಮೂರನೆಯ ಅಧ್ಯಾಯಾನುವಾದವು
ಮುಗಿದುದು.

॥ ಶ್ರೀ ಗಣೇಶಾಯ ನಮಃ ॥

## ಚತುಸ್ಸಪ್ತತಿತಮೋಽಧ್ಯಾಯಃ

**ಕ ಉವಾಚ :—**

**ತ್ಯಕ್ತೇ ಗರ್ಭೇ ತಯಾ ಸಿಂಧೌ ಬಾಲೋಽಜನಿ ಮಹಾಬಲಃ ।**
**ತೇಜಸ್ವೀ ವಿಕರಾಲಾಸ್ಯೋ ದೀರ್ಘಫಾಲಸ್ತ್ರಿಲೋಚನಃ ॥೧॥**

**ರಕ್ತಕೇಶಜಟಾಭಾರಶ್ಚಕ್ರಪಾಣಿಸ್ತ್ರಿಶೂಲಭೃತ್ ।**
**ಬಾಲಶಬ್ದೇನ ತಸ್ಯಾಥ ಚಕಂಪೇ ಭುವನತ್ರಯಮ್ ॥೨॥**

। ಶ್ರೀ ಗಣೇಶಾಯ ನಮಃ ।

### ೭೪ನೆಯ ಅಧ್ಯಾಯ.

ಬ್ರಹ್ಮ : —

ವ್ಯಾಸ ! ರಾಣಿಯು ಗರ್ಭವನ್ನು ಸಿಂಧೂನದಿಯ ಸಮೀಪ ಪ್ರದೇಶದಲ್ಲಿ ತ್ಯಜಿಸಿ ಬಂದಳಷ್ಟೆ ? ಆ ಗರ್ಭಪಿಂಡದಿಂದ ಮಹಾ ಬಲಶಾಲಿಯಾದ ಒಬ್ಬ ಬಾಲಕನು ಜನಿಸಿದನು. ಅವನ ತೇಜಸ್ಸು ಅತ್ಯಸಾಧಾರಣವಾಗಿದ್ದಿತು. ಮುಖವಂತೂ ಬಹಳ ಭಯಂಕರಾಕಾರ ಉಳ್ಳದ್ದು. ವಿಶಾಲವಾದ ಹಣೆಯೂ ಪರಮೇಶ್ವರನಿಗೆ ಇರುವಂತೆ ಮೂರು ಲೋಚನಗಳೂ ಇದ್ದವು. ॥೧॥

ಕೆಂಪಾಗಿದ್ದ ತನ್ನ ದೀರ್ಘ, ವಿಪುಲ ಶಿರೋರುಹಗಳನ್ನು ಜಡೆಯಂತೆ ತಲೆಯಲ್ಲಿ ಧರಿಸಿದ್ದನು. ಒಂದು ಕೈಯಲ್ಲಿ ಚಕ್ರ, ಮತ್ತೊಂದು ಕೈಯಲ್ಲಿ ತ್ರಿಶೂಲ ಇವನ್ನು ಧರಿಸಿ, ಮತ್ತಷ್ಟು ಭಯಂಕರನಾಗಿ ಕಂಡುಬರುತ್ತಲಿದ್ದನು. ಆ ಶಿಶು ಅಳಲಾರಂಭಿಸಿತು. ಇದರ ಅಳುವಿನ ಧ್ವನಿಯಿಂದ ತ್ರಿ-ಭುವನಗಳೇ ಗಡಗಡನೆ ನಡುಗಿಹೋದವು. ॥೨॥

ಆಜಾನುಬಾಹುರಾಕ್ರಾಂತುಮಿಯೇಷ ವಿಷ್ಟಪತ್ರಯಮ್ ।
ಚುಕ್ಷುಭೇ ಸಾಗರಸ್ತೇನ ಯಾದೋಭಿರ್ಮೀನಿಸತ್ತಮ ॥ ॥೩॥
ತತ್ರ ಸ್ಥಿತಸ್ತು ಬಾಲೋಽಸೌ ಸಮುದ್ರಮುಪಶೋಷಯತ್ ।
ಸಮುದ್ರ ಉವಾಚ :—
ಜೀವನಾಯ ಮಮ ಸುತಂ ನೇಷ್ಯ ಏನಂ ನೃಪಾಲಯಮ್ ॥೪॥

---

ರಾಕ್ಷಸರು ಅಮಾನುಷದೇಹಿಗಳು. ಅವರು ಜನಿಸುವಾಗಲೇ ಮಾನವರ ಗಣನೆಯಲ್ಲಿ ಮಧ್ಯ ವಯಸ್ಸಿನವರಂತೆಯೇ ಇರುವರು. ಆದುದರಿಂದಲೇ ಆಜಾನುಬಾಹುವೂ, ಮಹಾ ಪರಾಕ್ರಮಶಾಲಿಯೂ ಆದ ಈ ಬಾಲಕನು ಹುಟ್ಟಿದ ಕೂಡಲೇ ಸ್ವರ್ಗಲೋಕವನ್ನು ಆಕ್ರಮಿಸೋಣವೆಂದು ಸಂಕಲ್ಪಿಸಿ ಅದಕ್ಕಾಗಿ ಪ್ರಯತ್ನಪಟ್ಟನು. ಮುನಿವರ! ಕೇಳು. ಇವನ ಹುಂಕಾರ, ಮೇಲಕ್ಕೇಳುವಾಗ ತೋರಿದ ರಭಸ ಇವುಗಳಿಂದಾಗಿ ವಾಯು ಒತ್ತಡವಾಗಲು, ಗಾಳಿಯು ಭರ ಭರ ಎಂದು ಬಹಳ ಬಿರುಸಾಗಿ ಬೀಸತೊಡಗಿತು. ಗಾಳಿಯ ಹೊಡೆತಕ್ಕೆ ಸಿಲುಕಿದ ಗಿಡ–ಮರಗಳು ನೆಲದ ವರೆಗೂ ಬಗ್ಗಿ ತಗ್ಗಿ ಅಲ್ಲಾಡತೊಡಗಿದವು. ಗಾಳಿಯ ವೇಗದಿಂದ ಸಮುದ್ರದ ಜಲವೆಲ್ಲ ಅಲ್ಲೋಲ-ಕಲ್ಲೋಲವಾಗಿ ಚಲಿಸಿ, ದೊಡ್ಡ ದೊಡ್ಡ ತೆರೆಗಳಾಗಿ ಪರಿಣಮಿಸಿದವು. ಸಮುದ್ರವು ಪ್ರಕ್ಷೋಭಗೊಂಡು ಉಕ್ಕಲಾರಂಭಿಸಿತು. ॥೩॥

ಉಕ್ಕುತ್ತಿದ್ದ ಸಮುದ್ರದ ಅಲೆಗಳು ತೀರದಲ್ಲಿದ್ದ ಮಗುವಿನ ವರೆಗೂ ಬಂದು ಹಿಂಸಿಸಲಾರಂಭಿಸಿದುದನ್ನರಿತ ಬಾಲಕನು ತನ್ನ ಅಸಾಧಾರಣ ಸಾಮರ್ಥ್ಯದಿಂದ ಆ ಸಮುದ್ರವನ್ನೆಲ್ಲ ಶೋಷಿಸಲಾರಂಭಿಸಿದನು. ಆಗ ಸಮುದ್ರರಾಜನು ಗಾಬರಿಗೊಂಡು.

ಸಮುದ್ರ

ನನ್ನ ಸ್ಥಿತಿಗೇ ಅಪಾಯವನ್ನುಂಟುಮಾಡುತ್ತಿರುವ ಈ ಬಾಲಕನನ್ನು ಹೆಚ್ಚು

ಕ ಉವಾಚ :—

ಇತ್ಯಾಸಿನಾಯ ತಂ ಬಾಲಂ ಸಮುದ್ರೋ ನೃಪಮಂದಿರಮ್ ।

ಸಮುದ್ರ ಉವಾಚ :—

ತವ ಪತ್ನ್ಯಾತ್ಯಾಜಿ ಗರ್ಭೋಽಯಂ ದುಃಸಹತ್ವಾನ್ಮಮೋದರೇ ॥೫॥

ಕ ಉವಾಚಃ —

ದಂಪತ್ಯೋಃ ಪುರತಃ ಸ್ಥಾಪ್ಯ ಪ್ರೋವಾಚೇವಂ ದ್ವಿಜಸ್ತದಾ ॥

ದ್ವಿಜ ಉವಾಚ :—

ಉಗ್ರೋ ಬಾಲಸ್ತತೋ ಜಾತೋಽಖಿಲಲೋಕಭಯಂಕರಃ ॥೬॥

---

ಕಾಲ ಇಲ್ಲಿ ನಿಲ್ಲಗೊಡಬಾರದು. ಆದಷ್ಟು ಬೇಗನೆ ಇವನನ್ನು ಇವನ ತಂದೆಯಾದ ಚಕ್ರಪಾಣಿ ಮಹಾರಾಜನ ಅರಮನೆಗೆ ಸಾಗಿಸಿಬಿಡುವೆನು. ||೪||

ಬ್ರಹ್ಮ :—

ಎಂದು ನುಡಿದು ಆ ರಾಜಕುಮಾರನನ್ನು ಎತ್ತಿಕೊಂಡು ಮಹಾರಾಜನ ಅರಮನೆಯ ಸಮೀಪಕ್ಕೆ ಬಂದು ರಾಜನನ್ನು ಉದ್ದೇಶಿಸಿ, ಬಾಲಕನ ಇತಿವೃತ್ತವನ್ನೆಲ್ಲ ವಿವರಿಸಿ ಹೇಳಿದನು.

ಸಮುದ್ರರಾಜ :—

ಮಹಾರಾಜ! ಗರ್ಭಿಣಿಯಾಗಿದ್ದ ನಿನ್ನ ಪಟ್ಟದರಸಿಯು ಅತ್ಯದ್ಭುತವಾದ ಈ ಗರ್ಭದ ಹೊರೆಯನ್ನು ಹೊತ್ತು ಅದರ ತಾಪವನ್ನು ತಡೆದುಕೊಳ್ಳಲಾರದೇ ಅದನ್ನು ನನ್ನ ಉದರದಲ್ಲಿ ಬಿಸುಟು ಹೋದಳು. ||೫||

ಬ್ರಹ್ಮ :—

ಎಂದು ಹೇಳಿ, ಮಗುವನ್ನು ರಾಜದಂಪತಿಗಳ ಸಮ್ಮುಖದಲ್ಲಿರಿಸಿ, ಅವ

ಯಸ್ಯ ಪ್ರಥಮಶಬ್ದೇನ ಕಂಪಿತಂ ಭುವನತ್ರಯಮ್ ।
ನೇತ್ರಾಭ್ಯಾಂ ವೀಕ್ಷಿತುಂ ಶಕ್ಯೋsತ ಏನ್ಮೈನಮುಪಾನಯಮ್ ॥೭॥

ಕ ಉವಾಚ :-

ಇತ್ಯುಕ್ತ್ವಾ ಬಾಲಕಂ ಮುಕ್ತ್ವಾಂತರ್ದಧೇ ಸಾಗರಸ್ತದಾ ।
ತತ ಏನಂ ಕರಾಭ್ಯಾಂ ಸಾ ಕಟೌ ದಧ್ರೇ ನೃಪಾಂಗನಾ ॥೮॥

ರನ್ನು ಕುರಿತು ಮತ್ತೆ ಹೀಗೆ ನುಡಿದನು.

ದ್ವಿಜ :—

ಇವನು ಬಾಲಕನಾಗಿರುವಾಗಲೇ ಅತ್ಯುಗ್ರವಾದ:ಕರ್ಮವನ್ನು ಆಚರಿಸಿರು ವುದನ್ನು ನೋಡಿದರೆ, ಮುಂದೆ ಇವನು ಲೋಕಭಯಂಕರನಾಗುವನೆಂಬುದರಲ್ಲಿ ಯಾವ ಸಂದೇಹವೂ ಇರುವುದಿಲ್ಲ. ॥೬॥

ಏತಕ್ಕೆಂದರೆ, ಇವನು ಜನಿಸಿದಾಗ ಮೊದಲು ಬಾರಿ ಅತ್ತ ಧ್ವನಿಯೇ ಬಹಳ ಭಯಂಕರವಾಗಿದ್ದು, ತ್ರಿಭುವನಗಳನ್ನೆಲ್ಲ ನಡುಗಿಸಿಬಿಟ್ಟಿತು. ಇವನನ್ನು ಕಣ್ಣಿನಿಂದ ನೋಡುವುದಕ್ಕೆ ಸಹ :ನನ್ನಿಂದ ಸಾಧ್ಯವಿಲ್ಲ. ಅಂತಹ ಪ್ರಚಂಡ ತೇಜಸ್ಸು ಈತನದು. ಆದುದರಿಂದಲೇ ಈತನನ್ನು ನಿನ್ನ ಬಳಿಗೆ ಕರೆದು ತಂದಿರುವೆನು. ॥೭॥

ಬ್ರಹ್ಮ :—

ಹೀಗೆ ಹೇಳಿ, ಬಾಲಕನನ್ನು ರಾಜ–ರಾಣಿಯರ ಸಮೀಪದಲ್ಲಿ ಬಿಟ್ಟು, ಬ್ರಾಹ್ಮಣನ ರೂಪದಿಂದ ಮಗುವನ್ನು ಕರೆದುತಂದಿದ್ದ ಸಾಗರರಾಜನು ತನ್ನ ಪಾಡಿಗೆ ತಾನು ಅಂತರ್ಧಾನವನ್ನು ಹೊಂದಿದನು. ಅನಂತರ ರಾಜಪತ್ನಿಯಾದ ಉಗ್ರೆಯು ತನ್ನ ಎರಡೂ ಕೈಗಳನ್ನು ಮುಂದಕ್ಕೆ ಚಾಚಿ, ಪ್ರೇಮದಿಂದ ಎತ್ತಿಕೊಂಡು ಕಟಿಪ್ರದೇಶದಲ್ಲಿ ಕುಳ್ಳಿರಿಸಿಕೊಂಡಳು. ॥೮॥

**ಸ್ಥಾಪಯಿತ್ವಾ ದದೌ ಪ್ರೇಮ್ಣಾ ಸ್ತನಪಾನಂ ಮುದಾನ್ವಿತಾ ॥**
**ಉಭಾವಾನಂದಯುಕ್ತೌ ತೌ ದಂಪತೀ ಪುತ್ರದರ್ಶನಾತ್ ॥೯॥**

**ಯಥಾ ಚಿರಂ ಯೋಗನಿಷ್ಠೋ ಲಬ್ಧ್ವಾ ಬ್ರಹ್ಮಾಮೃತಂ ಪರಮ್ ॥**
**ತತ ಆಕಾರಯಾಮಾಸ ಬ್ರಾಹ್ಮಣಾನ್ ಸುಹೃದೋಽಪಿ ಚ ॥೧೦॥**

**ಜ್ಯೋತಿರ್ವಿದ್ಭಿರ್ವಿಚಾರ್ಯಾಸ್ಯ 'ಸಿಂಧುರಿ'ತ್ಯಭಿಧಾಂ ಶುಭಾಮ್ ।**
**ರಾಜ್ಞೀ ಚಕ್ರೇ ನೃಪಶ್ಚಾಸ್ಯ ಜಾತಕರ್ಮ ಯಥಾವಿಧಿ ॥೧೧॥**

**ಕೃತ್ವಾ ದದೌ ತತೋ ದಾನಮನೇಕಂ ಹರ್ಷನಿರ್ಭರಃ ॥**

---

ಮಗನ ಮುದ್ದು (ಹೆತ್ತವರಿಗೆ ಹೆಗ್ಗಣವೇ ಮುದ್ದು, ಕೂಡಿದವರಿಗೆ ಕೋಡಗವೇ ಮುದ್ದು ಎಂಬ ಮಾತು ಸುಳ್ಳಲ್ಲ) ಮುಖವನ್ನು ನೋಡಿ ಬಹಳ ಹರ್ಷಗೊಂಡು, ಅದಕ್ಕೆ ಸ್ತನ್ಯವನ್ನು ಪಾನಮಾಡಿಸಿದಳು. ರಾಜದಂಪತಿಗಳಿಬ್ಬರೂ ಮಗನನ್ನು ನೋಡಿ ಸಂತೋಷಾತಿರೇಕದಿಂದ ಹಿಗ್ಗಿಹೋದರು. ॥೯॥

ಬಹಳ ಕಾಲದವರೆಗೆ ಕಠಿಣವಾಗಿ ಯೋಗಾಭ್ಯಾಸವನ್ನು ಮಾಡುತ್ತಲಿರುವ ಸಾಧಕನಿಗೆ ಪರಮೋತ್ಕೃಷ್ಟವೂ, ಅಮೃತಪ್ರಾಯವೂ ಆದ ಬ್ರಹ್ಮಾನಂದವು ಅನುಭವಕ್ಕೆ ಬಂದರೆ, ಯಾವ ಹರ್ಷ ಉಂಟಾಗುವುದೋ, ಅಂತಹ ಆನಂದ ಪುತ್ರಮುಖಸಂದರ್ಶನದಿಂದ ಇವರಿಗೆ ಉಂಟಾಯಿತು. ಅನಂತರ ಚಕ್ರಪಾಣಿ ಮಹಾರಾಜನು ಅನೇಕ ಮಂದಿ ಬ್ರಾಹ್ಮಣೋತ್ತಮರನ್ನೂ, ಸುಹೃನ್ಮಂಡಲಿಯನ್ನೂ ಅತಿಶೀಘ್ರವಾಗಿ ತನ್ನ ಬಳಿಗೆ ಬರಮಾಡಿಕೊಂಡನು. ॥೧೦॥

ಆಸ್ಥಾನದ ದೈವಜ್ಞರನ್ನು ಕರೆಕಳಿಸಿ ಅವರೊಡನೆ ಸಮಾಲೋಚನೆ ಮಾಡಿ, ಮಗುವಿಗೆ 'ಸಿಂಧು' ಎಂಬ ಶುಭ ನಾಮವನ್ನು ಅಂಕಿತಗೊಳಿಸಿದನು. ರಾಜ–ರಾಣಿಯರು ಬಹಳ ಸಂಭ್ರಮದಿಂದ ಜಾತಕರ್ಮರೂಪವಾದ ಶಾಸ್ತ್ರೀಯ ಸಂಸ್ಕಾರವನ್ನು ವಿಧಿಗೆ ಸ್ವಲ್ಪವೂ ವ್ಯತ್ಯಾಸವಾಗದಂತೆ ನೆರವೇರಿಸಿದರು. ॥೧೧॥

ಈ ಶುಭ ಕರ್ಮದ ಸಾಪ್ಗುಣ್ಯಸಿದ್ಧಿಯಾಗುವುದಕ್ಕಾಗಿ ಬಹಳ ಬೆಲೆ ಬಾಳುವ

ಅನೇಕೇಭ್ಯೋ ದ್ವಿಜಾತಿಭ್ಯೋ ವಸ್ತ್ರಾಣಿ ವಿವಿಧಾನಿ ಚ ||೧೨||

ದಾಪಯಾಮಾಸ ನಗರೇ ಪತಾಕಾಭಿರಲಂಕೃತೇ ||
ವಾದ್ಯತ್ಸು ಸರ್ವವಾದ್ಯೇಷು ಶರ್ಕರಾಂ ಚ ಗೃಹೇ ಗೃಹೇ ||೧೩||

ಗತೇಷು ಸರ್ವಲೋಕೇಷು 'ರಕ್ತಾಂಗ' ಇತಿ ನಾಮ ಚ ||
ಚಕ್ರತುರ್ದಂಪತೀ ಸ್ನೇಹಾದಥಾಮಾತ್ಯೌ ಸಮೂಚತು : ||೧೪||

ಅಮಾತ್ಯಾವೂಚತು: :—

ಉಗ್ರಾಯಾಸ್ತನಯಶ್ಚಾಯಮುಗ್ರಮುದ್ರಾಧರೋಽಪಿ ಚ ||

---

ಅನೇಕ ಅಪೂರ್ವ ವಸ್ತುಗಳನ್ನು ದಾನವಾಗಿ ಕೊಟ್ಟನು. ದಾನವನ್ನು ವಿತರಿಸುವ ಸಮಯದಲ್ಲಿ ಮಹಾರಾಜನು ಹರ್ಷಭರಿತನಾಗಿದ್ದನು. ಇಷ್ಟೇ ಅಲ್ಲದೇ, ಅನೇಕ ಮಂದಿ ಬ್ರಾಹ್ಮಣೋತ್ತಮರಿಗೆ ಬಗೆ ಬಗೆಯ ಮಹಾರ್ಹ ವಸ್ತ್ರಗಳನ್ನು ಇತ್ತನು. ||೧೨||

ಪುತ್ರೋತ್ಸವದ ಸಂತೋಷ ಸಮಾರಂಭಕ್ಕಾಗಿ ಇಡೀ ರಾಜಧಾನಿಯೇ ತಳಿರು–ತೋರಣ ಮತ್ತು ಬಾವುಟಗಳಿಂದ ಅಲಂಕೃತವಾಗಿದ್ದಿತು. ಸಕಲ ವಿಧ ಮಂಗಲ ವಾದ್ಯಗಳೂ ಸುಶ್ರಾವ್ಯವಾಗಿ ಧ್ವನಿಗೈಯುತ್ತಲಿದ್ದವು. ರಾಜನು ನಗರದಲ್ಲಿದ್ದ ಪ್ರತಿಯೊಂದು ಮನೆಗೂ ಯಥೇಷ್ಟವಾಗಿ ಸಕ್ಕರೆಯನ್ನು ಹಂಚಿಸಿದನು. ||೧೩||

ಪುತ್ರೋತ್ಸವದ ಮಂಗಲಕಾರ್ಯಕ್ಕಾಗಿ ನೆರೆದಿದ್ದವರೆಲ್ಲರೂ ತಮ್ಮ ತಮ್ಮ ನಿಯಮಿತ ಕಾರ್ಯಗಳು ಮುಗಿದ ಒಡನೆಯೇ ಮನೆಗಳಿಗೆ ತೆರಳಿದರು. ಆ ಬಳಿಕ ಚಕ್ರಪಾಣಿ ರಾಜದಂಪತಿಗಳು ಶಿಶುವಿನ ದೇಹ ಬಹಳ ಕೆಂಪಾಗಿರುವುದನ್ನು ನೋಡಿ ಅದಕ್ಕೆ 'ರಕ್ತಾಂಗ' ಎಂಬ ಹೆಸರನ್ನು ಪ್ರೀತಿಪುರಸ್ಸರವಾಗಿ ಇರಿಸಿ, ಆನಂದಿಸಿದರು. ಅನಂತರ ರಾಜ್ಯದ ಪ್ರಧಾನಿಗಳಿಬ್ಬರೂ ಸಮೀಪಕ್ಕೆ ಬಂದು, ರಾಜದಂಪತಿಗಳನ್ನು ಕುರಿತು ಹೀಗೆಂದು ನುಡಿದರು. ||೧೪||

ಮಂತ್ರಿಗಳು :—

ರಾಜನ್ ! ಮಹಾರಾಣಿಯಾದ ಉಗ್ರಾದೇವಿಗೆ ಈತನು ತನಯನಾದುದ

ಅಯಂ'ಮುಗ್ರೇಕ್ಷಣ' ಇತಿ ನಾಮ್ನಾ ಖ್ಯಾತೋ ಭವಿಷ್ಯತಿ ||೧೫||

ಕೆ ಉವಾಚ :—

'ವಿಪ್ರಪ್ರಸಾದನ' ಇತಿ ಪೌರಾ ನಾಮ ಪ್ರಚಕ್ರಿರೇ ||
ತತಸ್ಸರ್ವೇ ಪೌರಜನಾ [1]ಉಪದಾ ವಿವಿಧಾಸ್ತದಾ ||೧೬||

ದದುರ್ನೃಪಾಯ ಸೋಽಪ್ಯೇತಾ ದಾಪಯಾಮಾಸ ತತ್ಕ್ಷಣಾತ್ |
ವವೃಧೇ ಬಾಲಕಃ ಸೋಽಥ ಶುಕ್ಲಪಕ್ಷೇ ಯಥಾ ಶಶೀ ||೧೭||

ಯಥಾಗ್ನಿರ್ವಾಯುವೇಗೇನ ವರ್ಧತೇ ಕ್ಷಣಮಾತ್ರತಃ ||
ತಥಾ ಸ್ವ-ತೇಜಸಾ ಬಾಲಃ ಪ್ರವೃದ್ಧೋ ಗಗನಂ ಸ್ಪೃಶನ್ ||೧೮||

---

ರಿಂದಲೂ, ಇವನ ಮುಖವು ಸರ್ವದಾ ಅತ್ಯುಗ್ರ ಕಳೆಯಿಂದಲೇ ಕೂಡಿರುವುದರಿಂದಲೂ ಈತನು 'ಉಗ್ರೇಕ್ಷಣ' ಎಂದರೆ ಕ್ರೂರದೃಷ್ಟಿಯುಳ್ಳವನು ಎಂಬ ಲೋಕ ಭಯಂಕರ ಅಭಿಧಾನದಿಂದಲೇ ಪ್ರಖ್ಯಾತಿಯನ್ನು ಪಡೆಯುವನು. ||೧೫||

ಬ್ರಹ್ಮಾ :—

ಅನಂತರ ನಾಗರಿಕರೆಲ್ಲರೂ ಸೇರಿ ಬಾಲಕನಿಗೆ 'ವಿಪ್ರಪ್ರಸಾದನ' ಎಂದರೆ ಬ್ರಾಹ್ಮಣರನ್ನು ಸಂತೋಷಪಡಿಸತಕ್ಕವನು ಎಂಬ ಅನ್ವರ್ಥವಾದ ಹೆಸರನ್ನಿಟ್ಟು ಪ್ರೀತಿಯಿಂದ ಕರೆದರು. ಈ ಮಹೋತ್ಸವ ಸಂದರ್ಭದಲ್ಲಿ ಪುರಜನರೆಲ್ಲ ವಿಧ-ವಿಧಗಳಾದ ವಸ್ತ್ರ, ಆಭರಣಾದಿಗಳನ್ನು ರಾಜನಿಗೆ ಬಹುಮಾನವಾಗಿ ಕೊಟ್ಟರು. ||೧೬||

ರಾಜನೂ ಸಹ ಅವರವರ ಅರ್ಹತೆಗಳಿಗೆ ಅನುಗುಣವಾಗಿ ವಸ್ತ್ರ, ಭೂಷಣಾದಿಗಳನ್ನು ಸೇವಕರ ಮೂಲಕ ಕೊಡಿಸಿ, ಪ್ರತಿಯಾಗಿ ಮರ್ಯಾದೆಯನ್ನು ಮಾಡಿದನು. ಶುಕ್ಲ ಪಕ್ಷದಲ್ಲಿ ಅಮೃತಕಿರಣನಾದ ನಕ್ಷತ್ರೇಶನು ದಿನ ದಿನಕ್ಕೂ ಒಂದೊಂದು ಕಲೆಯೊಡನೆ ಕಲೆತು ಅಭಿವೃದ್ಧಿಗೊಳ್ಳುವಂತೆ ಸಿಂಧುನಾಮಕನಾದ ಈ ರಾಜಕುವರನು ಕ್ಷಣ ಕ್ಷಣಕ್ಕೂ ಅಭಿವೃದ್ಧಿಯನ್ನು ಹೊಂದುತ್ತಲಿದ್ದನು. ||೧೭||

ವೈಶ್ವಾನರ (ಅಗ್ನಿದೇವ) ನು ತನ್ನ ಮಿತ್ರನಾದ ಸಮೀರಣ (ವಾಯುವಿ) ನ

---

ವಿವರಣೆಗೆ ಪರಿಶಿಷ್ಟವನ್ನು ನೋಡಿರಿ.

ಕ್ರೀಡನ್ನೇವ ಸದಾ ಬಾಲೋ ವೃಕ್ಷಾನ್ ಗೃಹಗತಾನ್ ಬಹೂನ್ ||
ಉತ್ಪಾಟ್ಯ ಪಾತಯಾಮಾಸ ವಾಮಹಸ್ತತಲೇನ ಹ ||೧೯||

ಅರಣ್ಯೇ ಕ್ರೀಡತಾ ತೇನ ಪರ್ವತಾಶ್ಚೂರ್ಣಿತಾ ದ್ರುಮಾಃ ||
ಉಡ್ಡೀಯ ಚಂದ್ರಹರಿಣಂ ಕ್ಷಣಂ ಜಗ್ರಾಹ ಕರ್ಹಿಚಿತ್ ||೨೦||

ಜಲಾವತಾರಮಾರ್ಗೇ ತು ರುದ್ಧೇ ಕ್ವಾಪಿ ಕರೇಣುನಾ ||
ಮುಷ್ಟಿಘಾತೇನ ಬಿಭಿದೇ ಗಂಡಮಸ್ಯಾಃ ಪಪಾತ ಹ ||೨೧||

---

ಸಹಕಾರದಿಂದ ಹೇಗೆ ಪ್ರಜ್ವಲಿತನಾಗುವನೋ, ಈ ಬಾಲಕನೂ ಸಹ. ತನ್ನ ಅಂತರಿಕೆ ತೇಜಸ್ಸಿನಿಂದ ಅತಿಯಾಗಿ ಬೆಳೆದು ನಿಂತನು. ಇವನ ಶಿರಸ್ಸು ಅಂತರಿಕ್ಷ ಮಂಡಲವನ್ನೂ ಸ್ಪೃಶಿಸುವಷ್ಟು ಎತ್ತರದಲ್ಲಿ ಇದ್ದಿತು. ||೧೮||

ಇವನು ಕೇವಲ ಬಾಲ್ಯ ದಶೆಯಲ್ಲಿರುವಾಗಲೇ ದೊಡ್ಡ ದೊಡ್ಡ ಸಾಹಸಿಗರಿಗೆ ಸಹ ಸಾಧ್ಯವಾಗದಂತಹ ಅತ್ಯದ್ಭುತ ಚೇಷ್ಟೆಗಳನ್ನೇ ಆಟದ ರೂಪದಲ್ಲಿ ಮಾಡುತ್ತಿದ್ದನು. ಇವನ ವಯಸ್ಸು ಚಿಕ್ಕದಾಗಿದ್ದಿತಾದರೂ ಆಕೃತಿಯು ಮಟ್ಟಿಗೆ ಗಗನಚುಂಬಿಯಾಗಿದ್ದುದರಿಂದ ಬಹಳ ಎತ್ತರವಾದ ಗಿಡ-ಮರಗಳಲ್ಲಿದ್ದ ಹಣ್ಣು-ಎಲೆ, ಚಿಗುರು ಮೊದಲಾದುವನ್ನು ಸಹ ಯಾವ ಬಗೆಯ ವಿಶೇಷ ಆಯಾಸವಿಲ್ಲದೇ ಬಹಳ ಸುಲಭವಾಗಿ ಕಿತ್ತು ನೆಲಕ್ಕೆ ಬಿಸುಟುಬಿಡುತ್ತಿದ್ದನು. ಇಷ್ಟೇ ಅಲ್ಲದೆ ತನ್ನ ಎಡ ಹಸ್ತದಿಂದಲೇ ಆ ಗಿಡ-ಮರಗಳನ್ನು ಬಗ್ಗಿಸಿ ಕಿತ್ತು ಬಿಸುಡುವನು. ||೧೯||

ಅರಣ್ಯಪ್ರದೇಶಕ್ಕೆ ಕ್ರೀಡಿಸಲು ಹೋದಾಗಂತೂ ಅವನ ಸಾಹಸಗಳನು ವರ್ಣಿಸುವಂತೆಯೇ ಇಲ್ಲ. ಅಲ್ಲಿದ್ದ ಮಹಾ ಮಹಾ ವೃಕ್ಷಗಳನ್ನೆಲ್ಲ ಬುಡಸಹಿತ ಕಿತ್ತುಬಿಸುಡುವನು. ಅಂತೆಯೇ ಪರ್ವತಗಳ ದೊಡ್ಡ ಶಿಖರಗಳನ್ನೆಲ್ಲ ಬಹು ಸುಲಭವಾಗಿ ಉರುಳಿಸುವನು. ಹೀಗೆಯೇ ಇರುವಾಗ ಒಮ್ಮೆ ಇದ್ದಕ್ಕಿದ್ದಂತೆಯೇ ಅಂತರಿಕ್ಷಮಂಡಲಕ್ಕೆ ಹಾರಿ, ಚಂದ್ರಬಿಂಬದ ನಡುವೆ ಇದ್ದ ಜಿಂಕೆಯನ್ನು ಒಂದು ಕ್ಷಣಕಾಲ ಹಿಡಿದು ನಿಂದಿದ್ದನು. ||೨೦||

ಅದೇ ಅರಣ್ಯದ ಮತ್ತೊಂದೆಡೆಯಲ್ಲಿ ಒಂದು ಪರ್ವತವಿದ್ದಿತು. ಅದು ಬಹಳ

**ಏವಂ ತಸ್ಯಾದ್ಭುತಂ ಕರ್ಮ ದೃಷ್ಟ್ವಾ ಲೋಕಾ ವಿಸಿಸ್ಮಿರೇ||**
**ಜಹರ್ಷ ಜನನೀ ಚಾಸ್ಯ ಪಿತಾ ಜ್ಞಾತ್ವಾತಿಮಾನುಷಮ್ ||೨೨||**

**ಏವಂ ಪ್ರಬುದ್ಧೋ ಬಾಲೋಽಸೌ ಸಿಂಧುನಾಮಾ ಮಹಾಬಲಃ |**
**ಉವಾಚ ಪಿತರಂ**

**ಸಿಂಧುರುವಾಚ :—**

**ಯಾಸ್ಯೇ ತಪಸ್ತಪ್ತುಮಹಂ ನೃಪ ! ||೨೩||**

---

ಉನ್ನತವಾಗಿದ್ದಿತು. ಅದರ ಮೇಲ್ಭಾಗದಿಂದ ನದಿಯು ಹರಿದು ಬಂದು ವೇಗದಿಂದ ಕೆಳಕ್ಕೆ ಧುಮುಕಿ, ಮುಂದೆ ಪ್ರವಹಿಸುತ್ತಲಿದ್ದಿತು. ಆ ಕಣಿವೆಯಲ್ಲಿ ಜಲವು ತುಂಬಿ ತನ್ನ ಸಂಚಾರಕ್ಕೆ ವಿಶೇಷ ರೀತಿಯಿಂದ ಅಡಚಣೆಯುಂಟಾದುದನ್ನು ಕಂಡು ಒಂದು ಮಹಾಗಜವು ಭಾರೀ ಕಲ್ಲು ಗುಂಡು, ಬಂಡೆಗಳನ್ನೂ, ಸೊಪ್ಪು-ಸೆದೆಗಳನ್ನೂ ತಂದು ಶೇಖರಿಸಿ, ಪ್ರವಾಹವನ್ನು ನಿರೋಧಿಸಿದ್ದಿತು. ಈ ಬಾಲಕನು ಆ ದೊಡ್ಡ ಕಟ್ಟೆಯನ್ನು ವಜ್ರದಂತಹ ಮುಷ್ಟಿಯಿಂದ ಗುದ್ದಿ ಒಡೆದು ಬಿಸುಟು, ನೀರು ತಡೆಇಲ್ಲದೇ ಪ್ರವಹಿಸಿ ಹೋಗುವಂತೆ ಮಾಡಿದನು. ಮತ್ತು ತನ್ನಿಮಿತ್ತವಾಗಿ ಈತನ ಮೇಲೆ ಕೋಪಾವೇಶದಿಂದ ಸಾಗಿ ಬಂದ ಮತ್ತಗಜದ ಮಸ್ತಕ (ಗಂಡಸ್ಥಳ, ಇದೇ ಆನೆಗೆ ಮರ್ಮಸ್ಥಾನ ಎನಿಸುವುದು) ವನ್ನು ಒಮ್ಮೆ ಗುದ್ದಿ ಭೇದಿಸಿದನು. ಆಗ ಆ ಆನೆಯು ಈ ವೇದನೆಯನ್ನು ಸಹಿಸಲಾರದೇ ತಟಪಟ ಒದೆದಾಡಿ ನೆಲಕ್ಕೆ ಉರುಳಿತು. ||೨೧||

ಏವಮಾದಿ ಅತ್ಯದ್ಭುತ ಕಾರ್ಯಗಳನ್ನು ಲೀಲಾಜಾಲವಾಗಿ ಮಾಡುತ್ತಲಿದ್ದ ಈ ಬಾಲಕನನ್ನು ಕಂಡು, ಲೋಕವೆಲ್ಲವೂ ಸೋಜಿಗಗೊಂಡಿತು. ಇವನ ತಾಯಿಯಾದ ಉಗ್ರೆಯು ಮಿತಿಮೀರಿ ಹರ್ಷವನ್ನು ಹೊಂದಿದಳು. ಇತ್ತ ತಂದೆ ಚಕ್ರಪಾಣಿಯು ಇವನ ಚೇಷ್ಟೆಗಳನ್ನೆಲ್ಲ ಸೂಕ್ಷ್ಮವಾಗಿ ವಿಮರ್ಶಿಸಿ 'ಇವನು ಅತಿಮಾನುಷ, ಅರ್ಥಾತ್ ರಾಕ್ಷಸ ಸ್ವಭಾವದವನು' ಎಂದು ನಿಶ್ಚಯಿಸಿದನು.|| ೨೨||

'ಸಿಂಧು' ಎಂಬ ಈ ಬಾಲಕನು ಚೇಷ್ಟೆಗಳನ್ನು ಅತ್ಯದ್ಭುತವಾಗಿ ಮಾಡುತ್ತಲೇ ದೊಡ್ಡವನಾದನು. ಬಾಲ್ಯದಲ್ಲಿಯೇ ಅಬಾಲಸದೃಶ ದೇಹದಾರ್ಢ್ಯ

**ಅನುಷ್ಠಿತ್ವಾ ಸ್ವರ್ಗಲೋಕಂ ಭೂ-ಲೋಕಂ ಚ ರಸಾತಲಮ್।**
**ಆಕ್ರಮಿಷ್ಯೇ ವೃಥಾಯುರ್ಮೇ ಗಚ್ಛತೀಹ ಮತಿರ್ಮಮ ॥೨೪॥**

**ಕ ಉವಾಚ :—**

**ಏವಮಾಕರ್ಣ್ಯ ತದ್ವಾಕ್ಯಮೂಚತುಃ ಪಿತರೌ ಚ ತಮ್।**

ಏತ್ತಿಂದ ಬಳಿಕ, ತಾರುಣ್ಯದ ತಳಹದಿಯ ಮೇಲೆ ಕಾಲನ್ನೂರಿದ ಬಳಿಕಂತೂ ಕೇಳಬೇಕಾದುದೇ ಇಲ್ಲ. ವಯಸ್ಸು ಏರುತ್ತ ಬಂದಂತೆಲ್ಲ ಸಿಂಧು ಮಹಾಬಲಾಢ್ಯ ನಾಗತೊಡಗಿದನು. ಹೀಗಿರುವಾಗ್ಗೆ ಒಮ್ಮೆ ಇವನು ತನ್ನ ತಂದೆಯನ್ನು ಕುರಿತು ಈ ರೀತಿಯಾಗಿ ಮಾತನಾಡಿದನು.

ಸಿಂಧು :—

ಪಿತೃವರೇಣ್ಯ, ಮಹಾಪ್ರಭೋ ! ನಾನು ತಪಸ್ಸನ್ನು ಮಾಡುವುದಕ್ಕಾಗಿ ಅರಣ್ಯಕ್ಕೆ ಹೋಗುವೆನು. ॥೨೩॥

ನಿಷ್ಕಂಟಕವೂ, ಸಮೃದ್ಧವೂ ಆದ ಸಾಮ್ರಾಜ್ಯ ಪದತಲದಲ್ಲಿರುವಾಗ ತಪಸ್ಸೇಕೆ? ಎಂದು ಪ್ರಶ್ನಿಸಬೇಡ. ನನ್ನ ಏಕಾಗ್ರ ತಪಸ್ಸಿನಿಂದ ದೈವವನ್ನು ಮೆಚ್ಚಿಸಿ ತ್ರಿಭುವನಗಳ ಆಧಿಪತ್ಯವನ್ನೂ ಪಡೆಯುವೆನು. ' ಅಸಂತುಷ್ಟೋ ದ್ವಿಜೋನಷ್ಟಸ್ಸಂತುಷ್ಟಶ್ಚ ಮಹೀಪತಿಃ' ಎಂದರೆ ನಿತ್ಯತೃಪ್ತನಾಗಿರಬೇಕಾದ ಬ್ರಾಹ್ಮಣನು, ಅತೃಪ್ತನಾಗಿದ್ದರೆ ಇದರಂತೆ ಕ್ಷತ್ರಿಯನು 'ಇದ್ದುದರಲ್ಲೇ ತೃಪ್ತಿಯನ್ನು ಹೊಂದಿ ಆಲಸ್ಯದಿಂದ ಕಾಲ ಕಳೆಯುವ ಸ್ವಭಾವದವನಾಗಿದ್ದರೆ ಅವರು ಹಾಳಾಗುವರು ಎಂದು ಹಿರಿಯರು ಒತ್ತಿ ಹೇಳುತ್ತಿರುವುದರಿಂದ ಕ್ಷತ್ರಿಯನಾದ ನಾನು ನನ್ನ ಬಾಹುಬಲ-ವೀರ್ಯಗಳನ್ನೆಲ್ಲ ವ್ಯರ್ಥಗೊಳಿಸಿದರೆ, ಇಡೀ ಜೀವನವನ್ನೇ ಹಾಳುಮಾಡಿಕೊಂಡಂತಾಗುವುದಿಲ್ಲವೇ ? ॥೨೪॥

ಬ್ರಹ್ಮಾ :—

ಬಾಲಕನು ಧೈರ್ಯ-ಸ್ಥೈರ್ಯಗಳಿಂದಲೂ, ಮಹತ್ವಾಕಾಂಕ್ಷೆಯಿಂದಲೂ ಆಡಿದ ನುಡಿಗಳನ್ನು ಕೇಳಿ, ಅವನ ಮಾತಾ-ಪಿತೃಗಳು ಪ್ರತ್ಯೇಕ ಪ್ರತ್ಯೇಕವಾಗಿ

ಮಾತೋವಾಚ :—

ಉತ್ಕರ್ಷಂ ಸ್ವಸ್ಯ ಪುತ್ರಸ್ಯ ನಿತ್ಯಂ ಪ್ರಾರ್ಥಯತೇ ಪಿತಾ　　||೨೫||

ಪಿತೋವಾಚ :—

ಜನನೀ ಸರ್ವದೇವೇಭ್ಯೋ ವ್ರತದಾನಾದಿನಾಪಿ ಚ ।

ಕ ಉವಾಚ :—

ಏವಮಾಜ್ಞಾಮವಾಪ್ಯೈವ ನತ್ವಾ ತೌ ಸ ಯಯೌ ವನಮ್　　||೨೬||

---

ಹೀಗೆಂದು ನುಡಿದರು.

ತಾಯಿ :—

ವತ್ಸ ! ತಂದೆಯಾದವನು ತನ್ನ ಮಗನು ಅಭಿವೃದ್ಧಿಸ್ಥಿತಿಗೆ ಬರುವುದನ್ನು ಸರ್ವದಾ ಅಪೇಕ್ಷಿಸುತ್ತಿರುವನಲ್ಲವೇ ? ||೨೫||

ತಂದೆ :—

ಪುತ್ರ, ಸಿಂಧೋ ! ನನ್ನ ಮಗನು ಎಲ್ಲ ದೇವತೆಗಳಿಗಿಂತಲೂ ಶ್ರೇಷ್ಠತಮನಾಗಿ ಬಾಳಬೇಕೆಂದು ಜನನಿಯಾದವಳು ಬಯಸುವಳಲ್ಲವೇ ? ಇದಕ್ಕಾಗಿ ಎಂತಹ ಕಠಿಣ ವ್ರತವನ್ನಾದರೂ ಮಾಡುತ್ತಾಳೆ.

ಬ್ರಹ್ಮ :—

ರಾಜದಂಪತಿಗಳು ಪರಸ್ಪರರ ಅಭಿಮತಗಳನ್ನು ಲೋಕನೀತಿಯಂತೆ ಊಹಿಸಿ ಹೇಳಿ, ಒಂದು ಬಗೆಯಿಂದ ಮಗನ ಉದ್ಯಮಕ್ಕೆ ಅನುಮತಿಯನ್ನಿತ್ತುದಲ್ಲದೆ, ಮಗನನ್ನು ಮತ್ತಷ್ಟು ಪ್ರೋತ್ಸಾಹಗೊಳಿಸಿದರು. ತಂದೆ-ತಾಯಿಯರ ತನ್ನ ಸಂಕಲ್ಪಕ್ಕೆ ಒಮ್ಮೆಲೇ ಒಪ್ಪಿದುದನ್ನು ಕಂಡು, ಸಿಂಧು ಅಂತರಂಗದಲ್ಲೇ ಆನಂದಿಸಿ, ಅವರಿಬ್ಬರಿಗೂ ಮತ್ತು ಇತರ ಹಿರಿಯರೆಲ್ಲರಿಗೂ ಭಕ್ತಿಪೂರ್ವಕವಾಗಿ ಪ್ರಣಾಮಗಳನ್ನು ಸಮರ್ಪಿಸಿ, ತಾನು ತಪವನ್ನಾಚರಿಸಲು ನಿಬಿಡವಾದ ಅರಣ್ಯವನ್ನು ಕುರಿತು ಪ್ರಯಾಣ ಬೆಳೆಸಿದನು. ||೨೬||

ತತ್ರ ಭ್ರಮನ್ ದದರ್ಶಾಥ ಕಾಸಾರಂ ಜಲಜೈರ್ಯುತಮ್ ।
ತತ್ರ ಸ್ಥಾತುಂ ಮನಶ್ಚಕ್ರೇ ವಿವಿಕ್ತಮತಿಹರ್ಷಿತಃ ॥೨೭॥

ಏಕಾಂಗುಷ್ಠೇನ ಭೂಮಿಷ್ಠ ಊರ್ಧ್ವಬಾಹೂ ರವಿಂ ಸ್ಮರನ್ ।
ಶುಕ್ರೋಪದಿಷ್ಟಂ ತಂ ಮಂತ್ರಂ ಜಪನ್ ಪರ್ವತನಿಶ್ಚಲಃ ॥೨೮॥

ದಕ್ಷಿಣೇ ಜಾನುನಿ ಸದಾ ವಾಮಪಾದಂ ನಿಧಾಯ ಚ ।
ಅಂಜಲಿಂ ಹೃದಿ ವಿನ್ಯಸ್ಯ ಧ್ಯಾಯನ್ ದಿನಮಣಿಂ ತದಾ ॥೨೯॥

---

ಅರಣ್ಯವನ್ನೆಲ್ಲ ಸುತ್ತಿ ಬಂದನು. ಒಮ್ಮೆ ಅಲ್ಲೊಂದು ಕಾಸಾರ (ಕೊಳ) ವಿರುವುದು ಅವನಿಗೆ ಗೋಚರವಾಯಿತು. ಆ ಪುಷ್ಕರಿಣಿಯಲ್ಲಿ ಅನೇಕ ಕಮಲ ಪುಷ್ಪಗಳು ಬೆಳೆದು ಕಲ್ಯಾಣಿಯ ರಾಮಣೀಯಕತೆಯನ್ನು ಶತಗುಣವಾಗಿ ಹೆಚ್ಚಿಸಿದ್ದವು. ಇದರ ದರ್ಶನದಿಂದ ಆಕೃಷ್ಟಚಿತ್ತನಾದ ಸಿಂಧು ಇದರಂತಹ ವಿವಿಕ್ತ ಪ್ರದೇಶವು ಈ ಅರಣ್ಯದಲ್ಲಿ ಮತ್ತೆಲ್ಲಿಯೂ ದೊರೆಯಲಾರದೆಂದೂ, ಇಲ್ಲಿಯೇ ತಪಸ್ಸನ್ನಾಚರಿಸಬೇಕೆಂದೂ ಮನಸ್ಸಿನಲ್ಲಿ ನಿಶ್ಚಯವನ್ನು ಮಾಡಿದನು. ಹೀಗೆ ನಿಶ್ಚಯಿಸುವಾಗ ಆತನ ಮನಸ್ಸಿಗೆ ಬಹಳ ಹರ್ಷ ಉಂಟಾಗಿದ್ದಿತು. ॥೨೭॥

ವತ್ಸ, ವ್ಯಾಸ ! ಸಿಂಧುವಿನ ತಪೋವಿಧಾನವನ್ನು ವಿವರಿಸುವೆನು, ಕೇಳು. ಪಾದದ ಅಂಗುಷ್ಠದ ಮೇಲೆ ತನ್ನ ಇಡೀ ದೇಹದ ಭಾರವನ್ನು ಹಾಕಿ ನಿಂತನು ಕೈಗಳೆರಡನ್ನೂ ಮೇಲಕ್ಕೆತ್ತಿ, ಅವನ್ನು ಒಂದುಗೂಡಿಸಿದನು. ಮನಸ್ಸಿನಲ್ಲಿ ಭಗವಾನ್ ಸಹಸ್ರಕಿರಣನನ್ನು ಅನವರತ ಧ್ಯಾನಿಸತೊಡಗಿದನು. ದೈತ್ಯಗುರು ಶುಕ್ರಾಚಾರ್ಯನು ಉಪದೇಶಿಸಿದ್ದ ಸೂರ್ಯಮಂತ್ರವನ್ನು ಒಮ್ಮನದಿಂದ ಜಪಿಸಲಾರಂಭಿಸಿದನು. ಅವನು ನಿಶ್ಚಲವಾಗಿ ನಿಂತುದನ್ನು ನೋಡಿದರೆ 'ಇದೇನು, ಪರ್ವತವೋ ?' ಎಂಬಂತೆ ತೋರಿಬರುತ್ತಲಿದ್ದಿತು. ॥೨೮॥

ಬಲ ಭಾಗದ ಜಾನುಪ್ರದೇಶದ ಮೇಲೆ ಎಡದ ಪಾದವನ್ನು ಸದಾ ಮಂಡಿಸಿದ್ದನು. ಕೈಗಳಿಂದ ಅಂಜಲಿಯನ್ನು ಕಟ್ಟಿಕೊಂಡು, ಅದನ್ನು ತನ್ನ ಹೃದಯದ ಬಳಿ ಇರಿಸಿ, ತಾದಾತ್ಮ್ಯಭಾವದಿಂದ ದಿನಮಣಿಯನ್ನು ಧ್ಯಾನಿಸುತ್ತಲಿದ್ದನು. ॥೨೯॥

---

ವಿವರಣೆಗೆ ಪರಿಶಿಷ್ಟವನ್ನು ನೋಡಿರಿ.

ಶೀತವಾತಾತಪೇ ಜಲವೃಷ್ಟೀನಾಂ ಸಹನೋ ದೃಢಃ ।
ವಾಯುಮಾತ್ರಾಶನಸ್ತಸ್ಥೌ ವಲ್ಮೀಕಾಕ್ರಾಂತವಿಗ್ರಹಃ ॥೩೦॥

ಅಸ್ಥಿಮಾತ್ರಾವಶಿಷ್ಟೋಽಪಿ ಜಪೇತ್ಯೇವ ಮಹಾಮನುಮ್ ।
ಏವಂ ತಸ್ಯ ವ್ಯತೀಯಾಯ ಶರದಾ ದ್ವಿ-ಸಹಸ್ರಕಮ್ ॥೩೧॥

ತಸ್ಯ ಸಿಂಧೋಃ ಶರೀರೋತ್ಥಾಸ್ತೇಜೋಭಾಸೋ ರವಿಂ ತದಾ ।
ಏವಮುಗ್ರಂ ತತೋ ದೃಷ್ಟ್ವಾ ಪ್ರತ್ಯಕ್ಷೋಽಭೂದ್ದಿವಾಕರಃ ॥೩೨॥

---

ಎಂತಹ ಧೈರ್ಯಶಾಲಿಯಾಗಿದ್ದರೂ ಅವನನ್ನು ಚಲಿಸಿ ಹೋಗುವಂತೆ ಮಾಡ ಬಲ್ಲ ಚಳಿ, ಗಾಳಿ, ಮಳೆ, ಬಿಸಿಲು ಮೊದಲಾದ ಭೌತಿಕ ತಾಪಗಳು ಸಿಂಧುವನ್ನು ಏನೂ ಮಾಡದೇ ಹೋದವು. ಇವನ ಸಹನ ಶಕ್ತಿಯೇ ಅಷ್ಟು ದೃಢವಾದುದು. ಇವನು ತನ್ನ ಪ್ರಾಣಗಳು ಹಾರಿಹೋಗದಂತೆಯೂ, ಅತ್ಯಂತ ಕ್ಷೀಣಗತಿಯನ್ನು ಹೊಂದದಂತೆಯೂ ವಾಯುಸೇವನೆಯಿಂದಲೇ ಅವನ್ನು ಪೋಷಿಸತೊಡಗಿದನು ಇವನ ಶ್ವಾಸೋಚ್ಛ್ವಾಸಗತಿಯು ಬಹಳ ಮಂದವಾಗಿದ್ದುದರಿಂದ, ಇದು ಮೃತದೇಹ ಎಂದೇ ಭ್ರಮಿಸಿ, ವಮ್ರಿ (ಗೆದ್ದಲು ಹುಳು) ಗಳು ಇವನ ದೇಹವನ್ನು ಆಕ್ರಮಿಸಿ ದೊಡ್ಡ ಹುತ್ತವನ್ನೇ ಕಟ್ಟಿಬಿಟ್ಟಿದ್ದವು. ಇಷ್ಟಾದರೂ ಇವನಿಗೆ ಈ ಭಾನವೇ ಉಂಟಾಗಿರಲಿಲ್ಲ. ||೩೦||

ದೇಹದ ಸಾರವೆಲ್ಲ ಇಂಗಿಹೋಗುವವರೆಗೂ ಅವನು ಅತ್ತಿತ್ತ ಚಲಿಸಲಿಲ್ಲ. ಕೊನೆಗೆ ಇವನು ಎಲುಬಿನ ಹಂದರವಾದನು. ಇಷ್ಟಾದರೂ ಸೂರ್ಯ ಮಹಾ ಮಂತ್ರವನ್ನು ಜಪಿಸುತ್ತಲೇ ಇದ್ದನು. ಇದೇ ಸ್ಥಿತಿಯಲ್ಲಿ ಅವನು ಎರಡು ಸಹಸ್ರ ವರ್ಷಗಳ ವರೆಗೆ ನಿಶ್ಚಲವಾಗಿ ತಪಸ್ಸನ್ನು ಆಚರಿಸಿದನು. ||೩೧||

ಸಿಂಧುವಿನ ಶರೀರದ ಸಾರವು ಒಣಗಿದಂತೆಲ್ಲ ದೇಹದಿಂದ ಒಂದು ಬಗೆಯ ಅತ್ಯದ್ಭುತ ಆಂತರಿಕ ತೇಜಸ್ಸು ಹೊರಹೊಮ್ಮಲಾರಂಭಿಸಿತು. ಆ ತೇಜವು ಪ್ರಕಾಶವಾಗಿದ್ದುದಕ್ಕಿಂತಲೂ ಅತಿಶಯವಾಗಿ ತಾಪದಾಯಕವಾಗಿ ಪರಿಣಮಿಸಿತು. ಇದರಿಂದ ಸ್ವತಃ ತೇಜೋರೂಪಿಯೂ, ಸರ್ವಶೋಷಕನೂ ಆದ ಸಹಸ್ರಕಿರಣನೂ ಸಹ ತಳ

**ಉವಾಚ ಪರಮಪ್ರೀತೋ-**

**ರವಿರುವಾಚ :—**

**-ಽನುಷ್ಠಾನೇನ ತವಾಧುನಾ ।**

**ವರಂ ವರಯ ಚಿತ್ತಸ್ಥಂ ದಾಸ್ಯಾಮಿ ಜೀವಿತಾವಧಿ ||೩೩||**

**ಕ ಉವಾಚ :—**

**ಸಿಂಧುಸ್ತದಾಕರ್ಣ್ಯ ವಚೋ ಭಾಷಿತಂ ಭಾನುನಾ ಸ್ವಯಮ್ ।**

---

ಮಳಗೊಳ್ಳುವಂತಾದನು. ಜಗತ್ಸಾಕ್ಷಿಯಾದ ಪ್ರಭಾಕರನು ಸಿಂಧುವಿನಂತಹ ಕಠಿಣ ತಪೋನಿಷ್ಠನನ್ನು ಅದುವರೆಗೂ ಕಂಡೇ ಇರಲಿಲ್ಲ. ಇನ್ನು ಹೆಚ್ಚು ಕಾಲ ವಿಲಂಬಿಸಿದರೆ, ಇವನ ತಪೋಜ್ವಾಲೆಗೆ ಸಿಲುಕಿ ಭುವನಗಳೆಲ್ಲ ಆಹುತಿಯಾದಾವೆಂದು ನಿಶ್ಚಯಿಸಿ, ಹೆಚ್ಚು ಪರೀಕ್ಷಿಸದೇ ಒಡನೆಯೇ ಇವನಿಗೆ ಪ್ರತ್ಯಕ್ಷನಾದನು. ||೩೨||

ಇವನ ದಿವ್ಯರೂಪ, ಸೌಂದರ್ಯ, ಕಠಿಣ ತಪಸ್ಸು ಇವನ್ನು ಪ್ರತ್ಯಕ್ಷವಾಗಿ ಕಂಡ ಮೇಲಂತೂ ಆರ್ಯಮನಿಗೆ ಉಂಟಾದ ಆನಂದಕ್ಕೆ ಪಾರವೇ ಉಳಿಯಲಿಲ್ಲ. ಆಗ ಸ್ನಿಗ್ಧದೃಷ್ಟಿಯಿಂದ ಸಿಂಧುವನ್ನು ಸಿಂಚಿಸುತ್ತ ಅವನನ್ನು ಕುರಿತು ಹೀಗೆಂದು ನುಡಿದನು.

ರವಿ :—

ವತ್ಸ ! ಏಕಾಗ್ರವಾದ ನಿನ್ನ ತಪೋಽನುಷ್ಠಾನವನ್ನು ನೋಡಿ, ನಾನು ಬಹಳ ಸಂತುಷ್ಟನಾಗಿರುವೆನು. ಯಾವ ಫಲವನ್ನು ಪಡೆಯಬೇಕೆಂದು ಮನಸ್ಸಿನಲ್ಲಿ ಸಂಕಲ್ಪಿಸಿ, ನೀನು ಇಷ್ಟು ಕಠಿಣರೀತಿಯಿಂದ ತಪಿಸುತ್ತಿರುವೆಯೋ, ಅದನ್ನು ನನಗೆ ತಿಳಿಸು. ಬೇಕಾದ ವರಗಳನ್ನು ವರಿಸು. ಸ್ವಲ್ಪವೂ ವಿಲಂಬಿಸದೇ ಅವನ್ನು ಅನುಗ್ರಹಿಸಿಕೊಡುವೆನು. ನಾನು ದಯೆಪಾಲಿಸಿದ ವರಗಳ ಅನುಭವವನ್ನು ಯಾವಜ್ಜೀವ ನೀನು ನಿರ್ಬಾಧಕವಾಗಿ ಅನುಭವಿಸುವೆಯಂತೆ. ||೩೩||

ಬ್ರಹ್ಮಾ :—

ತನ್ನ ಆರಾಧ್ಯದೈವ ಸೂರ್ಯನಾರಾಯಣನು ಪ್ರತ್ಯಕ್ಷನಾಗಿ ಈ ರೀತಿ

ದೇಹಭಾವಂಗತೋಽಪಶ್ಯತ್ಪುರತೋ ಭಾಸ್ಕರಂ ಪ್ರಭುಮ್ ॥೩೪॥

ನತ್ವಾ ತತ್ಪಾದಕಮಲಂ ಬದ್ಧಾಂಜಲಿಪುಟೋಽಬ್ರವೀತ್ ।

ಸಿಂಧುರುವಾಚ :—

ನಮಸ್ತೇ ದೀನನಾಥಾಯ, ನಮಸ್ತೇ ಸರ್ವಸಾಕ್ಷಿಣೇ ! ॥೩೫॥

ನಮಸ್ತೇ ತ್ರಿದಶೇಶಾಯ, ಬ್ರಹ್ಮ-ವಿಷ್ಣು-ಶಿವಾತ್ಮನೇ !

ನಮಸ್ತೇ ವಿಶ್ವವಂದ್ಯಾಯ, ನಮಸ್ತೇ ವಿಶ್ವಹೇತವೇ ! ॥೩೬॥

ತನ್ನೊಡನೆ ಮಾತನಾಡುತ್ತಿರುವುದನ್ನು ಸಿಂಧು ಕೇಳಿ, ಕೂಡಲೇ ದೇಹಭಾನವನ್ನು ಹೊಂದಿದನು. ದೇದೀಪ್ಯಮಾನವಾದ ದೇಹವುಳ್ಳ ದಿವಾಕರನು ಎದುರಿಗೆ ನಿಂದಿರುವುದು ಇವನಿಗೆ ಗೋಚರವಾಯಿತು. ॥೩೪॥

ಗಡಿಬಿಡಿಯಿಂದ ಸಿಂಧು ಎದ್ದು ನಿಂತು, ದೇವನ ಪಾದಾರವಿಂದಗಳಿಗೆ ನಮಸ್ಕರಿಸಿ, ಕೈಗಳನ್ನು ಅಂಜಲಿಯಾಗಿ ಬಂಧಿಸಿ ನಿಂದು, ಅತ್ಯಂತ ವಿನಯದಿಂದ ಈ ರೀತಿಯಾಗಿ ವಿಜ್ಞಾಪಿಸಿದನು.

ಸಿಂಧು :—

ದೀನಾನಾಥ ಬಂಧೋ ! ನಿನಗೆ ನಮಸ್ಕರಿಸುವೆನು. ಸಕಲ ಚರಾಚರ ವಸ್ತುಗಳೂ ಮಾಡಬಹುದಾದ ಕಾಯಿಕ, ವಾಚನಿಕ ಹಾಗೂ ಮಾನಸಿಕ ಕರ್ಮಗಳಿಗೂ ನೀನು ಸಾಕ್ಷಿಯಾಗಿರುವೆ, ॥೩೫॥

ಪ್ರಭೋ ! ದೇವತೆಗಳಿಗೆಲ್ಲ ನೀನು ಒಡೆಯನಾದವನು. ಬ್ರಹ್ಮಾ, ವಿಷ್ಣು, ಮಹೇಶ್ವರರಿಗೆ ನೀನು ಆತ್ಮವಸ್ತುವಾಗಿರುವೆ. ಆರೋಗ್ಯಾಭಿಲಾಷಿಯಾದ ಜಗವೆಲ್ಲವೂ ನಿನ್ನನ್ನು ನಮಿಸುವುದು. ನೀನೇ ಈ ಜಗತ್ತಿನ ಸ್ಥಿತಿಗೆ ಮೂಲಾಧಾರನು. ॥೩೬॥

**ನಮಸ್ತೇ ವೃಷ್ಟಿಬೀಜಾಯ, ಸಸ್ಯೋತ್ಪಾದನಹೇತವೇ! ।**
**ಪರಬ್ರಹ್ಮಸ್ವರೂಪಾಯ, ಸೃಷ್ಟಿಸ್ಥಿತ್ಯಂತಹೇತವೇ! ॥೩೭॥**

**ಗುಣಾತೀತಾಯ, ಗುರವೇ, ಗುಣಕ್ಷೋಭವಿಧಾಯಿನೇ! ।**
**ಸರ್ವಜ್ಞಾಯ ಜ್ಞಾನದಾತ್ರೇ! ಸರ್ವಸ್ಯ ಪತಯೇ ನಮಃ ॥೩೮॥**

**ಧನ್ಯಂ ಮೇ ಜನ್ಮ ದೇವೇಶ! ವಂಶೋ ಮೇ ಜನಕೋಽಪಿ ಚ ।**
**ಜನನೀ ಚ ತಪಶ್ಚಾಪಿ ಯಜ್ಜಾತಂ ತವ ದರ್ಶನಮ್ ॥೩೯॥**

---

ನೀನು ನಿನ್ನ ತೀಕ್ಷ್ಣ ಕಿರಣಗಳ ಮೂಲಕ ಭೂಮಿಯ ಸಾರವನ್ನೆಲ್ಲ ಆಕರ್ಷಿಸಿ, ಅವನ್ನು ಶೋಧಿಸಿ ಅವಕ್ಕೆ ಸಾಕಷ್ಟು ಶಕ್ತಿಯನ್ನು ತುಂಬಿ, ಮಳೆಯ ರೂಪದಿಂದ ಪುನಃ ಸುರಿಸಿ ಭೂಮಿಯನ್ನು ತನುಗೊಳಿಸುವೆ. ತನುಗೊಂಡ ಭೂಮಿಯಲ್ಲಿ ನಾನಾ ಬಗೆಯ ಬೀಜಗಳು ಸಸ್ಯರೂಪದಿಂದ ಹುಲುಸಾಗಿ ಬೆಳೆದು ಜಗದ ಜೀವನಕ್ಕೆ ಪ್ರಧಾನ ಸಹಕಾರಿಗಳಾಗಿ ಪರಿಣಮಿಸುವುವು. ಆದುದರಿಂದ ಜಗದು ಎತ್ತಿ ಸ್ಥಿತಿಗಳಿಗೆ ಮೂಲಕಾರಣಗಳಾದ ವೃಷ್ಟಿ ಹಾಗೂ ಸಸ್ಯಗಳಿಗೆ ನೀನು ಉತ್ಪಾದಕನು. ನೀನು ಸಚ್ಚಿದಾನಂದ ಸ್ವರೂಪವಾದ ಪರಬ್ರಹ್ಮವಸ್ತುವೇ ಆಗಿರುವೆ. ಅದೇ ನೀನು ಲೋಕೋದ್ಧಾರಕ್ಕಾಗಿ ಬ್ರಹ್ಮಾ, ವಿಷ್ಣು ಮತ್ತು ರುದ್ರರ ಸ್ವರೂಪಗಳನ್ನು ಧರಿಸಿ, ಜಗತ್ತಿನ ಸೃಷ್ಟಿ-ಸ್ಥಿತ್ಯಂತಗಳನ್ನು ನಡೆಸುವೆ. ॥೩6॥

ನೀನು ಸತ್ತ್ವ ರಜಸ್ತಮೋಗುಣಗಳ ಆಡಳಿತಕ್ಕೆ ಮೀರಿದವನು. ಜಗತ್ತಿಗೆ ಜ್ಞಾನದಾತೃವಾದ ಗುರುವಾಗಿರುವೆ, ಸತ್ತ್ವ, ರಜಸ್ತಮೋಗುಣಗಳನ್ನು ನಿನ ಇಚ್ಛಾಶಕ್ತಿಯಿಂದ ಪ್ರಕ್ಷೋಭಗೊಳಿಸು (ಹೆಚ್ಚು, ಕಡಿಮೆಯಾಗುವಂತೆ ಮಾಡು) ವವನೂ ನೀನೇ. ನೀನು ಸರ್ವವನ್ನೂ ಕೂಲಂಕಷವಾಗಿ ತಿಳಿದವನು. ಪ್ರತಿಯೊಂದು ಪ್ರಾಣಿಯೂ ಸ್ಫೂರ್ತಿಗೊಂಡು ತನ್ನ ತನ್ನ ಕರ್ತವ್ಯಗಳಲ್ಲಿ ಆಸಕ್ತವಾಗುವಂತೆ ಮಾಡುವೆ. ದೇವೇಶ! ನೀನೇ ಎಲ್ಲಕ್ಕೂ ಪರಮೇಶ್ವರನು. ಇದೋ, ನಿನಗೆ ನಮಸ್ಕಾರಗಳು. ।೩೮॥

ಪ್ರಭೋ,-ದೇವತೆಗಳೊಡೆಯ! ನನ್ನ ಜನ್ಮ, ಜೀವನ, ಜನನೀ ಜನಕರು, ನನ್ನ ತಪಸ್ಸು, ಹೆಚ್ಚೇನು ? ನನ್ನ ಇಡೀ ವಂಶವೇ ಇಂದಿಗೆ ಪವಿತ್ರವಾಗಿ ಹೋಯಿತು.

ವರದಶ್ಚೇದ್ದಿನೇಶ ! ತ್ವಂ ದೇಹಿ ಮೇ ಸರ್ವತೋಽಮೃತಿಮ್ ।
ತವ ಪ್ರಸಾದಾತ್ಸಂಗ್ರಾಮೇ ಜಯೋಽಯಂ ಸರ್ವದೇವತಾಃ ॥೪೦॥
ವರ್ತಮಾನಾದ್ದೇವಗಣಾನ್ನ ಮೇ ಮೃತ್ಯುರ್ಭವೇದಿತಿ ।

ಕ ಉವಾಚ :—

ಏವಂ ತಸ್ಯ ವರಾನ್ ಶ್ರುತ್ವಾ ಪರಿತುಷ್ಟೋ ವಿಭಾವಸುಃ ॥೪೧॥
ಉವಾಚ ನಿಜಭಕ್ತಂ ತಮನುಷ್ಠಾನಕೃಶಂ ಭೃಶಮ್ ।

---

ನನ್ನ ಪುಣ್ಯವು ಪರಿಪಾಕಗೊಳ್ಳದಿದ್ದಿದ್ದರೆ, ಪರಮಾತ್ಮನಾದ ನಿನ್ನ ಸಾಕಾರ ರೂಪವು ನನ್ನಂತಹ ಪಾಮರನಿಗೆ ಗೋಚರವಾಗುತ್ತಲಿದ್ದಿತೇ? ॥೩೯॥

ದಿನೇಶ ! ನೀನು ನನಗೆ ವರವನ್ನು ಅನುಗ್ರಹಿಸಲು ಬಂದಿರುವುದೇ ನಿಜವಾಗಿದ್ದ ಪಕ್ಷದಲ್ಲಿ, ನನಗೆ ಯಾರಿಂದಲೂ ಮರಣ ಸಂಭವಿಸಬಾರದು. ನಾನು ಯಾರೊಡನೆ ಯುದ್ಧಕ್ಕೆ ಹೋಗುವೆನಾದರೂ, ಅಲ್ಲೆಲ್ಲ ನನಗೆ ವಿಜಯವೇ ದೊರೆಯಬೇಕು. ಎಂದೆಂದಿಗೂ ನನಗೆ ಪರಾಜಯ ಉಂಟಾಗಬಾರದು. ದೇವಗಣವನ್ನು ಸಹ ಸೋಲಿಸುವಷ್ಟು ಸಾಮರ್ಥ್ಯ ನಿನ್ನ ಪರಮಾನುಗ್ರಹದಿಂದ ನನಗೆ ಉಂಟಾಗಬೇಕು ॥೪೦॥

ಈಗಿರುವ ದೇವತಾಗಣದಿಂದ ನನಗೆ ಮೃತ್ಯು ಬಾರದಂತೆ ಅನುಗ್ರಹಿಸು. ಮುಂದೆ ಆ ಸ್ಥಾನಗಳಿಗೆ ಬರತಕ್ಕವರನ್ನು ನಾನು ನೋಡಿಕೊಳ್ಳುತ್ತೇನೆ. ಅವರ ಬಗ್ಗೆ ನನಗೆ ಸ್ವಲ್ಪವೂ ಭಯ, ಚಿಂತೆಗಳಿರುವುದಿಲ್ಲ, ಇಷ್ಟು ವರಗಳನ್ನು ಅನುಗ್ರಹಿಸು.

ಬ್ರಹ್ಮಾ :—

ಸಿಂಧು ಈ ರೀತಿಯಾಗಿ ವರಗಳನ್ನು ಯಾಚಿಸಿದುದನ್ನು ಲಕ್ಷಿಸಿ, ವಿಭಾವಸು (ಸೂರ್ಯನು) ಬಹಳ ಸಂತೋಷಗೊಂಡನು. ॥೪೧॥

ತಪಃಕ್ಲೇಶದಿಂದ ಸೊರಗಿ ಕಡ್ಡಿಯಂತಾಗಿಹೋದ ತನ್ನ ಭಕ್ತ; ಸಿಂಧು

**ರವಿರುವಾಚ :—**

**ನ ಭಯಂ ವಿದ್ಯತೇ ದೇವಯೋನಿಭ್ಯೋ ನೃಭ್ಯ ಏವ ಚ ||೬೨||**

**ನ ತಿರ್ಯಗ್ಭ್ಯೋ ನ ನಾಗೇಭ್ಯೋ ನ ದಿವಾ ನ ನಿಶಿ ಕ್ವಚಿತ್ ।**
**ನೋಷಃಕಾಲೇ ನ ಸಂಧ್ಯಾಯಾಂ ಮಮ ವಾಕ್ಯಾದ್ಭವಿಷ್ಯತಿ ||೬೩||**

**ಮರಣಂ ತೇ ನೃಪಸುತ ! ಗೃಹಾಣಾಮೃತಭಾಜನಮ್ ।**
**ಇದಂ ಯಾವತ್ಕಂಠಗತಂ ತಾವನ್ಮೃತ್ಯುರ್ನ ತೇ ಭವೇತ್ ||೬೪||**

---

ವನ್ನು ತನ್ನ ಅಮೃತಮಯ ದೃಷ್ಟಿಕ್ಷೇಪದಿಂದ ಒಮ್ಮೆ ನೋಡಿ, ಅವನನ್ನು ಕುರಿತು ಈ ರೀತಿಯಾಗಿ ಉತ್ತರಿಸಿದನು.

ಸೂರ್ಯ :—

ವತ್ಸ, ಸಿಂಧೋ! ಕೇಳು, ದೇವಯೋನಿಯಲ್ಲಿ ಜನಿಸಿದವರಿಂದಲಾಗಲೀ, ಜರಾಯುಜರಾದ ಮಾನವರಿಂದಲಾಗಲೀ ನಿನಗೆ ಮರಣಭಯ ಉಂಟಾಗುವುದಿಲ್ಲ. ಈ ವಿಷಯವಾಗಿ ನೀನು ಚಿಂತಿಸಬೇಡ. ||೬೨||

ತಿರ್ಯಗ್ಯೋನಿಗಳಾದ ಹುಲಿ, ಕರಡಿ, ಸಿಂಹ ಮೊದಲಾದ ಹಿಂಸ್ರ ಪ್ರಾಣಿಗಳಿಂದಲಾಗಲೀ, ಹಾವು, ಚೇಳು ಮೊದಲಾದ ವಿಷ ಜಂತುಗಳಿಂದಲಾಗಲೀ ನಿನಗೆ ಮೃತ್ಯುವಿನ ಭಯ ಉಂಟಾಗುವುದಿಲ್ಲ. ಪ್ರಾಣಿಮಾತ್ರವು ಕಾಲಾಧೀನವಾದುದರಿಂದ ಹಗಲು, ರಾತ್ರಿಗಳು ಉರುಳಿದವೆಂದರೆ, ಆಯುಸ್ಸೂತ್ರವೂ ಸವೆಯುತ್ತ ಬರುವಂತೆ ನನಗೂ ಇದೇ ಗತಿ ಬಂದೀತೆಂದು ನೀನು ಭಯ ಪಡಬೇಕಾಗಿಲ್ಲ. ದಿವಾ-ನಿಶಿಗಳಲ್ಲಾಗಲೀ, ಪ್ರಭಾತ ಸಂಧ್ಯಾಕಾಲಗಳಲ್ಲಾಗಲೀ ನಿನಗೆ ಮೃತ್ಯು ಬರುವುದಿಲ್ಲ. ಇದನ್ನು ನಾನು ನಿನಗೆ ವರವಾಗಿ ಅನುಗ್ರಹಿಸಿರುವೆನು. ನನ್ನ ಮಾತು ಎಂದೆಂದಿಗೂ ವಿತಥವಾಗುವುದಿಲ್ಲ. ||೬೩||

ಇದೋ, ಈ ಅಮೃತ ಕಲಶವನ್ನು ಕೊಡುವೆನು, ತೆಗೆದುಕೋ. ಇದು ಎಲ್ಲಿಯ ತನಕ ನಿನ್ನ ಕಂಠದಲ್ಲಿರುವುದೋ, ಅಲ್ಲಿಯ ವರೆಗೂ ಮೃತ್ಯುದೇವತೆ ನಿನ್ನ

ನಿಷ್ಕಾಸಂಗೋಽಹಿದಂ ಯಸ್ತೇ ತಸ್ಮಾನ್ಮೃತ್ಯುರ್ಭವಿಷ್ಯತಿ ।
ದೇವೋ ಯೋಽವತರೇತ್ಕೋಽಪಿ ಘುಸ್ಪೃಕ್ ಕೇಶಾಗ್ರತೋ ದಿವಮ್
॥೪೩॥

ಯಸ್ಯಾಂಗುಷ್ಠನಖಾಗ್ರೇ ಸ್ಯುಃ ಬ್ರಹ್ಮಾಂಡಾನಾಂ ಹಿ ಕೋಟಯಃ ।
ಸ ತ್ವಾಂ ಹನಿಷ್ಯತಿ ವಿಭುರನ್ಯಸ್ಮಾದಭಯಂ ತವ ॥೪೬॥

ಮದ್ವರಸ್ಯ ಪ್ರಸಾದೇನ ಸರ್ವಂ ತೃಣಮಯಂ ತವ ।
ತ್ರೈಲೋಕ್ಯರಾಜ್ಯಂ ತೇ ದತ್ತಂ ನಾತ್ರ ಕಾರ್ಯಾ ವಿಚಾರಣಾ ॥೪೭॥

---

ಇದನ್ನು ನಿನ್ನ ಕಂಠದಿಂದ ಯಾರು ಕಸಿದು ತೆಗೆದೊಗೆಯುವನೋ, ಆ ಕ್ಷಣವೇ ಅವನಿಂದ ನಿನಗೆ ಮೃತ್ಯು ಒದಗಿತೆಂದು ತಿಳಿ. ಆದರೆ ನಿನಗೆ ಮೃತ್ಯು ಬರಬೇಕಾದರೆ, ಅಂಥಿಂಥವರಿಂದ ಬರಲಾರದು. ನಿನ್ನನ್ನು ಕೊಲ್ಲುವುದಕ್ಕಾಗಿ ಯಾವುದೋ ಒಂದು ರೂಪದಿಂದ ಸಾಕ್ಷಾತ್ಪರವಸ್ತುವೇ ಅವತರಿಸಿ ಬರಬೇಕಾಗುವುದು. ಅವನ ಗುರುತನ್ನು ಸಹ ಸ್ವಲ್ಪಮಟ್ಟಿಗೆ ನಿನಗೆ ತಿಳಿಸಿರುತ್ತೇನೆ. ಅವನ ದೈರ್ಘ್ಯ ಅಪರಿಮಿತವಾದುದೆಂದು ತಿಳಿ. ಎಂದರೆ ಅವನ ತಲೆಗೂದಲು ನಭೋಮಂಡಲವನ್ನೂ ಮುಟ್ಟುವಂತಿರುವುದು. ॥೪೫॥

ಅವನ ಪಾದಾಂಗುಷ್ಠದ ಹೊಳೆವ ಉಗುರಿನಲ್ಲಿ ಕೋಟ್ಯವಧಿ ಬ್ರಹ್ಮಾಂಡಗಳೂ ತೋರಿಬರುವುವು. ಅವಕ್ಕೆಲ್ಲ ಆ ಮಹಾಪುರುಷನ ಪಾದಾಂಗುಷ್ಠವೇ ಆಧಾರವಾದುದು. ಅವನು ಸರ್ವವ್ಯಾಪಿಯಾದ ವಸ್ತು. ಅವನೇ ನಿನ್ನನ್ನು ಕೊಲ್ಲತಕ್ಕವನು. ಅವನನ್ನುಳಿದು ಮತ್ತೆ ಯಾರಿಂದಲೂ ನಿನಗೆ ಮರಣ ಉಂಟಾಗುವುದಿಲ್ಲ. ॥೪೬॥

ನನ್ನ ವರದ ಮಹಿಮೆಯಿಂದ ಜಗತ್ತಿನಲ್ಲಿರಬಹುದಾದ ಎಂತಹ ಪ್ರಬಲತರ ಹಾಗೂ ಕಠಿಣ ವಸ್ತುವಾದರೂ ಅದು ನಿನಗೆ ತೃಣಪ್ರಾಯವಾಗಿರುವುದು. ತ್ರಿ-ಭುವನಗಳ ಆಧಿಪತ್ಯವನ್ನು ನಿನಗೆ ಅನುಗ್ರಹಿಸಿ ಕೊಟ್ಟಿರುವೆನು. ನೀನು ಸ್ವೇಚ್ಛೆಯಿಂದ

**ಕ ಉವಾಚ :—**

**ಏವಂ ನಾನಾ ವರಾ೯ ದತ್ವಾಂತರ್ದಧೇ ಸವಿತಾ ತದಾ ।**
**ಸೋsಪ್ಯಾನಂದಸಮಾಯುಕ್ತೋ ಜಗಾಮ ನಿಜಮಂದಿರಮ್ ॥೪೮॥**

**ಜನನೀ ಚ ಪಿತಾ ತಸ್ಯ ಮೂರ್ಧ್ನ್ಯಾಘ್ರಾಯಾಪತನ್ಮುದಮ್ ।**
**ಊಚತುಸ್ತಂ ತದಾ ಪುತ್ರಂ**

**ತಾವೂಚತುಃ :—**

**ವಿರಹಾತ್ತೇsನ್ನವರ್ಜಿತೌ ॥೪೯॥**

---

ಆಧಿಪತ್ಯವನ್ನು ನಡೆಸಿ, ಬೇಕಾದ ಭೋಗಗಳನ್ನು ಅನುಭವಿಸಬಹುದು. ಈ ಬಗ್ಗೆ ನೀನು ಸ್ವಲ್ಪವೂ ಚಿಂತಿಸಬೇಕಾಗಿರುವುದಿಲ್ಲ. ॥೪೭॥

ಬ್ರಹ್ಮಾ :—

ಸೂರ್ಯನು ಈ ರೀತಿಯಾಗಿ ನುಡಿದು, ಸಿಂಧುವಿಗೆ ಅನೇಕ ಅಮೋಘ ವರಗಳನ್ನು ಅನುಗ್ರಹಿಸಿ, ಇದ್ದಕ್ಕಿದ್ದಂತೆಯೇ ಅಂತರ್ಹಿತನಾದನು. ತಾನು ಬಯಸಿದ್ದಕ್ಕಿಂತಲೂ ಅತಿಶಯವಾಗಿ ವರಗಳು ಲಭಿಸಿದುದರಿಂದ ರಾಜಪುತ್ರನಿಗೆ ಮಿತಿಮೀರಿದ ಸಂತೋಷ ಉಂಟಾಗಿದ್ದಿತು. ಬಂದ ಕಾರ್ಯವು ಸುಮುಖವಾಗಿ ಕೈಗೂಡಿದುದಕ್ಕೆ ಬಹಳ ಮಟ್ಟಿಗೆ ರಕ್ಕಸನು ಉಲ್ಲಾಸಗೊಂಡು ತನ್ನ ಮನೆಗೆ ಹಿಂದಿರುಗಿದನು. ॥೪೮॥

ತಮ್ಮ ಏಕಮಾತ್ರಪುತ್ರನಾದ ಸಿಂಧು ಇಷ್ಟು ಸುದೀರ್ಘಕಾಲ ಕಠಿಣವಾಗಿ ತಪಸ್ಸನ್ನು ಆಚರಿಸಿ ಸೂರ್ಯನಾರಾಯಣನನ್ನು ಪ್ರಸನ್ನೀಕರಿಕೊಂಡು, ಅಮೋಘ ವರಗಳೊಡನೆ ಹಿಂದಿರುಗಿ ಬಂದುದನ್ನು ಕಂಡ ಅವನ ಜನನೀ—ಜನಕರು ಬಹಳ ಸಂತೋಷದಿಂದ ಅವನನ್ನು ಅಪ್ಪಿಕೊಂಡು, ನೆತ್ತಿಯನ್ನು ಆಘ್ರಾಣಿಸಿದರು. ಆನಂದದ ಭರವು ಸ್ವಲ್ಪ ಕಡಿಮೆಯಾದ ಬಳಿಕ, ಮಗನನ್ನು ಕುರಿತು ತಾವು ಇದುವರೆಗೂ ಅನುಭವಿಸಿದ ಪುತ್ರವಿರಹದ ತಾಪವನ್ನು ಹೇಳಲಾರಂಭಿಸಿದರು.

ತಂದೆತಾಯಿಯರು :—

ವತ್ಸ! ನಿನ್ನ ವಿರಹವನ್ನು ಸಹಿಸಲಾರದೇ ಅನ್ನವನ್ನು ಸಹ ನಾವು ತ್ಯಜಿಸಿ ಬಿಟ್ಟಿರುವೆ. ॥೪೯॥

**ಚಿಂತಯಾ ಕೃಶತಾಂ ಯಾತೌ ಪಶ್ಯ ಪುತ್ರ ! ದಶಾಮಿಮಾಮ್ ।**

**ಕ ಉವಾಚ :—**

**ತಯೋಃ ಪಾದಂ ಪ್ರಣಮ್ಯಾಹ ಸ ಪುತ್ರೋ ಹರ್ಷನಿರ್ಭರಃ ॥೫೦॥**

**ಸಿಂಧುರುವಾಚ :—**

**ಪ್ರಸನ್ನಃ ಸವಿತಾ ಮಹ್ಯಂ ತ್ರೈಲೋಕ್ಯಸ್ವಾಮಿತಾಮದಾತ್ ।**
**ಸಾಧಯಿಷ್ಯೇ ತದ್ವರಾತ್ತಾಂ ನ ಚಿಂತಾಂ ಕರ್ತುಮರ್ಹಥಃ ॥೫೧॥**

---

ಪುತ್ರ! ನಿನ್ನ ವಿಷಯವನ್ನು ಕುರಿತು ಅಹರ್ನಿಶಿ ಚಿಂತಿಸುತ್ತ ಕ್ಷಯಿಸಿಹೋಗಿ ಯಾವ ಪರಿಸ್ಥಿತಿಗೆ ಬಂದಿರುವೆವು ಎಂಬುದನ್ನಾದರೂ ನೋಡು.

ಬ್ರಹ್ಮಾ ;—

ವೃದ್ಧರಾದ ತಂದೆ-ತಾಯಿಯರು ಕಳಕಳಿಯಿಂದ ನುಡಿದ ಈ ವಚನಗಳನ್ನು ಕೇಳಿ ಸಿಂಧುವಿಗೆ ಬಹಳ ವ್ಯಥೆಯಾಯಿತು. ಆದರೂ ತಾನು ಅತಿ ಕಷ್ಟದಿಂದ ಸಂಪಾದಿಸಿದ ವರಮಹಿಮೆಯನ್ನು ತಂದೆ-ತಾಯಿಯರಿಗೆ ತಿಳಿಸುವಂತಹ ಸುಯೋಗ ತನಗೆ ದೊರೆಯಿತಲ್ಲ ಎಂದು ಬಗೆದು ಬಹಳ ಹರ್ಷವೆನಿಸಿತು. ಮೊದಲು ಅವರ ಚರಣಗಳಿಗೆ ಎರಗಿ, ಅನಂತರ ಮುಂದಿನ ಮಾತುಗಳನ್ನು ಆಡಿದನು. ॥೫೦॥

ಸಿಂಧು :—

ಪರಮಪೂಜ್ಯರೇ! ನಿಮ್ಮ ಆಶೀರ್ವಾದ ವಿಶೇಷದಿಂದ ನನಗೆ ಕಠಿಣವಾಗಿ ತಪಸ್ಸುಮಾಡುವ ಹಾಗೂ ತತ್ಫಲವಾಗಿ ಸೂರ್ಯನಾರಾಯಣನನ್ನು ಪ್ರಸನ್ನೀಕರಿಸಿಕೊಳ್ಳುವ ಅತ್ಯಪೂರ್ವ ಸನ್ನಿವೇಶ-ಸಾಮರ್ಥ್ಯಗಳು ಒದಗಿದವು. ದೇವನು ನನ್ನೆದುರು ಪ್ರತ್ಯಕ್ಷವಾಗಿ ಬಂದು ತ್ರೈಲೋಕಾಧಿಪತ್ಯವನ್ನು ನನಗೆ ಅನುಗ್ರಹಿಸಿ ಕೊಟ್ಟಿರುವನು. ಆ ವರಪ್ರಭಾವದಿಂದ ಜಗತ್ತಿನಲ್ಲಿ ಯಾವುದು ಅತ್ಯಸಾಧ್ಯವಾದುದೋ, ಅದನ್ನೆಲ್ಲ ನಾನು ಬಹಳ ಸುಲಭವಾಗಿಯೇ ಸಾಧಿಸಿಬಿಡುವೆನು. ಈ ಬಗ್ಗೆ ನೀವು ಎಳ್ಳಷ್ಟೂ ಚಿಂತಿಸಬೇಕಾದುದಿಲ್ಲ. ॥೫೧॥

ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ ' ಸೂರ್ಯ
ವರಪ್ರದಾನಂ ' ನಾಮ ಚತುಸ್ಸಪ್ತತಿ
ತಮೋಽಧ್ಯಾಯಃ

---

ಇಲ್ಲಿಗೆ ಶ್ರೀ ಗಣೇಶಪುರಾಣ ಉತ್ತರಖಂಡದಲ್ಲಿ ' ಸೂರ್ಯವರಪ್ರದಾನ '
ಎಂಬಲ್ಲಿಗೆ ಎಪ್ಪತ್ತು ನಾಲ್ಕನೆಯ ಅಧ್ಯಾಯಾನುವಾದವು ಮುಗಿದುದು.

॥ ಶ್ರೀ ಗಣೇಶಾಯ ನಮಃ ॥

# ಅಥ ಪಂಚಸಪ್ತತಿತಮೋಽಧ್ಯಾಯಃ

**ಕ ಉವಾಚ :—**

**ಬುದ್ಧಿಮಂತಂ ಸುತಂ ಜ್ಞಾತ್ವಾ ಸವಿತುರ್ವರದರ್ಪಿತಮ್ ।**
**ರಾಜ್ಯಂ ತಸ್ಮೈ ದದೌ ಸರ್ವಂ ದೇಶಕೋಶಬಲಾನ್ವಿತಮ್ ॥೧॥**

**ಪಿತಾ ವನಂ ಯಯೌ ತಸ್ಯ[1] ಸ್ವಾತ್ಮಾಽರಾಧನಲಾಲಸಃ ।**

॥ಶ್ರೀ ಗಣೇಶಾಯ ನಮಃ॥

## ೭೫ ನೆಯ ಅಧ್ಯಾಯ.

ಬ್ರಹ್ಮಾ :-

ವತ್ಸ, ವ್ಯಾಸ! ಮುಂದಿನ ಚಮತ್ಕಾರವನ್ನು ಕೇಳು. ಸಿಂಧು ವಾಡಿದ ಸಮಯೋಚಿತ ಮಾತುಗಳು, ತಪೋಽನುಷ್ಠಾನದ ಕಾಲದಲ್ಲಿ ಅವನು ತೋರಿಸಿದ ಸ್ಥೈರ್ಯ, ಭಾವಪರಿಪೂರ್ಣಧ್ಯಾನ, ವರವನ್ನು ಕೇಳುವಾಗ ಅವನಿಗಿದ್ದ ಅಪ್ರಮತ್ತತೆ ಇವನ್ನೆಲ್ಲ ವಿಮರ್ಶಿಸಿ, ಇವನು ರಾಜ್ಯಾಡಳಿತಕ್ಕೆ ದಕ್ಷನಾದವನು ಎಂದು ಅವನ ತಂದೆ ; ಚಕ್ರಪಾಣಿಯು ಮನಸ್ಸಿನಲ್ಲೇ ನಿಶ್ಚಯಿಸಿ, ದೇಶ, ಕೋಶ, ಬಲ (ಸೈನ್ಯ) ಯುತವಾದ ತನ್ನ ಅಖಂಡ ರಾಜ್ಯವನ್ನೂ ಮಗನಿಗೆ ಒಪ್ಪಿಸಿದನು. ॥೧॥

ಚಕ್ರಪಾಣಿಯು ಇದುವರೆಗೂ ಪ್ರಜಾಪರಿಪಾಲನಾಕಾರ್ಯದಲ್ಲೂ, ವಿಷಯೋಪಭೋಗಗಳಲ್ಲೂ, ದೇಶಾಟನದಲ್ಲೂ ಆಸಕ್ತಚಿತ್ತನಾಗಿದ್ದುದರಿಂದ ಸದ್ಗತಿ ಸಾಧನೆಗಳನ್ನು ಸಾಧಿಸಲಿಕ್ಕೆ ಸಮಯವೇ ಸಿಕ್ಕಿರಲಿಲ್ಲ. ರಾಜ್ಯಧುರಂಧರರ ಪರಿಸ್ಥಿತಿಯೇ ಹೀಗೆ. ರಾಜ್ಯವೆಂಬುದು ಸುಖಸಾಧನೆ ಎಂದು ಅಜ್ಞರು ಭಾವಿಸಿ, ಅದನ್ನು ಪಡೆಯುಲಿಕ್ಕಾಗಿ ಅನೇಕ ಸಾಹಸ ಕೃತ್ಯಗಳನ್ನೂ, ಮಾತಾಪಿತೃ ಹಾಗೂ ಧರ್ಮದ್ರೋಹ ಕಾರ್ಯಗಳನ್ನೂ ಮಾಡಲು ಹಿಂಜರಿಯುವುದಿಲ್ಲ. 'ರಾಜ್ಯಂ ಸ್ವಹಸ್ತಧೃತದಂಡಮಿವಾತಪತ್ರಮ್ ' ಎಂದರೆ ಆತಪತ್ರವ (ಛತ್ರಿಯ) ನ್ನು ಭದ್ರ

[1] ವಿವರಣೆಗೆ ಪರಿಶಿಷ್ಟವನ್ನು ನೋಡಿರಿ.

ಸ ತು ಪಿತ್ರಾಭಿಷಿಕ್ತಸ್ಸ್ವಂ ರಾಜ್ಯಂ ಕರ್ತುಂ ಮನೋ ದಧೇ ॥೨॥

ಶ್ರೇಣೀಮುಖ್ಯಾನ್ ಸಮಾಹೂಯ ಪ್ರಕೃತೀರಧಿಕಾರಿಣಃ ।
ಅಸ್ಥಾಪಯತ್ಸ್ವಾಧಿಕಾರೇ ಮಾನಯಿತ್ವಾಂಶುಕಾದಿಭಿಃ ॥೩॥

ಡಿಂಡೀರವೇಣ ಸ್ವಾಜ್ಞಾಯಾ ಭಂಗೇ ದೋಷಮಘೋಷಯತ್ ।
ದಿಗ್ಜಯಾರ್ಥಂ ತತೋ ವೀರಾನಾಜ್ಞಾಪಯತ ಸತ್ವರಮ್ ॥೪॥

ವಾಗಿ ಹಿಡಿದಿದ್ದರೆ, ಅದು ಇವನಿಗೆ ಹೇಗೆ ನೆರಳನ್ನು ಕೊಡುವುದೋ, ಅದರಂತೆ ರಾಜಧರ್ಮ, ನೀತಿ ಇವು ಚ್ಯುತವಾಗಿ ಪ್ರಜಾಕ್ಷೋಭೆಯುಂಟಾಗದಂತೆ ಆಡಳಿತ ಸೂತ್ರಗಳನ್ನು ಅಧೀನಗೊಳಿಸಿಕೊಂಡು ರಾಜ್ಯವಾಳಿದರೆ ಆ ರಾಜ್ಯವು ಇವನಿಗೆ ಸುಖಮಯವಾಗಿ ಪರಿಣಮಿಸುವುದು. ಅಸ್ತು. ಆತ್ಮಾನುಸಂಧಾನಮಾಡುತ್ತ ತನ್ನ ಶೇಷಾಯುಷ್ಯವನ್ನು ಸವೆಸಬೇಕೆಂದು ಬಯಸಿದ ಚಕ್ರಪಾಣಿ ಮಹಾರಾಜನು ತಪಸ್ಸಾಧನೆಗಾಗಿ ಅರಣ್ಯಪ್ರದೇಶಕ್ಕೆ ಆನಂದದಿಂದ ತೆರಳಿದನು. ಇದುವರೆಗೂ ಒಂದು ಬಗೆಯಿಂದ ಕಾಲಯಾಪನೆಯನ್ನು ಮಾಡುತ್ತಲಿದ್ದ ಸಿಂಧು ತನ್ನ ತಂದೆಯು ತನಗೆ ರಾಜ್ಯಾಭಿಷೇಕವನ್ನು ಮಾಡಿದ ಬಳಿಕ, ರಾಜ್ಯವು ಸುರಕ್ಷಿತವಾಗಿರುವಂತೆ ಮಾಡಬೇಕು ' ಎಂಬ ಅಭಿಲಾಷೆಯುಳ್ಳವನಾದನು. ॥೨॥

ನಾಗರಿಕರಲ್ಲಿ ಪ್ರಮುಖರಾದವರನ್ನೂ, ಮಂತ್ರಿಗಳನ್ನೂ, ಕೋಶಾಧ್ಯಕ್ಷ, ಸೈನ್ಯಾಧಿಪತಿ ಮೊದಲಾದ ಅಧಿಕಾರಿ ವರ್ಗದವರನ್ನೂ ಕೂಡಲೇ ಸಮೀಪಕ್ಕೆ ಬರ ಮಾಡಿಕೊಂಡು, ಯಾವ ಯಾವ ಕೆಲಸಕ್ಕೆ ಯಾರು ಯಾರು ಅರ್ಹರೋ ಮತ್ತು ದಕ್ಷರೋ ಅವರವರನ್ನು ಆಯಾ ಸ್ಥಾನಗಳಲ್ಲಿ ನಿಯಮಿಸಿ, ದಿವ್ಯ ವಸ್ತ್ರ, ಆಭರಣಾದ್ಯಮೂಲ್ಯ ವಸ್ತುಗಳನ್ನಿತ್ತು ಗೌರವಿಸಿದನು. ॥೩॥

ತಾನು ವಿಧಿಸಿದ ಆಜ್ಞೆಗಳನ್ನು ಉಲ್ಲಂಘಿಸಿದರಾಗಲೀ, ಅಥವಾ ತಾನು ನಿಯಮಿಸಿರುವ ಅಧಿಕಾರಿಗಳನ್ನು ಅಲಕ್ಷಿಸಿದರಾಗಲೀ ಈ ಬಗೆಯ ಅಪರಾಧಗಳನ್ನು ಮಾಡುವವರಿಗೆ ಅವರೆಷ್ಟೇ ಆಪ್ತರಿರಲಿ ಅಥವಾ ಆತ್ಮೀಯರಾಗಿರಲಿ ಅವರನ್ನು ಬಹಳ ಕ್ರೂರವಾಗಿ ಶಿಕ್ಷಿಸುವೆನು ಎಂಬ ಅಂಶವನ್ನು ಪ್ರತಿಯೊಬ್ಬ ಪ್ರಜೆಗೂ ಮನ

ತೇಜಸಾ ಹ್ರೇಪಯಂತ್ಸೂರ್ಯಮತಿಭೀಷಣವಿಗ್ರಹಃ ।
ವೀರಾ ಅಗ್ರೇ ಪ್ರಯಾಂತಿ ಸ್ಮ ವಿಕರಾಲಾರುಣಾನನಾಃ ||೫||

ನಗ್ನಾನಾಶಸ್ತ್ರಧರಾ ರಜಶ್ಛಾದಿತಭಾಸ್ಕರಾಃ ।
ತತೋ ಗಜಾಶ್ಚತುರ್ದಂತಾ ನಾನಾವರ್ಣವಿಭೂಷಿತಾಃ ||೬||

---

ದಟ್ಟಾಗುವಂತೆ ಡಂಗುರದವರ ಮೂಲಕ ಸಾರಿಸಿದನು. ಸಿಂಧುದೈತ್ಯನು ಸ್ವಯಂ ವೀರಪುರುಷನಾದುದರಿಂದಲೂ 'ಅಸಂತುಷ್ಟಾ ದ್ವಿಜಾ ನಷ್ಟಾಃ ಸಂತುಷ್ಟಾಶ್ಚ ಮಹೀಭುಜಃ || ಸಲಜ್ಜಾ ಗಣಿಕಾ ನಷ್ಟಾ ನಿರ್ಲಜ್ಜಾಶ್ಚ ಕುಲಸ್ತ್ರಿಯಃ' ಎಂಬ ಲೋಕನೀತಿಯನ್ನು ಅರಿತವನಾದುದರಿಂದಲೂ ದೊರೆತ ರಾಜ್ಯಲಕ್ಷ್ಮಿಯನ್ನು ಯಥೇಷ್ಟವಾಗಿ ಭೋಗಿಸುತ್ತ ಸುಖದಿಂದ ಕಾಲಯಾಪನೆಯನ್ನು ಮಾಡಲು ಇಷ್ಟಪಡದೇ, ದೇಶ-ವಿದೇಶೀಯ ರಾಜರನ್ನೆಲ್ಲ ಜಯಿಸಿ, ತನ್ನ ರಾಜ್ಯವನ್ನು ವಿಸ್ತರಿಸಬೇಕೆಂದೂ, ಇತರ ರಾಜರನ್ನೆಲ್ಲ ಮಾಂಡಲಿಕರನ್ನಾಗಿ ಮಾಡಿಕೊಳ್ಳಬೇಕೆಂದೂ ಬಯಸಿ, ಜೈತ್ರಯಾತ್ರೆಗೆ ಬೇಗನೆ ಸಿದ್ಧರಾಗುವಂತೆ ಸಂಬಂಧಪಟ್ಟ ಅಧಿಕಾರಿಗಳಿಗೆ ಆಜ್ಞೆಯನ್ನಿತ್ತನು. ||೪||

ಸಿಂಧು ದೈತ್ಯನ ಭೀಕರಾಕೃತಿ, ಶಾರೀರಕ ತೇಜಸ್ಸು ಇವು ಹೇಗಿದ್ದವೆಂಬುದನ್ನು ಸ್ವಲ್ಪಮಟ್ಟಿಗೆ ವರ್ಣಿಸುವೆನು, ಕೇಳು. ಅವನ ದೇಹಗತ ಪ್ರಖರ ತೇಜಸ್ಸು ಸಹಸ್ರ ಕಿರಣನನ್ನು ಸಹ ನಾಚಿಸುತ್ತಲಿದ್ದಿತು. ಅವನ ಭೀಷಣ ಮುಖಮುದ್ರೆಯನ್ನು ನೋಡಿ, ಭಯಂಕರಾಕಾರಗಳೆನಿಸಿದ ಭೂತ-ಪ್ರೇತ-ಪಿಶಾಚಗಳೂ ಸಹ ಹೆದರಿ ನಡುಗುತ್ತಲಿದ್ದವು. ವ್ಯಾಸ ! ಸಿಂಧುವು ತನ್ನ ವರ್ಣ, ಕ್ರೌರ್ಯ ಹಾಗೂ ಭೀಕರತೆ ಇವಕ್ಕೆ ತಕ್ಕಂತಹ ರೂಪ-ರೇಖೆಗಳುಳ್ಳವರನ್ನೇ ಆರಿಸಿ ತನ್ನ ಸೈನ್ಯದಲ್ಲಿ ನಿಯಮಿಸಿದ್ದನಾದುದರಿಂದ ಪ್ರತಿಯೊಬ್ಬ ಯೋಧನೂ 'ಸಿಂಧುವೋ' ಎಂಬಂತೆ ತೋರಿಬರುತ್ತಲಿದ್ದನು. ದಿಗ್ವಿಜಯಕ್ಕೆ ಹೊರಟ ದೈತ್ಯ ಸೇನೆಯ ಮೆರವಣಿಗೆಯಲ್ಲಿ ಕೆಂಪಾಗಿಯೂ, ವಿಕಾರವಾಗಿಯೂ ಇರುವ ವದನವುಳ್ಳ ವೀರ ಪುರುಷರು ಮುಂದುಗಡೆ ನಡೆದರು- ||೫||

ಇವರು ತಮ್ಮ ತಮ್ಮ ಶಸ್ತ್ರಾಸ್ತ್ರಗಳನ್ನು ಕೋಶಗಳಿಂದ ಹೊರಕ್ಕೆ ಹಿರಿದು

ಮಹಾಮಾತ್ಯಸಮಾರೂಢಾಶ್ಚಂಚಲಾಃ ಪರ್ವತಾ ಇವ ||೭||

ನಾನಾವರ್ಣಧ್ವಜಯುತಾ ದಿಗ್ಗಜಾನ್ ಭೇತ್ತುಮಿಚ್ಛವಃ ।
ಘಂಟಾಘೋಷೇಣ ಮಹತಾ ನಾದಯಂತೋ ದಿಗಂತರಮ್ ||೮||

---

ಯುದ್ಧಕ್ಕೆ ಸಜ್ಜರಾಗಿಯೇ ನಡೆಯುತ್ತಲಿದ್ದರು. ನಡೆಯುವಾಗ ಭೂಮಿಯು ನಡುಗುವಂತೆ ಪದಾಘಾತವನ್ನು ಮಾಡುತ್ತಲಿದ್ದುದರಿಂದ ಭೂಮಿಯ ಧೂಳಿಯು ಮೇಲಕ್ಕೆದ್ದು, ನಭೋಮಂಡಲವನ್ನೆಲ್ಲ ವ್ಯಾಪಿಸುವಂತೆ ಮಾಡುತ್ತಲಿದ್ದರು. ಇವರ ಹಿಂದೆ ಗಜಾಳಿಯು ಹೊರಟಿತು- ಪ್ರತಿಯೊಂದು ಆನೆಯೂ ಪರ್ವತದಂತಹ ಆಕೃತಿಯುಳ್ಳದ್ದು.. ಪ್ರತಿಯೊಂದಕ್ಕೂ ಐರಾವತದಂತೆ ನಾಲ್ಕು ನಾಲ್ಕು ಕೊಂಬುಗಳಿದ್ದವು. ಇವನ್ನು ಬಣ್ಣ ಬಣ್ಣಗಳ ಅಮೂಲ್ಯ ವಸ್ತ್ರಗಳಿಂದ ಆಚ್ಛಾದಿಸಿ, ಅನೇಕ ದಿವ್ಯಾಭರಣಗಳಿಂದ ಅಲಂಕರಿಸಿದ್ದರು. ||೬||

ಪ್ರತಿಯೊಂದು ಆನೆಯ ಸೊಂಡಲಿನಲ್ಲೂ ಕಬ್ಬಿಣದ ಸಂಪಣಿಗಳು ಶೋಭಿಸುತ್ತಲಿದ್ದವು. ಆನೆಗಳು ನಡೆಯುವಾಗ ಭೂಮಿಯನ್ನು ಕಂಪಿಸುತ್ತ ನಡೆಯುತ್ತಲಿದ್ದವು. ಅವನ್ನು ನಡೆಸುವ ಮಾಹುತರು ಬಹಳ ಚತುರರೂ, ಗಜಗಳ ಸ್ವಭಾವವನ್ನು ಸಂಪೂರ್ಣವಾಗಿ ಅರಿತವರೂ ಆಗಿದ್ದರು. ಇವು ಬಹಳ ಚಾಕಚಕ್ಯದಿಂದ ನಡೆಯುತ್ತಿರುವುದನ್ನು ನೋಡಿದರೆ, ಇವೇನು ಚಲಿಸುವ ಪರ್ವತಗಳೋ ಎಂಬಂತೆ ತೋರಿ ಬರುತ್ತಲಿದ್ದಿತು. ||೭||

ರಾಜನ ಕುರುಹುಳ್ಳ ಬಾವುಟಗಳನ್ನು ಬಣ್ಣ-ಬಣ್ಣದ ಬಟ್ಟೆಗಳಿಂದ ನಿರ್ಮಿಸಿ ಆ ಆನೆಗಳ ಮೇಲೆ ಕಟ್ಟಿದ್ದುದರಿಂದ ಬಣ್ಣ-ಬಣ್ಣದ ಆನೆಗಳೋ ಎಂಬಂತೆ ತೋರಿ ಬರುತ್ತಲಿದ್ದವು. ಅವುಗಳ ಉತ್ಸಾಹ, ಶಕ್ತಿ ಇವನ್ನು ಗಮನಿಸಿದರೆ, ಒಂದೊಂದೂ ಅಷ್ಟ ದಿಗ್ಗಜಗಳನ್ನು ಜಯಿಸಿಬಿಡಬಲ್ಲದೋ ಎಂಬಂತೆ ಕಂಡುಬರುವುದು. ಆನೆಗಳ ಕಂಠದಲ್ಲಿ ದೊಡ್ಡ ಘಂಟೆಗಳನ್ನು ಕಟ್ಟುವರಷ್ಟೇ ? ಇವು ಚಲಿಸುವಾಗ ಅತ್ತಿತ್ತ ಕತ್ತುಗಳನ್ನು ಅಲುಗಾಡಿಸುತ್ತ ನಡೆಯುತ್ತಿದ್ದವಾಗಿ, ಘಂಟೆಗಳು ಧ್ವನಿಗೈದು, ದಿಗಂಚುಗಳನ್ನು ಪ್ರತಿಧ್ವನಿಗೊಳಿಸುತ್ತಲಿದ್ದವು. ||೮||

**ಅಶ್ವಾರೋಹಾ ಯಯುಃ ಪಶ್ಚಾನ್ನಾನಾಲಂಕರಣಾನ್ವಿತಾಃ ।**
**ಅಸಂಖ್ಯತೂಣಧನುಷಾಂ ಶಸ್ತ್ರಾಣಾಂ ಮಂಡಲಾನ್ವಿತಾಃ ॥೯॥**

**ಸಿಂಧುರ್ದೈತ್ಯಶ್ಚ ಮಾಮಧ್ಯೇ ರರಾಜ ಹಯಪೃಷ್ಠಗಃ ।**
**ಮುಕ್ತಾಮಾಲಾಲಸತ್ಕಂಠೋ ಧನುರ್ಬಾಣಲಸತ್ಕರಃ ॥೧೦॥**

**ಖಡ್ಗಖೇಟಧರೋ ಗಚ್ಛಂಶ್ಚೂರ್ಣಯನ್ ದ್ರುಮ-ಪರ್ವತಾನ್ ।**
**ಯದ್ಯನ್ನಗರಮುದ್ದಿಶ್ಯ ಯಾತಿ ದೈತ್ಯೋ ಮಹಾಬಲಃ ॥೧೧॥**

---

ಆನೆ ಸಾಲುಗಳ ಹಿಂದುಗಡೆ ಕುದುರೆಯ ಪಡೆಯವರು ಸಾಗಿ ಬರುತ್ತಲಿದ್ದರು. ಅವರ ವೇಷ–ಭೂಷಣಗಳು ಅನ್ಯಾದೃಶವಾದುವು. ಅಶ್ವಾರೋಹಿಗಳ ಬಳಿ ಅಸಂಖ್ಯ ಬಾಣಗಳುಳ್ಳ ಬತ್ತಳಿಕೆಗಳೂ, ಬಿಲ್ಲುಗಳೂ ಮತ್ತು ಅನೇಕ ಬಗೆಯ ಶಸ್ತ್ರಗಳೂ ಇದ್ದುವು. ಇವನ್ನೆಲ್ಲ ಧರಿಸಿ ಅವರು ಯುದ್ಧೋತ್ಸಾಹದಿಂದ ಹಾರಾಡುತ್ತ ನಡೆದಿದ್ದರು. ॥೯॥

ಇವರ ಹಿಂದೆ ದೈತ್ಯರಾಜನಾದ ಸಿಂಧು ಒಂದು ದಿವ್ಯಾಶ್ವವನ್ನೇರಿ ನಡೆದಿದ್ದನು. ಅವನ ವೈಭವವನ್ನು ಏನೆಂದು ವರ್ಣಿಸಲಿ,? ದೊಡ್ಡ ದೊಡ್ಡ ಉಜ್ವಲ ಮುತ್ತುಗಳಿಂದ ನಿರ್ಮಿತವಾದ ಸರಗಳನ್ನು ಕೊರಳಲ್ಲಿ ಧರಿಸಿದ್ದನು. ಹೊಳೆವ ಬಿಲ್ಲು-ಬಾಣಗಳನ್ನು ಕೈಯಲ್ಲಿ ಧರಿಸಿ, ಶೋಭಿಸುತ್ತಲಿದ್ದನು. ॥೧೦॥

ಖಡ್ಗ, ಖೇಟ ಮೊದಲಾದ ನಿಶಿತ ಶಸ್ತ್ರಗಳನ್ನೂ ಧರಿಸಿದ್ದನು. ಅವನ ಯುದ್ಧೋತ್ಸಾಹವನ್ನು ಎಷ್ಟೆಂದು ವರ್ಣಿಸಲಿ? ದಾರಿ ನಡೆವಾಗ ಎದುರಾದ ಸಾಲುಮರಗಳನ್ನೂ, ಪರ್ವತಶ್ರೇಣಿಯನ್ನೂ ಕತ್ತರಿಸುತ್ತ ನಡೆದನು. ಕೇವಲ ಜಡ ವಸ್ತುಗಳು ಸಹ ತನಗೆ ಅಡ್ಡಬರದೇ, ಚೇತನರಂತೆ ತಾವಾಗಿಯೇ ದಾರಿಬಿಟ್ಟು ಸರಿಯಬೇಕೆಂದು ಭಾವಿಸುವಷ್ಟು ಅವನು ಉನ್ಮತ್ತನಾದವನು. ಮಹಾ ಬಲಶಾಲಿಯಾದ ಇವನು ಯಾವ ಯಾವ ನಗರವನ್ನೋ, ಗ್ರಾಮವನ್ನೋ ಅಥವಾ ಹಳ್ಳಿಯನ್ನೋ ಉದ್ದೇಶಿಸಿ ನಡೆದನೆಂದರೆ. ॥೧೧॥

ತಸ್ಯ ತಸ್ಯಾಧಿಪಂ ವೀರಾ ಧೃತ್ವಾ ನಿನ್ಯುರ್ನಿಜಾಧಿಪಮ್ ।
ಸ್ವಕೀಯಂ ನಾಯಕಂ ಚಿಹ್ನಂ ಮುದ್ರಾಂ ತತ್ರ ನ್ಯವೇಶಯನ್ ॥೧೨॥

ತತೋಽನ್ಯೇ ಶರಣಂ ಯಾತಾ ದಾಸಭಾವಮುಪಾಗತಾಃ ।
ಕರದಾಂಸ್ತಾನ್ ಸ ಕೃತ್ವೈವ ರರಕ್ಷ ಸ್ವಪದೇ ಬಲಾತ್ ॥೧೩॥

ಏವಂ ಸರ್ವಾನ್ ವಶಂಚಕ್ರೇ ದೈತ್ಯಕೋಟ್ಯಸ್ತತೋಽನ್ವಯುಃ ।
1 ಶುಂಭೋ 2 ನಿಶುಂಭೋ 3 ವೃತ್ರಶ್ಚ 4 ಪ್ರಚಂಡಃ 5 ಕಾಲ ಏವ ಚ ॥೧೪॥

---

ಕೇವಲ ಚಲನ-ವಲನಗಳಿಂದಲೇ ತಮ್ಮ ಪ್ರಭುವಿನ ಇಂಗಿತಾರ್ಥವನ್ನು ಅರಿಯ ಬಲ್ಲವರಾದ ಸೇವಕವರ್ಗದವರು ತಮ್ಮ ಒಡೆಯನಿಗೆ ಹೆಚ್ಚು ಶ್ರಮವನ್ನು ಕೊಡದೆ ತಾವೇ ಒಳಗೆ ನುಗ್ಗಿ, ಆಯಾ ಪ್ರದೇಶಗಳ ಒಡೆಯರನ್ನು ಸೆರೆಹಿಡಿದು ತಂದು ರಾಕ್ಷಸನ ಬಳಿ ನಿಲ್ಲಿಸುತ್ತಲಿದ್ದರು. ಮತ್ತು ಆಯಾ ನಗರ, ಗ್ರಾಮ, ಪಲ್ಲಿಗಳಲ್ಲಿ ಸಾಕಷ್ಟು ಧಾಂದಲೆಯನ್ನೂ ಹಾಕಿ, ತಮ್ಮ ಭುಜಬಲಗಳಿಂದ ಗೆಲ್ಲಯುವರನ್ನು ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡು, ಅಲ್ಲಲ್ಲಿ ತಮ್ಮ ರಾಜನ ಕುರುಹುಗಳಾದ ಧ್ವಜಗಳನ್ನು ನೆಲೆಗೊಳಿಸಿ ಬರುತ್ತಿದ್ದರು. ॥೧೨॥

ನಾಲ್ಕಾರು ಮಂದಿ ಪ್ರಮುಖರಿಗೆ ಈ ದುಷ್ಪರಿಸ್ಥಿತಿಯೊದಗಿದುದನ್ನು ಕಂಡು ತಮ್ಮ ಭವಿತವ್ಯವೂ ಸಹ ಹೀಗೆಯೇ ಆದೀತೆಂದು ತೀರ್ಮಾನಿಸಿದ ಇತರ ಅರಸರು ಯಾವ ಪ್ರತಿಭಟನೆಯನ್ನೂ ತೋರಿಸದೇ, ತಮ್ಮ ರಾಜ್ಯ, ಕೋಶ, ಪರಿವಾರದೊಡನೆ ಸಿಂಧುವಿಗೆ ಶರಣುಬಂದು, ಆವನ ಸೇವಾವೃತ್ತಿಯನ್ನವಲಂಬಿಸಿ ನಿಂತುಬಿಟ್ಟರು. ಆಗ ದೈತ್ಯನು ಇವರನ್ನು ಸಮೀಪಕ್ಕೆ ಬರಮಾಡಿಕೊಂಡು ಅವರವರ ರಾಜ್ಯದ ಆದಾಯಗಳಿಗೆ ಅನುಗುಣವಾಗಿ ವಾರ್ಷಿಕ ಪೊಗದಿಯನ್ನು ಪ್ರತಿ ವರ್ಷವೂ ತನಗೆ ತಪ್ಪದೇ ತಂದು ತಲುಪಿಸಬೇಕೆಂದು ಬಲಾತ್ಕಾರದಿಂದ ನಿಯಮಿಸಿ, ಸ್ವಪಕ್ಷದವರನ್ನಾಗಿಮಾಡಿಕೊಂಡು ಅವರನ್ನು ರಕ್ಷಿಸಿದನು. ॥೧೩॥

ಕೆಲವರನ್ನು ಸಾಮದಿಂದಲೂ, ಮತ್ತೆ ಕೆಲವರನ್ನು ಭೇದದಿಂದಲೂ ಇತರರನ್ನು ದಂಡದಿಂದಲೂ, ಅಂತೂ ಎಲ್ಲರನ್ನೂ ತನ್ನ ಅಧೀನಕ್ಕೆ ತೆಗೆದುಕೊಂಡು ಸಮ್ರಾ

---

ವಿವರಣೆಗೆ ಪರಿಶಿಷ್ಟವನ್ನು ನೋಡಿರಿ.

1 ಕದಂಬಾಸುರನಾಮಾ ಚ 2 ಶಂಬರಃ 3 ಕಮಲಾಸುರಃ ।
4 ಕೋಲಾಸುರೋಽಬ್ರವೀತ್ತತ್ರ
ಕೋಲಾಸುರೋವಾಚ :—
ಯಥಾ ತ್ರಿಪುರದೈತ್ಯರಾಟ್ ॥೧೫॥
ವಿಜಿತ್ಯ ಲೋಕತ್ರಿತಯಮಧಿಕಾರಾನ್ ಹಿ ನೋ ದದೌ ।
ತಥಾ ಯಚ್ಛಾಧಿಕಾರಾನ್ನೋ ಜಿತ್ವಾ ತ್ರೈಲೋಕ್ಯಮೋಜಸಾ ॥೧೬॥

---

ಜನಾಗಿ ಆಳಲಾರಂಭಿಸಿದನು. ಇವನ ಬಲ-ವೀರ್ಯಗಳು ಕ್ಷಣ-ಕ್ಷಣಕ್ಕೂ ಅಭಿವೃದ್ಧಿಯನ್ನು ಹೊಂದುತ್ತಿದ್ದುದರಿಂದ ಈ ಸುದ್ದಿಯು ಎಲ್ಲರಿಗೂ ಬಹು ಬೇಗನೆ ಮುಟ್ಟಿತು. ಇದನ್ನು ಕೇಳಿದ ಆಗಿನ ಕಾಲದ ಬಲಿಷ್ಠ ದೈತ್ಯವೀರರು 'ತಮಗೊಬ್ಬ ಪ್ರಬಲ ನಾಯಕನು ದೊರೆತನಲ್ಲ' ಎಂದು ಉಬ್ಬಿ, ಎಲ್ಲರೂ ಇವನನ್ನು ಆಶ್ರಯಿಸಿ, ನಿಂತರು. ಇವರು ಒಬ್ಬಿಬ್ಬರೆಂದು ಮಾತ್ರ ಭಾವಿಸಬೇಡ ವ್ಯಾಸ! ಇವರು ಕೋಟಿ ಸಂಖ್ಯೆಗಿಂತಲೂ ಅಧಿಕವಾಗಿದ್ದರು. ಅವರ ಪೈಕಿ ಶುಂಭ,* ನಿಶುಂಭ ವೃತ್ರ, ಪ್ರಚಂಡ, ಕಾಲ. ॥೧೪॥

ಕದಂಬಾಸುರ, ಶಂಬರ, ಕಮಲಾಸುರ, ಕೋಲಾಸುರ ಮೊದಲಾದವರೇ ಪ್ರಮುಖರಾದವರು. ಇವರೆಲ್ಲರೂ ಮಹಾಬಲಿಷ್ಠರು. ಇವರು ಒಮ್ಮೆ ಸಿಂಧುವಿನ ಒಡ್ಡೋಲಗದಲ್ಲಿ ಸಭೆ ಸೇರಿ, ಜೈತ್ರಯಾತ್ರೆಯ ಉದ್ಯಮವನ್ನು ಕುರಿತು ಬಿರುಸಾಗಿ ಆಲೋಚಿಸುತ್ತಿರುವಾಗ ಆ ಪೈಕಿ ಕೋಲಾಸುರನೆಂಬುವನು ಎದ್ದು ನಿಂತು, ದೈತ್ಯರಾಜನನ್ನು ಕುರಿತು ಹೀಗೆ ನುಡಿದನು.

ಕೋಲಾಸುರ :—

ರಾಜನ್! ಹಿಂದೆ ದೈತ್ಯ ಚಕ್ರವರ್ತಿಯಾಗಿದ್ದ ತ್ರಿಪುರಾಸುರನು ॥೧೫॥

ಮೂರು ಲೋಕಗಳನ್ನೂ ಜಯಿಸಿ, ದೇವತೆಗಳ ಆಯಾ ಅಧಿಕಾರ-ವೈಭವಗಳನ್ನು ನಮಗೆಲ್ಲ ವಿತರಿಸಿ, ಅನುಗ್ರಹಿಸಿದ್ದನು. ನೀನೂ ಸಹ ಯಾವ ದೃಷ್ಟಿ

---

* ವಿವರಣೆಗೆ ಪರಿಶಿಷ್ಟವನ್ನು ನೋಡಿರಿ.

**ತಸ್ಮಿನ್ ಹತೇ ಶಿವೇನಾದ್ಯ ದೃಷ್ಟೋಽಸಿ ಪ್ರಬಲೋಽಸುರಃ ।**
**ನ ತೇ ಪರಾಕ್ರಮತುಲಾಂ ಕೃತಾಂತೋಽಪಿ ಲಭೇತ್ಕ್ವಚಿತ್ ॥೧೭॥**

**ತವಾಜ್ಞಾಂ ಕರ್ತುಮಿಚ್ಛಾಮಃ ಸ್ತವ ಸೇನಾಂ ಮಹಾಬಲ ! ।**

**ಕ ಉವಾಚ :—**

**ಏವಮಾಕರ್ಣ್ಯ ತದ್ವಾಕ್ಯಂ ಸಂತುಷ್ಟಸ್ಸಿಂಧುದೈತ್ಯರಾಟ್ ॥೧೮॥**

ಯಿಂದಲೂ ತ್ರಿಪುರಾಸುರನಿಗೆ ಕಡಿಮೆಯಾದವನಲ್ಲ. ವಿಚಾರವಮಾಡಿ ನೋಡಿದರೆ, ಅವನಿಗಿಂತಲೂ ಸಹಸ್ರಾರು ಪಾಲು ನೀನೇ ಅಧಿಕ ಎಂದು ನಮ್ಮೆಲ್ಲರ ನಿಶ್ಚಯ. ನೀನೂ ಸಹ ತ್ರಿಪುರನಂತೆ ನಿನ್ನ ಬಲ-ಸಾಹಸಗಳಿಂದ ಭುವನಗಳನ್ನೆಲ್ಲ ಗೆದ್ದು, ಅಧಿಕಾರಗಳನ್ನು ಅನುಗ್ರಹಿಸು. ॥೧೬॥

ದೈವದುರ್ವಿಪಾಕ, ಪರಶಿವನು ನಮ್ಮ ಈ ದೈತ್ಯಕುಲಕ್ಕೇ ಆರಾಧ್ಯದೈವವಾಗಿದ್ದರೂ ಅಂತಹ ವೀರನನ್ನು ಸಂಹರಿಸಿಬಿಡಬಹುದೇ ? ಏನೋ, ಆದುದು ಆಗಿಯೇ ಹೋಯಿತು. ಇರಲಿ, ತ್ರಿಪುರಾಸುರನು ಹತನಾದ ಬಳಿಕ ನಿನ್ನ ಹೊರತು ಅಂತಹ ಪ್ರಬಲತರ ವೀರರು ಉದಿಸಿದುದನ್ನು ನಾವು ಇದುವರೆಗೂ ಕಂಡಿರುವುದೇ ಇಲ್ಲ. ಸಕಲ ಪ್ರಾಣಿಗಳನ್ನೂ ಅಂತಗೊಳಿಸಬಲ್ಲ ಅನಂತವೀರ್ಯಸಂಪನ್ನ ಅಂತಕನಿಗೂ ಸಹ ನಿನ್ನಷ್ಟು ಬಲ-ಪರಾಕ್ರಮಗಳಿರುವುದಿಲ್ಲ. ॥೧೭॥

ಮಹಾಬಲಶಾಲಿಯೇ ! ನಿನ್ನ ಆಜ್ಞೆಯನ್ನು ಶಿರಸಾ ಧರಿಸಿ ನಡೆಯಲು ನಾವೆಲ್ಲರೂ ನಿಶ್ಚಯಿಸಿ ಬಂದಿರುವೆವು. ನಾವು ದಾಸ್ಯವೃತ್ತಿಯನ್ನವಲಂಬಿಸಿ ನಿನ್ನ ಬಳಿ ಇರಬೇಕೆಂದು ನೀನು ಅಪೇಕ್ಷಿಸಿದರೂ, ಅದನ್ನೂ ಸಹ ನಾವು ಸಂತೋಷದಿಂದ ಅಂಗೀಕರಿಸುತ್ತೇವೆ.

ಬ್ರಹ್ಮ :—

ಪ್ರಮುಖರಲ್ಲಿ ಅಗ್ರಗಣ್ಯನಾದ ಕೋಲಾಸುರನು ಎಲ್ಲ ದೈತ್ಯರ ಪರವಾಗಿ ಆಡಿದ ಅಮೃತಸದೃಶವಾದ ಈ ನುಡಿಯನ್ನು ಕೇಳಿ, ದೈತ್ಯರಾಜ ; ಸಿಂಧು ಬಹಳ ಹರ್ಷಿತನಾದನು. ॥೧೮॥

**ದದಾವಶ್ವಾನ್ ಗಜಾಂಸ್ತೇಭ್ಯೋ ವಸ್ತ್ರಾಣಿ ಭೂಷಣಾನಿ ಚ |**

**ಸಿಂಧುರುವಾಚ :—**

**ಪ್ರಬಲಸ್ತು ತದಾಹಂ ಸ್ಯಾಂ ಯದಾ ಜೇಷ್ಯೇಽಮರಾವತೀಮ್ ||೧೯||**

**ಹರ, ವಿಷ್ಣು, ಸತ್ಯಲೋಕಾನ್ ಪಾತಾಲಾನಿ ಚ ಸಪ್ತ ಚ |**

**ಕ ಉವಾಚ :—**

**'ಸಾಧು ಸಾಧ್ವಿ'ತಿ ಸರ್ವೇಷು ಬ್ರುವತ್ಸು ಸರ್ವದೈತ್ಯಪಾಃ ||೨೦||**

---

ಒಡನೆಯೇ ತನ್ನ ಮಂತ್ರಿಗಳ ಕಡೆ ದೃಷ್ಟಿಯನ್ನು ವಿಕ್ಷೇಪಿಸಿ, ಅಶ್ವ, ಗಜ ಬಗೆ ಬಗೆಯ ವಸ್ತ್ರಗಳು, ರತ್ನಾಭರಣ ಇವೇ ಮೊದಲಾದ ಅನೇಕ ಅತ್ಯಪೂರ್ವ ವಸ್ತುಗಳನ್ನು ಆ ದೈತ್ಯ ವೀರರಿಗೆ ಉಡುಗರೆಯಾಗಿ ಕೊಡುವಂತೆ ಸೂಚಿಸಿ ಅದರಂತೆ ಕೊಡಿಸಿ, ಅವರನ್ನು ಕುರಿತು ಈ ರೀತಿ ನುಡಿದನು

ಸಿಂಧು :—

ದೈತ್ಯವೀರಾಗ್ರಣಿಗಳೇ ! ನೀವೇನೋ ನನ್ನನ್ನು ಈ ಪರಿಯಾಗಿ ವರ್ಣಿಸಿದಿರಿ. ಆದರೆ ದೇವರಾಜಧಾನಿಯಾದ ಅಮರಾವತಿಯನ್ನು ಜಯಿಸಿ, ಅಧೀನಪಡಿಸಿ ಕೊಳ್ಳುವವರೆಗೂ ನನ್ನನ್ನು ಪ್ರಬಲನೆಂದು ಭಾವಿಸಲಾರೆನು. ||೧೯ ||

ಹರಿ, ಹರ, ಬ್ರಹ್ಮರ ಲೋಕಗಳಾದ ವೈಕುಂಠ, ಕೈಲಾಸ, ಸತ್ಯಲೋಕ ಗಳನ್ನೂ, ಅತಳ, ವಿತಳ, ಸುತಳಾದಿ ಸಪ್ತ ಪಾತಾಳ ಲೋಕಗಳನ್ನೂ ನಾನು ಗೆದಿಯುವಂತಾಗಬೇಕು, ಅಂದು ಮಾತ್ರ ನನ್ನನ್ನು ಪ್ರಬಲತಮನೆಂದು ಭಾವಿಸಿ ಯೇನು.

ಬ್ರಹ್ಮಾ:—

ರಾಜನು ಧೀರೋದಾತ್ತರಿಗೆ ಸದೃಶವಾದ ಮಾತುಗಳನ್ನು ಆಡಲು, ಸಭಿಕ ರೆಲ್ಲರೂ ಹರ್ಷಭರಿತರಾಗಿ ಏಕಸ್ವರದಿಂದ 'ಸಾಧು, ಸಾಧು' ಎಂದು ಜಯಘೋಷ ವನ್ನು ಮಾಡಿದರು. ದೈತ್ಯರು ಇದನ್ನು ಕೇಳಿ ||೨೦||

**ಜಗರ್ಜುಶ್ಚ ಜಹರ್ಷುಶ್ಚ ಬ್ರಹ್ಮಾಂಡಂ ಪರ್ಯಕಂಪಯನ್ ।**

**ದೈತ್ಯಾ ಊಚುಃ :—**

**ನ ಭೂಪಯುದ್ಧಾತ್ಕಂಡೂರ್ನೋಽಹ್ಯಶಮೋದ್ದೇವಯುದ್ಧತಃ ॥೨೧॥**

**ಶಮಂ ಯಾಸ್ಯತಿ**

**ಕ ಉವಾಚ :—**

**ತೇ ಜಗ್ಮುಃ ಶೀಘ್ರಮೇವಾಪ್ರಜ ದಿವಸು ।**

---

ಸಿಂಧು ರಾಜನು ತಮ್ಮ ಮನೋಽಭಿಲಷಿತವನ್ನೇ ಒತ್ತಿ ಆಡಿದ್ದರಿಂದ ಹರ್ಷೋನ್ಮತ್ತರಾಗಿ ಘಟ್ಟಿ ಧ್ವನಿಯಿಂದ ಗರ್ಜಿಸಲಾರಂಭಿಸಿದರು. ಇದರಿಂದ ಇಡೀ ಬ್ರಹ್ಮಾಂಡವೇ ಗಡ ಗಡ ನಡುಗಿಹೋಯಿತು. ಲೋಕವಿಜಯಕ್ಕಾಗಿ ಉತ್ಸಾಹಗೊಂಡ ಸಿಂಧು ಮೊದಲು ಭೂಲೋಕದ ರಾಜರನ್ನು ಜಯಿಸೋಣವೆಂದು ಎಲ್ಲಿ ಸೂಚಿಸಿಬಿಡುವನೋ ಎಂಬ ಅಂಜಿಕೆಯಿಂದ ಅವನನ್ನು ಕುರಿತು ಮತ್ತೆ ಹೀಗೆ ನುಡಿದರು.

ದೈತ್ಯರು :—

ಭೂಲೋಕದ ಅರಸರು ತೃಣಪ್ರಾಯರಾದವರು. ಇವರ ರಾಜ್ಯಗಳನ್ನು ಕಸಿದುಕೊಳ್ಳಲಿಕ್ಕೆ ನಾವು ಹೆಚ್ಚು ಹೆಣಗಬೇಕಾಗಿಯೂ ಇಲ್ಲ. ಒಂದು ವೇಳೆ ಆ ರೀತಿ ಹೋರಾಡುವ ಪ್ರಸಂಗವೇ ಬಂದರೂ, ಈ ಹೋರಾಟದಿಂದ ನಮ್ಮ ರಣದಿಂಡಿಯಂತೂ ಇಂಗುವುದಿಲ್ಲ. ನಮಗೆ ಸಮಬಲರೆನಿಸಿದ ದೇವತೆಗಳೊಡನೆ ನಾವು ಯುದ್ಧಮಾಡುವೆವಾದರೆ ಮಾತ್ರ, ॥೨೧॥

ನಮ್ಮ ಭುಜಕಂಡೂತಿಯು ಕಡಿಮೆಯಾದೀತು.

ಬ್ರಹ್ಮಾ :—

ಎಂದು ಯೋಧರು ಹೇಳಿದುದನ್ನು ಕೇಳಿ, ಸಿಂಧು ಅದಕ್ಕೆ ಸಂತೋಷದಿಂದ ಒಪ್ಪಿದನು. ಅನಂತರ ದೈತ್ಯರು ತಮ್ಮಲ್ಲಿ ಬಹಳ ಹಿಂದಿನಿಂದಲೂ ಹುದುಗಿಹೋಗಿದ ಹುರುಪನ್ನು ಪುನಃ ತೆಗೆದುಕೊಂಡು ಒಮ್ಮೆಲೇ ಅಂತರಿಕ್ಷಕ್ಕೆ ನೆಗೆದು, ದೇವಲೋಕ

ರುರುಧುಸ್ತೇ ಶಕ್ರಪುರೀಂ ಯಾಚಕಾ ಇವ ವಿತ್ತದಮ್ ||೨೨||

ಮಧ್ಯಂ ವಿವಿಶುರಪರೇ ಲುಂಠಂತೋ ರತ್ನಸಂಚಯಾನ್ |
ಕೋಲಾಹಲೋ ಮಹಾನಾಸೀದ್ದೇವಾನಾಂ ತತ್ರ ಗರ್ಜತಾಮ್ ||೨೩||

ತತಸ್ಸಭಾಮಧ್ಯಗತೋ ಹರಿದೂತಮುಖಾತ್ತತಃ |
ಶುಶ್ರಾವ ದೈತ್ಯಾಭಿಗಮಂ ವೇಷ್ಟಿತಾಂ ಚ ನಿಜಾಂ ಪುರೀಮ್ ||೨೪||

-ವನ್ನು ಆಶ್ರಯಿಸಿ ನಿಂದರು. ಇವರು ಮಹೇಂದ್ರನಗರಿಯಾದ ಅಮರಾವತಿಯನ್ನು ಮುತ್ತಿದ ದೃಶ್ಯವು ಯಾಚಕರಿಂದ ಮುತ್ತಲ್ಪಟ್ಟ ಭೂರಿದಕ್ಷಿಣೆಕೊಡತಕ್ಕವನಂತೆ ತೋರಿಬಂದಿತು. ||೨೨||

ಸಂಬಾಧವೀರೀತಿ ಇದ್ದರೂ, ಅದರಲ್ಲೇ ಸಂಧಿಯನ್ನು ಸಾಧಿಸಿಕೊಂಡು ಕೆಲವರ ಒಳಕ್ಕೆನುಸುಳಿ, ಅಲ್ಲಿದ್ದ ಅಮೋಘ ರತ್ನರಾಶಿಯನ್ನುಲೂಟಿಮಾಡಲಾರಂಭಿಸಿದರು ಅಮೃತಪಾನ ಹಾಗೂ ಇತರ ಸ್ವರ್ಗೀಯ ಭೋಗಗಳನ್ನು ಭುಜಿಸುತ್ತ ಮತ್ತರಾಗಿ ಮಲಗಿದ್ದ ದೇವತೆಗಳಿಗೆ ಒಮ್ಮಿಂದೊಮ್ಮೆಲೇ ದೈತ್ಯರು ದೇವಲೋಕವನ್ನು ಆಕ್ರಮಿಸಿದುದೂ, ಅದರಲ್ಲೂ ಕೆಲವು ಪುಂಡ ದೈತ್ಯರು ಒಳನುಗ್ಗಿ, ಇವರ ವಸ್ತ್ರಾಭರಣಗಳನ್ನು ಅಪಹರಿಸಲಾರಂಭಿಸಿದುದೂ ಗೊತ್ತಾದೊಡನೆಯೇ, ಘಟಸರ್ಪವನ್ನು ತುಳಿದ ಭೀರುಗಳಂತೆ ಬೆಚ್ಚಿ ಬಿದ್ದರು ಮತ್ತು ತಮಗೊದಗಿದ ಈ ಬಗೆಯ ಅಪರೀಕ್ಷಿತ ವಿಪತ್ಪ್ರಸಂಗಕ್ಕೆ ಹೆದರಿ ಕೆಟ್ಟ ಧ್ವನಿಯಿಂದ ಆಕ್ರೋಶಿಸತೊಡಗಿದರು. ಇವರ ಆರ್ತನಾದ, ದೈತ್ಯಸೇನೆಯ ಸಿಂಹಗರ್ಜನೆ ಇವು ಮಿಲಿತವಾಗಿ ದೊಡ್ಡ ಕೋಲಾಹಲವೇ ಉಂಟಾಯಿತು. ||೨೩||

ಇತ್ತ ಸುಧರ್ಮೆ (ದೇವಸಭೆ) ಯಲ್ಲಿ ಕುಳಿತು ರಾಜಕೀಯ ಆಡಳಿತಕ್ರಮವನ್ನು ಸಂಬಂಧಿಸಿದ ಅಧಿಕಾರಿಗಳೊಂದಿಗೆ ಸಮಾಲೋಚಿಸುತ್ತಲಿದ್ದ ದೇವೇಂದ್ರನ ಬಳಿ ದೇವದೂತರು ಓಡುತ್ತ ಬಂದು, ದೈತ್ಯರ ಬರುವಿಕೆಯನ್ನೂ ಮತ್ತು ಈ ಆಕ್ರಮಣದ ಸುದ್ದಿಯನ್ನೂ ನಡಗುವ ಧ್ವನಿಯಿಂದ ಅರುಹಿದರು. ||೨೪

**ಶೀಘ್ರಮೈರಾವತಾರೂಢೋ ವಜ್ರಹಸ್ತೋಽಮರಾನ್ವಿತಃ ।**
**ಆಯಯೌ ತೇನ ದೈತ್ಯೇನ ಯೋದ್ಧುಕಾಮಃ ಸುರಾಧಿಪಃ ॥೧೭॥**

**ಕೇಚಿದೂಚುಸ್ಸುರಾಸ್ತತ್ರ**

**ಅಮರಾ ಊಚುಃ :—**

**ನಾಯಂ ಯುದ್ಧಕ್ಷಮೋ ಹರೇ ! ।**
**ವಿನಾ ರಮಾಪತಿಂ ಚಾಸ್ಯ ನ ಸಮೋ ದೃಶ್ಯತೇ ಕ್ವಚಿತ್ ॥೧೮॥**

---

ದೂತರು ತಂದ ದಾರುಣವಾದ ಈ ಸುದ್ದಿಯನ್ನು ಕೇಳಿದೊಡನೆಯೇ ದೇವೇಂದ್ರನು ಕೋಪದಿಂದ ಸಿಡಿದೆದ್ದು ನಿಂತನು. ಒಡನೆಯೇ ಸೇವಕರ ಕಡೆ ದೃಷ್ಟಿಯನ್ನು ಬೀರಿ, ತನ್ನ ವಾಹನವಾದ ಐರಾವತವನ್ನು ಸಿದ್ಧಪಡಿಸಿ ತನ್ನೆದುರು ನಿಲಿಸುವಂತೆ ಸಂಜ್ಞೆಮಾಡಿದನು. ಆಜ್ಞಾಧಾರಕರಾದ ಸೇವಕರು ಧನಿಯ ಅಪ್ಪಣೆಯಂತೆ ಐರಾವತವನ್ನು ತಂದು ನಿಲ್ಲಿಸಲು, ಮಹೇಂದ್ರನು ತನ್ನ ವಜ್ರಾಯುಧವನ್ನು ಕೈಗೆ ತೆಗೆದುಕೊಂಡು, ದೇವಸೇನೆಯನ್ನೆಲ್ಲ ಹೊರಡಿಸಿಕೊಂಡು ಅಸುರರೊಂದಿಗೆ ಕದನವಾಡಲು ಉತ್ಸುಕತೆಯಿಂದ ಹೊರಟು ಬಂದನು. ॥೧೭॥

ಅಷ್ಟರಲ್ಲಿ ದೇವಸೇನೆಯಲ್ಲಿದ್ದ ಕೆಲವು ಪರಿಣತಬುದ್ಧಿಯುಳ್ಳವರು ಸ್ವ-ಪರಕೀಯ ಬಲಾಬಲಗಳನ್ನು ಕೂಲಂಕಷವಾಗಿ ವಿಚಾರಮಾಡಿ, ಪ್ರಕೃತ ಕರ್ತವ್ಯವನ್ನು ತಮ್ಮ ರಾಜನಿಗೆ ಸೂಚಿಸಿದರು.

ದೇವತೆಗಳು :—

ಹರೇ! (ಮಹೇಂದ್ರ!) ಈ ದೈತ್ಯನನ್ನು ನೋಡಿದರೆ, ಇವನೊಡನೆ ನಾವಿಷ್ಟೇ ಮಂದಿ ಹೋರಾಡುವುದು ಸರ್ವಥಾ ಉಚಿತವಲ್ಲವೆಂದು ತೋರುತ್ತದೆ. ಇಲ್ಲಿರುವ ನಮ್ಮ ಪೈಕಿ ಯಾರೊಬ್ಬನೂ ಈ ದೈತ್ಯನೊಡನೆ ಸರಿ ನಿಲ್ಲಲಾರನು. ಇವನೊಡನೆ ಕಲಿತನದಿಂದ ಕದನವಾಡಬಲ್ಲವನೆಂದರೆ ಕಮಲಾಪತಿಯಾದ ಕಮಲನಾಭನೊಬ್ಬನೇ ಸಮರ್ಥನು ಎಂಬುದು ನಮ್ಮೆಲ್ಲರ ಭಾವನೆ. ನಮ್ಮಿಂದ ನೀಗಲಾಗದ ಈ ಉದ್ಯಮಕ್ಕೆ ಪ್ರಯತ್ನಿಸಿ ವ್ಯರ್ಥವಾಗಿ ನಾವೇಕೆ ಗಾಸಿಗೊಳ್ಳಬೇಕು ? ॥೧೮॥

ಯಾವದ್ವದತ್ಸು ತೇಷ್ವೇವಂ ತಾವದ್ದೈತ್ಯೋ ಮಹಾಬಲಃ |
ಶಕ್ರಂ ಸುರಗಣೈರ್ಯುಕ್ತಮವಿಧ್ಯಚ್ಛರವೃಷ್ಟಿಭಿಃ ||೨೭||

ತಾವದ್ದೇವಗಣಾಃ ಕೇಚಿತ್ಪಲಾಯನಪರಾ ಯಯುಃ |
ತತೋಽಧಾವನ್ಮಹೇಂದ್ರೋಽಸೌ ಗರ್ಜಮಾನೋ ರುಷಾನ್ವಿತಃ ||೨೮||

ಗ್ರಸನ್ ದೈತ್ಯಗಣಾನ್ ಸರ್ವಾನ್ ವಜ್ರೋದ್ಯತಕರೋಽರಿಹಾ |
ಅಹನದ್ದೈತ್ಯರಾಜಂ ತಂ ಮಸ್ತಕೇವಜ್ರತೋ ದೃಢಮ್ ||೨೯||

ಸ ಮೂರ್ಛಾಂ ಮಹತೀಂ ಪ್ರಾಯಾನ್ಮುಹೂರ್ತಾತ್ಪುನರುತ್ಥಿತಃ |

---

ಇವರು ಇಂದ್ರನಿಗೆ ಈ ರೀತಿ ಕರ್ತವ್ಯವನ್ನು ಬೋಧಿಸುತ್ತಿರುವಷ್ಟರಲ್ಲೇ ಮಹಾ ಪರಾಕ್ರಮಶಾಲಿಯಾದ ಸಿಂಧುದೈತ್ಯನು ಸಾವಿರಾರು ನಿಶಿತ ಬಾಣಗಳನ್ನು ಮಳೆಗರೆದಂತೆ ದೇವತೆಗಳೊಡನೆ ಮಾತನಾಡುತ್ತ ನಿಂದಿದ್ದ ಮಹೇಂದ್ರನ ಮೇಲೆ ಪ್ರಯೋಗಿಸಿದನು. ||೨೭||

ಸಿಡಿಲಿನ ಮಳೆ ಸುರಿದಂತೆ ಹರಿತವಾದ ಬಾಣಗಳು ಧಾರಾಕಾರವಾಗಿ ತಮ್ಮ ಮೇಲೆ ಬೀಳಲಾರಂಭಿಸಿದೊಡನೆಯೇ ದೇವಸೇವನೆಯಲ್ಲಿದ್ದ ಕೆಲವು ಅಳ್ಳೆದೆಯವರು ಓಡೋಡಿ ಹೋದರು. ದೈತ್ಯನ ಉಚ್ಛೃಂಖಲ ವೃತ್ತಿಗೆ ಮೊದಲೇ ಸಿಟ್ಟುಗೊಂಡು ಪಾಕಶಾಸನ (ಇಂದ್ರ) ನು ತಮ್ಮವರು ರಣಭೂಮಿಯನ್ನು ತೊರೆದು ದಿಕ್ಕುಕೆಟ್ಟು ಓಡಲಾರಂಭಿಸಿದುದನ್ನು ನೋಡಿದ ಬಳಿಕ, ಮತ್ತಷ್ಟು ಖತಿಗೊಂಡು ಘನಗಳಂತೆ ಗರ್ಜಿಸುತ್ತ ಯುದ್ಧಕ್ಕಾಗಿ ದೈತ್ಯನಿಗೆ ಎದುರಾದನು. ||೨೮

ದೇವೇಂದ್ರನೂ ಸಾಮಾನ್ಯ ಸಾಹಸಿಗನಲ್ಲ. ವೃತ್ರ ಮೊದಲಾದ ಅನೇಕ ಮಂದಿ ಪ್ರಬಲ ರಾಕ್ಷಸೇಂದ್ರರನ್ನು ನಿರ್ಲಕ್ಷ್ಯದಿಂದ ಸದೆಬಡಿದವನು. ಅಲ್ಲದೇ ಮೂವತ್ತು ಮೂರು ಕೋಟಿ ದೇವತೆಗಳನ್ನೂ ಆಳತಕ್ಕ ಪ್ರಭು, ಎಂದ ಮೇಲೆ ಅವನ ಪರಾಕ್ರಮವನ್ನು ಕುರಿತು ಹೆಚ್ಚೇನೂ ಹೇಳಬೇಕಾಗಿಲ್ಲ. ಇಂಥವನು ತನ್ನ ವಜ್ರಾಯುಧವನ್ನು ಎತ್ತಿಕೊಂಡು ಬಲಿಷ್ಠ, ಮದೋನ್ಮತ್ತ ಸಲಗದಂತೆ ಶತ್ರುಸೇನೆಯನ್ನು ಪ್ರವೇಶಿಸಿದೊಡನೆಯೇ ಕೈಗೆ ಸಿಕ್ಕಿದವರನ್ನೆಲ್ಲ ಬಡಿದು ಬಡಿದು ಸಾಯಿಸ ತೊಡಗಿದನು. ಇವನ ಅಬ್ಬರಕ್ಕೆ ಶತ್ರುಪಡೆಯ ವೀರರನೇಕರು ಕ್ಷಣಮಾತ್ರದಲ್ಲಿ

**ಉವಾಚ ಚ ಹರಿಂ**

**ದೈತ್ಯ ಉವಾಚ :—**

**' ಗಚ್ಛ ಸ್ವ-ಕ್ಷಯಂ ನ ಕ್ಷಯಂ ವ್ರಜ ॥೩೦॥**

**ಮಮ ಮುಷ್ಟಿಪ್ರಹಾರೇಣ ಕಾಲೋ ಮೃತ್ಯುಂ ಗಮಿಷ್ಯತಿ ।**

**ತತ್ರ ಕಾ ಗಣನಾ ತೇಽಸ್ತಿ**

**ಕ ಉವಾಚ :—**

ನಾಶೃಣೋತ್ತದ್ಧರಿರ್ವಚಃ ॥೩೦॥

---

ಕ್ಷಯಿಸಿ, ಉಳಿದವರೆಲ್ಲರೂ ತತ್ತರಿಸುತ್ತ ನಿಂತರು. ಇದರಿಂದ ಮತ್ತಷ್ಟು ಉತ್ಸಾಹ ಗೊಂಡ ದೇವೇಂದ್ರನು ಅಸುರರಾಜ; ಸಿಂಧುವಿನ ನೆತ್ತಿಗೆ ಸರಿಯಾಗಿ ಗುರಿ ಇಟ್ಟು, ತನ್ನ ವಜ್ರಾಯುಧವನ್ನು ಒಮ್ಮೆ ಬಿರುಸಾಗಿ ಅಪ್ಪಳಿಸಿದನು. ॥೨೯॥

ಈ ಹೊಡೆತ ಬಿದ್ದೊಡನೆಯೇ ಸಿಂಧುದೈತ್ಯನು ಗರ್‍ರನೆ ತಲೆ ತಿರುಗಿ, ನೆಲಕ್ಕೆ ಉರುಳಿಬಿದ್ದು, ಬಲವಾದ ಮೂರ್ಛೆಗೆ ಒಳಗಾದನು. ಒಂದು ಕ್ಷಣ ಕಾಲ ಅವನು ಮೃತನಾದವನಂತೆಯೇ ಬಿದ್ದಿದ್ದನು. ಸ್ವಲ್ಪ ಹೊತ್ತಿನೊಳಗಾಗಿಯೇ ಚೇತರಿಸಿ ಕೊಂಡು ಎಚ್ಚೆತ್ತು ಮೊದಲಿನಂತೆಯೇ ಎದ್ದು ನಿಂತು ಕೆಂಗಣ್ಣುಗಳಿಂದ ಕೆಕ್ಕರಿಸಿ ನೋಡುತ್ತ ದೇವೇಂದ್ರನನ್ನು ಕುರಿತು ಅಬ್ಬರಿಸಿ ಹೀಗೆ ನುಡಿದನು.

ಸಿಂಧು :—

ಹೋಗು, ಮನೆಗೆ ಹೋಗಿ ನೆಮ್ಮದಿಯಿಂದ ಇರು. ಇಂದ್ರನಾಗಿ ಬಾಳುವ ಜೀವನ ಬಹಳ ದುರ್ಲಭ. ಆದುದರಿಂದ ನನ್ನನ್ನೆದುರಿಸಿ, ವ್ಯರ್ಥವಾಗಿ ಸಾಯು ಬೇಡ. ।೩೦॥

ವಜ್ರದಂತೆ ಅತಿ ಕಠಿಣವಾದ ನನ್ನ ಮುಷ್ಟಿಯಿಂದ ಒಮ್ಮೆ ಪ್ರಹರಿಸಿದೆ ನೆಂದರೆ, ಅಂತಕನು ಸಹ ಅಂತವನ್ನೈದಿಬಿಡುವನು. ತಿಳಿಯಿತೇನೋ? ಅಂಥವನ ಪರಿಸ್ಥಿತಿಯೇ ಹೀಗಿರುವಾಗ ನಿನ್ನನ್ನು ನಾನು ಎಂದಿಗಾದರೂ ಲೆಕ್ಕಿಸುವೆನೇ ?

ಬ್ರಹ್ಮಾ :—

ರಾಕ್ಷಸನೇನೋ ಹೇಳಬಹುದಾದಷ್ಟು ಬುದ್ಧಿವಾದವನ್ನು ಹೇಳಿ, ದೇವೇಂದ್ರನು ಈಗಲಾದರೂ ತನಗೆ ಶರಣು ಬರಬಹುದೆಂದು ನಿರೀಕ್ಷಿಸಿ ನೋಡಿದನು, ಆದರೇನು? ದೇವೇಂದ್ರನು ಇಂತಹ ಬೆದರಿಕೆಯ ಮಾತುಗಳಿಗೆ ಸೊಪ್ಪುಹಾಕಿಯಾನೇ? ಇವನ

ರೋಷಾವಿಷ್ಟೋ ಮಹಾದೈತ್ಯಸ್ತತೋ ಮುಷ್ಟಿಪ್ರಹಾರತಃ ।
ಬಿಭೇದೈರಾವತಕಟಂ ರುಧಿರೌಘಪ್ರವರ್ಷಿತಮ್ ॥೩೨॥

ತತ ಉಡ್ಡೀಯ ದೈತ್ಯಸ್ತಚ್ಚತುರ್ದಂತಾನಧಾರಯತ್ ।
ಅಪಾತಯದ್ಗಜಪತಿಮಾಶ್ಚರ್ಯಂ ಹರಿರಾಯಯೌ ॥೩೬॥

ದಧಾರ ಚ ಹರಿಂ ಪಾದೇ ಪೋಥಯದ್ಯಾವದೇವ ತಮ್ ।
ತಾವತ್ಸೂಕ್ಷ್ಮೇಣ ವಪುಷಾ ನಿರ್ಗತೋ ಹಸ್ತಮಧ್ಯತಃ ॥೩೪॥

---

ಮಾತನ್ನು ಸಂಪೂರ್ಣವಾಗಿ ತಿರಸ್ಕರಿಸಿ, ಮೊದಲಿನಂತೆಯೇ ಯುದ್ಧಸನ್ನದ್ಧನಾಗಿ ನಿಂತುಬಿಟ್ಟನು ॥೩೦॥

ಇದುವರೆಗೂ ಒಂದುಬಗೆಯ ಉದಾಸೀನಭಾವದಿಂದಿದ್ದ ಸಿಂಧು ಈಗ ಕೋಪದಿಂದ ರೌದ್ರಾವತಾರವನ್ನು ತಾಳಿ, ತನ್ನ ಮುಷ್ಟಿಯನ್ನು ಭದ್ರವಾಗಿ ಹಿಡಿದು ಒಮ್ಮೆ ಐರಾವತದ್ಕುಂಭಸ್ಥಳಕ್ಕೆ ಬಿರುಸಾಗಿ ಗುದ್ದಿದನು. ಈ ಹೊಡೆತದ ರಭಸಕ್ಕೆ ಆನೆಯ ಕುಂಭಸ್ಥಳವು ಒಡೆದುಹೋಗಿ, ತನ್ಮೂಲಕ ರುಧಿರವು ಧಾರಕಾರವಾಗಿ ಸೋರಿ, ಪೂರ್ಣಪ್ರವಾಹವುಳ್ಳ ಮಹಾ ನದಿಯಂತೆ ನೆಲದಲ್ಲಿ ಹರಿಯಲಾರಂಭಿಸಿತು. ॥೩೨॥

ಇದಾದೊಡನೆಯೇ ಮಹಾ ದೈತ್ಯನಾದ ಸಿಂಧು ಥಂಗನೆ ಹಾರಿ, ಐರಾವತದ ನಾಲ್ಕೂ ಕೊಂಬುಗಳನ್ನು ತನ್ನ ಕೈಗಳಿಂದ ಬಿಗಿಯಾಗಿ ಹಿಡಿದು, ಹಿಂದೆ ಮುಂದೆ ಜಗ್ಗಿಸುತ್ತ ಆಯಕಟ್ಟಿನ ಸನ್ನಿವೇಶವನ್ನು ನೋಡಿ, ಅದನ್ನು ಬಲವಾಗಿ ನೂಕಿ ನೆಲಕ್ಕೆ ಉರುಳಿಸಿದನು. ಅಜೇಯ್ಯವಾದ ತನ್ನ ಐರಾವತವು ಚಿಕ್ಕ ಹುಳುವಿನಂತೆ ತಟಪಟ ಒದೆದಾಡುತ್ತ ಕೆಳಕ್ಕೆ ಉರುಳಿದುದನ್ನೂ, ಇಷ್ಟು ಸಾಹಸ ಕೆಲಸವನ್ನು ಮಾಡಿದರೂ ಸ್ವಲ್ಪವೂ ಆಯಾಸವಿಲ್ಲದೆ,ಮೊದಲಿಗಿಂತಲೂ ದ್ವಿಗುಣವಾದ ಉತ್ಸಾಹದಿಂದ ನಿಂದಿರುವ ರಕ್ಕಸನನ್ನೂ ನೋಡಿ,ಸುರರಾಜನು ಪರಮಾಶ್ಚರ್ಯಚಕಿತನಾಗಿ ನಿಂತನು. ॥೩೩॥

ಇಷ್ಟರೊಳಗಾಗಿ ದೈತ್ಯೇಂದ್ರನು ಮಹೇಂದ್ರನ ಬಳಿಗೆ ಧಾವಿಸುತ್ತ ಬಂದು

**ಜಗಾಮ ದೂರದೇಶಂ ಸ ಮನಸಾ ಪ್ರಶಶಂಸ ತಮ್ ।**

**ಇಂದ್ರೋವಾಚ :—**

**ನೈತಾದೃಶಂ ಬಲಂ ದೃಷ್ಟಮತಿಷ್ಠಂ ಚೇನ್ಮೃತೋಽಭವಮ್**

**ಕ ಉವಾಚ :—**

**ತತೋಽಮರಗಣೈಃ ಸಾರ್ಧಂ ಶರಣಂ ತಂ ಹರಿಂ ಹರಿಃ ।**

ಅವನ ಕಾಲುಗಳನ್ನು ಹಿಡಿದೆತ್ತಿ, ನೆಲಕ್ಕೆ ಅಪ್ಪಳಿಸಿಬಿಡಲು ಹವಣಿಸಿದನು. ಈಗ ತಾನು ಸ್ವಲ್ಪ ಪ್ರಯತ್ನಿಸದಿದ್ದರೆ, ತನ್ನ ಆಯುಸ್ಸೂತ್ರವೇ ಹರಿದುಹೋದೀತೆಂದು ನಿಶ್ಚಯಿಸಿದ ದೇವರಾಜನು ತನಗೆ ಸಂಪೂರ್ಣವಾಗಿ ಅಧೀನವಾಗಿದ್ದ ಅಷ್ಟಮಹಾ ಸಿದ್ಧಿಗಳ ಪೈಕಿ, ಅಣಿಮಾ ಸಿದ್ಧಿಯ ಸಹಾಯ ವಿಶೇಷದಿಂದ ತನ್ನ ದೇಹವನ್ನು ಅತಿ ಸೂಕ್ಷ್ಮಗೊಳಿಸಿಕೊಂಡು ದೈತ್ಯನ ಕೈಯೊಳಗಿಂದ ಪಾರಾಗಿ, ಅವನಿಗೆ ತಿಳಿಯದಂತೆ ಹಾರಿಹೋದನು. ||೩೪||

ದೈತ್ಯನ ಹಿಡಿತದಿಂದ ತಪ್ಪಿಸಿಕೊಂಡು ಹಾರಿಹೋದ ಹರಿಯು ಬಹಳ ದೂರ ಹೋದ ಬಳಿಕ, ಸ್ವಾಭಾವಿಕವಾದ ತನ್ನ ರೂಪವನ್ನು ಧರಿಸಿಕೊಂಡು ಮನಸ್ಸಿನ ಲ್ಲಿಯೇ ರಾಕ್ಷಸನ ಬಲ-ಪರಾಕ್ರಮಗಳನ್ನು ನೆನೆಸಿಕೊಂಡು, ಹೀಗೆಂದು ಪ್ರಶಂಸಿಸ ಲಾರಂಭಿಸಿದನು.

ದೇವೇಂದ್ರ :—

ಇಂತಹ ಬಲಿಷ್ಠನನ್ನು ನಾನು ಎಂದೆಂದೂ ಕಂಡಿರಲಿಲ್ಲ. ಜಾಣತನವನ್ನು ಉಪಯೋಗಿಸಿಕೊಂಡು ಸೂಕ್ಷ್ಮರೂಪದಿಂದ ಹಾರಿ ತಪ್ಪಿಸಿಕೊಂಡು ಬಂದೆನೋ, ಬದುಕಿದೆನು. ಹುಂಬತನದಿಂದ ನಾನೇನಾದರೂ ಅಲ್ಲಿಯೇ ನಿಂತುಬಿಟ್ಟಿದ್ದರೆ, ನನ್ನ ಇತಿಹಾಸವೇ ಮುಗಿದು ನಾನೂ ಸಹ ಯಮಕ್ಷಯವನ್ನು ಕುರಿತು ಪ್ರಯಾಣ ಹೊರಡಬೇಕಿದ್ದಿತು. ||೩೫||

ಬ್ರಹ್ಮಾ :-

ಹೀಗೆ ಚಿಂತಿಸಿ ದೇವೇಂದ್ರನು ತನಗಿಂತಲೂ ಮೊದಲೇ ಓಡಿಬಂದಿದ್ದ ದೇವತೆ

**ಜಗಾಮ ವಪುಷಾನ್ಯೇನ ವಿಸೃಜ್ಯೈರಾವತಂ ಗಜಮ್ ॥೩೬॥**

**ಸಿಂಧುದೈತ್ಯಸ್ತು ಸೇಂದ್ರೇಷು ದೇವೇಷು ವಿದ್ರುತೇಷು ಚ ।**
**ಇಂದ್ರಾಸನಸಮಾರೂಢೋ ದೈತ್ಯವೃಂದೇನ ವೇಷ್ಟಿತಃ ॥೩೭॥**

**ದದೌ ಪದಾನಿ ದೇವಾನಾಂ ದೈತ್ಯೇಭ್ಯಃ ಸಕಲಾನಿ ಸಃ ।**
**ತತಃ ಶುಂಭಾದಯೋ ದೈತ್ಯಾಃ ಸ್ಥಿತಾಸ್ತೇಷು ನಿರಾಕುಲಾಃ ॥೩೮॥**

---

ಗಳನ್ನೆಲ್ಲ ತನ್ನ ಸಂಗಡ ಕರೆದುಕೊಂಡು, ಸಕಲ ಚರಾಚರಜಗನ್ನಿಯಾಮಕನೂ, ಅಸುರಕುಲವಿಧ್ವಂಸಿಯೂ ಆದ ಶ್ರೀಮನ್ನಾರಾಯಣನ ಚರಣಕಮಲಗಳಿಗೆ ಶರಣು ಹೋಗಲು ತೆರಳಿದನು. ರಾಕ್ಷಸನ ಹೊಡೆತದಿಂದು ನರಳುತ್ತಲಿದ್ದ ಐರಾವತ ಅಲ್ಲಿಯೇ ಉಳಿಯಿತು. ಇಂದ್ರನು ತನ್ನ ವೈಭವದ ವೇಷ-ಭೂಷಣಗಳನ್ನು ಅಲ್ಲಿಯೇ ಕಿತ್ತಿಬಿಸುಟು, ಬಹಳ ವಿನೀತವಾದ ಉಡುಪಿನೊಡನೆ ನಡೆದನು. ॥೩೬॥

ಇತ್ತ ವಿಜಯಶಾಲಿಯಾಗಿ ರಣಭೂಮಿಯಲ್ಲಿ ನಿಂದಿದ್ದ ಸಿಂಧುದೈತ್ಯನು ಸಕಲ ದೇವತೆಗಳೂ ತಮ್ಮ ಒಡೆಯನಾದ ದೇವೇಂದ್ರನೊಡನೆ ದಿಕ್ಕೆಟ್ಟು ಓಡಿ ಹೋದುದನ್ನು ನೋಡಿ, ಬಹಳ ನೆಮ್ಮದಿಯನ್ನು ಹೊಂದಿದನು. ಮತ್ತು ಇವನಿಗಾಗಿಯೇ ತೆರವಾದಂತಿದ್ದ ದೇವೇಂದ್ರನ ಸಿಂಹಾಸನವನ್ನು ಏರಿ ಕುಳಿತು, ತನ್ನ ಸೈನಿಕರು, ಸೇವಕವರ್ಗದವರು ಎಲ್ಲರೂ ಸರ್ವದಾ ತನ್ನೊಡನೆ ಇರುವಂತೆ ಏರ್ಪಡಿಸಿದನು. ॥೩೭॥

ದೈತ್ಯೇಂದ್ರನ ಹೊಸ ಬಗೆಯ ರಾಜ್ಯಾಡಳಿತವು ಆರಂಭವಾಯಿತು. ಇದುವರೆಗೂ ಇತರ ದೇವತೆಗಳು ವಹಿಸಿಕೊಂಡಿದ್ದ ಸ್ವರ್ಗಲೋಕಗಳ ಆಯಾ ಆಡಳಿತ ವಿಭಾಗಗಳನ್ನು ರಾಕ್ಷಸನು ಪ್ರಕೃತ ತನ್ನ ಅನುಯಾಯಿಗಳಾಗಿದ್ದ ಅನೇಕ ದೈತ್ಯವೀರರಿಗೆ ವಿತರಿಸಿಕೊಟ್ಟು, ತಾನೇ ಮಹೇಂದ್ರನ ಪದವಿಯನ್ನು ಆಕ್ರಮಿಸಿ ದೇವರಾಜ್ಯವನ್ನು ಆಳಲಾರಂಭಿಸಿದನು. ಇಷ್ಟಾದ ಬಳಿಕ, ಇದುವರೆಗೂ ಯಾವುದೋ ಒಂದು ಬಗೆಯ ಆಂತರಿಕ ಹೆದರಿಕೆಯಿಂದ ದೇಹಗತ ಶಕ್ತ್ಯುತ್ಸಾಹಗಳನ್ನು ಬಲಾತ್ಕಾರದಿಂದ ಅದುಮಿಟ್ಟುಕೊಂಡು ಕಾಲಯಾಪನೆಯನ್ನು ಮಾಡುತ್ತಲಿದ್ದ ಶುಂಭಾದಿ ದೈತ್ಯವೀರರು ದೇವಲೋಕವು ಸ್ವಾಧೀನವಾದ ಬಳಿಕ ಯಾರೊಬ್ಬರಿಗೂ ಅಂಜದೇ ಸ್ವೇಚ್ಛೆಯಾಗಿ ವಿಹರಿಸಲಾರಂಭಿಸಿದರು. ॥೩೮॥

ನಮಸ್ಯಂತೋಽಸುರಪತಿಂ ಪ್ರಶಂಸಂತೋ ಬಲಾಧಿಕಮ್ ।
ನಾನಾ ವಾದಿತ್ರನಿರ್ಘೋಷೈರ್ನಾದಯಂತಸ್ತ್ರಿವಿಷ್ಟಪಮ್ ॥೩೯॥

ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ 'ಸುರ
ಪರಾಜಯೋ' ನಾಮ ಪಂಚ ಸಪ್ತ
ತಿತಮೋಽಧ್ಯಾಯಃ

ಬಲಿಷ್ಠನಾದ ತಮ್ಮ ರಾಜ, ಸಿಂಧುದೈತ್ಯನನ್ನು ಭಕ್ತಿಯಿಂದ ಅಭಿವಂದಿಸುವರು. ಹೃತ್ಪೂರ್ವಕವಾಗಿ ಹೊಗಳುವರು. ಎಲ್ಲಿ ನೋಡಿದರೂ ನಾನಾ ಬಗೆಯ ವಿಜಯಸೂಚಕ ಮಂಗಲ ವಾದ್ಯಗಳು ಸರ್ವದಾ ಮೊಳಗುತ್ತಿರುವಂತೆ ಮಾಡುವರು. ತಾವೂ ವೀರಾವೇಶದಿಂದ ಗರ್ಜಿಸಿ, ಆಗಾಗ್ಗೆ ಬಾಯಿಗೆ ಬಂದಂತಹ ಗೀತಗಳನ್ನು ತಮಗೆ ಸರಿ ಎನಿಸಿದ ರಾಗ-ತಾಳಗಳೊಂದಿಗೆ ಹಾಡುವರು. ಅಂತೂ ಇಡೀ ದೇವಲೋಕವೇ ಗದ್ದಲ ಗದ್ದಲವಾಗಿರುವಂತೆ ಮಾಡಿದರು. ॥೩೯॥

ಇಲ್ಲಿಗೆ ಶ್ರೀ ಗಣೇಶಪುರಾಣ, ಉತ್ತರಖಂಡದಲ್ಲಿ 'ಸುರಪರಾಜಯ' ಎಂಬಲ್ಲಿಗೆ
ಎಪ್ಪತ್ತೈದನೆಯ ಅಧ್ಯಾಯಾನುವಾದವು ಮುಗಿದುದು.

|| ಶ್ರೀ ಗಣೇಶಾಯ ನಮಃ ||

# ಅಥ ಷಟ್ಸಪ್ತತಿತಮೋಽಧ್ಯಾಯಃ

**ಕ ಉವಾಚ :—**

**ವೈಕುಂಠೇ ಸುಖಮಾಸೀನಮಾಗತೋಽಮರಸಂಯುತಃ ।**
**ಹರಿರ್ಹರಿಂ ನಮಸ್ಕೃತ್ಯ ನಿಜಗಾದ ಪ್ರಯೋಜನಮ್ ||೧||**

**ಇಂದ್ರ ಉವಾಚ :—**

**ಕಿಂ ನ ಜಾನಾಸಿ? ಗೋವಿಂದ! ಸಿಂಧುದೈತ್ಯಕೃತಾವಿಮಾನ್ ।**

|| ಶ್ರೀ ಗಣೇಶಾಯ ನಮಃ ||

## ೭೬ ನೆಯ ಅಧ್ಯಾಯ.

ಬ್ರಹ್ಮ :—

ವ್ಯಾಸ! ಸಿಂಧುವಿನ ಬಲಪ್ರಯೋಗಕ್ಕೆ ಹೆದರಿ ದಿಕ್ಕುಟ್ಟು ಓಡಿ ಹೋದ ದೇವತೆಗಳೂ, ದೇವೇಂದ್ರನೂ ಓಡುತ್ತ ವೈಕುಂಠಕ್ಕೆ ಹೊರಟರಷ್ಟೇ? ಅವರೆಲ್ಲರೂ ಏದುತ್ತ ಹಾಗೆಯೇ ಓಡುತ್ತ ಶ್ರೀ ನಾರಾಯಣನ ಸ್ಥಾನದ ವರೆಗೂ ಅಂತೂ ಬಂದು ತಲುಪಿದರು, ಇತ್ತ ವೈಕುಂಠದಲ್ಲಿ ಕಮಲಾಲೋಲನು ಆತ್ಮಾನಂದಾನುಭವದಲ್ಲಿ ಮಗ್ನನಾಗಿದ್ದನು. ಪರಿವಾರದೇವತೆಗಳೊಂದಿಗೆ ಅಲ್ಲಿಗೆ ದೇವೇಂದ್ರನು ಬಂದು, ದೇವನ ಚರಣಾರವಿಂದಗಳಿಗೆ ಭಕ್ತಿಯಿಂದೆರಗಿ, ತನಗೊದಗಿದ ಪರಿಶೋಚನೀಯ ಪರಿಸ್ಥಿತಿಯನ್ನೆಲ್ಲ ಹೀಗೆಂದು ವಿನಯಪೂರ್ವಕವಾಗಿ ಅರಿಕೆಮಾಡಿಕೊಂಡನು. ||೧||

ಇಂದ್ರ :—

ಪ್ರಭೋ, ಗೋವಿಂದ! ದುಷ್ಟ ದೈತ್ಯನಾದ ಸಿಂಧುವಿನಿಂದ ನಮಗೊದಗಿದ ಪರಾಭವವು ಸರ್ವಜ್ಞನಾದ ನಿನಗೆ ತಿಳಿಯದೇ? ಇರಲಿ, ನಾನೇ ಹೇಳಿ

ಆಪದಂ ನೋಽಮರಾವತ್ಯಾಂ ದುಷ್ಟೈರಾಕ್ರಮಣಂ ಕೃತಮ್ ॥೨॥

ತೇನ ಸಾರ್ಧಂ ಕೃತಂ ಯುದ್ಧಂ ಯಥಾಶಕ್ತಿ ಸುರೈಃ ಸಹ ।
ನ ಸ ಜೇತುಂ ಕ್ಷಮೋ ದೈತ್ಯೋಽತಸ್ತ್ವಾಂ ಶರಣಮನ್ವಿಯಾಮ್ ॥೩॥

ನ ತ್ವಾಂ ವಿನಾ ಗತಿರ್ನೋಽಸ್ತಿ ಸರ್ವದಾ ತ್ವಂ ಗತಿರ್ಹಿ ನಃ ।
ನಿರ್ಮೂಲಯೈನಂ ನೋ ದೇಹಿ ಸ್ಥಾನಾನಿ ಜಗದೀಶ್ವರ ! ॥೪॥

ಕೊಳ್ಳುವೆನು. ಅಮರಾವತೀ ನಗರದಲ್ಲೆಲ್ಲ ದೈತ್ಯರ ತಾಂಡವ ನಾಟ್ಯವಾರಂಭ ವಾಗಿದೆ. ಯಾವ ಸಂದಿ-ಮೂಲೆಗಳನ್ನು ನೋಡಿದರೂ ಅಲ್ಲೊಂದು ರಾಕ್ಷಸ ಪಡೆಯು ಸಿದ್ಧವಾಗಿಯೇ ಇರುವುದು. ನಮ್ಮ ಸ್ಥಿತಿಯಂತೂ ಬಹಳ ಪರಿಶೋಚ ನೀಯವಾಗಿ ಹೋಗಿದೆ. ನೀನಿರುವಾಗ ನಮಗೆ ಇಂತಹ ವಿಪತ್ತು ಬಂದೀತೆಂದು ನಾನಂತೂ ತಿಳಿದಿರಲಿಲ್ಲ ॥೨॥

ದೇವ! ನಾವೂ ಸಹ ಕೈಕಟ್ಟಿಕೊಂಡು ಸುಮ್ಮನೆ ಕುಳಿತಿರಲಿಲ್ಲ. ಎಷ್ಟೆಷ್ಟು ನಮ್ಮಿಂದ ಸಾಧ್ಯವಾಯಿತೋ, ಅಷ್ಟೂ ಪ್ರಯತ್ನಮಾಡಿ ದೈತ್ಯನೊಡನೆ ಕಾದಾಡಿ ದೆವು. ಸಮರವು ಬಿರುಸಿಗೇರಿದಾಗ ನಾನೇ ಮುಂದೆ ಬಂದು ನಿಶಿತವಾದ ನನ್ನ ವಜ್ರಾಯುಧದಿಂದ ಸಿಂಧುವನ್ನು ಬಲವಾಗಿ ಪ್ರಹರಿಸಿದೆನು. ಯಾರು ಎಷ್ಟು ಬಲ ವನ್ನು ಪ್ರಯೋಗಿಸಿದರೂ, ಯಾವ ಪ್ರಯೋಜನವೂ ಆಗಲಿಲ್ಲ. ಇವನನ್ನು ಜಯಿ ಸುವುದು ನಮ್ಮಿಂದಂತೂ ಸಾಧ್ಯವಿಲ್ಲ ಎಂಬುದು ದೃಢವಾದ ಬಳಿಕ ನಾವೆಲ್ಲರೂ ನಿನಗೆ ಶರಣು ಬಂದಿರುವೆವು. ॥೩॥

ನೀನಲ್ಲದೇ ನಮಗೆ ಮತ್ತೆ ಯಾರು ಗತಿ, ದೇವ ! ನೀನೇ ನಮ್ಮನ್ನು ಸಕಲ ವಿಪತ್ಪರಂಪರೆಗಳಿಂದಲೂ ಸಂರಕ್ಷಿಸತಕ್ಕವನು. ಆದುದರಿಂದ ದೀನರಾದ ನಮ್ಮ ಮೇಲೆ ನೀನು ಕರುಣೆಯನ್ನು ಬೀರಿ, ಮೊದಲು ಆ ದುಷ್ಟನನ್ನು ನಿರ್ಮೂಲಗೊ ಳಿಸು. ಜಗದೀಶ್ವರ! ಅನಂತರ ನಮ್ಮ ನಮ್ಮ ಸ್ಥಾನ-ಮಾನಗಳನ್ನು ಪುನಃ ನಮಗೆ ಕೊಡಿಸುವೆಯಂತೆ. ಎಲ್ಲವನ್ನೂ ಅರಿತ ನಿನಗೆ ಹೆಚ್ಚೇನು ಹೇಳೋಣ ? ॥೪॥

**ಕ ಉವಾಚ :—**

**ಶ್ರುತ್ವಾ ಹರಿವಚೋ ವಿಷ್ಣುಶ್ಚಿಂತಾಶ್ಚರ್ಯಸಮನ್ವಿತಃ ।**
**ಉವಾಚ ತಂ**

**ಹರಿರುವಾಚ :—**

**ನ ಭೀಃ ಕಾರ್ಯಾ ಪ್ರವಿಜೇಷ್ಯೇಽಸುರಂ ಕ್ಷಣಾತ್ ॥೫॥**

**ಕ ಉವಾಚ :—**

**ಏವಮುಕ್ತ್ವಾ ಹೃಷೀಕೇಶೋಽರುರೋಹ ನಿಜವಾಹನಮ್ ।**

---

ಬ್ರಹ್ಮ :—

ದೇವತೆಗಳ ಈ ದೀನ ನುಡಿಗಳನ್ನು ಕೇಳಿ, ಮಹಾವಿಷ್ಣು ಮಹತ್ತರವಾದ ಚಿಂತೆಗೆ ಒಳಗಾದನು. ಅವನಿಗುಂಟಾದ ಆಶ್ಚರ್ಯಕ್ಕೆ ಮಿತಿಯೇ ಉಳಿಯಲಿಲ್ಲ. ಆಗ ದೇವರದೇವನು ದೇವತೆಗಳನ್ನು ಕುರಿತು ಹೀಗೆಂದು ನುಡಿದು, ಆಶ್ವಾಸನಗೊಳಿಸಿದನು.

ವಿಷ್ಣು :—

ನೀವು ಸರ್ವಥಾ ಭಯಪಡಬೇಕಾಗಿರುವುದಿಲ್ಲ. ದೈತ್ಯನು ಎಷ್ಟೇ ಪ್ರಬಲನಿರಲಿ, ಒಂದೇ ಒಂದು ಕ್ಷಣದಲ್ಲಿ ಅವನನ್ನು ಸದೆಬಡಿದು ಸೋಲಿಸಿಬಿಡುವೆನು.

ಬ್ರಹ್ಮ :—

ಹೀಗೆ ಹೇಳಿ, ತನ್ನ ವಾಹನವಾದ ಖಗೇಂದ್ರನನ್ನು ಏರಿ ಕುಳಿತು, ಯುದ್ಧಕ್ಕೆ ಹೊರಟೇ ಬಿಟ್ಟನು. ಗರುಡಪಕ್ಷಿ ಎಂದರೆ ಸಾಮಾನ್ಯವಾದ 'ಹಕ್ಕಿ' ಎಂದು ಭಾವಿಸಬೇಡ. ಚತುರ್ದಶ ಭುವನಗಳನ್ನೂ ಉದರದಲ್ಲಿ ಅಡಗಿಸಿಕೊಂಡಿರುವ ಅಖಿಲಾಂಡ

ತದುಡ್ಡಾನೇನ ಚ ತದಾ ಚಕಂಪೇ ಭುವನತ್ರಯಮ್ ॥೬॥

ಅವನೌ ಪತಿತಾ ವೃಕ್ಷಾಃ ಪಕ್ಷಿವೃಂದಸಮನ್ವಿತಾಃ।
ಕಿರೀಟ-ಕುಂಡಲಧರೋ ವನಮಾಲಾವಿಭೂಷಿತಃ ॥೭॥

ಕೌಸ್ತುಭಾರ್ಚಿರ್ಲಸದ್ವಕ್ಷಾಃ ಕಸ್ತೂರೀತಿಲಕೋಜ್ಜ್ವಲಃ।
ಶಂಖಚಕ್ರಗದಾಪದ್ಮಹಸ್ತೋ ಯಾತೋಽಮರಾವತೀಮ್ ॥೮॥

---

ಕೋಟಿ ಬ್ರಹ್ಮಾಂಡನಾಯಕನ ಭಾರವನ್ನೂ ಹೊತ್ತು ಹಾರಾಡುವಂತಹದು. ಅದು ತನ್ನ ವಿಶಾಲವಾದ ರೆಕ್ಕೆಗಳನ್ನು ವೇಗವಾಗಿ ಬಡಿಯುತ್ತ, ಭೂಮಿಯನ್ನು ಬಿಟ್ಟು ಒಮ್ಮೆಲೇ ಮೇಲಕ್ಕೆ ಹಾರಿದೊಡನೆಯೇ ಅದರ ಪಕ್ಷವಾತದ ರಭಸಕ್ಕೆ ಕ್ಷೋಭೆಗೊಂಡು ತ್ರಿಭುವನಗಳೂ ಗಡಗಡನೆ ನಡುಗಿ ಹೋದವು. ॥೬॥

ಪಕ್ಷೀಂದ್ರನ ಪಕ್ಷವಾತದ ಒತ್ತಡದಿಂದ ಬಿರುಗಾಳಿ ಎದ್ದಿತು. ಅದರ ಹೊಡೆತಕ್ಕೆ ಸಿಕ್ಕು ವೃಕ್ಷಗಳೆಲ್ಲವೂ ಚಲಿಸಿ, ಬುಡ ಸಹಿತ ಕಿತ್ತು ಮೇಲೆದ್ದು ಬಂದು ಭೂಮಿಗೆ ಬಿದ್ದವು. ಆ ಮಹಾವೃಕ್ಷಗಳನ್ನು ಆಶ್ರಯಿಸಿಕೊಂಡು ಕೋಟ್ಯವಧಿ ಕ್ಷುದ್ರಜಾತಿಯ ಪಕ್ಷಿಗಳು ಜೀವಿಸುತ್ತಲಿದ್ದವು. ಅವೆಲ್ಲ ಈ ಮರಗಳೊಂದಿಗೆ ಅವನಿಗೆ ಬಿದ್ದು ಜಜ್ಜಿ ಮಾಂಸದ ಮುದ್ದೆಯಾಗಿ ಹೋದವು. ದೇವರ ದೇವನಾದ ದಾಮೋದರನು ಮಣಿಮಯ ಕಿರೀಟ, ದಿವ್ಯಕುಂಡಲಗಳು, ವನಮಾಲೆ ದಿವನ್ನು ಧರಿಸಿ, ಅಲಂಕೃತನಾಗಿದ್ದನು. ॥೭॥

ದೇವನ ವಿಶಾಲವಾದ ವಕ್ಷಃಸ್ಥಳದಲ್ಲಿದ್ದ ಕೌಸ್ತುಭಮಣಿಯು ಉಜ್ವಲ ಕಿರಣಗಳು ಸಹಸ್ರಾರು ಮಂದಿ ಸೂರ್ಯರನ್ನೂ ಬೆಳಗುವಂತಹವು. ಇವು ಭಗವಂತನ ನವನೀಲ ಕಾಂತಿಯ ವಕ್ಷಃಸ್ಥಳವನ್ನು ಮತ್ತಷ್ಟು ಬೆಳಗುತ್ತಿದ್ದವು. ವಿಶಾಲವಾದ ಫಾಲದಲ್ಲಿ ಕಸ್ತೂರೀ ತಿಲಕವನ್ನು ನಾರಾಯಣನು ಧರಿಸಿದ್ದರಿಂದ ಬಹಳ ರಮಣೀಯವಾಗಿ ತೋರುತ್ತಲಿದ್ದನು. ಯುದ್ಧಕ್ಕೆ ಹೊರಟವನೆಂದ ಬಳಿಕ ಆಯುಧಗಳು ಬೇಡವೇ ? ನಾಲ್ಕು ಕೈಗಳಲ್ಲೂ ಶಂಖ, ಚಕ್ರ, ಗದೆ ಮತ್ತು ಪದ್ಮಗಳನ್ನು ಧರಿಸಿದನು. ಭಕ್ತವತ್ಸಲನಾದ ಭಗವಂತನು ಒಡನೆಯೇ ಅಮರಾವತಿಯನ್ನು ಕುರಿತು ಹೊರಟನು. ॥೮॥

**ಜ್ಞಾತ್ವಾ ದೇವಗಣಾನ್ ಪ್ರಾಪ್ತಾನ್ ಗರುಡಾಸನಸಂಯುತಾನ್ ।**
**ಯುದ್ಧಾಯಾಜಗ್ಮುರಸುರಾ ನಾನಾ ಶಸ್ತ್ರಧರಾಸ್ತದಾ ॥೯॥**

**ಧನುಶ್ಚಕ್ರಧರೋ ದೈತ್ಯಸ್ಸತೂಣೋ ಹಯಸಂಗತಃ ।**
**ಸಿಂಧುರಪ್ಯಾಗತೋ ರೋಷಾದ್ಯೋದ್ಧುಕಾಮೋ ಬಲಾನ್ವಿತಃ ॥೧೦॥**

**ತತಃ ಕುಬೇರೋ ವರುಣೋ ವಾಯುರಗ್ನಿಃ ಪುರಂದರಃ ।**
**ಸೋಮೋ ಮಿತ್ರಶ್ಚ ಭೌಮಶ್ಚ 1ನಾಸತ್ಯೌ ಮದನೋಽಪಿ ಚ ॥೧೧॥**

---

ದೇವನೊಡನೆ ಸಕಲ ದೇವತೆಗಳೂ ಗರುಡನನ್ನೇರಿ ಬಂದರು. ಇವರೆಲ್ಲ ತನ್ನ ಹಾಗೂ ತನ್ನ ಸೈನ್ಯವನ್ನು ಎದುರಿಸಲು ಬಂದುದನ್ನು ತಿಳಿದ ಅಸುರರಾಜನು ತನ್ನ ಪರಿವಾರದಿಂದೊಡಗೂಡಿ, ಕೈಗೆ ಸಿಕ್ಕಿದ ಬಗೆಬಗೆಯ ಆಯುಧಗಳನ್ನು ತೆಗೆದು ಕೊಂಡು ಯುದ್ಧಕ್ಕೆ ಹೊರಟುಬಂದನು. ಅಸುರವೀರರ ಆರ್ಭಟವಂತೂ ಹೇಳ ತೀರದಷ್ಟು ಭಯಂಕರವಾಗಿದ್ದಿತು. ॥೯॥

ಸ್ವಯಂ ದೈತ್ಯರಾಜನು ಬೆಟ್ಟದಂತಹ ಡಿವ್ಯವಾದ ತನ್ನ ಅಶ್ವವನ್ನೇರಿ ಕುಳಿತು, ಲೋಕ ಭಯಂಕರಗಳಾದ ಧನುಸ್ಸು, ಚಕ್ರ, ಅಕ್ಷಯಕ್ರೂರಾಂಬುಗಳಿಂದ ತುಂಬಿದ ತೂಣೀರ (ಬತ್ತಳಿಕೆ) ಇವನ್ನು ಧರಿಸಿ ಬಂದನು. 'ತನ್ನ ಪ್ರಹಾರ ಗಳನ್ನು ತಡೆದುಕೊಳ್ಳಲಾರದೇ ದಿಕ್ಕುಕೆಟ್ಟು ಓಡಿಹೋಗಿದ್ದ ಈ ಕ್ಷುದ್ರ ದೇವತೆಗಳು ಮತ್ತಾರೋ ಒಬ್ಬ ಅನಾಮಧೇಯನ ಬೆಂಬಲವನ್ನು ಅವಲಂಬಿಸಿ, ಅವನೊಂದಿಗೆ ನನ್ನ ಮೇಲೆ ಬೀಳಲು ಪುನಃ ಬಂದರಲ್ಲವೇ ?' ಎಂಬ ಕಲ್ಪನೆಯು ಬಂದು, ಬಹಳ ಅಸಹನೆ ಪಟ್ಟನು. ದೇವತೆಗಳ ಹಾಗೂ ಅವರಿಗೆ ಬೆಂಬಲಿಗನಾಗಿ ಬಂದು ನಿಂದ ಮಹಾವಿಷ್ಣುವಿನ ಮೇಲೆ ಸಿಂಧುವಿಗೆ ಮಿತಿಮೀರಿ ಕೋಪವು ಉಂಟಾಯಿತು. ಎಷ್ಟೆಂದರೂ ದೈತ್ಯನು ಬಲಿಷ್ಠನಾದವನು, ಮತ್ತೊಬ್ಬರ ಧಾರ್ಷ್ಟ್ಯ, ಪ್ರತಿಭಟನೆ ಇವನ್ನು ಸಹಿಸಿಯಾನೇ ? ಯಾರೇ ಎದುರಾಗಲಿ, ಅವರನ್ನು ನಿಮಿಷಮಾತ್ರದಲ್ಲಿ ಭೂಮಿಗೆ ಉರುಳಿಸುವೆನು ಎಂಬ ಧೃಢ ನಿಶ್ಚಯದಿಂದ ರಕ್ಕಸನು ಯುದ್ಧಕ್ಕೆ ಸಿದ್ಧನಾಗಿ ಬಂದನು. ॥೧೦॥

ಇತ್ತ ದೇವತೆಗಳ ಪೈಕಿ, ಧನಾಧ್ಯಕ್ಷನಾದ ಕುಬೇರ, ಜಲಾಭಿಮಾನಿ ದೇವತೆ,

ವಿವರಣೆಗೆ ಪರಿಶಿಷ್ಟವನ್ನು ನೋಡಿರಿ

ತತೋಽಭವದ್ದ್ವಂದ್ವಯುದ್ಧಂ ಸಿಂಧುದೈತ್ಯೇ ಪುರಃ ಸ್ಥಿತೇ ।
ಪ್ರಚಂಡೋ ವರುಣೇನಾಜೌ ಕಮಲೇನ ಚ ಯಕ್ಷರಾಟ್ ॥೧೨॥

ವೃತ್ರೇಣ ಶತಯಜ್ವಾ ಚ ನಿಶುಂಭಃ ಪವನೇನ ಚ ।
ಶುಂಭೋಽಪಿ ಯುಯುಧೇ ತತ್ರ ವಿಷ್ಣುನಾ ಪ್ರಭವಿಷ್ಣುನಾ ॥೧೩॥

ವಹ್ನಿಶ್ಚಂಡೇನ ಮುಂಡೇನ ಸೋಮಶ್ಚ ಯುಯುಧೇ ಭೃಶಮ್ ।
ಕಂದಬೇನ ಚ ಭೌಮಶ್ಚ ಮದನೇನ ಚ ಶಂಬರಃ ॥೧೪॥

ವರುಣ, ಸಕಲ ಪ್ರಾಣಿಗಳ ಜೀವಾತು; ವಾಯುದೇವ, ಸರ್ವಶೋಷಕ ಅಗ್ನಿ, ದೇವೇಂದ್ರನಾದ ಪುರಂದರ, ಚಂದ್ರ, ಸೂರ್ಯ, ಮಂಗಲ, ಅಶ್ವಿನೀದೇವತೆಗಳು, ಹೆಚ್ಚೇನು? ಮದನ ಇವರೆಲ್ಲರೂ ಉತ್ಸಾಹಗೊಂಡು ಯುದ್ಧಾಭಿಮುಖರಾದರು, ॥೧೧॥

ಆಗ ಪಕ್ಷ-ವಿಪಕ್ಷಗಳೆರಡರಲ್ಲೂ ದ್ವಂದ್ವಯುದ್ಧವು ಆರಂಭವಾಯಿತು. ಇದಕ್ಕೆಲ್ಲ ಮೇಲ್ವಿಚಾರಕನಾಗಿ ಸಿಂಧುದೈತ್ಯನು ರಣರಂಗದ ಮುಂಭಾಗದಲ್ಲೇ ನಿಂದಿದ್ದನು. ಯೋಧಮುಖ್ಯರು ತಮಗೆ ಸದೃಶರಾದ ಪ್ರತಿಪಕ್ಷಿಗಳೊಡನೆ ಖಾಡಾ-ಖಾಡಿಯಾಗಿ ಹೋರಾಡಲಾರಂಭಿಸಿದರು. ದೈತ್ಯಸೇನೆಯಲ್ಲಿಲ್ಲ ಪ್ರಮುಖನೆನಿಸಿದ ಪ್ರಚಂಡನು ವರುಣನೊಡನೆ ಯುದ್ಧಕ್ಕೆ ಸಿದ್ಧನಾದನು. ಕಮಲ ಎಂಬ ಅಸುರ ವೀರನು ಯಕ್ಷರೊಡೆಯನಾದ ಕುಬೇರನೊಡನೆ ಕಲಿತನದಿಂದ ಕಡಿದಾಡತೊಡಗಿದನು. ॥೧೨॥

ಮಹೇಂದ್ರನು ವೃತ್ರಾಸುರನ ಮೇಲೆ ಧುಮ್ಮಿಕ್ಕಿದನು. ನಿಶುಂಭನೆಂಬ ಮಹಾಬಲನೊಬ್ಬನು ವಾಯುವನ್ನಾಕ್ರಮಿಸಿದನು- ಶುಂಭನೆಂಬೊಬ್ಬ ಹುಂಬ ದೈತ್ಯವೀರನು ಸ್ವ-ಪರಸಾಮರ್ಥ್ಯವನ್ನರಿಯದೇ, ಕರ್ತುಮಕರ್ತುಮನ್ಯಥಾ ಕರ್ತುಂ ಶಕ್ತನಾದ ಸರ್ವೇಶ್ವರ, ಮಹಾವಿಷ್ಣುನ ಮೇಲೆಯೇ ಯುದ್ಧವನ್ನು ಘೋಷಿಸಿ, ಸೆಡ್ಡುಹೊಡೆದು ನಿಂತನು. ॥೧೩॥

ವಹ್ನಿಯು ಚಂಡಾಸುರನನ್ನು ಅಡ್ಡಗಟ್ಟಿ, ಕದನಕ್ಕೆ ನಿಂತನು. ಚಂದ್ರನು ಮುಂಡನನ್ನು ಬಡಿಯುತೊಡಗಿದನು. ಇವರ ಹೋರಾಟವು ಬಹಳ ಘೋರವಾಗಿದ್ದಿತು. ಮತ್ತೊಂದೆಡೆ ಕದಂಬನೊಡನೆ ಮಂಗಲನು ಮೊಂಡಾಟವಾಡತೊಡಗಿ

ನಾ ತ್ಯೌ ಕ ೦ದ್ವೈತ್ಯೇನ ಸರ್ವ ಏವ ಚ ಸೈನಿಕಾಃ ।
ಶಸ್ತ್ರೈರಸ್ತ್ರೈಃ ಪ್ರಜಘ್ನುಸ್ತೇ ಮರ್ಮಸ್ಥಾನಾನಿ ಚಾಸಕೃತ್ ॥೧೫॥

ಕೇಚಿದ್ವ್ಯಯುಧಿರೇ ಮಲ್ಲಲೀಲಯಾ ಯುದ್ಧ ದುರ್ಮದಾಃ ।
ಪರಸ್ಪರಂ ಶಸ್ತ್ರಘಾತೈಃ ಕೇಚಿತ್ತತ್ರ ಪ್ರಪೇದಿರೇ ॥೧೬॥

ಮೃತಾ ಮುಮೂರ್ಷವಃ ಕೇಚಿದ್ವ್ಯಂಗಾಶ್ಚೈವ ವವಲ್ಗಿರೇ ।

---

ದನು. ಇದನ್ನು ಕಂಡು, ಶಂಬರಾಸುರನು ಮದನನೊಡನೆ ಮಸೆದಾಡಿದನು. ॥೧೪॥

ಕಾಲಸ್ವರೂಪನಾದ 'ಕಾಲ' ಎಂಬ ರಕ್ಕಸನನ್ನು ಅಶ್ವಿನೀ ದೇವತೆಗಳಿಬ್ಬರೂ ಒಮ್ಮೆಲೇ ಆಕ್ರಮಿಸಿದರು. ಉಳಿದವರು ತಮ್ಮ ತಮ್ಮ ಶಕ್ತಿ–ಸಾಹಸಗಳಿಗೆ ಸಮ ರೆನಿಸಬಹುದಾದವರೊಡನೆ ಸರಿಗಟ್ಟಿ ನಿಂದರು. ಯೋಧರೆಲ್ಲರೂ ಸಮರ ಶಾಸ್ತ್ರವನ್ನು ಸಮಗ್ರವಾಗಿ ಅರಿತವರಾಗಿದ್ದುದರಿಂದ ಯಾವ ಯಾವ ಶಸ್ತ್ರಾಸ್ತ್ರಗಳನ್ನು ಯಾವ ಯಾವ ಕಾಲ ಮತ್ತು ಸನ್ನಿವೇಶಗಳಲ್ಲಿ ಪ್ರಯೋಗಿಸಬಹುದೋ, ಅವನ್ನು ಸೂಕ್ಷ್ಮ ವಾಗಿ ಗಮನಿಸಿ, ಸ್ವಲ್ಪವೂ ಅಜಾಗರೂಕರಾಗಿರದೇ, ತಮ್ಮ ತಮ್ಮ ಅಸ್ತ್ರ-ಶಸ್ತ್ರ ಗಳನ್ನು ಶತ್ರುಗಳ ಮರ್ಮಸ್ಥಳಗಳಲ್ಲಿ ಪ್ರಯೋಗಿಸಿ, ಅವರನ್ನು ಅತಿಯಾಗಿ ಹಿಂಸಿಸ ಲಾರಂಭಿಸಿದರು. ಶಸ್ತ್ರಾಸ್ತ್ರಗಳ ಈ ಪ್ರಯೋಗಗಳು ಬಹಳ ವೇಗವಾಗಿ ನೆಡೆಯು ತ್ತಲಿದ್ದವು. ಎಷ್ಟೇ ಸೂಕ್ಷ್ಮದರ್ಶಿಯಾದರೂ, ಅವನಿಂದ ಇವುಗಳ ಅಂತರವನ್ನು ಕಂಡುಹಿಡಿಯಲು ಸಾಧ್ಯವಾಗುತ್ತಿರಲಿಲ್ಲ. ॥೧೫॥

ಕೆಲವು ವೀರರು ತಮಗೆ ಸಮಬಲರಾದವರೊಂದಿಗೆ ಮಲ್ಲಯುದ್ಧವನ್ನು ಮಾಡಿದರು. ಅವರು ವ್ಯಾಯಾಮವೃತ್ತಿಯಲ್ಲಿ ನಿಷ್ಣಾತರಾಗಿದ್ದುದರಿಂದ ಎಂತಹ ಕ್ಲಿಷ್ಟಕರವಾದ ಹಿಡಿತಕ್ಕೆ ಸಿಲುಕುವ ಪ್ರಸಂಗ ಒದಗಿದರೂ, ಸ್ವಲ್ಪವೂ ಆಯಾಸ ವಿಲ್ಲದೆ, ಬಹಳ ಸುಲಭವಾಗಿ ಬಿಡಿಸಿಕೊಂಡು, ಮರ್ಮಾಹತವಾದ ಪಟ್ಟುಗಳಿಂದ ಎದುರಾಳಿಯನ್ನು ಹಿಡಿದು, ಹಿಂಸಿಸುತ್ತಿದ್ದರು. ಪರಸ್ಪರ ಶಸ್ತ್ರಾಸ್ತ್ರಘಾತಗಳಿಂದ ಕೆಲವರು ಅಲ್ಲಲ್ಲೇ ಉರುಳುರುಳಿ, ಬೀಳತೊಡಗಿದರು. ॥೧೬॥

ಹೀಗೆ ಉರುಳಿದವರ ಪೈಕಿ, ಮೃತರಾದವರೇ ಹೆಚ್ಚುಮಂದಿ. ಉಳಿದವರ ಪೈಕಿ

ಜಯಂ ಪರಾಜಯಂ ತೇ ನ ಪ್ರಾಪುಃ ಕ್ವಾಚಿತ್ಕನೋವ ಚ ||೧೭||

ತತೋ ವೃತ್ರಾಸುರಶ್ಶಕ್ರಮಹನನ್ಮುಷ್ಟಿಘಾತತಃ |
ಮಸ್ತಕಂ ಮಸ್ತಕೇನೈವ ನಿಜಘ್ನತುರಥೋಜಸಾ ||೧೮||

ಏವಂ ಹಸ್ತೇನ ಹಸ್ತಂ ಚ ಪಾದಂ ಪಾದೇನ ಜಘ್ನತುಃ |
ವಕ್ಷಃಸ್ಥಲೇನ ವಕ್ಷಸ್ಯ ತತೋ ವಜ್ರೇಣ ಸೋಽಹನತ್ ||೧೯||

ಜಘಾನ ವೃತ್ರಂ ಶಕ್ರಸ್ತಂ ಸೋಽಪತನ್ಮೂರ್ಛಿತೋ ಭುವಿ |
ಯಾವತ್ಪಲಾಯತಿ ಪುರೋ ವರ್ಮ ರಕ್ತಂ ಮುಖಾದ್ಬಹು ||೨೦||

---

ಕೆಲವರಂತೂ ಕೊನೆಯುಸಿರನ್ನೇ ಎಳೆಯಲಾರಂಭಿಸಿದ್ದರು. ಮತ್ತೆ ಕೆಲವರು ದೇಹದ ಒಂದಿಲ್ಲೊಂದು ಅಂಗವನ್ನು ಊನಮಾಡಿಕೊಂಡು ಜೀವಾವಧಿ ನರಳುವಂತಾಗಿದ್ದರು. ಉಭಯಪಕ್ಷದವರಲ್ಲೂ ಈ ಅವಸ್ಥೆಯು ಉಂಟಾದ್ದರಿಂದ ಯಾರಿಗೂ ಜಯವಾಗಲೀ, ಪರಾಜಯವಾಗಲೀ ಆಗಲಿಲ್ಲ. ಯುದ್ಧವು ಬಹಳ ಬಿರುಸಿನಿಂದ ನಡೆದರೂ, ಇನ್ನೂ ಅನಿಶ್ಚಿತ ದಶೆಯಲ್ಲೇ ಉಳಿದಿದ್ದಿತು. ||೧೭||

ಅನಂತರ ವೃತ್ರಾಸುರನು ವಜ್ರಾಯುಧದಷ್ಟು ಕಠಿಣವಾದ ತನ್ನ ಮುಷ್ಟಿಯಿಂದ ದೇವೇಂದ್ರನಿಗೊಮ್ಮೆ ಗುದ್ದಿದನು. ಕೊಬ್ಬಿದ ಟಗರುಗಳಂತೆ ತಮ್ಮ ತಲೆಯಿಂದ ಎದುರಾಳಿಯ ತಲೆಗೆ ಬಲವಾಗಿ ಡಿಕ್ಕಿಹೊಡೆಯಲಾರಂಭಿಸಿದರು. ಮುಂದು ಮುಂದಿನ ಹೊಡೆತಗಳು ಬಲವಾಗಲಾರಂಭಿಸಿದ್ದುವು. ಇಬ್ಬರೂ ಸಶಕ್ತರು, ರಣಪಂಡಿತರು, ಜನ್ಮತಃ ದ್ವೇಷಿಗಳು ಎಂದ ಬಳಿಕ ಹೆಚ್ಚೇನು ಹೇಳುವಂತಿದೆ ? ||೧೮||

ಇದೇ ರೀತಿಯಾಗಿ ಭುಜಗಳಿಂದ ಭುಜಗಳಿಗೂ, ಕೈಗಳಿಂದ ಕೈಗಳಿಗೂ, ಹೊಡೆದಾಡಲಾರಂಭಿಸಿದುದಲ್ಲದೇ, ಪಾದಗಳನ್ನು ಬಲವಾಗಿ ಬೀಸಿ ಒದೆದಾಡಿದರು. ಒಬ್ಬರ ಎದೆಗೆ ಮತ್ತೊಬ್ಬರು ತಮ್ಮ ಎದೆಯನ್ನು ಘಟ್ಟಿಸಿದರು. ಆಗ ದೇವೇಂದ್ರನು ತನ್ನ ವಜ್ರಾಯುಧವನ್ನು ಎತ್ತಿ ಅದರಿಂದ ವೃತ್ರಾಸುರನನ್ನು ಬಲವಾಗಿ ಹೊಡೆದನು. ಈ ಹೊಡೆತವನ್ನು ತಡೆದುಕೊಳ್ಳಲಾರದೆ, ಅಸುರನು

ತತಃ ಪಪಾತ ಭೂ-ಪೃಷ್ಠೇಽಹತೋ ಮೂರ್ಛಾಂಗತೋ ಭೃಶಮ್ ।
ಪುನಸ್ಸಂಜ್ಞಾಮವಾಪ್ಯೈವ ವಜ್ರಕಲ್ಪೇನ ಮುಷ್ಟಿನಾ ॥೨೧॥

ಜಘಾನ ವೃತ್ರಃ ಶಕ್ರಂ ತಂ ಸೋಽಪತನ್ಮೂರ್ಛಿತೋ ಭುವಿ ।
ಯಾವತ್ಪಪಾಲ ಸುರರಾಡ್ವರ್ಮ ರಕ್ತಂ ಮುಖಾದ್ಬಹು ॥೨೨॥

ತಾವದ್ದೈತ್ಯಾ ಯೋದ್ಧುಕಾಮಾಃ ಸಮಾಯಯುಃ ಸರ್ವತೋ ದಿಶಮ್ ।
ದೃಷ್ಟ್ವಾ ಪರಾಕ್ರಮಂ ತೇಷಾಂ ಮಘವಾಂತರ್ದಧೇ ತದಾ ॥೨೩॥

---

ಮೂರ್ಛೆಗೊಂಡು ನೆಲಕ್ಕುರುಳಿದನು. ಸ್ವಲ್ಪ ತಿಳಿವು ಬಂದೊಡನೆಯೇ ಅಲ್ಲಿ ನಿಲ್ಲಲಾರದೇ ಓಡಿಹೋಗಲಾರಂಭಿಸಿದನು. ಹೀಗೆ ಓಡುವಾಗ ಅವನು ಬಾಯಿಯಿಂದ ರಕ್ತವನ್ನು ಅತಿಯಾಗಿ ಕಾರುತ್ತಲಿದ್ದನು. ॥೧೯-೨೦॥

ವಿಶೇಷವಾಗಿ ರಕ್ತವನ್ನು ಕಾರಿದ್ದರಿಂದಲೂ, ಹೆದರಿಕೆ ಹೆಚ್ಚಾದುದರಿಂದಲೂ ಓಡಲು ಶಕ್ತಿಸಾಲದೆ, ಮತ್ತೆ ಭೂಮಿಗೆ ಬಿದ್ದುಬಿಟ್ಟನು. ಆಗ ಮಾತ್ರ ಅಸುರನಿಗೆ ಬಲವಾಗಿಯೇ ಮೂರ್ಛೆ ಬಂದಿತು. ಬಹಳ ಕಾಲ ಕಳೆದ ಬಳಿಕ, ಅವನಿಗೆ ಪೂರ್ಣವಾಗಿ ಎಚ್ಚರವಾಯಿತು. ಆಗ ದ್ವಿಗುಣಿತ ಕೋಪದಿಂದ ಮತ್ತೆ ಮಹೇಂದ್ರನ ಮೇಲೆ ಏರಿ ಬಂದನು, ಮತ್ತು ವಜ್ರದಂತೆ ಅತ್ಯಂತ ಕಠಿಣವಾದ ತನ್ನ ಮುಷ್ಟಿಯಿಂದ ॥೨೧॥

ವೃತ್ರಾಸುರನು ಪುರಂದರನನ್ನು ಒಮ್ಮೆ ಪ್ರಹರಿಸಿದನು. ಇದರಿಂದ ಮರ್ಮಾಹತನಾದ ದೇವರಾಜನು ಸಹ ಬವಳಿ ಬಂದವನಾಗಿ ಭೂಮಿಯ ಮೇಲೆ ಬಿದ್ದು ಉರುಳಾಡಿದನು. ಇಷ್ಟಾದ ಬಳಿಕ ಅಲ್ಲಿ ಒಂದು ಕ್ಷಣ ಕಾಲ ಸಹ ನಿಲ್ಲಲಾರದೆ ದಾರಿ ಸಿಕ್ಕಿದತ್ತ ಓಡಿಹೋದನು. ವೇಗದಿಂದ ಓಡಿಹೋಗುವಾಗ ಇವನ ಮುಖದಿಂದಲೂ ರಕ್ತವು ಪ್ರವಾಹರೂಪವಾಗಿ ಹರಿಯಿತು ॥೨೨॥

ರಕ್ತವನ್ನು ಧಾರಾಕಾರವಾಗಿ ಕಾರುತ್ತ ಓಡುತ್ತಿರುವ ಬಿಡೌಜನನ್ನು ಕಂಡು ಅಲ್ಲಿಗೆ ದೈತ್ಯವೀರರೆಲ್ಲರೂ ಓಡೋಡಿ ಬಂದು ಇವನನ್ನು ಮುತ್ತಿದರು. ಇವರು ಇದುವರೆಗೂ ತಮಗೆ ಸಮಬಲರಾದವರೊಡನೆ ಮಲ್ಲಯುದ್ಧವನ್ನಾಡುತ್ತಿದ್ದರು.

ಏವಂ ಯೋ ಯೋ ದ್ವಂದ್ವಯುದ್ಧಂ ಕುರ್ವಂತೋ ದೇವತಾಗಣಾಃ ।
ತೇ ಸರ್ವೇ ಭಗ್ನದರ್ಪಾಸ್ತು ಪಲಾಯನಮಕುರ್ವತ ॥೨೪॥

ಏವಂ ದೇವೇಷು ಭಗ್ನೇಷು ಗರುಡಂ ಪ್ರಾಹಿಣೋದ್ಧರಿಃ ।
ಚಕ್ರದೀಪ್ತ್ಯಾ ಸ್ವದೀಪ್ತ್ಯಾ ಚ ಭಾಸಯನ್ವಿದಿಶೋ ದಿಶಃ ॥೨೫॥

ಅಹನಚ್ಚಕ್ರಧಾರಾಭಿರ್ದೈತ್ಯಶ್ರೇಣೀರನೇಕಶಃ ।
ಕೇಚಿದ್ಭಗ್ನಾನನಾ ದೈತ್ಯಾಃ ಕೇಚಿದ್ಭಗ್ನಶಿರೋಧರಾಃ ॥೨೬॥

ಬಂದ ಈ ದೈತ್ಯವೀರರು ಇಂದ್ರನು ಎಲ್ಲಿಲ್ಲೂ ತಪ್ಪಿಸಿಕೊಂಡು ಓಡಿಹೋಗದಂತೆ ದಶದಿಕ್ಕುಗಳನ್ನೂ ಪ್ರತಿಬಂಧಿಸಿ ನಿಂತುಬಿಟ್ಟರು. ಇವರ ಯುದ್ಧ ಚಾಕಚಕ್ಯ, ಪರಾಕ್ರಮ, ಧಾರ್ಷ್ಟ್ಯ ಇವನ್ನೆಲ್ಲ ಕಂಡ ದೇವೇಂದ್ರನು ತಿರಸ್ಕರಿಣೀ ವಿದ್ಯೆಯ ಸಹಾಯದಿಂದ ರಾಕ್ಷಸರ ಕಣ್ಣುಗಳಿಗೆ ಗೋಚರಿಸದಂತೆ ಒಡನೆಯೇ ಅದೃಶ್ಯನಾಗಿಹೋದನು. ॥೨೩॥

ದೇವೇಂದ್ರನು ಭಂಗವನ್ನು ಹೊಂದಿದಂತೆ ಇತರ ಪ್ರಮುಖ ದೇವತೆಗಳೂ ದೈತ್ಯರಿಂದ ಭಂಗಪಡೆದು ಸೊಕ್ಕಡಗಿದವರಾದರು. ಶತ್ರುಗಳು ತಮಗಿಂತಲೂ ಪ್ರಬಲತರರಾದುದರಿಂದ ಅವರೊಂದಿಗೆ ನಡೆದ ಯುದ್ಧವನ್ನು ಅಷ್ಟಷ್ಟಕ್ಕೇ ನಿಲ್ಲಿಸಿ, ತಾವು ದಾರಿ ಸಿಕ್ಕದಂತೆಲ್ಲ ಓಡಿಹೋದರು. ॥೨೪॥

ದೇವಸೇನೆಯು ಈ ರೀತಿಯಾಗಿ ಛಿನ್ನ-ಭಿನ್ನನಾಗಿಹೋದುದನ್ನು ಕಂಡ ದೇವನು, ಪಕ್ಷಿರಾಜ ಗರುಡನನ್ನು ಸುದರ್ಶನದೊಡನೆ ಪ್ರತಿಭಟನೆಗೆ ಪ್ರೇರಿಸಿದನು. ಸುದರ್ಶನವೂ ಸಾಮಾನ್ಯವಾದುದಲ್ಲ. ಕೋಟಿಸೂರ್ಯರಂತೆ ಹೊಳೆಯುತ್ತಲಿರುವುದು. ಅದರ ಪ್ರಕಾಶದಿಂದಲೂ, ತನ್ನ ದೇಹದ ಕಾಂತಿಯಿಂದಲೂ ಗರುಡನು ದಿಗ್ವಿದಿಕ್ಕುಗಳನ್ನೆಲ್ಲ ಏಕಪ್ರಕಾರವಾಗಿ ಬೆಳಗಲಾರಂಭಿಸಿದನು. ॥೨೫॥

ವೈನತೇಯನು ದೈತ್ಯರ ದಳವನ್ನು ಪ್ರವೇಶಿಸಿದೊಡನೆಯೇ ದೇವನು ಕೈಯಲ್ಲಿ ಚಕ್ರವನ್ನು ಧರಿಸಿ ಸೈನ್ಯವನ್ನೆಲ್ಲ ಸವರತೊಡಗಿದನು. ದೇವನು ಸುದರ್ಶನವನ್ನು

**ಕೇಚಿಚ್ಚ ಶತಧಾ ಜಾತಾಃ ಶೀರ್ಣಜಾನೂರುಬಾಹವಃ ।**
**ಕೇಚಿಚ್ಚ ಶರಣಂ ಯಾತಾ ನ ಜಘಾನ ಜನಾರ್ದನಃ ॥೨೭॥**

**ಸರ್ವೇ ಮಹಾಬಲಾ ದೈತ್ಯಾ ಮುಕ್ತಿಂ ಹರಿಹತಾ ಗತಾಃ ।**
**ಮೇದೋಮಾಂಸವಹಾ ನದ್ಯಃ ಸದ್ಯಸ್ತತ್ರ ಪ್ರವರ್ತಿತಾಃ ॥೨೮॥**

ಪ್ರಯೋಗಿಸಿದ ಕೂಡಲೇ ಶತ್ರುಪಡೆಯ!ಒಂದೊಂದು ಸಾಲೇ ಕತ್ತರಿಸಿ ನೆಲಕ್ಕೆ ಉರು ಳುವುದು. ಈರೀತಿಯಾಗಿ ಸಹಸ್ರಾರು ಸಾಲುಗಳನ್ನು ನಿಮಿಷಮಾತ್ರದಲ್ಲಿ ಧ್ವಂಸ ಮಾಡಿಬಿಟ್ಟನು. ಇವನ ಅಬ್ಬರಕ್ಕೆ ದೈತ್ಯಸೇನೆಯು ಗಡಗಡ ನಡುಗಿ ಹೋಯಿತು. ಗರುಡವಾಹನನು ಚಕ್ರವನ್ನು ಹೇಗೆ ಹೇಗೆ ಸುತ್ತಿಸಿದನೋ ಅದರಂತೆಲ್ಲ ಸೈನಿಕರಿಗೆ ಧಕ್ಕೆಯಾಗಲಾರಂಭಿಸಿತು. ಕೆಲವರಿಗೆ ಮುಖಗಳೇ ಕತ್ತರಿಸಿಬಿದ್ದವು. ಕೆಲವರ ತಲೆಗಳಲ್ಲಿದ್ದ ಕೂದಲೆಲ್ಲ ಕತ್ತರಿಸಿ ಹೋಗಿ, ಅವು ತಾಮ್ರದ ತಂಬಿಗೆಯ ರೂಪ ಗಳನ್ನು ತಳೆದವು. ॥೨೬॥

ಕೆಲವು ರಾಕ್ಷಸರಂತೂ ನೂರಾರು ಹೋಳುಗಳಾಗಿ ಬಿದ್ದರು. ಬಾಹು ಗಳನ್ನು ಕಳೆದುಕೊಂಡವರೂ, ಮೊಣಕಾಲು, ತೊಡೆ ಇವನ್ನು ಮುರಿದುಕೊಂಡ ವರೂ ಲೆಕ್ಕಕ್ಕೇ ಸಿಗುತ್ತಿರಲಿಲ್ಲ. ತಮ್ಮ ಸಹೋದ್ಯೋಗಿಗಳಿಗಾದ ಈ ಗತಿಯನ್ನು ಗಮನಿಸಿ, ಒಂದು ನಿಮಿಷ ತಡೆದರೂ ಸಹ ತಮ್ಮ ಗತಿಯೂ ಅವರಂತೆಯೇ ಉಳಿ ದವರು ಆದೀತೆಂದು ಭಯಪಟ್ಟು, ಒಮ್ಮೆಲೇ ದೇವದೇವನಿಗೆ ಶರಣ ಬಂದರು. ಈ ರೀತಿ ಬಂದ ಶತ್ರು ಪಕ್ಷೀಯ ದೀನ ಸೈನಿಕರನ್ನು ದಯಾಸಾಗರನಾದ ದಾಮೋ ದರನು ಕ್ಷಮಿಸಿ, ಅವರಿಗೆ ಯಾವ ತೊಂದರೆಯೂ ಉಂಟಾಗದಂತೆ ನೋಡಿಕೊಂ ಡನು. ಹೇಗೂ ಕೈಗೆ ಸಿಕ್ಕಿದ್ದಾರೆ ಎಂದು ಅವರನ್ನು ಹರಿಯು ಕೊಲ್ಲಲಿಲ್ಲ. ॥೨೭॥

ಪರಮಾತ್ಮನ ಹಸ್ತದಿಂದ ಯಾವ ಯಾವ ದೈತ್ಯವೀರರು ಮರಣವನ್ನು ಪಡೆ ದಿದ್ದರೋ, ಅವರೆಲ್ಲ ಮುಕ್ತಿಸಾಮ್ರಾಜ್ಯವನ್ನೇ ಹೊಂದಿ, ಆನಂದಿಸಿದರು. ಯುದ್ಧ

**ತತಃ ಶಂಖನಿನಾದೇನ ಹರಿಸ್ಸರ್ವಂ ವ್ಯನಾದಯತ್ ।**
**ಏವಂ ಜಯತಿ ಗೋವಿಂದೇ, ಸರ್ವೇ ಶುಂಭಾದಯೋಽಸುರಾಃ ॥೨೯॥**

**ತಮೇವ ಯೋದ್ಧುಮಾಯಾತಾ ದ್ವಂದ್ವಯುದ್ಧಂ ವಿಹಾಯ ತತ್ ।**
**ವಿರಾಡ್ರೂಪೇಣ ಭಗವಾನ್ ಧೃತ್ವಾ ತಾಂಶ್ಚತುರೋಽಸುರಾನ್ ॥೩೦॥**

**ಭಿಂಡಿಪಾಲೇನ ಪಾಷಾಣಂ ಯಥಾ ಕ್ಷಿಪತಿ ಮಾನವಃ ।**
**ತಥಾ ಚಂಡಂ ಚ ಮುಂಡಂ ಚ ನಿಶುಂಭಂ ಶುಂಭಮೇವ ಚ ॥೩೧॥**

ಭೂಮಿಯಲ್ಲಿ ಮೇದಸ್ಸು ಮಾಂಸ ಇವನ್ನು ಕೊಚ್ಚಿಕೊಂಡು ಹೊರಟಿದ್ದ ರಕ್ತದ ಅನೇಕ ನದಿಗಳು ಪ್ರವಾಹ ಪೂರ್ಣವಾಗಿ ಹರಿದವು. ॥೨೮॥

ಪರಮ ಪುರುಷ ಪುಂಡರೀಕಾಕ್ಷನೊಮ್ಮೆ ತನ್ನ ಪಾಂಚಜನ್ಯವನ್ನು ಘಟ್ಟಿಯಾಗಿ ಊದಿ, ಆ ಧ್ವನಿಯಿಂದ ದಿಗಂತುಗಳನ್ನೆಲ್ಲ ತುಂಬಿಸಿಬಿಟ್ಟನು. ಅವೆಲ್ಲ ಒಮ್ಮೆ ಪ್ರತಿಧ್ವನಿಸೈದವು. ಈ ರೀತಿಯಾಗಿ ಗೋವಿಂದನು ಅತ್ಯದ್ಭುತವಾದ ವಿಜಯವನ್ನು ಗಳಿಸಿದುದು ಅಸುರವೀರರಿಗೆ ಸ್ವಲ್ಪವೂ ಸಹಿಸಲಿಲ್ಲ. ಆಗ ಶುಂಭ ಮೊದಲಾದ ಅಸುರರು ದೇವನ ಮೇಲೆ ಯುದ್ಧವನ್ನು ಹೂಡಲು ಧಾವಿಸಿ ಬಂದರು. ॥೨೯॥

ಇದುವರೆಗೂ ಅವರು ಇತರ ದೇವತೆಗಳೊಡನೆ ಮಲ್ಲಯುದ್ಧವನ್ನಾಡುತ್ತಲಿದ್ದರು. ಅದನ್ನು ಅಷ್ಟಕ್ಕೇ ನಿಲ್ಲಿಸಿ, ಶ್ರೀ ಹರಿಯ ಕಡೆ ತಿರುಗಿದ್ದರು. ಇವರು ಈ ರೀತಿ ಬರುತ್ತಿರುವುದನ್ನು ನೋಡಿದೊಡನೆಯೇ ದಾಮೋದರನು ವಿರಾಡ್ರೂಪವನ್ನು ಧರಿಸಿ, ಆ ನಾಲ್ವರು ದೈತ್ಯರನ್ನೂ ತನ್ನ ಮುಷ್ಟಿಯಲ್ಲಿ ಬಲವಾಗಿ ಹಿಡಿದುಬಿಟ್ಟನು. ॥೩೦॥

ಕಲ್ಲುಕುಟುಕ (ಒಡ್ಡ) ನು ತನ್ನ ಕೈಯ್ಯಲ್ಲಿರುವ ಸುತ್ತಿಗೆಯಿಂದ ಬಲವಾಗಿ ಕಲ್ಲುಬಂಡೆಗೆ ಹೊಡೆದು ಹೇಗೆ ಅದನ್ನು ಭೇದಿಸುವನೋ, ಅದರಂತೆ ಶ್ರೀಮನ್ನಾರಾಯಣನು ಚಂಡ, ಮುಂಡ, ನಿಶುಂಭ ಮತ್ತು ಶುಂಭ ಇವರನ್ನು ॥೩೧॥

ಭ್ರಾಮಯಿತ್ವಾಕ್ಷಿಪದ್ದೂರೇ ಮಧ್ಯೇ ಕೃತ್ವಾ ಸರಿದ್ವರಾಮ್ ।
ತೇ ಮೂರ್ಛಾಂ ಪರಿಭೂಯೈವ ಪುನಶ್ಚ ವಾಹಿನೀಂ ಗತಾಃ ॥೩೨॥

ಹೃದಿ ಪ್ರಚಂಡಂ ಪೃಷ್ಠೇ ತು ವೃತ್ರಂ ಮುಷ್ಟಿಪ್ರಹಾರತಃ ।
ಜಘಾನ ಹರಿರವ್ಯಗ್ರಃ ಕಾಲಂ ಕಮಲಮೇವ ಚ ॥೩೩॥

ಭೌಮಾಸುರಂ ಕದಂಬಂ ಚ ಜಘಾನ ಚಕ್ರಘಾತತಃ ।
ಕೋಲಾಸುರಂ ಚ ಗದಯಾ ವಿವ್ಯಾಧ ಹೃದಿ ಮಾಧವಃ ॥೩೪॥

---

ಗರಗರ ತಿರುಗಿಸಿ ಬಡಿದು ಬಹಳ ದೂರ ಹೋಗಿ ಬೀಳುವಂತೆ ಅವರ ಶರೀರಗಳನ್ನು ಬಿಸುಟುಬಿಟ್ಟನು. ದೇವನು ಬೀಸಿ ಬಿಸುಟ ಅಸುರರ ಈ ದೇಹಗಳು, ಗಾಳಿಗೆ ಸಿಲುಕಿದ ಎಂಜಲು ಹಾಳೆಗಳಂತೆ ತೂರಾಡಿಕೊಂಡು ಹೋಗಿ, ಅಲ್ಲಿ ಪ್ರವಹಿಸುತ್ತಿದ್ದ ದೊಡ್ಡ ನದಿಯ ಆಚೆ ದಡದ ಮೇಲೆ ಬಿದ್ದವು. ಇವರನ್ನು ಎಸೆದವನು ಸಾಮಾನ್ಯನಲ್ಲ, ಬಿದ್ದ ಏಟೂ ಸಣ್ಣ-ಪುಟ್ಟದಲ್ಲ, ಅಂತೆಯೇ ಪ್ರಬಲರೂ, ಮಹಾಬಲಶಾಲಿಗಳೂ ಆದ ಈ ದೈತ್ಯರು ಒಮ್ಮೆಲೆ ಮೂರ್ಛೆ ಹೊಂದಿದರು. ಕೆಲವು ಕಾಲ ಕಳೆದ ಬಳಿಕ, ಇವರು ಪುನಃ ತಿಳಿವನ್ನು ಪಡೆದು, ಮತ್ತೆ ತಮ್ಮ ಸೇನೆಯೊಡನೆ ಬೆರೆತುಕೊಂಡರು. ॥೩೨॥

ಅನಂತರ ಶ್ರೀ ಹರಿಯು ಪ್ರಚಂಡನ ಹೃದಯಭಾಗಕ್ಕೂ, ವೃತ್ರಾಸುರನ ಬೆನ್ನಿಗೂ ತನ್ನ ವಜ್ರಮುಷ್ಟಿಯಿಂದ ಒಂದೊಂದು ಗುದ್ದನ್ನು ಬಲವಾಗಿ ಕೊಟ್ಟು, ಅವರನ್ನು ನೆಲಕ್ಕುರುಳಿಸಿದನು. ಇದರಂತೆಯೇ 'ಕಾಲ' ಎಂಬ ಅಸುರ, 'ಕಮಲ' ಎಂಬ ಮತ್ತೊಬ್ಬ ದೈತ್ಯವೀರ, ಇವರನ್ನೂ ಸದೆ ಬಡಿದನು. ಈ ಕಾರ್ಯಗಳನ್ನು ಸಕಾಲದಲ್ಲಿ ಮಾಡುವುದಕ್ಕೆ ದೇವನು ಸ್ವಲ್ಪವೂ ಮೈಮರೆಯಲಿಲ್ಲ. ॥೩೩॥

'ಭೌಮಾಸುರ, ಕದಂಬಾಸುರ' ಇವರ ತಲೆಗಳನ್ನು ತನ್ನ ಚಕ್ರದ ನಿಶಿತ ಧಾರೆಯಿಂದ ಕತ್ತರಿಸಿ ಚೆಲ್ಲಿದನು. ತನ್ನ ಗದೆಯನ್ನು ಬಲವಾಗಿ ಬೀಸಿ, ಕೋಲಾಸುರನ ಹೃದಯಕ್ಕೆ ಮಾಧವನು ಹೊಡೆದನು. ಇದರಿಂದ ದೈತ್ಯನು ಬಹಳ ಹಿಂಸೆಯನ್ನು ಅನುಭವಿಸಿದನು. ॥೩೪॥

ತತಸ್ಸಿಂಧುರಗಾತ್ಕ್ರೂರ್ಣಂ ಕೃತಕೋಲಾಹಲಾರವಃ ।
ದಿಗ್ಗತಾನ್ ನಾದಯನ್ ಪ್ರೋಚೇ

ಸಿಂಧುರುವಾಚ :—

ಬಲಂ ತೇ ದರ್ಶಿತಂ ಹರೇ ! ||೩೫||

ಮಮಾಪಿ ಪೌರುಷಂ ಪಶ್ಯ, ನ ಚ ಗಂತುಂ ತ್ವಮರ್ಹಸಿ
ನ ಮೇ ದೃಷ್ಟಿಗತೋ ಜೀವನ್ ರಿಪುರ್ಯಾತಿ ಕದಾಚನ ||೩೬||

ಭೂತ, ಭವ್ಯ, ಭವಿಷ್ಯಜ್ಞ ! ಕಿಂ ಪೂರ್ವಂ ನ ವಿಚಾರಿತಮ್ ? ||

---

ತನ್ನ ಬೆಂಬಲಿಗರಾದ ಮಹಾ ಮಹಾ ದೈತ್ಯರು ದೈತ್ಯಾರಿಯ ಕೈಗೆ ಸಿಲುಕಿ ನುಚ್ಚು ನುಗ್ಗಾಗುತ್ತಿರುವುದನ್ನು ನೋಡಿ ಸಿಂಧುದೈತ್ಯನು ಬಹು ಬೇಗನೆ ಇವರಿದ್ದ ಸ್ಥಳಕ್ಕೆ ಹಾರಿಬಂದನು. ಬರುವಾಗ ಸಾಕಷ್ಟು ಗೊಗ್ಗರ ಧ್ವನಿಯಿಂದ ಗರ್ಜಿಸಿದನು. ಇದರಿಂದ ದೊಡ್ಡ ಕೋಲಾಹಲವೇ ಉಂಟಾಯಿತು. ಈ ಮಹಾ ರವವನ್ನು ಕೇಳಿ, ಮೂಲೆ ಮೂಲೆಗಳಲ್ಲಿದ್ದವರೆಲ್ಲರೂ ಹೆದರಿ ತಾವೂ ವಿಕಾರವಾಗಿ ಅರಚತೊಡಗಿದರು ದಿಕ್ಕುಗಳು ಪ್ರತಿಧ್ವನಿಗೈದವು. ಆಗ ದೈತ್ಯೇಂದ್ರನು ಅಷ್ಟೇ ದೊಡ್ಡ ಧ್ವನಿಯಿಂದ ದೇವನನ್ನು ಸಂಬೋಧಿಸಿ, ಜರಿಯುತ್ತ ಹೀಗೆಂದು ನುಡಿದನು.

ಸಿಂಧು :—

ಹರೇ ! ನೀನು ಇದ್ದ ನಿನ್ನ ಬಲವನ್ನೆಲ್ಲ ಪ್ರಯೋಗಿಸಿದ್ದಾಯಿತಷ್ಟೇ ? ||೩೫||

ಈಗ ನನ್ನ ಶಕ್ತಿ-ಸಾಹಸಗಳನ್ನಾದರೂ ಸ್ವಲ್ಪ ನೋಡು. ಹಾಗೆಯೇ ಓಡಿಬಿಡಬೇಡ.ಇದುವರೆಗೂ ನನ್ನ ಕೈಗೆ ಸಿಕ್ಕಿದ ಶತ್ರುಗಳ ಪೈಕಿ ಯಾರೊಬ್ಬನೂ ಜೀವದೊಡನೆ ಹಿಂದಿರುಗಿ ಹೋಗಿಲ್ಲ. ತಿಳಿಯಿತೋ, ಇನ್ನೂ ಹೇಳಲೋ ? ||೩೬||

'ತ್ರಿಕಾಲಜ್ಞಾನಿ' ಎಂದು ಜಗತೀತಲದಲ್ಲಿರುವವರೆಲ್ಲ ನಿನ್ನನ್ನು ಬಹಳ

**ಯಸ್ಯ ಶಬ್ದೇನ ಚ ಭೃಶಂ ಕಂಪತೇ ಭುವನತ್ರಯಮ್ ॥೩೭॥**

**ತತ್ಪುರಃ ಕಥಮಾಯಾತಃ? ಖದ್ಯೋತ ಇವ ಭಾಸ್ಕರಮ್ ।**

**ಕ ಉವಾಚ :—**

**ತತೋಽಸುರಗಣಾಃ ಪ್ರೋಚುರ್ವಲ್ಗಂತಂ ಸಿಂಧುದೈತ್ಯಪಮ್ ॥೩೮॥**

**ದೇವಾ ಊಚುಃ :—**

**ಶೂರಾ ನ ಹಿ ಪ್ರಜಲ್ಪಂತಿ ದರ್ಶಯಂತ್ಯೇವ ಪೌರುಷಮ್ ।**

---

ಹಿಂದಿನಿಂದ ಹೊಗಳುತ್ತ ಬಂದಿದ್ದಾರೆ. ಹೀಗಿದ್ದರೂ, ಹಿಂದು, ಮುಂದಿನ-ಆಗು-ಹೋಗುಗಳಾವನ್ನೂ ವಿಚಾರಮಾಡದೆ, ಏತಕ್ಕೆ ನನ್ನೆದುರು ಬಂದು ನಿಂತಿರುವೆ? ನನ್ನ ಸಾಮರ್ಥ್ಯ ಎಷ್ಟೆಂಬುದನ್ನು ಸೂಕ್ಷ್ಮವಾಗಿ ಹೇಳಿಬಿಡುತ್ತೇನೆ, ಕೇಳು. ನಾನೊಮ್ಮೆ ಗರ್ಜಿಸಿದೆನೆಂದ ಮಾತ್ರಕ್ಕೆ ತ್ರಿಭುವನಗಳೂ ಗಡ ಗಡ ನಡುಗುತ್ತಲೇ ಇರುವುವು. ॥೩೭॥

ಜಗಜ್ಜ್ಯೋತಿಯಾದ ಸೂರ್ಯನ ಎದುರು ಒಂದು ಮಿಣುಕು ಹುಳು ಪ್ರಕಾಶವನ್ನು ಬೀರಲು ಹೊರಟಂತೆ, ಇಂತಹ ಅದ್ವಿತೀಯ ಪರಾಕ್ರಮಿಯಾದ ನನ್ನೆದುರಿಗೆ ನಿನ್ನಂತಹ ಅತ್ಯಲ್ಪನು ಬಂದು ನಿಲ್ಲಬಹುದೇ?

ಬ್ರಹ್ಮ:—

ದುಷ್ಟನೂ, ಉನ್ಮತ್ತನೂ ಆದ ಸಿಂಧುದೈತ್ಯನ ಈ ಅಸಂಬದ್ಧ ಪ್ರಲಾಪವನ್ನು ಕೇಳಿ, ದೇವತೆಗಳೆಲ್ಲ ಬಹಳ ರೊಚ್ಚಿಗೆದ್ದರು. ಅವರಿಂದ ಇವನ ಈ ಬಡಬಡಿಕೆಯನ್ನು ಕೇಳಿ ತಡೆದುಕೊಳ್ಳಲಾಗಲಿಲ್ಲ. ಆಗ ಸಿಂಧುವನ್ನು ಸಂಬೋಧಿಸಿ, ಗದರಿಸಿ ಜರಿಯುತ್ತ ಹೀಗೆಂದು ನುಡಿದರು. ॥೩೮॥

ದೇವತೆಗಳು :—

ಏ, ಉನ್ಮತ್ತ! ಯಾರ ಎದುರಿಗೆ ನಿಂತು ಮಾತನಾಡುತ್ತಿರುವೆ? ಮೈ ಮೇಲೆ ಎಚ್ಚರ ವಿರುವುದೋ, ಇಲ್ಲವೋ? ‘ಬೊಗಳುವ ನಾಯಿ ಕಚ್ಚಲಾರದು,

**ಅಸ್ಮಾಕಂ ನ ಹರೇರಾಜ್ಞಾ, ನೋ ಚೇತ್ತ್ವಂ ಶತಧಾ ಭವೇಃ ||೩೯||**

**ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ ' ದೇವಾಸುರಯುದ್ಧ ವರ್ಣನಂ' ನಾಮ ಷಟ್ಸಪ್ತತಿತಮೋಽಧ್ಯಾಯಃ ಸಮಾಪ್ತಃ**

ಕಚ್ಚುವ ನಾಯಿ ಬೊಗಳಿ ಇಡಲಾರದು ' ಎಂಬ ಲೋಕನಿಯಮ ನಿನಗೆ ಗೊತ್ತೇನೋ ? ಶೂರರು ಎಂದಿಗೂ ಆತ್ಮಪೌರುಷವನ್ನು ನಿನ್ನಂತೆ ಕೊಚ್ಚಿಕೊಳ್ಳುವುದಿಲ್ಲ. ಪ್ರಸಂಗ ಒದಗಿತೆಂದರೆ, ತಮ್ಮ ಪೌರುಷವನ್ನು ತೋರಿಸುತ್ತಾರೆ. ನಿನ್ನಂತೆ ಅವರು ಹುಚ್ಚು ಹುಚ್ಚಾಗಿ ಹರಟುವುದಿಲ್ಲ, ಏನನ್ನು ಮಾಡುವುದು ? ಉಪಾಯವಿಲ್ಲವಾಗಿದೆ. ಶ್ರೀ ಹರಿ ನಮಗೆ ಆಜ್ಞೆಯನ್ನೀಯಲೊಲ್ಲನು. ಇಲ್ಲವಾಗಿದ್ದರೆ, ಈ ಒಳಗಾಗಿಯೇ ನೀನು ನೂರಾರು; ಸಾವಿರಾರು ತುಂಡುಗಳಾಗಿ ಬೀಳುತ್ತಲಿದ್ದೆ.||೩೯||

ಇಲ್ಲಿಗೆ ಶ್ರೀ ಗಣೇಶಪುರಾಣ ಉತ್ತರಖಂಡದಲ್ಲಿ ' ದೇವಾಸುರ ಯುದ್ಧ ವರ್ಣನೆ ' ಎಂಬಲ್ಲಿಗೆ ಎಪ್ಪತ್ತಾರನೆಯ ಅಧ್ಯಾಯಾನುವಾದವು ಮುಗಿದುದು.

॥ ಶ್ರೀ ಗಣೇಶಾಯ ನಮಃ ॥

## ಅಥ ಸಪ್ತ ಸಪ್ತತಿತಮೋಽಧ್ಯಾಯಃ

**ಕ ಉವಾಚ :—**

**ಇತಿ ತದ್ವಚನಂ ಶ್ರುತ್ವಾ ಕ್ರೋಧಾದ್ವಹ್ನಿಕಣಾನ್ವಮನ್ ।**
**ಯಥಾ ಸಿಂಹೋ ಗಜಾನೀಕಂ ಯಾತಿ ತದ್ವದ್ಯಯೌ ಸುರಾನ್ ॥೧॥**

**ಸಿಂಧುರ್ಮುಷ್ಟಿಪ್ರಹಾರೇಣ ಜಘಾನ ಬಲಸೂದನಮ್ ।**
**ಪಪಾತ ಸ ಧರಾಪೃಷ್ಠೇ ವಾತಾಹತ ಇವ ದ್ರುಮಃ ॥೨॥**

॥ ಶ್ರೀ ಗಣೇಶಾಯ ನಮಃ

### ೭೭ ನೆಯ ಅಧ್ಯಾಯ.

ಬ್ರಹ್ಮ :—

ಇದುವರೆಗೂ ಹೋರಾಡಿ ಸೋತು ಓಡಿಹೋಗಿದ್ದ ಹೇಡಿ ದೇವತೆಗಳು ಮಹಾವಿಷ್ಣು ಬೆಂಬಲಕ್ಕೆ ಬಂದೊಡನೆ ಗರಿಗಟ್ಟಿಕೊಂಡಂತವರಾಗಿ ಪುನಸ್ಸಿ ಮಾತನಾಡಲಾರಂಭಿಸಿದುದನ್ನು ಕೇಳಿದಕೂಡಲೇ ರಾಕ್ಷಸೇಶ್ವರನಿಗೆ ಕ್ರೋಧಾಸಹನೆಗಳು ಒಮ್ಮೆಲೆ ಭುಗಿಲೆದ್ದು ನಿಂತವು. ಕಣ್ಣುಗಳಿಂದ ಬೆಂಕಿಯ ಕಣಗಳನ್ನೇ ಕಾರತೊಡಗಿದನು. ಮೃಗರಾಜ; ಸಿಂಹವು, ಮತ್ತ ಗಜಸಮುದಾಯವನ್ನು ಕಂಡೊಡನೆ ಉತ್ಸಾಹದಿಂದಲೂ,ರೋಷಾತಿರೇಕದಿಂದಲೂ ಹೇಗೆ ನುಗ್ಗಿ ಬರುವುದೋ, ಅದರಂತೆ ಅಸುರೇಂದ್ರ, ಸಿಂಧು ರಾಜನು ಸುರಾನೀಕದ ಮೇಲೆ ಆಕ್ರಮಿಸಿ ಬಂದನು. ॥೧॥

ಬಂದಕೂಡಲೇ ತನ್ನ ಮುಷ್ಟಿಯನ್ನು ಬಿಗಿಯಾಗಿ ಹಿಡಿದು, ಇದರಿಂದ ಬಲವಾದ ಒಂದು ಗುದ್ದನ್ನು ಇಂದ್ರನ ಮೇಲೆ ಪ್ರಯೋಗಿಸಿದನು. ಈ ಹೊಡೆತದಿಂದಾಗಿ ದೇವೇಂದ್ರನು ಆಯತಪ್ಪಿ ಧೊಪ್ಪನೆ ನೆಲಕ್ಕೆ ಉರುಳಿ ಬಿದ್ದನು. ಬಿರುಗಾಳಿಯ

**ಘಾಲದೇಶೇ ಕುಬೇರಂ ಚ ಹನೌ ಚ ವರುಣಂ ಯಮಮ್ ।**
**ಪೃಷ್ಠದೇಶೇ ಜಘಾನಾಸೌ ಚಕ್ರಾಘಾತೇನ ದೈತ್ಯರಾಟ್ ॥೩॥**

**ತಾಲುದೇಶೇ ಪಾವಕಂ ಚ ಮನ್ಮಥಂ ಲತ್ತಯಾಹನತ್ ।**
**ಅನಿಲಂ ಪಾದಘಾತೇನ ಶನೈಶ್ಚರಮಪೋಥಯತ್ ॥೪॥**

**ಸೋಮಂ ಭೌಮಂ ಭ್ರಾಮಯಿತ್ವಾ ತತ್ಯಾಜ ಭೂತಲೇ ಬಲಾತ್ ।**
**ಕೃಷ್ಣಬಾಗೇಽಹನಚೆ. ,ವ ಸನಕಂ ಚ ಸನಂದನಮ್ ॥೫॥**

ಬಿರುಸಿಗೆ ಬುಡಸಹಿತ ಉರುಳಿ ಬಿದ್ದ ಮಹಾ ವೃಕ್ಷದಂತೆ ಈ ದೃಶ್ಯವು ಕಂಡು ಬಂದಿತು. ॥೨॥

ಯಕ್ಷರೊಡೆಯ ಕುಬೇರನೂ ಅಲ್ಲಿಯೆ ನಿಂತಿದ್ದನು. ಸಿಂಧು ಅವನ ಕಡೆಗೆ ತಿರುಗಿ, ಅದೇ ಮುಷ್ಟಿಯಿಂದ ಅವನ ಹಣೆಗೆ ಹೊಡೆದನು. ಅವರಿವರ ಸಂವಾದವನ್ನು ಕೇಳುತ್ತ ಅಜಾಗರೂಕತೆಯಿಂದ ನಿಂದಿದ್ದ ಕುಬೇರನು ಅನಿರೀಕ್ಷಿತವಾಗಿ ಹಣೆಗೆ ಬಿದ್ದ ಈ ಹೊಡೆತದಿಂದ ಅಸುಕುಸಿದಂತಾಗಿ ಕುಕ್ಕರಿಸಿದನು. ಸಿಂಧು ಹಾಗೆಯೇ ವರುಣನ ಕಡಗೆ ತಿರುಗಿ, ಅವನ ದವಡೆಗೊಂದು ಗುದ್ದನ್ನು ಕೊಟ್ಟನು. ವತ್ಸ, ವ್ಯಾಸ ' ವರುಣನ ಪರಿಸ್ಥಿತಿ ಏನಾಗಿರಬಹುದೆಂಬುದನ್ನು ನೀನೇ ಯೋಚಿಸು. ವರುಣನ ಪಕ್ಕದಲ್ಲೇ ಯಮನು ನಿಂದಿದ್ದನು. ಸಿಂಧು ತನ್ನ ಕೈಲಿದ್ದ ತೀಕ್ಷ್ಣ ಚಕ್ರಾಯುಧ ದಿಂದ ಯಮನ ಬೆನ್ನಿಗೊಮ್ಮೆ ಹೊಡೆದನು. ಇದರಿಂದ ಯಮನು ಬಹಳ ನಿರ್ವಿಣ್ಣ ನಾದನು. ॥೩॥

ಇದರಂತೆ ಯಮನ ಪಕ್ಕದಲ್ಲಿದ್ದ ಪಾವಕನಿಗೂ ಕಪಾಳಮೋಕ್ಷವಾಯಿತು. ಅವನ ಸಮೀಪದಲ್ಲಿ ನಿಂತಿದ್ದ ಕುಸುಮಶರ ಮನ್ಮಥನನ್ನು ದನಗಳನ್ನು ಬಡಿಯು ವಂತೆ ಮನಸ್ವೀ ಹೊಡೆದು ಹಿಂಸಿಸಿದನು. ವಾಯುದೇವನನ್ನು ಕಾಲಿನಿಂದ ಒದೆದು ಕೆಡಹಿದನು. ಅನಂತರ ಅಲ್ಲೇ ನಿಂತಿದ್ದ ಸೂರ್ಯಕುಮಾರ ಶನೈಶ್ಚರ ನನ್ನು ಎತ್ತಿ ನೆಲಕ್ಕೆ ಒಮ್ಮೆ ಕುಕ್ಕಿಬಿಟ್ಟನು. ॥೪॥

ಸೋಮ-ಭೌಮರಿಬ್ಬರನ್ನೂ ಭದ್ರವಾಗಿ ಕೈಗಳಲ್ಲಿ ಹಿಡಿದು ಗರಗರ ತಿರುಗಿಸಿ ಬಿಸುಟುಬಿಟ್ಟನು. ಅವರು ನೆಲಕ್ಕೆ ಬಿದ್ದು ಜಜ್ಜಿಹೋದರು. ಪಾಪ : ಮಹಾ

ನಾಸತ್ಯೌ ನಾರದಶ್ಚಾಪಿ ಕುತ್ರಾಪಿ ಚ ಪಲಾಯಿತಾಃ ।
ತತಃ ಪಲಾಯಿತಾಸ್ಸರ್ವೇ ದೃಷ್ಟ್ವಾ ವೀರ್ಯಂ ಸುರಾಸ್ತದಾ ॥೬॥

ಪತಿತಾ ಮೂರ್ಛಿತಾಃ ಕೇಚಿದ್ದೈತ್ಯಶ್ಚಕ್ರೇಣ ಮಾಧವಮ್ ।
ಮುಷ್ಟಿದೇಶೇ ಜಘಾನಾಸೌ ಚಕ್ರಂ ತಸ್ಯಾಪತದ್ಭುವಿ ॥೭॥

ಮಾಧವೋ ಗದಯಾ ಮೂರ್ಧ್ನಿ ದೈತ್ಯೇಶಂ ತಮತಾಡಯತ್ ।

---

ಜ್ಞಾನಿಗಳೂ, ಪರಮ ಸಾತ್ತ್ವಿಕರೂ ಆದ ಸನಕ-ಸನಂದನರು ಯಾವ ತಂಟೆಗೂ ಹೋಗದೆ, ತಮ್ಮ ಪಾಡಿಗೆ ತಾವು ಸಮರವೀಕ್ಷಕರಾಗಿ ನಿಂತಿದ್ದರು. ದುಷ್ಟರಿಗೆ ಶತ್ರುಗಳೇನು? ಉದಾಸೀನರೇನು? ಎಲ್ಲರೂ ಶಿಕ್ಷಾರ್ಹರೆಂದೇ ಅವರ ಕಲ್ಪನೆ. ಅಂತೆಯೇ ಅವರ ಬೆನ್ನುಗಳ ಮೇಲೂ ಗುದ್ದುಗಳನ್ನು ದೈತ್ಯನು ಬಲವಾಗಿ ಹೊಡೆದನು. ॥೫॥

ಎಲ್ಲರೂ ಹೊಡೆತ ತಿಂದುದನ್ನು ನೋಡಿ, ಅಶ್ವಿನೀದೇವತೆಗಳು, ಹಾಗೂ ನಾರದ ಇವರು ಹೇಳದೇ ಕೇಳದೇ ಯಾರೂ ಕಂಡರಿಯದ ಸ್ಥಳಕ್ಕೆ ಓಡಿಹೋಗಿ, ಅಲ್ಲಿ ಅಡಗಿ ಕುಳಿತರು. ರಾಕ್ಷಸನ ಬಲ-ಪರಾಕ್ರಮಗಳನ್ನು ಕಣ್ಣಿನಿಂದಲೂ, ಅನುಭವದಿಂದಲೂ ಅರಿತ; ಏಟುಗಳನ್ನು ತಿಂದ ಹಾಗೂ ತಿನ್ನಬೇಕಾಗಿದ್ದ ಇತರ ದೇವತೆಗಳೆಲ್ಲ ಅಶ್ವಿನೀದೇವತೆಗಳು, ನಾರದ ಇವರ ಕೃತ್ಯವನ್ನೇ ಪ್ರಶಂಸಿಸುತ್ತ ಅವರನ್ನು ಅನುಸರಿಸಿ, ಓಡಿಹೋದರು. ॥೬॥

ಓಡಿಹೋಗುವ ರಭಸದಲ್ಲಿ ಅನೇಕ ಬಾರಿ ಎಡವಿ ಬಿದ್ದು, ಹಾಗೆಯೇ ಮೂರ್ಛೆ ಹೊಂದಿದವರು ಕೆಲವರು. ಇತ್ತ ಸಿಂಧುದೈತ್ಯನು ತನ್ನ ಚಕ್ರವನ್ನು ವೇಗದಿಂದ ತಿರುಗಿಸಿ, ಅದನ್ನು ಪರಮಾತ್ಮನ ವಕ್ಷಃಸ್ಥಳಕ್ಕೆ ಗುರಿ ನೋಡಿ ಪ್ರಯೋಗಿಸಿದ್ದಲ್ಲದೇ ಮುಷ್ಟಿಯಿಂದಲೂ ಒಮ್ಮೆ ಹೊಡೆದನು. ಇದರಿಂದ ರಾಕ್ಷಸನ ಕೈ ಜಜ್ಜಿ ಹೋಯಿತೇ ಹೊರತು, ದೇವನಿಗೆ ಯಾವ ಯಾತನೆಯೂ ಉಂಟಾಗಲಿಲ್ಲ, ಮತ್ತು ಸಿಂಧು ಪ್ರಯೋಗಿಸಿದ್ದ ಚಕ್ರವು ದೇವನ ದೇಹದ ಬಳಿಗೆ ಸಹ ಹೋಗದೇ ಮಧ್ಯದಲ್ಲೇ ನೆಲಕ್ಕೆ ಉರುಳಿ ಬಿದ್ದಿತು. ॥೭॥

ಆಗ ಮಾಧವನು ತನ್ನ ಕೌಮೋದಕಿ ಎಂಬ ಗದೆಯನ್ನು ಕೈಗೆ ತೆಗೆದುಕೊಂಡು

ವಂಚಯಿತ್ವಾ ಚ ಶತಧಾ ಗದಾಂ ಸ್ವಾಂ ಚ ವ್ಯಚಿಕ್ಷಿಪತ್ ||೮||

ಜ್ಞಾತ್ವಾ ಪರಾಕ್ರಮಂ ತಸ್ಯ ಪ್ರೋಚೇ ತಂ ಮಧುಸೂದನಃ |

ಶ್ರೀ ಭಗವಾನುವಾಚ :—

ವರಯಸ್ವ ವರಂ ದೈತ್ಯ ! ಯತ್ತೇ ಮನಸಿ ವರ್ತತೇ ||೯||

ನೈತಾದೃಶೋ ಮಯಾದರ್ಶಿ ಪುರುಷಾರ್ಥೋಽಸುರೇ ಕ್ವಚಿತ್ |

ಆದರಿಂದೊಮ್ಮೆ ಸಿಂಧುವಿನ ತಲೆಗೆ ಘಟ್ಟಿಸಿದನು. ಆದರೆ, ಬಹಳ ಚತುರನಾದ ದೈತ್ಯನು ಚಾಕಚಕ್ಯತೆಯಿಂದ ನೂರಾರು ಯುಕ್ತಿಗಳನ್ನು ಹೂಡಿ, ಅಂತೂ ಆ ಹೊಡೆತವನ್ನು ತಪ್ಪಿಸಿಕೊಂಡುದು ಮಾತ್ರವಲ್ಲದೇ, ತನ್ನ ಗದೆಯನ್ನೂ ವೇಗದಿಂದ ಬೀಸಿ, ದೇವನ ಮೇಲೆ ಒಗೆದನು. ||೮||

ಸಿಂಧುವಿಗೆ ಸೂರ್ಯನಿಂದ ದೊರೆತ ವರ, ಅಮೃತಕಲಶ ಇತ್ಯಾದಿಗಳಿಂದ ಲಭಿಸಿದ ಅಮೋಘ ಶಕ್ತಿ ಸಾಹಸಗಳ ವಿಷಯವೂ ಮತ್ತು ಆ ವರಗಳಿಗೆ ನಿಗದಿಯಾಗಿರುವ ಅವಧಿಯೂ ಆಗ ಮಧುಸೂದನನ ಧ್ಯಾಸಕ್ಕೆ ಬರಲು, ಅವನೊಡನೆ ಇನ್ನು ಹೋರಾಡಿ ಪ್ರಯೋಜನವಿಲ್ಲವೆಂದು ನಿಶ್ಚಯಿಸಿ, ಅವನನ್ನು ಕುರಿತು ವಾತ್ಸಲ್ಯ-ಸಂತೋಷಗಳನ್ನು ತೋರುತ್ತ ಹೀಗೆಂದು ನುಡಿದನು.

ಶ್ರೀ ಭಗವಾನ್ :—

ದೈತ್ಯವೀರ ! ನಿನಗೆ ವರವನ್ನು ಅನುಗ್ರಹಿಸುವೆನು. ಯಾವ ಯಾವ ವರಗಳನ್ನು ಬೇಡಬೇಕೆಂಬ ಬಯಕೆ ನಿನ್ನ ಮನದಲ್ಲಿರುವುದೋ, ಅವನ್ನು ನಿಸ್ಸಂಕೋಚವಾಗಿ ಯಾಚಿಸು. ||೯||

ದೈವಕ್ಕಿಂತಲೂ ಪೌರುಷವನ್ನೇ ಪ್ರಧಾನವಾಗಿ ಕಾಪಾಡಿಕೊಂಡು ಬಂದವರ ಪೈಕಿ, ನಿನ್ನಂತಿರುವವರನ್ನು ಇಡೀ ನಿಮ್ಮ ದೈತ್ಯಕುಲದಲ್ಲೇ ನಾನು ಇದುವರೆಗೂ ಕಂಡಿರುವುದಿಲ್ಲ.

ಕ ಉವಾಚ :—

ತತೋಽಬ್ರವೀದ್ದೈತ್ಯಪತಿಃ ಪರಮಾಹ್ಲಾದಸಂಯುತಃ ॥೧೦॥

ಸಿಂಧುರುವಾಚ :—

ಯದಿ ತುಷ್ಟೋಽಸಿ ದೇವೇಶ ! ಯದಿ ದೇಯೋ ವರೋ ಮಮ ।
ಗಂಡಕೀನಗರೇ ಮೇ ತ್ವಂ ಪರಿವಾರಯುತೋ ಹರೇ ! ॥೧೧॥
ಸಾರ್ವಕಾಲಂ ವಸ ವಿಭೋ ! ನಾನ್ಯಂ ಯಾಚೇ ವರಂ ಪರಮ್ ।

ಬ್ರಹ್ಮಾ :—

ಭಗವಂತನಾಡಿದ ವಾತ್ಸಲ್ಯದ ಈ ಮಾತುಗಳನ್ನು ಕೇಳಿದೊಡನೆಯೇ ರಾಕ್ಷಸೇಶ್ವರನು ಬಹಳ ಹಿಗ್ಗಿ ಹೋದನು. ಇವನು ದೇವನ ಔದಾರ್ಯ, ವಾತ್ಸಲ್ಯಗಳನ್ನು ತಪ್ಪಾಗಿ ಗ್ರಹಿಸಿದನು. ಅರ್ಥಾತ್ ದೇವನು ತನ್ನ ಬಲ.ಪೌರುಷಗಳಿಗೆ ಹೆದರಿ, ವರವನ್ನು ಕೊಡುವ ವ್ಯಾಜದಿಂದ ತನಗೆ ಶರಣು ಬಂದಿದ್ದಾನೆಂದೇ ನಿಶ್ಚಯಿಸಿ, ಹೊರಗೆ ಮಾಟ್ಟಿಗೆ ವಿನಯವನ್ನು ವ್ಯಕ್ತಪಡಿಸಲಾರಂಭಿಸಿದನು. ಸ್ವಭಾವತಃ ದುಷ್ಟರಾದವರೆಲ್ಲ ಇದೇ ರೀತಿಯಾಗಿ ಕ್ಷುದ್ರಸ್ವಭಾವದವರಾಗಿರುತ್ತಾರೆ. ಇರಲಿ, ಸಿಂಧು ವರವನ್ನು ಬೇಡಲು ಸಿದ್ಧನಾಗಿ ನಿಂತು ದೇವನನ್ನು ಕುರಿತು, ಹೀಗೆಂದು ಬಿನ್ನವಿಸಿಕೊಂಡನು.

ಸಿಂಧು :—

ಭಗವನ್ ! ನೀನು ನನಗೆ ವರಗಳನ್ನು ಕೊಡುವುದಕ್ಕಾಗಿಯೇ ಇಲ್ಲಿಗೆ ಬಂದಿದ್ದರೆ, ಮತ್ತು ಈಗಲೇ ಅವನ್ನು ಅನುಗ್ರಹಿಸುವುದು ನಿಜವಾದರೆ, ನನ್ನ ರಾಜಧಾನಿಯಾದ ಗಂಡಕೀ ನದಿಯ ತೀರದಲ್ಲಿರುವ ಗಂಡಕೀ ನಗರಲ್ಲಿ ನಿನ್ನ ಸಕಲ ಪರಿವಾರದೊಂದಿಗೆ ಬಂದು ನನ್ನೊಡನೆಯೇ ನೆಲೆಸಬೇಕು. ಇದೊಂದಲ್ಲದೇ, ಮತ್ತಾವ ಹೆಚ್ಚಿನ ವರವನ್ನೂ ನಾನು ಯಾಚಿಸುವುದಿಲ್ಲ.

**ಕ ಉವಾಚ :—**

**ತತ ಊಚೇ ಮಹಾವಿಷ್ಣುः**

**ಶ್ರೀ ಭಗವಾನುವಾಚ :—**

**ಸ್ಥಾಸ್ಯಾಮಿ ನಗರೇ ತವ ||೧೨||**

**ದತ್ತೋ ವರೋ ಯತೋ ನೂನಂ ತತೋಽಸ್ಮಿ ವಶಗಸ್ತವ ।**

**ಕ ಉವಾಚ :—**

**ತತಸ್ಸ ಸತ್ಯಲೋಕೇ ಚ ಕೈಲಾಸೇ ವೈಷ್ಣವೇ ಪದೇ ||೧೩||**

ಬ್ರಹ್ಮಾ :—

ದೈತ್ಯನಾಡಿದ ನುಡಿಗಳನ್ನು ಕೇಳಿ, ಕೇಶವನು ಅವನ ಮಾತುಗಳನ್ನೇ ಉತ್ತೇಜಿಸುತ್ತ ಹೀಗೆಂದು ಪ್ರತ್ಯುತ್ತರಿಸಿದನು.

ಶ್ರೀ ಭಗವಾನ್ :—

ನೀನು ಇಷ್ಟು ಪ್ರೀತಿಯಿಂದ ಪ್ರಾರ್ಥಿಸುತ್ತಿರುವೆ ಎಂದ ಬಳಿಕ ನಾನು ಒಲ್ಲೆ ಎನ್ನಬಹುದೇ ? ಆಗತ್ಯವಾಗಿ ನಿನ್ನ ನಗರದಲ್ಲೇ, ನಿನ್ನೊಡನೆಯೇ ವಾಸಿಸುವೆನು. ||೧೧-೧೨||

ಸಂತೋಷದಿಂದ ನಿನಗೆ ವರಗಳನ್ನೇ ಅನುಗ್ರಹಿಸಿದೆನೆಂದ ಬಳಿಕ ಭಕ್ತವತ್ಸಲನಾದ ನಾನು ಸರ್ವದಾ ನಿನಗೆ ವಶನಾಗಿಯೇ, ಇರುವೆನು. ಈ ವಿಷಯದಲ್ಲಿ ನೀನು ಚಿಂತಿಸಬೇಕಾಗಿಲ್ಲ.

ಬ್ರಹ್ಮಾ :—

ಸಕಲ ಜಗನ್ನಿಯಂತೃವಾದ ನಾರಾಯಣನೇ ತನಗೆ ವಶನಾದನೆಂದ ಬಳಿಕ ಸಿಂಧುವಿಗೆ ಯಾರ ಹೆದರಿಕೆಯೂ ಉಳಿಯಲಿಲ್ಲ. ಸತ್ಯಲೋಕ, ಕೈಲಾಸ ಮತ್ತು ವೈಕುಂಠ ಈ ಸ್ಥಾನಗಳಲ್ಲಿ ||೧೩||

ಅಸ್ಥಾಪಯದ್ದೈತ್ಯಪತೀನ್ ಸ್ವಯಂ ಶಾಕ್ರೇ ಪದೇಽವಸತ್ ।
ತತ್ರಾಪ್ಯನ್ಯಂ ಸ್ಥಾಪಯಿತ್ವಾ ರಮಾಪತಿಯುತಃ ಸ್ವಯಮ್ ॥೧೪॥

ವಾದ್ಯ-ದುಂದುಭಿನಿರ್ಘೋಷೈಃ ಸ್ವ-ಪುರೀಂ ಗಂಡಕೀಂ ಯಯೌ ।
ನುವಂತಿ ಬಂದಿನಸ್ತಂ ತು

ಬಂದಿನ ಊಚುಃ :—

ನೇದೃಶೋಽಭೂತ್ಪುಮಾನ್ ಕ್ವಚಿತ್ ॥೧೫॥

ಯೇನ ವಿಷ್ಣುರ್ಗೃಹಂ ಸ್ವೀಯಂ ಜಿತ್ವಾನಾಯಿ ಸುರಾನ್ ಬಹೂನ್ ।

---

ತನ್ನ ನಂಬುಗೆಗೆ ಪಾತ್ರರಾದ ದೈತ್ಯೇಂದ್ರರನ್ನು ಅಧಿಕಾರಿಗಳನ್ನಾಗಿ ನಿಯಮಿಸಿ, ತಾನು ಮಾತ್ರ ಮಹೇಂದ್ರನ ಆಧಿಪತ್ಯವನ್ನು ವಹಿಸಿಕೊಂಡು, ಅಮರಾವತಿಯಲ್ಲೇ ವಾಸಮಾಡತೊಡಗಿದನು. ಕೆಲವು ಕಾಲ ಆ ಸೌಖ್ಯವನ್ನು ಸ್ವೇಚ್ಛೆಯಾಗಿ ಅನುಭವಿಸಿ, ಆ ಸ್ಥಾನದಲ್ಲೂ ತನ್ನ ಪೈಕಿ ವಿಶೇಷ ಪ್ರೀತಿಪಾತ್ರನಾದವನೊಬ್ಬನನ್ನು ಪ್ರತಿಷ್ಠಿಸಿದನು. ಅನಂತರ ತಾನು ರಮಾರಮಣನೊಡನೆ ॥೧೪॥

ತನ್ನ ರಾಜಧಾನಿಯಾದ ಗಂಡಕೀನಗರಕ್ಕೆ ಬಂದನು. ಬರುವಾಗ ಅವನ ವೈಭವ, ಆರ್ಭಟಗಳನ್ನು ಇಷ್ಟೆಂದು ವರ್ಣಿಸಲಿಕ್ಕೆ ಸಾಧ್ಯವಿಲ್ಲ. ವಿವಿಧ ವಾದ್ಯಗಳು, ನಗಾರಿ-ನೌಪತ್ತುಗಳು ಧ್ವನಿಗೈಯುತ್ತ, ದಿಕ್ಕುಗಳನ್ನು ಪ್ರತಿಧ್ವನಿಗೊಳಿಸಿದವು. ಪುರಪ್ರವೇಶೋತ್ಸವದ ಮೆರವಣಿಗೆಯಲ್ಲಿ ದೈತ್ಯರಾಜನ ಅಕ್ಕ-ಪಕ್ಕಗಳಲ್ಲೂ ಬಂದಿ-ಮಾಗಧರು ಸಾಲಾಗಿ ನಿಂತು, ತಮ್ಮ ಪ್ರಭುವನ್ನು ಹೀಗೆಂದು ಹೊಗಳುತ್ತಲಿದ್ದರು.

ವಂದಿ-ಮಾಗಧರು :—

ನಮ್ಮ ರಾಜನಿಗೆ ಸದೃಶನಾದ ಪುರುಷನು ಮತ್ತೆಲ್ಲೂ ಇಲ್ಲವೇ ಇಲ್ಲ. ॥೧೫॥

ಸಕಲ ಲೋಕಾಧೀಶ್ವರನಾದ ಮಹಾವಿಷ್ಣುವನ್ನೇ ತನ್ನ ಮನೆಗೆ ಕರೆದು ತಂದಿರುವನಲ್ಲವೇ ? ಮತ್ತು ಯುದ್ಧದಲ್ಲಿ ಎದುರಾದ ಅನೇಕ ದೇವವೀರರನ್ನು

**ಕ ಉವಾಚ :—**

**ದದೃಶುರ್ನಾಗರಾಸ್ತಸ್ಯ ಸಮೀಪೇ ವರುಣಂ ಹರಿಮ್ ||೧೬||**

**ಕುಬೇರಂ ದೇವಮುಖ್ಯಾಂಶ್ಚ ತತಃ ಸ್ವಭವನಂ ಯಯುಃ |**

**ತತಃ ಪ್ರೋಚೇ ಹರಿಂ ದೈತ್ಯಃ**

**ಸಿಂಧುರುವಾಚ :—**

**ಗಂಡಕೀನಗರೇ ಸುಖಮ್ ||೧೭||**

**ವಿಹರಸ್ವಾಮರೈಸ್ಸಾರ್ಧಂ**

**ಕ ಉವಾಚ :—**

**ತತಃ ಸೋಽಪಿ ತಥಾಕರೋತ್ |**

---

ಸೋಲಿಸಿ, ದೇವನೊಡನೆ ಅವರನ್ನೂ ಕರೆದುತಂದಿದ್ದಾನೆ. ಬಸವನೇ ಬಳಿಗೆ ಬಂದ ಮೇಲೆ ಇನ್ನು ಬಾಲವು ಬಾರದಿರುವುದೇ ?

ಬ್ರಹ್ಮಾ :—

ಹೊಗಳುಭಟರ ಸ್ತುತಿವಾಕ್ಯಗಳನ್ನು ಆಲಿಸಿದ ಪ್ರೇಕ್ಷಕವರ್ಗವು 'ಬಂದವರು ಯಾರು, ಯಾರು' ಎಂದು ಕಣ್ಣುಗಳನ್ನರಳಿಸಿ, ಉತ್ಸವದ ಹಿಂಭಾಗವನ್ನು ನೋಡಿದರು. ವರುಣ, ಇಂದ್ರ, ಕುಬೇರ ಮೊದಲಾದ ಪ್ರಮುಖ ದೇವತೆಗಳೆಲ್ಲ ಸಿಂಧುವಿನ ಸಮೀಪದಲ್ಲೇ ನಡೆದು ಬರುತ್ತಿರುವುದು ಕಂಡುಬರಲು, ನಾಗರಿಕರು ಬಹಳ ಹರ್ಷಿಸಿ, ತಮ್ಮ ತಮ್ಮ ಮನೆಗಳಿಗೆ ತೆರಳಿದರು. ಆಗ ಸಿಂಧುದೈತ್ಯನು ದೇವನನ್ನು ಕುರಿತು.

ಸಿಂಧು :—

ಭಗವನ್ ! ಈ ಗಂಡಕೀ ನಗರದಲ್ಲಿ ಯಾವುದಕ್ಕೂ ಕುಂದು-ಕೊರತೆಗಳು ಇರುವುದಿಲ್ಲ. ಸುಖವಾಗಿ ||೧೬-೧೭||

ದೇವತೆಗಳೊಡನೆ ನೀನು ಇಲ್ಲಿ ವಿಹರಿಸಬಹುದು.

ಬ್ರಹ್ಮಾ :—

ಸಿಂಧುದೈತ್ಯನ ಈ ಮಾತುಗಳನ್ನು ಕೇಳಿ, 'ಹಾಗೆಯೇ ಆಗಬಹುದು'

**ಪರಿತೋಽದೂರತೋ ದೈತ್ಯೋ ದೈತ್ಯಾನನ್ಯಾನ್ನ್ಯವೇಶಯತ್ ॥೧೮॥**

**ತತೋ ದೇವಾ ಹರಿಂ ಪ್ರೋಚುಃ**

**ದೇವಾ ಊಚುಃ :—**

**ಕಿಂ ಕೃತಂ ? ಗರುಡಧ್ವಜ ! ।**

**ತ್ಯಕ್ತ್ವಾ ಸ್ವ-ವಿಕ್ರಮಂ ಕಿಂ ತ್ವಂ ಸ್ಥಿತೋಽಸ್ಯಾನಂದನಿರ್ಭರಃ ? ॥೧೯॥**

---

ಎಂದು ದೇವನು ಒಪ್ಪಿಕೊಂಡು, ಅಲ್ಲಿಯೇ ವಾಸಿಸಲಾರಂಭಿಸಿದನು. ಆದಾಗ್ಯೂ ಸಿಂಧು ದೈತ್ಯನಿಗೆ ದೇವನ ವಿಷಯದಲ್ಲಾಗಲೀ, ಇತರ ದೇವತೆಗಳ ಬಗ್ಗೆಯಾಗಲೀ ನಂಬುಗೆ ಮಾತ್ರ ಉಂಟಾಗಲಿಲ್ಲ. ಅವನು ಕುಟಿಲ ರಾಜನೀತಿಜ್ಞನಾದುದರಿಂದ ಎಲ್ಲರನ್ನೂ ಸಂಶಯ ದೃಷ್ಟಿಯಿಂದಲೇ ನೋಡುತ್ತಲಿದ್ದನು. ಅದರಲ್ಲೂ ‘ ಇವರು ಶತ್ರುಗಳು, ಪ್ರಕೃತದಲ್ಲೇನೋ ಸೋತು ಹೋಗಿ, ತನಗೆ ಅಧೀನರಾಗಿದ್ದರೂ, ಯಾವ ಘಳಿಗೆಗೆ ಯಾವ ರೀತಿ ಇವರು ಬದಲಿಸಬಹುದೋ, ತಿಳಿಯದು’ ಎಂಬ ಆಂತರಿಕ ಹೆದರಿಕೆಯು ಇವನನ್ನು ಸರ್ವದಾ ಬಾಧಿಸುತ್ತಲೇ ಇದ್ದಿತು. ಆದುದರಿಂದ ನಗರದ ಸುತ್ತಲೂ ಒಂದು ಕೂಗಳತೆಯಲ್ಲಿರುವಂತೆ ಶಸ್ತ್ರಾಸ್ತ್ರಸಜ್ಜಿತರಾದ ದೈತ್ಯವೀರರನ್ನು ರಕ್ಷಣೆಗಾಗಿ ನಿಯಮಿಸಿದನು. ॥೧೮॥

ಅನಂತರ ಒಂದು ದಿನ ದೇವತೆಗಳೆಲ್ಲ ಏಕತ್ರ ಮಿಲಿತರಾಗಿ, ತಮಗೊದಗಿದ ಕುಂದು-ಕೊರತೆಗಳನ್ನೆಲ್ಲ ದೇವನ ಸನ್ನಿಧಿಯಲ್ಲಿ ಈ ರೀತಿ ವಿಜ್ಞಾಪಿಸಿಕೊಂಡರು.

ದೇವತೆಗಳು :—

ಭಗವನ್, ಗರುಡಧ್ವಜ ! ಈಗ ನಾವು ಯಾವ ಪುರುಷಾರ್ಥವನ್ನು ಸಾಧಿಸಿದಂತಾಯಿತು ? ವಿಕ್ರಮವನ್ನು ಪ್ರದರ್ಶಿಸಬೇಕಾದ ಸಂದರ್ಭದಲ್ಲಿ ಅದನ್ನು ತ್ಯಜಿಸಿ, ಸೌಮ್ಯಸ್ವಭಾವವನ್ನೇ ಅವಲಂಬಿಸಿ, ಈ ದುಷ್ಟ ರಾಕ್ಷಸನ ರಾಜಧಾನಿಯಲ್ಲಿ ಆನಂದದಿಂದ ಕೂಡಿದವನಂತೆ ವಾಸಿಸುತ್ತಿರುವೆಯಲ್ಲ ? ಇದರ ಅರ್ಥವಾದರೂ ಏನು ? ॥೧೯॥

**ಕಥಂ ಕಾರಾಗೃಹೇ ಪ್ರಾಪ್ತಾಃ ಮೃತ್ಯುಲೋಕಂ ಗತಾಃ ಕಥಮ್ ?**
**ಕಥಮಂತೋ ಭವೇದಸ್ಯ ಭೋಗಸ್ಯ ಜಗದೀಶ್ವರ ! ||೨೦||**

**ಕ ಉವಾಚ :—**

**ತತ ಊಚೇ ಹರಿಸ್ಸರ್ವಾನ್—**

**ಶ್ರೀ ಭಗವಾನುವಾಚ :—**

**ಕಾಲೋ ಹಿ ದುರತಿಕ್ರಮಃ |**

---

ಜಗದೀಶ್ವರ ! ನಾವೆಂದರೇನು ? ನಮಗೆ ಕಾರಾಗೃಹವಾಸವೆಂದರೇನು ? ಈ ಸ್ಥಿತಿ ನಮಗೆ ಪ್ರಾಪ್ತವಾಗಬಹುದೇ ? ಭೂ-ಲೋಕದಲ್ಲಿ ಅನೇಕ ಪುಣ್ಯಕರ್ಮಗಳನ್ನಾಚರಿಸಿ, ನಾವು ದೇವತೆಗಳಾದವರಲ್ಲವೇ ? ಭೂಲೋಕವಾಸಿಗಳೆಲ್ಲ ನಮ್ಮ ದಯೆಗೆ ಪಾತ್ರರಾಗಿರಬೇಕಾದವರಲ್ಲವೇ ? ಇಂತಹ ಕ್ಷುದ್ರರ ಸೆರೆಗೆ ನಾವು ಸಿಲುಕಿ ನರಳುತ್ತಿರುವುವೆಂದರೆ,ಎಂತಹ ಅಪಮಾನಕರವಾದ ಪ್ರಸಂಗವಿದು? ಅದಿರಲಿ 'ನಾವು ಎಂದೆಂದಿಗೂ ಮರಣವನ್ನು ಹೊಂದಬಾರದೆಂದಲ್ಲವೇ ? ನೀನು ನಮಗೆ ಅಮೃತ' ವನ್ನು ಪಾನಮಾಡಿಸಿದುದು ? ಅದುದರಿಂದಲ್ಲವೇ ನಮಗೆ 'ಅಮರ್ತ್ಯರು' ಎಂಬ ಹೆಸರುಂಟಾದುದು ? ಈಗೇನು? ಎಲ್ಲವೂ ತಲೆ-ಕೆಳಗಾಗಿ ಹೋಯಿತಲ್ಲ ? ನೀನು ನೋಡುತ್ತಿದ್ದಂತೆಯೇ ನಮ್ಮ ಪೈಕಿ ಅನೇಕರು ಮಡಿದು ಹೋಗಲಿಲ್ಲವೇ ? ಈ ಪಾತಕಿಯ ಆಡಳಿತ ಎಂದಿಗೆ ಕೊನೆಗೊಂಡೀತು ? ನಾವು ಎಂದಿಗೆ ಈ ನಾರಕ ಭೋಗದಿಂದ ಬಿಡುಗಡೆಯನ್ನು ಹೊಂದಿಯೇವು ? ||೨೦||

ಬ್ರಹ್ಮ :—

ಇವರ ಹಂಬಲವನ್ನು ಕೇಳಿ, ಭಗವಾನ್ ಶ್ರೀ ಹರಿಯು ಅವರೆಲ್ಲರನ್ನೂ ಕುರಿತು ಹೀಗೆಂದು ನುಡಿದು, ಸಮಾಧಾನ ಪಡಿಸಿದನು.

ಶ್ರೀ ಭಗವಾನ್ :—

ದೇವತೆಗಳೇ ! ನಿಮಗೇನು ವಿಷಯ ತಿಳಿಯದೇ ? ಹೀಗೇಕೆ ಹುಚ್ಚರಂತೆ ಮಾತನಾಡುವಿರಿ ? ಕಾಲದ ನಿಯತಿಯನ್ನು ಮೀರಲಿಕ್ಕೆ ಯಾರಿಂದಲೂ ಸಾಧ್ಯ

**ಕಾಲೇನ ಜಾಯತೇ ಸರ್ವಂ ಹ್ರಸತೇ ವರ್ಧತೇಽಪಿ ವಾ ||೨೧||**

**ತಸ್ಮಾತ್ಕಾಲಂ ಪ್ರತೀಕ್ಷಧ್ವಂ ಕಾಲಂ ಏನಂ ಗ್ರಸಿಷ್ಯತಿ ।**

**ಕ ಉವಾಚ :—**

**ಏವಂ ಜಿತ್ವಾ ತ್ರಿಲೋಕೀಂ ಸ ಮಹಾಬಲ-ಪರಾಕ್ರಮಃ ||೨೨||**

**ತತೋ ದೈತ್ಯೋ ಜಗೌ ಸರ್ವಂ ವೃತ್ತಾಂತಂ ಪಿತರೌ ಮುದಾ ।**

**ಆಶಿಷಂ ದದತುಸ್ತೌ ಚ ಜ್ಞಾತ್ವಾ ಪೌರುಷಮಸ್ಯ ಹ ||೨೩||**

---

ವಿಲ್ಲ, ಕಾಲನೇ ಎಲ್ಲವನ್ನೂ ಸೃಜಿಸುವುದು. ಅಂತೆಯೇ ಅದೇ ಕಾಲ ಎಲ್ಲವನ್ನೂ ಕ್ಷಯಗೊಳಿಸುವುದು. ಪ್ರಸಂಗ ಒದಗಿದರೆ, ಕ್ಷೀಣದಶೆಗಿಳಿದ ವಸ್ತುವನ್ನೂ ಇದ್ದಕ್ಕಿದಂತೆಯೇ ಅಭಿವೃದ್ಧಿಸ್ಥಿತಿಗೆ ಕಂದುಬಿಡುವುದು. ||೨೧||

ನೀವು ಸರ್ವಾತ್ಮನಾ ಸ್ವತಂತ್ರರಾಗಿ, ಸರ್ವರನ್ನೂ ಸ್ವೇಚ್ಛೆಯಿಂದ ಆಳತಕ್ಕಂತಹ ಕಾಲವೂ ಒಮ್ಮೆ ಇದ್ದಿತಲ್ಲವೇ? ಯಾವ ಕಾಲ ನಿಮ್ಮನ್ನು ಆ ಮಟ್ಟಕ್ಕೆ ಏರಿಸಿದ್ದಿತೋ, ಅದೇ ಕಾಲ ಈಗ ಸಿಂಧುವನ್ನು ಉಚ್ಚಾಶ್ರಯ ಸ್ಥಿತಿಗೆ ಏರಿಸಿದೆ. ಹಾಗೆಯೇ ವರದ ಅವಧಿಯು ಮುಗಿಯಿತೆಂದರೆ, ಇವನನ್ನು ಅಧೋಗತಿಗೂ ತಳ್ಳಿಬಿಡುವುದು. ಇದು ನಿಶ್ಚಿತವಾದ ಅಂಶ. ಬಹು ಸುಲಭವಾಗಿ, ಯಾವ ವಿಶೇಷ ಪರಿಶ್ರಮವೂ ಇಲ್ಲದೇ; ಸಾಧಿಸಬಹುದಾದಂತಹ ಕೆಲಸಕ್ಕೆ ಹೆಚ್ಚೇಕೆ ಪ್ರಯತ್ನಿಸಬೇಕು. ಗಾಳಿಯನ್ನು ಗುದ್ದಿ ಮೈಯನ್ನು ನೋಯಿಸಿಕೊಂಡಂತಾಗುವುದಿಲ್ಲವೇ ? ದೈತ್ಯನ ಪಾಪಾಚರಣೆಯೇ ಅವನನ್ನು ತಿಂದು ಬಿಡುವುದು. ಆದುದರಿಂದ ನೀವು ಶಾಂತಮನಸ್ಕರಾಗಿ, ಆ ಕಾಲವನ್ನು ಪ್ರತೀಕ್ಷಿಸುತ್ತಲಿರಿ, ಎಲ್ಲವೂ ಸರಿಹೋಗುವುದು.

ಬ್ರಹ್ಮಾ :—

ಇತ್ತ, ಬಲ-ಪರಾಕ್ರಮಶಾಲಿಯಾದ ಸಿಂಧು ಮೂರು ಲೋಕಗಳನ್ನೂ ಜಯಿಸಿ, ಸ್ವಾಧೀನಪಡಿಸಿಕೊಂಡು, ಎಲ್ಲೆಡೆ ತನ್ನ ಆಜ್ಞೆಯು ಅಪ್ರತಿಹತವಾಗಿ ಜಾರಿರುವಂತೆ ಮಾಡಿದನು. ||೨೨||

ಇಷ್ಟಾದ ಬಳಿಕ, ತನ್ನ ದಿಗ್ವಿಜಯದ ಸಂಗತಿಯನ್ನೂ ಮಹಾವಿಷ್ಣು ಸಹ

**ತತೋ ದೈತ್ಯೋ ದುಷ್ಟಮತಿರ್ಭೂತಲೇ ಸಮಘೋಷಯತ್ ।**

**ಸಿಂಧುರುವಾಚ :—**

**ದೇವದ್ವಿಜಗವಾಮರ್ಚಾ ಕ್ರಿಯತೇ ಯೇನ ಕೇನಚಿತ್ ॥೨೪॥**

**ಸ ಹಂತವ್ಯೋಽಥವಾಸಾಧುರಾನೇಯೋ ಮಮ ಸನ್ನಿಧೌ ।**

---

ತನಗೆ ಅಧೀನನಾದುದನ್ನೂ ತನ್ನ ತಂದೆ-ತಾಯಿಯರಿಗೆ ತಿಳಿಸುವುದಕ್ಕಾಗಿ ದೈತ್ಯನು ಅವರ ಸಮೀಪಕ್ಕೆ ಧಾವಿಸಿ ಬಂದು, ಎಲ್ಲ ವಿಷಯಗಳನ್ನೂ ವಿಸ್ತರಿಸಿ ಸಂತೋಷದಿಂದ ಹೇಳಿದನು. ಇವನ ಅಸಾಧಾರಣವಾದ ಪೌರುಷವನ್ನು ಕೇಳಿದ ಮಾತಾ-ಪಿತೃಗಳು, ಹೃತ್ಪೂರ್ವಕವಾಗಿ ಇವನನ್ನು ಆಶೀರ್ವದಿಸಿದರು. ॥೨೩॥

ವತ್ಸ, ವ್ಯಾಸ! ಸಾಮಾನ್ಯವಾಗಿ ಮನುಷ್ಯರಿಗಾಗಲೀ, ದೇವತೆಗಳಿಗಾಗಲೀ, ಐಶ್ವರ್ಯ, ವಿದ್ಯೆ, ಅಧಿಕಾರ ಇವು ಇದ್ದಕ್ಕಿದ್ದಂತೆ ಮಿತಿಮೀರಿ ಒದಗಬಾರದು. ಹಾಗೇನಾದರೂ ಆಯಿತೆಂದರೆ, ಇವನ್ನು ಪಡೆದವನ ಮನೋವೃತ್ತಿಯು, ಹುಚ್ಚು ಹಿಡಿದ ಕುದುರೆಯಂತೆ ಕುಣಿದಾಡಿ, ಇವನನ್ನು ಅಪಾಯಕ್ಕೆ ಗುರಿಪಡಿಸುವುದು. ಕೇಳು, ಸಿಂಧುವಿನ ಉದ್ದಾಮತನವನ್ನು. ತಾನೇ ಸರ್ವ ತಂತ್ರ. ಸ್ವತಂತ್ರನಾದ ಕೂಡಲೇ, ದೊರೆತ ಅಪೂರ್ವವಾದ ಈ ಭಾಗ್ಯವನ್ನು ಸ್ಥಾಯಿಗೊಳಿಸಲು ಪ್ರಯತ್ನ ಪಡದೇ, ಇತರರೆಲ್ಲರನ್ನೂ ಅಪಮಾನಗೊಳಿಸುವುದು ಅನವಶ್ಯಕ ಹಾಗೂ ಅಪ್ರಕೃತವಾದ ರೀತಿಯಲ್ಲಿ ಸ್ವ-ಪ್ರತಿಷ್ಠೆಯನ್ನು ಬೆಳೆಸುವುದು ಇತ್ಯಾದಿಗಳನ್ನಾರಂಭಿಸಿ. ಯಾರನ್ನೂ ಲಕ್ಷ್ಯಕ್ಕೆ ತಾರದೇ, ಎಲ್ಲರನ್ನೂ ಮೆಟ್ಟಿ ಆಳಲಾರಂಭಿಸಿದನು. ತನ್ನ ದೂತರನ್ನು ಸಮೀಪಕ್ಕೆ ಕರೆದು

ಸಿಂಧು :—

ನಮ್ಮ ರಾಜ್ಯದಲ್ಲಿ ಈ ಕ್ಷಣದಿಂದ ಮೊದಲುಗೊಂಡು ದೇವತೆಗಳು, ದ್ವಿಜರು ಮತ್ತು ಗೋಗಳು ಇವನ್ನು ಯಾರೂ ಅರ್ಚಿಸತಕ್ಕದ್ದಲ್ಲ. ವಿಷಯವನ್ನು ತಿಳಿಯದೆಯೋ, ಅಥವಾ ಅವಜ್ಞತೆಯಿಂದಲೋ ಯಾರಾದರೂ ನಮ್ಮ ಈ ಆಜ್ಞೆಯನ್ನು ಮೀರಿ ನಡೆದುದಾದರೆ, ॥೨೪॥

ಅಂಥವರನ್ನು ಸ್ವಲ್ಪವೂ ವಿಳಂಬಿಸದೆ, ದಯೆದೋರದೇ ಆ ಕ್ಷಣದಲ್ಲಿಯೇ

ಪ್ರತಿಮಾ ಯತ್ರ ಯತ್ರ ಸ್ಯಾತ್ತಾಂ ಭಙ್ಕ್ತ್ವಾ ನಿಕ್ಷಿಪೇಜ್ಜಲೇ ॥೨೫॥

ಮನ್ಮೈವ ಪ್ರತಿಮಾಂ ಕೃತ್ವಾ ಪೂಜಯಂತು ಗೃಹೇ ಗೃಹೇ ।

**ಕ ಉವಾಚ :—**

ಪ್ರಾಬೋಧಯರ್ನ್ ಸಿಂಧುವಚೋ ದೂತಾ ಏವಂ ಸ್ಥಲೇ ಸ್ಥಲೇ ॥೨೬॥

ಭಙ್ಕ್ತ್ವಾ ಪ್ರಾಸಾದಮೂರ್ತೀಶ್ಚ ತೋಯೇಽಗಾಧೇ ಚ ಚಿಕ್ಷಿಪುಃ ।

ಸಿಂಧೋಶ್ಚ ಪ್ರತಿಮಾಂ ಕೃತ್ವಾಸ್ಥಾಪಯರ್ನ್ ಪರಮಾದರಾತ್ ॥೨೭॥

ಅಲ್ಲಿಯೇ ಕೊಂದುಬಿಡತಕ್ಕದ್ದು. ಒಂದು ವೇಳೆ ಅವರ ಪೈಕಿ ಯಾರಾದರೂ ನಿಮ ಗಿಂತಲೂ ಬಲಿಷ್ಠರಾಗಿದ್ದು, ನಮ್ಮ ಆಜ್ಞೆಗೆ ಪ್ರತಿಭಟನೆಯನ್ನುತೋರಿಸುವುದಾದರೆ, ಅವರನ್ನು ಹಿಡಿದು ನನ್ನ ಸನ್ನಿಧಿಗೆ ತರತಕ್ಕದ್ದು. ರಾಷ್ಟ್ರದ ಯಾವ ಮೂಲೆಯಲ್ಲೇ ಆಗಲಿ, ಯಾವ ಯಾವ ದೇವತಾ ವಿಗ್ರಹಗಳಿವೆಯೋ, ಅವೆಲ್ಲವನ್ನೂ ಕಿತ್ತು ಒಡೆದು ಅರೂಪಗೊಳಿಸಿ, ಒಡನೆಯೇ ನೀರಿನಲ್ಲಿ ಎಸೆಯತಕ್ಕದ್ದು. ॥೨೫॥

ಈ ಮೂರ್ತಿಗಳು ಪ್ರತಿಷ್ಠಿತವಾದ ಆಲಯಗಳಲ್ಲೆಲ್ಲ ನನ್ನ ಮೂರ್ತಿಯನ್ನೇ ನಿರ್ಮಿಸಿ, ಅವನ್ನು ಸ್ಥಾಪಿಸಿ ಪೂಜಿಸತಕ್ಕದ್ದು. ಪ್ರತಿಯೊಂದು ಮನೆಯಲ್ಲೂ ನನ್ನ ವಿಗ್ರಹ ಇರಲೇ ಬೇಕು ಮತ್ತು ಪ್ರತಿಯೊಬ್ಬನೂ ಸಹ ಆ ಮೂರ್ತಿಯನ್ನು ಪೂಜಿ ಸಲೇ ಬೇಕು, ಎಂದು ಡಂಗುರವನ್ನು ಸಾರಿರಿ. ॥೨೬॥

ಬ್ರಹ್ಮಾ :—

ಎಂದು ಕಟ್ಟಾಜ್ಞೆಯನ್ನಿತ್ತನು. ಇವನು ಹೇಳಿದುದೇ ತಡ, ಇವನಿಗಿಂತಲೂ ದುಷ್ಟಚೇತನರಾದ ದೈತ್ಯಭಟರು ತಮ್ಮ ರಾಜನ ಆಜ್ಞೆಯನ್ನು ತಮ್ಮ ಕೈವಾಡ ದಿಂದ ಮತ್ತಷ್ಟು ಕಟುಗೊಳಿಸಿ, ರಾಷ್ಟ್ರದಲ್ಲೆಲ್ಲ ಈ ಸುದ್ದಿ ಮುಟ್ಟುವಂತೆ ಡಂಗುರ ವನ್ನು ಹುಯಿದು ಎಲ್ಲರನ್ನೂ ಎಚ್ಚರಿಸಿದರು. ॥೨೭॥

**ಪೂಜಾರ್ಥಂ ರಾಕ್ಷಸಾಶ್ಚಾಪಿ ತತೋ ಯಾತಾ ನಿಜಂ ಪತಿಮ್ ।**

**ಊಚುಃ**

**ದೂತಾ ಊಚುಃ ;—**

**ವೈನಾಯಕ, ಹರ, ಹರಿ, ಭಾನು, ರಮಾದಿಕಾಃ ॥೨೮॥**

**ಪ್ರತಿಮಾಃ ಪ್ರವಿಭಜ್ಯಾಶು ಕ್ಷಿಪ್ತಾಃ ಸರ್ವಾ ಮಹಾಜಲೇ ।**

**ತನ್ನೈವ ಪ್ರತಿಮಾಸ್ತತ್ರ ಸ್ಥಾಪಿತಾ ರಾಕ್ಷಸಾ ಅಪಿ ॥೨೯॥**

---

ದೈತ್ಯನು ದೇವತಾಮೂರ್ತಿಗಳನ್ನಷ್ಟೇ ಭಂಗಗೊಳಿಸಿ ಆ ಸ್ಥಳಗಳನ್ನು ತನ್ನ ವಿಗ್ರಹಪ್ರತಿಷ್ಠೆಗೆ ವಿನಿಯೋಗಿಸಬೇಕೆಂದು ಆಜ್ಞೆಮಾಡಿದ್ದರೆ, ದೈತ್ಯನ ದೂತರು ಮತ್ತಷ್ಟು ಮುಂದುವರಿದು, ದೇವತೆಗಳ ಮೂರ್ತಿಯ ಜೊತೆಗೆ ದೇವಾಲಯಗಳನ್ನೂ ಕೆಡಹಿ, ನೆಲಸಮಮಾಡಿದ್ದಲ್ಲದೆ, ದೇವತಾಮೂರ್ತಿಗಳನ್ನು ಒಡೆದು ನದಿಯ ಅಗಾಧ ಮಡುವಿನಲ್ಲಿ ಬಿಸುಟರು. ಮತ್ತು ತಮ್ಮ ರಾಜನಾದ ಸಿಂಧುವಿನ ಮೂರ್ತಿಗಳನ್ನು ನಿರ್ಮಿಸಿ, ಬಹಳ ಆದರ-ವಿಶ್ವಾಸಗಳಿಂದ ಅವನ್ನು ಪ್ರತಿಷ್ಠಿಸಿದರು. ॥೨೭॥

ಪ್ರತಿಯೊಬ್ಬರೂ ಈ ಮೂರ್ತಿಗಳಿಗೆ ಪೂಜೆಯನ್ನು ಸಲ್ಲಿಸತಕ್ಕದ್ದು ಎಂದು ಕಡ್ಡಾಯವಾಗಿ ವಿಧಿಸಿ, ತಮ್ಮ ರಾಜನಿಗೆ ಈ ಸಂಗತಿಯನ್ನು ತಿಳಿಸಲು ಬಂದು ಹೀಗೆ ನುಡಿದರು.

ದೂತರು :—

ರಾಜ! ನಿಮ್ಮ ಆಜ್ಞೆಯನ್ನು ಅಕ್ಷರಶಃ ಪಾಲಿಸಿ ಬಂದಿದ್ದೇವೆ. ಗಣಪತಿ, ಪರಮೇಶ್ವರ, ನಾರಾಯಣ, ಭಾಸ್ಕರ, ಮಹಾಲಕ್ಷ್ಮಿ ಮೊದಲಾದ ॥೨೮॥

ಪ್ರತಿಮೆಗಳನ್ನೆಲ್ಲ ಒಡೆದು, ಅವನ್ನು ಜಲಪೂರ್ಣವಾದ ಅಗಾಧ ಮಡುಗಳಲ್ಲಿ ಬಿಸುಟಿರುವೆವು. ನಿಮ್ಮಂತಿರುವ ಅಸಂಖ್ಯಾತ ಪ್ರತಿಮೆಗಳನ್ನು ನಿರ್ಮಿಸಿ, ಅಲ್ಲಲ್ಲೇ ಸ್ಥಾಪಿಸಿರುವೆವು. ॥೨೯॥

ಪೂಜಾರ್ಥಂ ಸ್ಥಾಪಿತಾಃ ಸ್ವಾಮಿನ್ ! ಆಗತಾಶ್ಚ ತವಾಂತಿಕಮ್ ।

ಕ ಉವಾಚ ;—

ಏವಂ ಧರ್ಮಸ್ಯ ಸರ್ವಸ್ಯ ವಿಚ್ಛಿತ್ತಿಃ ಸಮಜಾಯತ ॥೩೦॥

ಯಜ್ಞದಾನಸ್ವಧಾಸ್ವಾಹಾವಷಟ್ಕಾರಾನ್ನ ಚಾಕರೋತ್ ।
ದೇವ ದ್ವಿಜ-ಗುರೂಣಾಂ ಚ ಪೂಜನಂ ಕ್ವಚನಾಭವತ್ ॥೩೦॥

ಮೇರುಂ ಯಾತಾ ಋಷಿಗಣಾಃ ಕೇಚಿದ್ಭ್ರಂಶಮುಪಾಗತಾಃ ।
ಏವಂ ತ್ರೈಲೋಕ್ಯಪ್ರಬಲಾ 1ದೈತ್ಯಾ ಜಾತಾಶ್ಚ 2ರಾಕ್ಷಸಾಃ ॥೩೨॥

ಅವಕ್ಕೆಲ್ಲ ಪೂಜಾದಿ ವಿನಿಯೋಗಗಳು ತಪ್ಪದೆ ನಡೆಯುತ್ತಿರುವಂತೆ ಯೋಗ್ಯವಾದ ವ್ಯವಸ್ಥೆಯನ್ನೂ ಏರ್ಪಡಿಸಿ ಬಂದಿರುವೆವು. ಇದ್ದ ಸಂಗತಿಯನ್ನು ಒಡೆಯನ ಪಾದಮೂಲಗಳಲ್ಲಿ ಅರುಹಲು ತಮ್ಮ ಸನ್ನಿಧಿಗೆ ಬಂದಿರುವೆವು.

ಬ್ರಹ್ಮ :—

ಹೀಗೆ ದೂತರು ಅಟ್ಟಹಾಸದಿಂದ ನುಡಿದು, ಅನಂತರ ವಿನಯದಿಂದ ಹಿಂದೆ ಸರಿದು ನಿಂತರು. ಸ್ವೇಚ್ಛಾವ್ಯವಹಾರಗಳು ಹೀಗೆಲ್ಲ ನಡೆಯಲಾರಂಭಿಸಿದ ಬಳಿಕ, ಧರ್ಮವು ಉಳಿದೀತೇ ? ಅತ್ಯಲ್ಪಕಾಲದಲ್ಲೇ ಎಲ್ಲವೂ ನಶಿಸಿಹೋಗಿ, ಲೋಕಗಳಲ್ಲಿದ್ದ ಫಲವತ್ತಾದ ಕ್ಷೇತ್ರಗಳು ಸಹ ಊಷರ ಭೂಮಿಯಂತಾದವು. ॥೩೦॥

ಯಜ್ಞ, ದಾನ, ದೈವ, ಪೈತೃಕ ಮೊದಲಾದ ಶಾಸ್ತ್ರವಿಹಿತ ಕರ್ಮಾಚರಣೆಗಳನ್ನು ಯಾರೊಬ್ಬರೂ ಮಾಡದಂತಾದರು. ದೇವ, ಬ್ರಾಹ್ಮಣ ಗುರುಗಳ ಪೂಜಾಕ್ರಮವಂತೂ ಹೆಸರಿಲ್ಲದೇ ಅಳಿಸಿಹೋಯಿತು.

'ಇನ್ನು ಮೇಲೆ ಈ ಪ್ರದೇಶದಲ್ಲಿರುವುದು ಶ್ರೇಯಸ್ಕರವಲ್ಲ' ಎಂದು ನಿಶ್ಚಯಿಸಿ, ಮಹರ್ಷಿಗಳೆಲ್ಲ ಮೇರುಪರ್ವತಕ್ಕೆ ತೆರಳಿ, ಅಲ್ಲೇ ತಪೋನಿರತರಾದರು. ಜೀವನವನ್ನೇ ಪ್ರಧಾನ ಪುರುಷಾರ್ಥವೆಂದು ಭಾವಿಸಿದ ಅಸ್ಥಿರಚಿತ್ತರು ಜೀವನ ನಿರ್ವಾಹಕ್ಕಾಗಿ ಸಿಂಧುದೈತ್ಯನನ್ನು ಆಶ್ರಯಿಸಿ, ಅವನು ಕೊಡುವ ಎಂಜಲಿಗೆ ಕಾದು ಕುಳಿತು

---

ವಿವರಣೆಗೆ ಪರಿಶಿಷ್ಟವನ್ನು ನೋಡಿ.

ವಿಲೀನಾ ನಿಧನಂ ಪ್ರಾಪ್ತಾಃ ಸಾಧವೋ ದೇವತಾಗಣಾಃ ।
ಯಥಾ ದೇವಗಣಾ ಮೋಕ್ಷಂ ಸಿಂಧೋಃ ಪ್ರಾಪ್ತಾಃ ಶೃಣುಷ್ವ ತತ್
||೩೩||

ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ 'ಸಿಂಧು ದೈತ್ಯಪ್ರಾಬಲ್ಯವರ್ಣನಂ' ನಾಮ ಸಪ್ತ ಸಪ್ತತಿತಮೋಽಧ್ಯಾಯಃ

ಅವನ ತೃಪ್ತಿಗಾಗಿ ಆಚಾರ-ವ್ಯವಹಾರಗಳನ್ನೆಲ್ಲ ಮಾರ್ಪಡಿಸಿಕೊಂಡರು. ವಿಶೇಷ ಒತ್ತಾಯ ಬಂದಾಗ, ಧರ್ಮವನ್ನು ಸಂಪೂರ್ಣವಾಗಿ ತ್ಯಜಿಸಿ ಭ್ರಷ್ಟರಾಗಿ ಹೋದರು. ಧರ್ಮಾಚರಣೆಯನ್ನು ಸ್ವಲ್ಪಮಟ್ಟಿಗಾದರೂ ರಹಸ್ಯವಾಗಿ ಆಚರಿಸುತ್ತಿದ್ದವರನ್ನು ದೈತ್ಯನು ಬಹಳ ಬಲಾತ್ಕಾರದಿಂದ ಭ್ರಂಶಗೊಳಿಸಿದನು. ಅಂತೂ ಅತ್ಯಲ್ಪ ಕಾಲದಲ್ಲೇ ಎಲ್ಲವೂ ಅಧರ್ಮಭೂಯಿಷ್ಠವಾಗಿ ಹೋಗಿ, ದೈತ್ಯರೆಲ್ಲ ರಾಕ್ಷಸರಾಗಿ ಪರಿಣಮಿಸಿದರು. ||೩೨||

ಸಾಧುಸ್ವಭಾವದವರೂ, ಕೀಳ್ದರ್ಜೆಯವರೂ ಆದವರು ದೈತ್ಯನ ದುರಾಡಳಿತಕ್ಕೆ ಸಿಕ್ಕು ನಿಧನವನ್ನು ಹೊಂದಿದರು. ದೇವತೆಗಳು, ಋಷಿಗಳು ಇವರಿಗುಂಟಾದ ಕಿರುಕುಳವನ್ನಂತೂ ವರ್ಣಿಸಲಿಕ್ಕೆ ಸಾಧ್ಯವೇ ಇಲ್ಲ. ವತ್ಸ, ವ್ಯಾಸ! ವ್ಯಾಘ್ರದಂತೆ ಕ್ರೂರಸ್ವಭಾವನಾದ ಸಿಂಧುವಿನ ಹಿಡಿತಕ್ಕೆ ಸಿಕ್ಕು ನರಳುತ್ತಿದ್ದ ದೇವತೆಗಳು ಹೇಗೆ ಪಾರಾದರು? ಎಂಬ ಸಂಗತಿಯನ್ನು ಹೇಳುವೆನು, ಕೇಳು. ||೩೩||

ಇಲ್ಲಿಗೆ ಶ್ರೀ ಗಣೇಶಪುರಾಣದ ಉತ್ತರಖಂಡದಲ್ಲಿ 'ಸಿಂಧುದೈತ್ಯನ ಪ್ರಾಬಲ್ಯ ವರ್ಣನೆ' ಎಂಬಲ್ಲಿಗೆ ಎಪ್ಪತ್ತೇಳನೆಯ ಅಧ್ಯಾಯಾನುವಾದವು ಮುಗಿದುದು.



॥ ಶ್ರೀ ಗಣೇಶಾಯ ನಮಃ ॥

# ಅಥಾಷ್ಟಸಪ್ತತಿತಮೋಽಧ್ಯಾಯಃ

**ಕ ಉವಾಚ ;—**

**ಸರ್ವೇ ನಿಗೃಹಿತಾ ದೇವಾಃ ಸಿಂಧುನಾ ಪ್ರಭವಿಷ್ಣುನಾ ।**
**ತಸ್ಯೈವ ಚ ವಧೋಪಾಯಂ ಚಿಂತಯಾಮಾಸುರುತ್ಸುಕಾಃ ॥೧॥**

**ಇಂದ್ರ ಉವಾಚ :—**

**ಸರ್ವೇಷಾಂ ಸಂಮತಂ ಜ್ಞಾತ್ವಾ ಕರ್ತವ್ಯಃ ಕಾರ್ಯನಿಶ್ಚಯಃ ।**

---

॥ ಶ್ರೀ ಗಣೇಶಾಯ ನಮಃ ॥

## ೭೮ ನೆಯ ಅಧ್ಯಾಯ.

ಬ್ರಹ್ಮಾ :—

ವತ್ಸ ! ಕೇಳು. ಮಹಾಬಲಶಾಲಿಯಾದ ಸಿಂಧುದೈತ್ಯನಿಂದ ದೇವತೆಗಳೆಲ್ಲ ಸೋತು ಹೋಗಿ, ಅವನಿಗೆ ಅಧೀನರಾಗಿ ಹೋದರಷ್ಟೇ ? ಸ್ವಭಾವತಃ ಸ್ವತಂತ್ರ ಮನೋವೃತ್ತಿಯವರೂ, ಸರ್ವಸಮೃದ್ಧ ಆಗಿದ್ದರೂ ದೇವತೆಗಳಿಗೆ ಎಷ್ಟು ಕಾಲ ಬೇರೊಬ್ಬರ ಆಶ್ರಯದಲ್ಲಿರಲು ಸಾಧ್ಯವಾದೀತು ? ಯಾವ ಉಪಾಯವನ್ನು ಮಾಡಿದರೆ ದುಷ್ಟನಾದ ಈ ದೈತ್ಯನು ಮೃತನಾದಾನು? ಎಂಬ ವಿಷಯವನ್ನೇ ಇವರು ಚಿಂತಿಸುತ್ತಲಿದ್ದರು. ಈ ಅಂಶದಲ್ಲಿ ಪ್ರತಿಯೊಬ್ಬರೂ ಒಮ್ಮತದಿಂದಿದ್ದು ದಲ್ಲದೇ, ಇದನ್ನು ಸಾಧಿಸಲು ಎಲ್ಲರೂ ಬಹಳ ಉತ್ಸಾಹ ಉಳ್ಳವರಾಗಿದ್ದರು. ಸರ್ವದಾ ಹೀಗಿರುವಾಗ, ದೇವೇಂದ್ರನು ಮಾತನಾಡಲು ಉಜ್ಜುಗಿಸಿ, ಅವರನ್ನು ಹೀಗೆಂದು ನುಡಿದನು.

ಇಂದ್ರ :—

ದೇವತೆಗಳೇ ! ಯಾವುದಾದರೂ ಒಂದು ಮಹತ್ತರವಾದ ಕಾರ್ಯಕೆ

**ತಸ್ಮಾತ್ಸರ್ವೇ ಬ್ರುವಂತ್ವದ್ಯ ಮತಂ ಯಸ್ಯ ಯಥಾ ಭವೇತ್ ॥೨॥**

**ಕ ಉವಾಚ :—**

**ಇತಿ ಶಕ್ರವಚಃ ಶ್ರುತ್ವಾಬ್ರುರ್ವ ಬ್ರಹ್ಮಾದಯಃ ಸುರಾಃ ।**

**ದೇವಾ ಊಚುಃ —**

**ಈಶ್ವರಃ ಸರ್ವಕರ್ತಾಸ್ತಿ ಸ ಕಲ್ಯಾಣಂ ಕರಿಷ್ಯತಿ ॥೩॥**

**ಸ ಯೇನ ತುಷ್ಯತೇ ದೇವಃ ಸ ಉಪಾಯೋ ವಿಧೀಯತಾಮ್ ।**

ಕೈಹಾಕುವಾಗ ಆ ಕಾರ್ಯಕ್ಕೆ ಎಲ್ಲರ ಸಮ್ಮತಿಯೂ ಇದೆಯೇ? ಎಂಬುದನ್ನು ಮೊದಲು ಖಚಿತವಾಗಿ ತಿಳಿದುಕೊಂಡು ಅನಂತರ ಆ ಕಾರ್ಯವನ್ನು ಆರಂಭಿಸುವುದು ಉಚಿತವಾಗಿದೆ. ಆದುದರಿಂದ ನೀವೆಲ್ಲರೂ ನಿಮ್ಮ ಹೃದ್ಗತವನ್ನು ಮನಬಿಚ್ಚಿ ಹೇಳತಕ್ಕದ್ದು. ಯಾರ ದಾಕ್ಷಿಣ್ಯಕ್ಕಾಗಿಯೂ ಮನಸ್ಸಿನಲ್ಲಿರುವುದನ್ನು ಗೋಪನ ಮಾಡಬೇಕಾದ ಪ್ರಮೇಯವಿರುವುದಿಲ್ಲ. ॥೨॥

ಬ್ರಹ್ಮಾ :—

ಇಂದ್ರನು ಈ ರೀತಿ ಸ್ಪಷ್ಟವಾಗಿ ನುಡಿದುದನ್ನು ಕೇಳಿ, ಚತುರ್ಮುಖನೇ ಮೊದಲಾದ ದೇವತೆಗಳು ತಮ್ಮ ಅಭಿಮತವನ್ನು ಈ ರೀತಿಯಾಗಿ ವಿದರಿಸಿದರು.

ದೇವತೆಗಳು :—

ಸಕಲ ಚರಾಚರ ವಸ್ತುಗಳಿಗೂ ಕಾರಣಕರ್ತೃವಾಗಿರುವ ಪರಮೇಶ್ವರನೊಬ್ಬನಿರುವನಷ್ಟೇ? ಅವನೇ ಎಲ್ಲರನ್ನೂ ಸಂರಕ್ಷಿಸತಕ್ಕವನು. ಇದಕ್ಕಾಗಿ ನಾವು ಚಿಂತಿಸಬೇಕಾದ ಪ್ರಮೇಯವೇ ಇರುವುದಿಲ್ಲ. ಅವನನ್ನು ಸಂತೋಷಪಡಿಸತಕ್ಕದ್ದೆಷ್ಟೋ, ಅಷ್ಟೇ ನಮ್ಮ ಕರ್ತವ್ಯ. ಯಾವ ವಿಧಾನದಿಂದ ಅರ್ಚಿಸಿದರೆ ದೇವನು ಸು-ಪ್ರಸನ್ನನಾಗುವನೋ, ಅದಕ್ಕೆ ತಕ್ಕಂತಹ ಉಪಾಯವನ್ನು ಮಾಡಿರಿ.

ಸ ಏನಂ ಪರಿಭೂತ್ಯೈವ ನಃ ಪದಾನಿ ಪ್ರದಾಸ್ಯತಿ ॥೪॥

ಕ ಉವಾಚ :—

ತತೋ ವಕ್ತೃಪ್ರಧಾನೋಽಸೌ ಬೃಹಸ್ಪತಿರಭಾಷತ ।

ಬೃಹಸ್ಪತಿರುವಾಚ :—

ಸ್ವಲ್ಪಯಾ ಪೂಜಯಾ ಸದ್ಯಃ ಪ್ರಸನ್ನೋ ಜಾಯತೇ ವಿಭುಃ ॥೫॥

ಚರಾಚರಗುರುಃ ಸದ್ಯಃ ಸರ್ವೈಃ ಪ್ರಾರ್ಥ್ಯೋಽಸುರಾಂತಕಃ ।

---

ಅವನೇ ನಮ್ಮ ಕಷ್ಟಗಳನ್ನೆಲ್ಲ ಪರಿಹರಿಸಿ, ಕೈತಪ್ಪಿಹೋಗಿರುವ ನಮ್ಮ ನಮ್ಮ ಸ್ಥಾನ-ಮಾನಗಳನ್ನು ನಮಗೆ ಹಿಂದಿರುಗಿಸಿಕೊಡಿಸುವನು. ३.೪॥

ಬ್ರಹ್ಮಾ :—

ಅನಂತರ ಸುರಗುರುವಾದ ಬೃಹಸ್ಪತಿಯು ಮಾತನಾಡಲು ಎದ್ದು ಮುಂದೆ ಬಂದನು. ಬೃಹಸ್ಪತಿ ಎಂದರೆ ಸಾಮಾನ್ಯನಾದವನೇನೂ ಅಲ್ಲ. ವಾಗ್ಮಿಗಳೆನಿಸಿದವರಲ್ಲೆಲ್ಲ ಅತ್ಯಂತ ಶ್ರೇಷ್ಠನೆನಿಸಿದವನು.

ಬೃಹಸ್ಪತಿ :—

ಜಗದೀಶ್ವರನನ್ನು ಸಂತೋಷಪಡಿಸುವುದೆಂದರೆ ಹೆಚ್ಚೇನೂ ಶ್ರಮಪಡಬೇಕಾಗಿಲ್ಲ. ವಿಭುವು ಅತ್ಯಲ್ಪ ಸೇವೆಯಿಂದಲೇ ತೃಪ್ತಿಯನ್ನು ಹೊಂದುವಂತಹ ಉದಾರಚರಿತನು. ॥೫॥

ದೇವನು ಸಕಲ ಸ್ಥಾವರ-ಜಂಗಮ ಜೀವಿಗಳಿಗೂ ಮಾರ್ಗದರ್ಶಕನಾದ ಗುರು ಆಗಿದ್ದಾನೆ. ಆದುದರಿಂದ ಸ್ವಲ್ಪವೂ ವಿಲಂಬಮಾಡದೇ, ಎಲ್ಲರೂ ಒಟ್ಟಿಗೆ ಸೇರಿ, ' ಉದ್ಧರಿಸು ' ಎಂದು ಅಸುರವೈರಿಯಾದ ವಿನಾಯಕನನ್ನು ಒಮ್ಮನಸ್ಸಿನಿಂದ ಪ್ರಾರ್ಥಿಸತಕ್ಕದ್ದು.

ದೇವಾ ಊಚುಃ :—

ಕೋ ದೇವಃ, ಪ್ರಾರ್ಥನೀಯಸ್ತೇ ಮತೋ ವಾಚಸ್ಪತೇತವ ! ||೬||

ಕಸ್ಯ ತುಷ್ಟಿಂ ಕರಿಷ್ಯಾಮಃ ? ಸ್ವ-ಪದಪ್ರಾಪ್ತಯೇಽಖಿಲಾಃ |

ಬೃಹಸ್ಪತಿರುವಾಚ :—

ಸೃಜತೇ ಪಾತಿ ಯೋ ವಿಶ್ವಂ ಹಂತಿ ರೂಪತ್ರಯಾತ್ಮಕಃ ||೭||

ಅಬೀಜೋ ಬೀಜಭೂತಶ್ಚಾಶೇಷವಾಚಾಮಗೋಚರಃ |

ದೇವತೆಗಳು :—

ವಾಚಸ್ಪತೇ ! 'ದೇವನನ್ನು ಅರ್ಚಿಸಿ, ಮೆಚ್ಚಿಸಬೇಕು' ಎಂದು ಇಷ್ಟು ಸ್ಥೂಲವಾಗಿ ಹೇಳಿದರೆ, ನಮಗೆ ತಿಳಿಯುವ ಬಗೆಯಾದರೂ ಹೇಗೆ ? ದೇವನೆಂದರೆ ಯಾರು ? ಅನೇಕರು ಅನೇಕ ಬಗೆಗಳಿಂದ ದೇವನನ್ನು ನಿರೂಪಿಸುತ್ತಾರೆ. ಆ ಪೈಕಿ ಯಾವ ದೇವನನ್ನು ಪ್ರಾರ್ಥಿಸಬೇಕೆಂದು ನೀನು ಅಭಿಪ್ರಾಯ ಪಡುವೆ ? ||೬||

ವಿವಾದಾಸ್ಪದವಾದ ಈ ಅಂಶವನ್ನು ನೀನು ಸ್ಪಷ್ಟಪಡಿಸಿದೆಯಾದರೆ ನೀನು ಹೇಳಿದಂತೆ ನಾವೆಲ್ಲರೂ ನಡೆದು, ಆ ದೇವನನ್ನು ಅರ್ಚಿಸಿ ತುಷ್ಟಿಪಡಿಸುವೆವು, ಮತ್ತು ಅನ್ಯಾಕ್ರಾಂತವಾಗಿಹೋಗಿರುವ ನಮ್ಮ ನಮ್ಮ ಪದವಿಗಳನ್ನು ಕೊಡಿಸೆಂದು ಅವನಲ್ಲಿ ಬೇಡುವೆವು.

ಬೃಹಸ್ಪತಿ :—

ಅಮೃತಾಂಧಸರೇ! ಈ ವಿಷಯವನ್ನು ನಾನು ನಿಮಗೆ ವಿವರಿಸಿ ಹೇಳಬೇಕೇನು? ಆಗಲಿ, ಹೇಳುವೆನು. ಯಾವ ದೇವನು ಈ ವಿಶ್ವವನ್ನೆಲ್ಲ ಸೃಜಿಸುವನೋ, ಪಾಲಿಸುವನೋ ಮತ್ತು ನಿಯಮಿತ ಕಾಲಾನುಗುಣವಾಗಿ ಸೃಷ್ಟಿಜಾತವನ್ನೆಲ್ಲ ತನ್ನಲ್ಲೇ ಉಪಸಂಹರಿಸಿಕೊಂಡು ಬಿಡುವನೋ, ಅರ್ಥಾತ್ ಬ್ರಹ್ಮಾ, ವಿಷ್ಣು, ರುದ್ರರೆಂಬ ತ್ರಿಮೂರ್ತಿಗಳ ರೂಪದಿಂದ ತೋರಿಬರುವನೋ, ಅವನೇ ಆ ದೇವನು. ||೭||

ಭಗವಂತನು ಭವಕ್ಕೆ (ಜಗತ್ತಿಗೆ) ಒಳಪಟ್ಟವನಲ್ಲ. ಅಶೇಷ ಜಗತ್ತಿಗೂ

ನಿತ್ಯೋ ಬ್ರಹ್ಮಮಯೋ ಜ್ಯೋತಿಃಸ್ವರೂಪಃ ಶಾಸ್ತ್ರಗೋಚರಃ ॥೮॥

ಅನಾದಿಮಧ್ಯನಿಧನೋ ನಿರ್ಗುಣೋ ಯೋ ನಿರಾಮಯಃ ।
ಬಹುರೂಪ್ಯೈಕರೂಪಶ್ಚ ಯಸ್ಯ ನಾಮಾಖಿಲಾ ಜನಾಃ ॥೯॥

ಗೃಹೀತ್ವಾ ಸರ್ವಕಾರ್ಯೇಷು ಸಿದ್ಧಿಂ ಯಾಂತಿ ನಿಜೇಪ್ಸಿತಾಮ್ ।
ಸಂಕಷ್ಟಂ ಹರತೇ ಭಕ್ತ್ಯಾ ಪೂಜಿತಃ ಸ ವಿನಾಯಕಃ ॥೧೦॥

ಬೀಜಭೂತನಾದವನು. ಯಾವ ವಿಧವಾದ ವಾಕ್ಕಿಗೂ ಅವನು ಗೋಚರನಾದವನಲ್ಲ. ಇತರ ಭಾವ (ಜನ್ಯ)ವಸ್ತುಗಳಿಗಿರುವಂತೆ ಷಡ್ವಿಕಾರಗಳು ಈತನಿಗೆ ಸರ್ವಾತ್ಮನಾ ಇರುವುದಿಲ್ಲ, ದೇವನು ಸರ್ವವ್ಯಾಪಿಯಾದವನು. ಸ್ವಯಂ ಜ್ಯೋತಿಸ್ಸ್ವರೂಪನು. 'ತಜ್ಜ್ಯೋತಿ ರ್ಜ್ಯೋತಿಷಾಂ ಜ್ಯೋತಿಃ' ಎಂಬ ಶ್ರುತಿವಚನವಿರುವುದರಿಂದ ಪರಮೇಶ್ವರನು ಸಕಲ ಜ್ಯೋತಿಗಳಿಗೂ ಜ್ಯೋತಿಃಸ್ವರೂಪನಾಗಿದ್ದಾನೆ ಉಪನಿಷದ್ಭಾಗಗಳು ಮಟ್ಟಿಗೆ, ಅದೂ ಸಹ 'ನೇತಿ, ನೇತ್ಯಾತ್ಮಾ' ಎಂಬುದಾಗಿ ನಿಷೇಧ ಮುಖದಿಂದ ದೇವನನ್ನು ನಿರೂಪಿಸುತ್ತವೆ. ॥೮॥

ದೇವನು ಆದಿಮಧ್ಯಾಂತ್ಯಗಳನ್ನೇ ಖಂಡರಿತವನಲ್ಲ. ಸತ್ತ್ವರಜಸ್ತಮೋಗುಣಗಳ ಪೈಕಿ, ಯಾವುದೊಂದು ಗುಣದ ಸೆಳವಿಗೂ ಸಿಕ್ಕುವವನಲ್ಲ. ಅಶರೀರಿಯಾದುದರಿಂದ ದೈಹಿಕ ಹಿಂಸೆಯಾಗಲೀ, ಮನಸ್ಸನ್ನೂ ಮೀರಿದವನಾದುದರಿಂದ ಮಾನಸಿಕ ಕ್ಲೇಶಗಳಾಗಲೀ ದೇವನನ್ನು ಪೀಡಿಸಲಾರವು, ಸ್ವಯಂ ಸಚ್ಚಿದಾನಂದೈಕರೂಪನಾದರೂ ಸಮಷ್ಟಿ ಲೋಕಕಲ್ಯಾಣಕ್ಕಾಗಿ, ಹಾಗೂ ಭಕ್ತರ ವೈಯ್ಯಕ್ತಿಕ ವಾಂಛಾಪೂರಣಕ್ಕಾಗಿ ಭಿನ್ನ-ವಿಭಿನ್ನ ರೂಪಗಳನ್ನು ಧರಿಸಿ, ತೋರುವನು. ಈ ಪ್ರಜಾಕೋಟಿಯಲ್ಲಿ ಸ್ಪಷ್ಟವಾಗಿ ತೋರಿಬರುತ್ತಿರುವ ನಾಮರೂಪಗಳನ್ನು ಅಳಿಸಿಬಿಟ್ಟರೆ, ಉಳಿವ ಸಾರವಸ್ತುವೇ ದೈವವಾದುದರಿಂದ ಈ ವಿಶ್ವವೆಲ್ಲ ನೀನೇ ಆಗಿರುವೆ. ॥೮॥

ತಮ್ಮ ತಮ್ಮ ಮನೋಽಭೀಪ್ಸಿತಗಳನ್ನು ಸುಲಭವಾಗಿ ಪಡೆಯಲು ಸಕಲ ಕಾರ್ಯಾರಂಭದಲ್ಲೂ ಭಗವಂತನ ನಾಮವನ್ನು ಸ್ಮರಿಸಿ, ಕೃತಾರ್ಥರಾಗುತ್ತಾರೆ.

ಆರಾಧಯಂತು ಸರ್ವೇ ತಂ ಸ ವಃ ಸಿದ್ಧಿಂ ವಿಧಾಸ್ಯತಿ ।
ಮಾಘಸ್ಯ ಕೃಷ್ಣಪಕ್ಷೋಽಯಂ ಸಂಪ್ರವೃತ್ತೋಽಧುನಾ ಸುರಾಃ ! ।।೧೧।।

ಚತುರ್ಥೀ ಭೌಮಯುಕ್ತಾಸ್ಯ ಪ್ರಿಯಾ ವಿಘ್ನಹರಸ್ಯ ಹ ।
ಸ ಏವ ಪ್ರಕಟೀಭೂಯ ದಾಸ್ಯತೇ ಸ್ವ-ಪದಾನಿ ವಃ ।।೧೨।।

ಸಿಂಧುಂ ಸ ಸನ್ನಿಹತ್ಯೈವ ನಾತ್ರ ಕಾರ್ಯಾ ವಿಚಾರಣಾ ।
ಯದ್ಯತ್ಕಾಮಯತೇ ಯೋ ಯಸ್ತತ್ತತ್ಸರ್ವಂ ಸಪ್ರದಾಸ್ಯತಿ ।।೧೩।।

---

ಇಂತಹ ಭಕ್ತರಿಗೊದಗುವ ಸಕಲ ಸಂಕಷ್ಟಗಳನ್ನೂ ಭಗವಾನ್ ವಿನಾಯಕನು ನಿಮಿಷಮಾತ್ರದಲ್ಲಿ ಪರಿಹರಿಸಿಬಿಡುವನು. ಇದರಲ್ಲಿ ಸ್ವಲ್ಪವೂ ಸಂದೇಹವಿರುವುದಿಲ್ಲ. ।।೧೦।।

ಆದುದರಿಂದ ಚಿನ್ಮಯವಿಗ್ರಹನಾದ ವಿನಾಯಕನನ್ನು ನೀವೆಲ್ಲರೂ ಪರಮ ಭಕ್ತಿಯಿಂದ ಅರ್ಚಿಸಿ ಪ್ರಾರ್ಥಿಸಿರಿ. ದೇವನು ನಿಮ್ಮ ಭಕ್ತ್ಯರ್ಚನೆಗಳಿಗೆ ಮೆಚ್ಚಿ ನಿಮಗೆ ಸಕಲ ಸಿದ್ಧಿಗಳನ್ನೂ ಅನುಗ್ರಹಿಸುವನು. ದೇವತೆಗಳೇ ! ಪ್ರಕೃತ ವಿನಾಯಕನನ್ನು ಅರ್ಚಿಸಲಿಕ್ಕೆ ಎಂತಹ ಸುಸಂಧಿ ಒದಗಿದೆ, ಗೊತ್ತೇ ? ಈಗ ತಾನೇ ಮಾಘಮಾಸದ ಕೃಷ್ಣಪಕ್ಷ ಆರಂಭವಾಗಿದೆ. ।।೧೧।।

ಮಾಘ ಬಹುಳ ಚತುರ್ಥಿಯು ಮಂಗಲವಾರದಿಂದ ಕೂಡಿದ್ದರೆ. ಅದು ವಿನಾಯಕನಿಗೆ ಬಹಳ ಪ್ರಿಯಕರವಾದ ದಿವಸವೆಂದು ತಿಳಿದವರು ಹೇಳುತ್ತಾರೆ. ಅನಾಯಾಸವಾಗಿ ಈ ಸುಯೋಗ ಒದಗಿದೆ. ಇದನ್ನು ನಾವು ಸಾರ್ಥಕಪಡಿಸಿಕೊಳ್ಳತಕ್ಕದ್ದು. ಈ ವ್ರತವನ್ನು ನೀವು ಭಕ್ತಿಯಿಂದ ಆಚರಿಸಿದ್ದೇ ಆದರೆ, ದೇವನು ಸ್ವತಃ ನಿಮಗೆ ಪ್ರತ್ಯಕ್ಷನಾಗಿ ನಿಮ್ಮ ಪದವಿಗಳನ್ನು ನಿಮಗೆ ಹಿಂದಿರುಗಿ ಕೊಡುವನು. ।।೧೨।।

ನಿಮ್ಮನ್ನು ಈ ರೀತಿಯಾಗಿ ಗೋಳುಗುಟ್ಟಿಸುತ್ತಿರುವ ದುಷ್ಟ ಸಿಂಧು ನನ್ನು ಒಡನೆಯೇ ಸಂಹರಿಸಿಬಿಡುವನು. ಈ ವಿಷಯವಾಗಿ ನೀವು ಸ್ವಲ್ಪ ಕೂಡ ಸಂದೇಹಿಸಬೇಕಾದುದಿಲ್ಲ. ಇಷ್ಟೇ ಅಲ್ಲದೆ, ನಿಮ್ಮ ಪೈಕಿ ಯಾರಾದರೂ ಧ್ಯೈಯ್ಯ

ದೇವಾ ಊಚುಃ :—

ಸಮ್ಯಗುಕ್ತಂ ಗುರೋ ! ವಾಕ್ಯಂ ಯೇನ ತೃಪ್ತಾ ವಯಂ ಮುನೇ ! ।
ಮಹಾಸ್ರೋತೋವಹಾನ್ನಸ್ತ್ವಂ ಕರ್ಣಧಾರೋಽಸಿ ಸಾಂಪ್ರತಮ್ ॥೧೪॥

ಕ ಉವಾಚ :—

ತತಸ್ತೇ ಶಕ್ರ,ವರುಣ, ಕುಬೇರಮಧುಸೂದನಾಃ ।
ಗುರು ಭೌಮ ಶಶೀನಾಶ್ಚ ಯಮಾಗ್ನ್ಯ ನಿಲಕಾದಯಃ ॥೧೫॥

ಪಂಚಾಮೃತಂ ಗಂಧಮಾಲ್ಯಂ ಶಮೀ–ದೂರ್ವಾಶ್ಚ ಪಲ್ಲವಾ ।

---

ಕ್ತಿಕ ಕಾಮನೆಗಳನ್ನು ಬಯಸುವವರಿದ್ದರೂ ದೇವನು ಅವನ್ನೂ ಸಹ ಬಹಳ ಸಂತೋಷದಿಂದ ಅನುಗ್ರಹಿಸಿಕೊಡುವನು. ॥೧೩॥

ದೇವತೆಗಳು :—

ಗುರೋ ! ನೀನು ಸರಿಯಾದ ಸಮಯದಲ್ಲಿ ಸದುಪಾಯವನ್ನು ಉಪದೇಶಿಸಿ ನಮಗೆ ಮಹದುಪಕಾರವನ್ನು ಮಾಡಿರುವೆ. ದೊಡ್ಡ ನದಿಯ ಪ್ರವಾಹದ ಹೊಡೆತಕ್ಕೆ ಸಿಕ್ಕು ನರಳುತ್ತಿರುವವರಿಗೆ ಸುಲಭವಾಗಿಯೂ, ಸುರಕ್ಷಿತವಾಗಿಯೂ ದಡವನ್ನು ತಲುಪಿಸಬಲ್ಲ ನೌಕೆಯಂತೆ ನಮ್ಮ ಭಾಗಕ್ಕೆ ನೀನು ದೊರೆತಿರುವೆ. ನಾವು ಬಹಳ ತೃಪ್ತರಾಗಿದ್ದೇವೆ. ॥೧೪॥

ಬ್ರಹ್ಮಾ :—

ಅನಂತರ ಮಹೇಂದ್ರ, ವರುಣ, ಕುಬೇರ ಮಧುಸೂದನರೂ, ಬೃಹಸ್ಪತಿ, ಮಂಗಲ, ಚಂದ್ರಮಾ, ಸೂರ್ಯ ಇವರೂ, ಯಮ, ಅಗ್ನಿ, ವಾಯು ಮೊದಲಾದ ದೇವಾಧಿಕಾರಗಳಲ್ಲಿರುವವರೂ ಸೇರಿ, ದೇವನನ್ನು ಅರ್ಚಿಸಲು ಉಜ್ಜುಗಿಸಲಾರಂಭಿಸಿದರು. ॥೧೫॥

ದುಗ್ಧ (ಹಾಲು) ದಧಿ [ಮೊಸರು] ಸರ್ಪಿ [ತುಪ್ಪ] ಶರ್ಕರಾ [ಸಕ್ಕರೆ]

**ಫಲಾ ನ್ಯರಣ್ಯಜಾತಾನಿ ವಿವಿಧಾನಿ ಚ ಮೃತ್ತಿಕಾಃ ||೧೬||**

**ಅತರ್ಕರಾಸ್ಸಮಾದಾಯ ಗಂಡಕೀಂ ತಾಂ ನದೀಂ ಯಯುಃ ।**
**ಮಂಡಪಂ ವಿಪುಲಂ ಕೃತ್ವಾ ಭಜ್ಞ್ವಾತ್ರ ವೃಕ್ಷಾನನೇಕಶಃ ||೧೭||**

**ಲತಾಭಿಃ ಕದಲೀಸ್ತಂಭೈಃ ಸು-ಚ್ಛಾಯಂ ಚ ಸು-ಶೀತಲಮ್ ।**
**ಸ್ನಾತ್ವಾ ನಿತ್ಯಕ್ರಿಯಾಃ ಕೃತ್ವಾ ಮೂರ್ತಿಂ ಚಕ್ರುಸ್ಸು-ಶೋಭನಾಃ ||೧೮||**

---

ಮತ್ತು ಮಧು (ಜೇನು) ಇವನ್ನು ಪ್ರಯತ್ನಪೂರ್ವಕವಾಗಿ ತಂದಿರಿಸಿಕೊಂಡು, ಪೂಜೆಗೆ ಅಣಿಮಾಡಿಕೊಂಡು, ಪೂಜಾಭಿಷೇಕಗಳನ್ನು ನಡೆಸಲು ಏರ್ಪಡಿಸಿ, ದೇವನನ್ನು ಭಕ್ತಿಯಿಂದ ಅರ್ಚಿಸಲು ನಿಶ್ಚಯಿಸಿದರು. ಪೂಜಾರ್ಥವಾಗಿ ಎಳೆಯ ಶಮೀ ಮತ್ತು ದೂರ್ವಾದಳಗಳನ್ನು ಬುದ್ಧಿಪೂರ್ವಕವಾಗಿ ಸಂಗ್ರಹಿಸಿ ತಂದಿದ್ದರು. ಅರಣ್ಯದಲ್ಲಿ ಬಿಟ್ಟಿರುವ ಅನೇಕ ಜಾತಿಯ ಸ್ವಾದುಮಯ ಪರಿಪಕ್ವ ಫಲಗಳನ್ನೂ ಚಂದನಾಗರು ಕಸ್ತೂರಿ ಮೊದಲಾದ ಸುಗಂಧಿ ವಸ್ತುಗಳನ್ನೂ ತಂದು, ದೇವನಿಗೆ ಪ್ರೀತಿಯಿಂದ ಸಮರ್ಪಿಸಿಸಲು ಸಿದ್ಧಪಡಿಸಿದರು. ||೧೬||

ದೇವನ ಮೂರ್ತಿಯನ್ನು ನಿರ್ಮಿಸಲು ಮೃದುತಮವಾದ ಮೃತ್ತಿಕೆಯನ್ನು ತೆಗೆದುಕೊಂಡರು. ಮರಳಿನ ಸಂಪರ್ಕವಿಲ್ಲದ ಮೃದುವಾದ ಆ ಮೃತ್ತಿಕೆ ಮೂರ್ತಿ ನಿರ್ಮಾಣಕ್ಕೆ ಬಹಳ ಯೋಗ್ಯವಾಗಿದ್ದಿತು. ಇಷ್ಟೆಲ್ಲ ಸಾಮಗ್ರಿಗಳು ಸಿದ್ಧವಾದ ಬಳಿಕ ದೇವತೆಗಳೆಲ್ಲ ಗಂಡಕೀನದಿಯ ಬಳಿಗೆ ಹೋದರು. ಆ ನದೀ ತೀರದ ಬಳಿ, ಸುಂದರವಾಗಿರುವಂತೆ ವಿಶಾಲವಾದ ಮಂಡಪವನ್ನು ನಿರ್ಮಿಸಿದರು. ನದೀ ಅಂಚಿನಲ್ಲಿ ಅನೇಕ ದೊಡ್ಡ ದೊಡ್ಡ ವೃಕ್ಷಗಳು ಗಗನಚುಂಬಿಗಳಾಗಿ ಬೆಳೆದು ನಿಂದಿದ್ದವು. ಅವು ಇವರ ಮಂಡಪ ಹಾಗೂ ಪೂಜಾವಿಧಾನಗಳಿಗೆ ಬಹಳ ಮಟ್ಟಿಗೆ ಆತಂಕವನು ಉಂಟುಮಾಡುತ್ತಲಿದ್ದವು. ಆದುದರಿಂದ ಸುರರು ಅವನ್ನೆಲ್ಲ ಮುರಿದು ಚೆಲ್ಲಿ ಆ ಕೊಂಬೆಗಳಿಂದಲೇ ಮಂಡಪವನ್ನು ವಿರಚಿಸಿದರು. ||೧೭||

ಆ ಮಂಟಪಕ್ಕೆ ಕದಳಿಯ ಗಿಡಗಳನ್ನೂ ಮಾವಿನ ಎಲೆಯ ತೋರಣಗಳನ್ನೂ ಕಟ್ಟಿ ಬಹಳ ರಮಣೀಯವಾಗಿ ಕಾಣುವಂತೆ ಅಲಂಕಾರವನ್ನು ಮಾಡಿದರು. ಬಳ್ಳಿಗಳನ್ನೂ, ತೆಂಗಿನ ಗರಿಗಳನ್ನೂ ತಂದು, ಚಪ್ಪರದ ಮೇಲಕ್ಕೆ ಹೊದ್ದಿಸಿ, ನೆರಳು ದಟ

**ಸಿಂಹಾರೂಢಾ ದಶಭುಜಾ ಪಶಾಯುಧವಿರಾಜಿತಾಃ ।**
**ವೈನಾಯಕೀಃ ಕರಿಕರಾ ನಾನಾ ಭೂಷಾವಿರಾಜಿತಾಃ ॥೧೯॥**

**ಸಿದ್ಧಿ-ಬುದ್ಧಿಯುತಾಃ ಪಾರ್ಶ್ವೇ ಕಿರೀಟ-ಕುಂಡಲೋಜ್ವಲಾಃ ।**
**ಪೀತವಸ್ತ್ರಪರೀಧಾನಾಃ ಸರ್ವಭೂಷಾವಿರಾಜಿತಾಃ ॥೨೦॥**

ವಾಗಿ ಬೀಳುವಂತೆ ಮಾಡಿದರು. ಇವರ ಈ ಏರ್ಪಾಡಿನಿಂದ ಆ ನದಿಯ ತೀರ ಪ್ರದೇಶವೆಲ್ಲವೂ ತಂಪಾಗಿಹೋಯಿತು.ಅನಂತರ ಎಲ್ಲರೂ ನದಿಗಿಳಿದ ಅವಗಾಹನ ಸ್ನಾನವನ್ನು ಮಾಡಿ, ತಮ್ಮ ನಿತ್ಯಾಹ್ನಿಕಗಳನ್ನು ಮುಗಿಸಿಕೊಂಡು, ಮೂರ್ತಿಗಳನ್ನು ರಚಿಸಲಾರಂಭಿಸಿದರು. ಪ್ರತಿಯೊಬ್ಬನೂ ತಾನು ರಚಿಸುವ ಮೂರ್ತಿ ಬಹಳ ಸುಂದರವಾಗಿರಬೇಕೆಂದು ಬಯಸಿ, ಮನವಿಟ್ಟು ನಿರ್ಮಿಸತೊಡಗಿದನು. ಎಲ್ಲರೂ ಕಲಾವಿದರೇ ಆಗಿದ್ದುದರಿಂದ ಅವರು ಮಾಡಿದ ಮೂರ್ತಿಗಳು ಸು-ಮನೋಹರ ವಾಗಿ ಕಂಗೊಳಿಸಿದವು- ॥೮॥

ವಿನಾಯಕನ ವಿಗ್ರಹಗಳು ಸಿಂಹವನ್ನೇರಿ ಕುಳಿತಂತೆ ಇದ್ದವು. ಪ್ರತಿ ಮೂರ್ತಿಗೂ ಹತ್ತು ಹತ್ತು ಭುಜಗಳಿದ್ದವು. ಪ್ರತಿ ಹಸ್ತದಲ್ಲೂ ಒಂದೊಂದು ಬಗೆಯ ಆಯುಧವನ್ನಿರಿಸಿ ರಂಜಿಸುವಂತೆ ಮಾಡಿದರು. ವಿನಾಯಕನ ಆ ಆಕೃತಿಗಳಿಗೆ ಆನೆಗಳಿಗಿರುವಂತೆ ಮುದ್ದಾಗಿ ಸೊಂಡಿಲುಗಳನ್ನು ಮಾಡಿದರು. ಅವಕ್ಕೆ ಬಗೆಬಗೆಯ ಆಭರಣಗಳನ್ನೆಲ್ಲ ತೊಡಿಸಿದರು. ಈ ಅಲಂಕಾರಗಳಿಂದ ಮೂರ್ತಿಗಳು ಜೀವಕಳೆ ತುಂಬಿ ಎದ್ದು ಬರುವುವೋ ಎಂಬಂತೆ ತೋರಿಬಂದವು. ॥೧೯॥

ಮೂರ್ತಿಗಳ ಇಪ್ಪಕ್ಕಗಳಲ್ಲೂ ಸಿದ್ಧಿ-ಬುದ್ಧಿಯರನ್ನು ನಿರ್ಮಿಸಿ, ಅವಕ್ಕೆ ತಕ್ಕಂತೆ ವೇಷ-ಭೂಷಣಗಳನ್ನು ತೊಡಿಸಿದರು. ದೇವನ ಮೂರ್ತಿಗಳಿಗೆ ಇವರು ಧರಿಸಿದ್ದ ಕಿರೀಟ-ಕುಂಡಲಗಳು ದಿವ್ಯವಾದುವು. ದಿವ್ಯ ಪೀತಾಂಬರ, ಉತ್ತ ರೀಯ ಇವನ್ನೆಲ್ಲ ಉಡಿಸಿ, ಹೊದ್ದಿಸಿದ್ದರು. ಅಲ್ಲಲ್ಲಿ ಸಣ್ಣ-ಪುಟ್ಟ ಮರಿ ಹಾವು ಗಳನ್ನು ಅಲಂಕಾರಾರ್ಥವಾಗಿ ಇರಿಸಿದರು. ಇವರು ಅಲಂಕರಿಸಿದಂತೆಲ್ಲ ಅವು

**ತಸ್ಮಿನ್ ಮಂಡಪಮಧ್ಯೇ ತಾಃ ಸ್ಥಾಪಯಿತ್ವಾ ಯಥಾವಿಧಿ ।**
**ಪುಪೂಜುಃ ಪರಯಾ ಭಕ್ತ್ಯಾ ಷೋಡಶೈರುಪಚಾರಕೈಃ ॥೨೦॥**

**ಪಂಚಾಮೃತೈಶ್ಶುದ್ಧಜಲೈರ್ವಸ್ತ್ರ-ಗಂಧಾದಿದೀಪಕೈಃ ।**
**ನೈವೇದ್ಯೈರ್ವಿವಿಧೈಶ್ಚೈವ ಫಲೈರಾರಾರ್ತಿಕೈಃ ಶುಭೈಃ ॥೨೧॥**

**ಏವಂ ಸಂಪೂಜ್ಯ ತೇ ಮಂತ್ರಂ ಜೇಪುಃ ಸವಿತೃತುಷ್ಟಯೇ ।**
**ಅಸ್ತಂ ಯಾತೇ ಸವಿತರಿ, ಸಂಧ್ಯಾಂ ಕೃತ್ವಾ ಸ್ತುವನ್ ವಿಭುಂ ॥೨೨॥**

ಭಾವಪೂರ್ಣವಾಗುತ್ತ ಬಂದವು. ರಚಿತವಾದ ಮೂರ್ತಿಗಳು ವರಸಿದ್ಧಿ ವಿನಾಯಕನವು. ವಿರಚಿಸಿದವರಂತೂ ಆಯಾ ಭೂತಗಳ ಹಾಗೂ ಭೂತಸಾರಗಳಾದ ಇಂದ್ರಿಯಗಳ ಅಭಿಮಾನಿ ದೇವತೆಗಳು. ಎಂದ ಮೇಲೆ,ಮೂರ್ತಿಗಳು ಎಷ್ಟರ ಮಟ್ಟಿಗೆ ಸುಂದರವಾಗಿದ್ದವೆಂದು ಪ್ರತ್ಯೇಕವಾಗಿ ಹೇಳಬೇಕೇನು? ॥೨೦॥

ಅವನ್ನು ಮಂಟಪದ ಮಧ್ಯದಲ್ಲಿ ವಿಧಿಪೂರ್ವಕವಾಗಿ ಪ್ರತಿಷ್ಠಿಸಿದರು:- ಧ್ಯಾನ, ಆವಾಹನವೇ ಮೊದಲಾಗಿ ಹದಿನಾರು ಬಗೆಯ ಉಪಚಾರಗಳನ್ನೂ ಭಕ್ತಿ-ಶ್ರದ್ಧೆಗಳಿಂದ ಸಮರ್ಪಿಸಿದರು. ಇವರು ಅನುಷ್ಠಿಸಿದ ಪೂಜಾವಿಧಾನವು ವಿಧಿವಿಹಿತವಾಗಿಯೂ, ಪರಮಾದರಪೂರ್ಣವಾಗಿಯೂ ಇದ್ದಿತು. ॥೨೧॥

ಮೊದಲು ಪಂಚಾಮೃತಗಳಿಂದ ಮೂರ್ತಿಗಳಿಗೆ ಅಭಿಷೇಚನವನ್ನು ಮಾಡಿದರು. ಅನಂತರ ಪವಿತ್ರ ತೀರ್ಥಗಳಿಂದ ಸಂಗ್ರಹಿಸಿ ತಂದ ಶುದ್ಧ ಜಲದಿಂದ ಪುನಃ ಸ್ನಾನವನ್ನು ಮಾಡಿಸಿದರು. ವಸ್ತ್ರ, ದಿವ್ಯ ಚಂದನ, ಧೂಪ, ಏಕಾರ್ತಿಕ್ಯದೀಪ ಇವನ್ನು ಸಮರ್ಪಿಸಿದನಂತರ, ವಿವಿಧ ರಸಮಯ ಪಕ್ವಾನ್ನಗಳನ್ನೂ, ಫಲಗಳನ್ನೂ ದೇವನಿಗೆ ನಿವೇದಿಸಿದರು. ಫಲ-ತಾಂಬೂಲ, ಸ್ವರ್ಣಪುಷ್ಪ ದಕ್ಷಿಣಾದಿಗಳನ್ನು ಸಲ್ಲಿಸಿದ ಬಳಿಕ, ಉತ್ತರ ಮಹಾ ಮಂಗಲನೀರಾಜನವನ್ನು ದೇವನಿಗೆ ಎತ್ತಿದರು. ॥೨೨॥

ಈ ರೀತಿಯಾಗಿ ಮಹಾಪೂಜೆಯನ್ನು ನಡೆಸಿದ ಮೇಲೆ, ಜಗಜ್ಜ್ಯೋತಿಯಾದ

ಸರ್ವ ಊಚುಃ :—

ದೀನಾನಾಥದಯಾಸಿಂಧೋ, ಯೋಗಿಹೃತ್ಪದ್ಮಸಂಸ್ಥಿತ ! ।
ಆದಿಮಧ್ಯಾಂತ್ಯರಹಿತಸ್ವರೂಪಾಯ ನಮೋ ನಮಃ ॥೨೪॥

ಜಗದ್ಭಾಸ, 1ಚಿದಾಭಾಸ, ಜ್ಞಾನಗಮ್ಯ, ನಮೋ ನಮಃ ।
ಮುನಿಮಾನಸವಿಷ್ಟಾಯ, ನಮೋ ದೈತ್ಯವಿಘಾತಿನೇ ! ॥೨೫॥

ಸೂರ್ಯನಾರಾಯಣನ ಮಹಾಮಂತ್ರವನ್ನು ಅನವರತ ಜಪಿಸಿ ಅವನನ್ನು ಸಂತುಷ್ಟಿಗೊಳಿಸಿದರು. ಸೂರ್ಯನು ಅಸ್ತಮಿತನಾಗಲು, ಸಾಯಂಕಾಲಿಕ ಸಂಧ್ಯಾವಂದನೆಯನ್ನು ಅನು ್ಠಸಿ, ವಿಭುವಾದ ವಿನಾಯಕನನ್ನು ಈ ರೀತಿ ಸ್ತುತಿಸಲಾರಂಭಿಸಿದರು. ॥೨೩॥

ದೇವತೆಗಳು :—

ಭಗವನ್, ವಿನಾಯಕ ! ದೀನ-ದಳಿತರೂ, ಅನಾಥರೂ ಆದವರಿಗೆ ನೀನು ನಾಥನಾಗಿರುವೆ. ಸಮುದ್ರವು ಜಲಪರಿಪೂರ್ಣವಾಗಿರುವಂತೆ ನಿನ್ನಲ್ಲಿ ದಯಾರಸವು ತುಂಬಿ ತುಳುಕುತ್ತಿರುವುದು. ಯೋಗಿಜನರ ಹೃತ್ಪುಂಡರೀಕದಲ್ಲಿ ನೀನು ಸರ್ವದಾ ನೆಲೆಸಿರುವವನು. ಆದಿ ಮಧ್ಯಾನ್ತರಹಿತಸ್ವರೂಪ; ದೇವ! ನಿನಗೆ ನಮೋ ನಮಃ ॥೨೪॥

ಸ್ಥಾವರ-ಜಂಗಮಾತ್ಮಕವಾದ ಈ ಜಗತ್ತನ್ನು ನೀನು ಬೆಳಗುವೆ. ಜಗತ್ತಿನಲ್ಲಿ ತೋರಿಬರುವ ಜೀವಚೈತನ್ಯಸ್ವರೂಪನೂ ನೀನೇ ಆಗಿರುವೆ. ನೀನು ಅಖಂಡೈಕಾತ್ಮ್ಯಜ್ಞಾನಕ್ಕೆ ಮಾತ್ರ ಗೋಚರನಾಗತಕ್ಕವನು. ಭಗವನ್ ! ನಿನಗೆ ನಮೋ ನಮಃ. ಸಾತ್ತ್ವಿಕ ಶಿರೋಮಣಿಗಳಾದ ಮುನಿವರ್ಯರ ಮಾನಸ ಮಂದಿರ

---

ವಿವರಣೆಗೆ ಪರಿಶಿಷ್ಟವನ್ನು ನೋಡಿರಿ.

15

ತ್ರಿಲೋಕೇಶ, ಗುಣಾತೀತ, ಗುಣಕ್ಷೋಭ ! ನಮೋ ನಮಃ ।
ತ್ರೈಲೋಕ್ಯಪಾಲನವಿಭೋ ! ವಿಶ್ವವ್ಯಾಪಿನ್ನಮೋ ನಮಃ ॥೨೬॥

ಮಾಯಾತೀತಾಯ ಭಕ್ತಾನಾಂ ಕಾಮಪೂರಾಯ ತೇ ನಮಃ ।
ಸೋಮ-ಸೂರ್ಯಾಗ್ನಿನೇತ್ರಾಯ ನಮೋ ವಿಶ್ವಂಭರಾಯ ತೇ ॥೨೭॥

ಅಮೇಯಶಕ್ತಯೇ ತುಭ್ಯಂ ನಮಸ್ತೇ ಚಂದ್ರಮೌಲಯೇ ।
ಚಂದ್ರಗೌರಾಯ ಶುದ್ಧಾಯ ಶುದ್ಧಜ್ಞಾನಕೃತೇ ನಮಃ ॥೨೮॥

---

ದಲ್ಲಿ ನೀನು ಸರ್ವದಾ ವಾಸಮಾಡತಕ್ಕವನು. ಪಾಶವೀಶಕ್ತಿಯುತರಾದ ದೈತ್ಯ ರನ್ನು ನೀನು ಸಮೂಲವಾಗಿ ನಿಗ್ರಹಿಸತಕ್ಕವನು. ದೇವೇಶ! ನಿನಗೆ ನಮಸ್ಕಾರಗಳು. ॥೨೫॥

ಮೂರು ಲೋಕಗಳಿಗೂ ನೀನು ಅಧೀಶ್ವರನು. ಸತ್ತ್ವ, ರಜಸ್ತಮೋಗುಣಗಳ ಹಿಡಿತಕ್ಕೆ ನೀನು ಸಿಲುಕಿದವನಲ್ಲ, ಪ್ರಧಾನದ ಗುಣಗಳನ್ನು ಪ್ರಕ್ಷೋಭ (ಹೆಚ್ಚು ಕಡಿಮೆಯಾಗುವಿಕೆ) ಗೊಳಿಸಿ, ತನ್ಮೂಲಕ ಪ್ರಧಾನವು ಸೃಷ್ಟ್ಯುನ್ಮುಖವಾಗುವಂತೆ ಮಾಡತಕ್ಕವನು ನೀನು. ನಿನಗೆ ನಮೋ ನಮಃ. ನಿನ್ನ ಇಚ್ಛಾಮಾತ್ರದಿಂದಲೇ ತ್ರಿಭುವನಗಳನ್ನೂ ರಕ್ಷಿಸುವೆ. ಸರ್ವವ್ಯಾಪಿನ್, ಸರ್ವಾಂತರ್ಯಾಮಿನ್ ! ನಿನಗೆ ವಂದಿಸುವೆವು. ॥೨೬॥

ಪರಾತ್ಪರಪುರುಷನಾದ ನಿನ್ನನ್ನು ಮಾಯೆಯು ಎಂದಿಗೂ ಆಚ್ಛಾದಿಸಲಾರದು. ನೀನು ಭಕ್ತರ ಅಭಿಲಷಿತಗಳನ್ನೆಲ್ಲ ಈಡೇರಿಸಿಕೊಡತಕ್ಕವನು. ಮಹಾಮಹಿಮ ! ನಿನಗೆ ವಂದನೆಗಳು, ಜ್ಯೋತಿರ್ಮಂಡಲಗಳೆನಿಸಿದ ಸೂರ್ಯ, ಚಂದ್ರ ಮತ್ತು ಅಗ್ನಿಗಳೇ ನೇತ್ರಗಳಾಗಿ ಉಳ್ಳವನು. ವಿಶ್ವವು ಅತ್ತಿತ್ತ ಚಲಿಸದಂತೆ ನೀನು ದೃಢವಾಗಿ ಧರಿಸಿ ನಿಂದಿರುವವನು, ನಿನಗೆ ನಮೋ ನಮಃ ॥೨೭॥

ನಿನ್ನ ಅಸಾಧಾರಣಶಕ್ತಿಯನ್ನು ಇಷ್ಟೆಂದು ಗಣಿಸಲಿಕ್ಕೆ ಯಾರಿಂದಲೂ ಸಾಧ್ಯವೇ ಇಲ್ಲ. ಅಮೃತಕಿರಣನಾದ ಚಂದ್ರನನ್ನು ಅಲಂಕಾರಕ್ಕಾಗಿ ನೀನು ಕಿರೀಟದಲ್ಲಿ ಧರಿಸಿರುವೆ. ನಿನಗೆ ವಂದಿಸುವೆವು. ಚಂದ್ರನಂತೆ ಶುಭ್ರವೂ, ಆಹಾ

ಕ ಉವಾಚ :—

ಏವಂ ಸ್ತುವತ್ಸು ದೇವೇಷು ತೇಜೋರಾಶಿರಭೂತ್ಪುರಃ ।
ಸರ್ವೇ ಹತದೃಶೋ ದೇವಾ ವಿಸ್ಮಿತಾ ಅಭವಂಸ್ತದಾ ॥೨೯॥

ತತಸ್ತತ್ಕೃಪಯಾ ದೇವಃ ಸೌಮ್ಯತೇಜಾ ಅಜಾಯತ ।
ತತಸ್ತೇ ದದೃಶುರ್ದೇವಂ ಸಿಂಹಾರೂಢಂ ವಿನಾಯಕಮ್ ॥೩೦॥

ದಶಾಯುಧಧರಂ ತಾವದ್ಭುಜಂ ದಿವ್ಯಕಿರೀಟಿನಮ್ ।
ನಾನಾಭೂಷಾಭಿರಾಮಂ ಚ ಮುಕ್ತಾದಾಮವಿಭೂಷಿತಮ್ ॥೩೧॥

---

ದಕರವೂ ಆದ ದೇಹವಿನ್ಯಾಸ ಉಳ್ಳವನು ನೀನು. ಮಾಯಾಮಲರಹಿತನಾದುದರಿಂದ ನೀನು ಪರಿಶುದ್ಧನೆನಿಸುವೆ. ಬದ್ಧರಾದ ಜೀವರಿಗೆ ಅಖಂಡೈಕಾತ್ಮ್ಯ ಜ್ಞಾನವನ್ನು ಅನುಗ್ರಹಿಸತಕ್ಕ ಗುರುವಾಗಿರುವೆ. ನಿನ್ನನ್ನು ಭಕ್ತಿಯಿಂದ ನಮಸ್ಕರಿಸುವೆವು. ॥೨೮॥

ಬ್ರ

ದೇವತೆಗಳು ಒಮ್ಮನಸ್ಸಿನಿಂದ ಭಗವಾನ್ ವಿನಾಯಕನನ್ನು ಈ ರೀತಿ ಸ್ತುತಿಸುತ್ತಿರುವಷ್ಟರಲ್ಲೇ ಅಪ್ರಾಕೃತವಾದ ಒಂದು ತೇಜೋರಾಶಿಯು ಆವಿರ್ಭವಿಸಿ, ಇವರೆದುರು ಬಂದು ನಿಂತಿತು. ಎಂದೆಂದೂ ಕಂಡರಿಯದ ಈ ಅದ್ಭುತ ತೇಜಸ್ಸಮೂಹವನ್ನು ನೋಡಿದೊಡನೆಯೇ ಇವರಿಗೆ ದರ್ಶನಶಕ್ತಿಯು ಕುಂಠಿತವಾಗಿ ಹೋಯಿತು. ಒಮ್ಮಿಂದೊಮ್ಮೆಲೇ ಹೀಗಾದುದನ್ನು ಗಮನಿಸಿ, ದೇವತೆಗಳು ಬಹಳ ವಿಸ್ಮಯವನ್ನು ಹೊಂದಿದರು. ॥೨೯॥

ದೇವತೆಗಳ ಈ ಪರದಾಟವನ್ನು ನೋಡಿ ಕರುಣೆಗೊಂಡ ಅಪಾರಕರುಣಾಸಿಂಧು, ವಿನಾಯಕನು ತನ್ನ ತೇಜಸ್ಸಿನ ಪ್ರಖರತೆಯನ್ನು ಕಡಿಮೆಮಾಡಿದನು. ಆದುದರಿಂದ ದೇವತೆಗಳು ದೇವನನ್ನು ಬಹಳ ಸ್ಪಷ್ಟವಾಗಿ ನೋಡುವಂತಾದರು. ದೇವನು ಮೃಗೇಂದ್ರನನ್ನೇರಿ ಕುಳಿತಿರುವ ಅತ್ಯದ್ಭುತ ದೃಶ್ಯವು ಇವರಿಗೆ ಗೋಚರವಾಯಿತು. ॥೩೦॥

ದೇವನು ದಶಬಾಹುಗಳಿಂದ ಆವಿರ್ಭವಿಸಿದ್ದನು. ಪ್ರತಿಯೊಂದು ಕೈಯಲ್ಲೂ

**ದಿವ್ಯಗಂಧಾನುಲೇಪಾಢ್ಯಂ ವ್ಯಾಲಬದ್ಧೋದರಂ ವಿಭುಮ್ ।**
**ಕ್ಷುದ್ರಘಂಟಾಕ್ವಣತ್ಪಾದಂ ಕಸ್ತೂರೀತಿಲಕೋಜ್ಜ್ವಲಮ್ ॥೩೨॥**

**ಏವಂ ದೃಷ್ಟ್ವಾ ಸುರಾಃ ದೇವಂ ನಮಸ್ಕೃತ್ಯೋಚಿರೇ ತದಾ ।**

**ದೇವಾ ಊಚುಃ :—**

**ಯಶ್ಚಿಂತಿತೋ ಗುರೋರ್ವಾಕ್ಯಾತ್ಸ ಏವಾಯಂ ವಿನಾಯಕಃ ॥೩೩॥**

ಒಂದೊಂದರಂತೆ ದಶವಿಧ ಆಯುಧಗಳನ್ನು ಧರಿಸಿದ್ದನು. ಉತ್ತಮಾಂಗದಲ್ಲಿ ರತ್ನಮಯವಾದ ದಿವ್ಯಕಿರೀಟವು ಹೊಳೆಯುತ್ತಲಿದ್ದಿತು. ಆಯಾ ಅವಯವಗಳಿಗೆ ತಕ್ಕಂತಹ ರತ್ನಖಚಿತ ಸ್ವರ್ಣಾಭರಣಗಳನ್ನು ಧರಿಸಿ, ಅತಿಯಾಗಿ ಶೋಭಿಸುತ್ತಲಿದ್ದನು. ಮುತ್ತಿನ ಮಾಲೆಗಳನ್ನು ಮುಂಗುರುಳುಗಳ ಮೇಲೆ ಧರಿಸಿದ್ದರಿಂದ ಸ್ವಭಾವಸುಂದರವಾದ ದೇವನ ಮುಖಮಂಡಲವು ಮತ್ತಿಷ್ಟು ರಮಣೀಯವಾಗಿ ತೋರಲಾರಂಭಿಸಿತು. ॥೩೧॥

ದಿವ್ಯಸುಗಂಧಿಗಂಧಾನುಲೇಪನದಿಂದ ಸುವಾಸಿತ ದೇಹನಾಗಿದ್ದನು. ಸರ್ಪರಾಜನನ್ನು ಉದರಕ್ಕೆ ಮೇಖಲೆಯಂತೆ ಕಟ್ಟಿಕೊಂಡಿದ್ದನು. ಕಾಲುಗಳಿಗೆ ಸ್ವರ್ಣನಿರ್ಮಿತ ಕಾಲಂದಿಗೆಗಳನ್ನು ಧರಿಸಿದ್ದನು. ಅವಕ್ಕೆ ಚಿಕ್ಕ, ಪುಟ್ಟ ಘಂಟೆಗಳನ್ನು ಕಟ್ಟಿ ಸುತ್ತಿದ್ದರು. ಆದುದರಿಂದ ಅವು ಮಂಜುಲವಾಗಿ ನಾದವನ್ನು ಮಾಡುತ್ತಲಿದ್ದವು. ಫಾಲದಲ್ಲಿ ಕಸ್ತೂರೀಮಿಶ್ರಿತ ತಿಲಕವನ್ನು ಮುದ್ದಾಗಿ ತಿದ್ದಿದ್ದರಿಂದ ಮುಖದ ಕಾಂತಿಯು ಮತ್ತಿಷ್ಟು ಉಜ್ವಲವಾಗಿದ್ದಿತು. ಇಂತಹ ವಿಭುವನ್ನು ದೇವತೆಗಳು ಕಂಡರು. ॥೩೨॥

ದೇವನ ಸಂದರ್ಶನವಾದೊಡನೆಯೇ ದೇವತೆಗಳಿಗುಂಟಾದ ಹರ್ಷವನ್ನು ಇಷ್ಟೆಂದು ವರ್ಣಿಸಲಿಕ್ಕೇ ಸಾಧ್ಯವಿರಲಿಲ್ಲ. ಆಗ ಸುರರು ಭಗವಂತನ ಪಾದಾರವಿಂದಗಳಿಗೆ ಸಾಷ್ಟಾಂಗವೆರಗಿ, ಈ ರೀತಿಯಾಗಿ ವರ್ಣಿಸತೊಡಗಿದರು.

ದೇವತೆಗಳು :—

ಸುರಗುರುವಾದ ಬೃಹಸ್ಪತ್ಯಾಚಾರ್ಯರು ಯಾವ ರೂಪವನ್ನು ಧ್ಯಾನಿಸಿ

ಸ ಏವ ದೃಷ್ಟಸ್ಸಾಕ್ಷಾತ್ತು ವಾಙ್ಮನೋಽಗೋಚರೋ ವಿಭುಃ ।
ಜನ್ಮ ಧನ್ಯಂ, ದೃಶಿರ್ಧನ್ಯಾ, ತಪೋದಾನಂ ಚ ನಸ್ಸುರಾಃ! ॥೩೪॥

ಈ ಉವಾಚ :—

ತತ ಊಚೇ ಸುರಾನ್ ದೇವಃ

ವಿನಾಯಕ ಉವಾಚ :—

ತೃಪ್ತೋಽಹಂ ಭವತಾಂ ಸ್ತವೈಃ ।
ಪೂಜಯಾ ಚೈವ ಭಕ್ತ್ಯಾ ಚ ಸಂಕಷ್ಟೀವ್ರತತೋಽಪಿ ಚ ॥೩೫॥

---

ಜಪಿಸಬೇಕೆಂದು ಬೋಧಿಸಿದರೋ, ಅದೇ ದಿವ್ಯರೂಪ ಈಗ ನಮಗೆ ಗೋಚರವಾಗಿದೆಯಲ್ಲವೇ ? ನಿಸ್ಸಂದೇಹವಾಗಿ ಈತನೇ ಲೋಕೇಶ್ವರನಾದ ಭಗವಾನ್, ವಿನಾಯಕನು. ॥೩೩॥

ವಿನಾಯಕನು ಸಾಮಾನ್ಯನೇನು ? ವಾಙ್ಮನಗಳಿಗೂ ಗೋಚರನಾಗತಕ್ಕವನಲ್ಲ. ಸರ್ವವಸ್ತುಗಳಲ್ಲೂ ಹಾಸು-ಹೊಕ್ಕಾಗಿರುವ ಪರಮೇಶ್ವರನನ್ನು ನಾವು ಇಂದು ಪ್ರತ್ಯಕ್ಷವಾಗಿ ಕಂಡಿರುವೆವಲ್ಲವೇ ? ನಮ್ಮ ಜನ್ಮವೇ ಪಾವನವಾಗಿ ಹೋಯಿತು. ನಮ್ಮ ನಯನಗಳು ಧನ್ಯತಮವೆನಿಸಿದವು. ನಾವು ಈ ವರೆಗೂ ಆಚರಿಸಿದ ತಪಸ್ಸು ಇಂದಿಗೆ ಸಫಲವಾಯಿತು. ದೇವತೆಗಳೇ ! ನಾವು ಮಾಡಿದ ದಾನ ವ್ಯರ್ಥವಾಗಲಿಲ್ಲ. ॥೩೪॥

ಬ್ರಹ್ಮಾ :—

ದೇವತೆಗಳು ಪರಸ್ಪರವಾಗಿ ಮಾತನಾಡಿಕೊಳ್ಳುತ್ತಲಿದ್ದ ಈ ವಚನಗಳನ್ನು ಕೇಳಿ, ದೇವನು ಸಂತಸಗೊಂಡನು. ಮತ್ತು ದೇವತೆಗಳನ್ನು ಕುರಿತು, ಆಶ್ವಾಸನವನ್ನು ಕೊಡುತ್ತ, ಹೀಗೆಂದು ನುಡಿದನು.

ದೇವ :—

ಅಮರ್ತ್ಯರೇ ! ನೀವು ಮನಃಪೂರ್ವಕವಾಗಿ ಈ ರೀತಿ ಸ್ತುತಿಸಿದುದಕ್ಕೆ ನಾನು

ಸಂಕಷ್ಟಹರಮೇತಚ್ಚ ಸ್ತೋತ್ರಂ ಖ್ಯಾತಂ ಭವಿಷ್ಯತಿ ।
ಯಃ ಪಠೇತ್ಪ್ರಯತೋ ನಿತ್ಯಂ ಸ ಮೇ ಮಾನ್ಯೋ ಭವೇತ್ಸುರಾಃ ।
||೩೬||

ತಸ್ಯ ದರ್ಶನತಸ್ಸರ್ವೇ ನಶ್ಯೇಯುರ್ಯಕ್ಷರಾಕ್ಷಸಾಃ ।
ಭೋಗಾನ್ ಭುನಕ್ತಿ ವಿವಿಧಾನಂತೇ ಮೋಕ್ಷಪದಂ ಲಭೇತ್ ||೩೭||

ಶೃಣ್ವಂತು ಮೇ ಪುನರ್ವಾಕ್ಯಂ ಸಿಂಧುದೈತ್ಯೇನ ಪೀಡಿತಾಃ ।

---

ಬಹಳ ಸಂತುಷ್ಟನಾಗಿರುವೆನು. ನೀವು ನನ್ನನ್ನು ಅರ್ಚಿಸಿದ ಕ್ರಮ ಬಹಳ ಶ್ಲಾಘ್ಯ ವಾಗಿದೆ. ನೀವು ಮಾಡಿದ ಸಂಕಷ್ಟಹರ ಗಣಪತಿಯ ವ್ರತವೂ ಸಾಂಗೋಪಾಂಗ ವಾಗಿ ನೆರವೇರಿರುವುದು. ||೩೫||

ನೀವು ಗೈದ ಸ್ತುತಿಯು ತತ್ತ್ವಗರ್ಭಿತವೂ, ಸಂಕಷ್ಟವಿನಾಶಕರವೂ ಆದುದ ರಿಂದ ಇದು 'ಸಂಕಷ್ಟಹರ ಗಣಪತಿಯ ಸ್ತೋತ್ರ' ಎಂಬ ಅಭಿಧಾನದಿಂದ ಲೋಕದಲ್ಲೆಲ್ಲ ಪ್ರಖ್ಯಾತಿಯನ್ನು ಪಡೆಯುವುದು. ನೀವು ಮಾಡಿದ ಈ ಸ್ತೋತ್ರ ವನ್ನು ಯಾರು ಪ್ರತಿದಿನ ಪ್ರಭಾತದಲ್ಲಿ ಭಕ್ತಿ-ಶ್ರದ್ಧೆಗಳಿಂದ ಪಠಿಸುವರೋ, ಅವರು ನನಗೆ ಮಾನ್ಯರೆನಿಸುವರು. ||೩೬||

ಇಂತಹ ಮಹಾತ್ಮನನ್ನು ಯಾರು ಆದರದಿಂದ ಸಂದರ್ಶನಮಾಡುವರೋ, ಅವರಿಗೆ ಯಾವ ಪೀಡೆಯೂ ಉಂಟಾಗುವುದಿಲ್ಲ, ಎಂದರೆ ಯಕ್ಷ, ರಾಕ್ಷಸ, ಪನ್ನಗ, ಪಿಶಾಚ ಮೊದಲಾದ ಯಾವ ಬಗೆಯ ಆವೇಶವಿದ್ದರೂ ಅವೆಲ್ಲ ತತ್ಕ್ಷಣ ಉಪಶಮಗೊಂಡು, ಆ ಬಾಧಾಗ್ರಸ್ತರು ಎಂದಿನಂತೆ ನಿರುಪದ್ರವಜೀವಿಯಾಗಿ ಮಾರ್ಪಡುವರು. ಇಷ್ಟು ಮಾತ್ರವಲ್ಲದೆ, ಅವರು ಪೂರ್ಣಾಯುಷ್ಯದೊಡನಿದ್ದು ಮರ್ತ್ಯಲೋಕಗಳ ಭೋಗ-ಭಾಗ್ಯಗಳನ್ನೆಲ್ಲ ಯಥೇಷ್ಟವಾಗಿ ಅನುಭವಿಸಿ, ದೇಹಾ ವಸಾನವಾದ ಬಳಿಕ ನಿರತಿಶಯ ಸಾಯುಜ್ಯರೂಪ ಮುಕ್ತಿಸಾಮ್ರಾಜ್ಯಪದವಿಯನ್ನು ಪಡೆಯುವನು. ಇದರಲ್ಲಿ ಲೇಶವೂ ಸಂದೇಹಪಡಬೇಕಾಗಿರುವುದಿಲ್ಲ. ||೩೭||

ಮತ್ತೊಂದು ಮಾತನ್ನು ಹೇಳುವೆನು, ಗಮನವಿಟ್ಟು ಕೇಳಿರಿ, ಪ್ರಕೃತ

ಶರಣಂ ಮೇ ಪ್ರಪನ್ನಾಶ್ಚ ಯಜ್ಞದಾನವಿವರ್ಜಿತಾಃ ||೩೮||

ನಿರುದ್ಧಾ ಗಂಡಕೀದೇಶೇ ಸ್ವಧಾಸ್ವಾಹಾ ವಿವರ್ಜಿತಾಃ ।
ತತೋಽಸ್ಯ ವಧಂ ಕರ್ತುಮವತಾರಾಂತರಂ ಮಮ ||೩೯||

ಗಿರಿಜಾಯಾ ಗೃಹೇ ದೇವಾ! ಭವಿಷ್ಯತಿ ಚ ಸಾಂಪ್ರತಮ್ ।
' ಮಯೂರೇಶ್ವರ ' ನಾಮ್ನಾಹಂ ಖ್ಯಾತಿಂ ಯಾಸ್ಯೇ ತದಾ ಚ ವ:
||೪೦||

ದುಷ್ಟನಾದ ಸಿಂಧುದೈತ್ಯನ ದುರಾಡಳಿತ ಆರಂಭವಾಗಿದೆ. ನೀವೂ ಸಹ ಆತನ ನಿರ್ಬಂಧಕ್ಕೆ ಒಳಪಟ್ಟು ಬಹಳ ಮಟ್ಟಿಗೆ ಪೀಡಿತರಾಗಿರುವಿರಿ- ಇವನ ಒತ್ತಾಯದಿಂದ ಯಾರೊಬ್ಬರೂ ಯಜ್ಞ-ಯಾಗಾದಿಗಳನ್ನೂ, ವೇದಾಧ್ಯಯನಾಧ್ಯಾಪನಗಳನ್ನೂ ಮಾಡದಂತಾಗಿದ್ದಾರೆ. ನಿಮಗೆ ಆಹಾರವಾದ ಯಾಜ್ಞಿಕಾಹುತಿಗಳು ದೊರೆಯುತ್ತ ಲಿಲ್ಲ. ಆದುದರಿಂದಲ್ಲವೇ, ನೀವು ನನ್ನನ್ನು ಮರೆಹೊಕ್ಕಿರುವಿರಿ, ಅಲ್ಲವೇ ? ||೩೮||

ಅಮರಾವತಿಯಲ್ಲಿರುವ ಕಾಮಧೇನು, ಕಲ್ಪವೃಕ್ಷ, ಮಂದಾರ, ಪಾರಿಜಾತ ಮೊದಲಾದ ಭೋಗೋಪಕರಣಗಳನ್ನು ಯಥೇಷ್ಟವಾಗಿ ಉಪಭೋಗಿಸಬೇಕಾದ ನೀವು ಸದ್ಯಕ್ಕೆ ಸಿಂಧುವಿಗೆ ಸೆರೆಯಾಳಾಗಿ ಸಿಕ್ಕು, ಪಾಪಕೂಪವಾದ ಈ ಗಂಡಕೀ ನಗರದಲ್ಲಿ ಕೊಳೆಯುತ್ತಲಿದ್ದೀರಿ. ದೇವ, ಪೈತೃಕ ನಿಮಿತ್ತವಾಗಿ ನಡೆಯುತ್ತ ಲಿದ್ದ ಯಾವ ಯಾವ ಕರ್ಮಗಳೂ ಈಗ ನಡೆಯದಂತಾಗಿರುವುದರಿಂದ ನಿಮಗೆ ಆಹಾರವಿಲ್ಲದೆ ಬಹಳ ಬಳಲಿದ್ದೀರಿ. ನನಗೆ ಎಲ್ಲವೂ ಗೊತ್ತಾಗಿದೆ. ಈ ಅಸುರ ನನ್ನು ನಿಗ್ರಹಿಸುವುದಕ್ಕೋಸ್ಕರವೇ ನಾನು ಮತ್ತೊಂದು ಅವತಾರವನ್ನು ಎತ್ತುವ ಪ್ರಸಂಗವು ಬಂದಿರುತ್ತದೆ. ||೩೯||

ಮಹೇಶ್ವರನ ಅರ್ಧಾಂಗಿ, ಗಿರಿಜೆಯ ಮನೆಯಲ್ಲಿ ದೇವತೆಗಳೇ ! ಪ್ರಕೃತ ನಾನು ಅವತರಿಸುವೆನು. ಈ ಅವತಾರದಲ್ಲಿ ನಾನು ' ಮಯೂರೇಶ್ವರ ' ಎಂಬ ಅಭಿಧಾನದಿಂದ ಪ್ರಖ್ಯಾತಿಗೊಳ್ಳುವೆನು. ಈ ಅವತಾರವನ್ನೆತ್ತುವುದು ಸಹ ದುಷ್ಟ ನಿಗ್ರಹ, ಶಿಷ್ಟಪರಿಪಾಲನೆಗಾಗಿಯಾದುದರಿಂದ ಆಗ ನಿಮಗೆ ||೪೦||

ಪದಾನಾಮಾಶ್ರಮಾಣಾಂ ಚ ಪ್ರಾಪ್ತಿಃ ಸಿಂಧೌ ಹತೇ ಮಯಾ ।
ಭವಿಷ್ಯತಿ ನ ಸಂದೇಹೋ ಯತಃ ಕೃತಯುಗೇ ಸುರಾಃ! ॥೪೮॥

'ಸಿಂಹಾರೂಢೋ' ದಶಭುಜಃ ತೇಜೋರೂಪೀ ವಿನಾಯಕಃ ।
ಷಡ್ಭುಜಶ್ಚಶಿವರ್ಣಶ್ಚ ತ್ರೇತಾಯಾಂ ಬರ್ಹಿವಾಹನಃ ॥೪೨॥

ಮಯೂರೇಶ್ವರ ನಾಮಾ ಚ, ದ್ವಾಪರೇ ರಕ್ತವರ್ಣವಾನ್
ಚತುರ್ಬಾಹುರಾಖುವಾಹೋ ಭೂತ್ವಾ ಚಾಹಂ ಗಜಾನನಃ ॥೪೩॥

---

ನಿಮ್ಮ ನಿಮ್ಮ ಸ್ಥಾನ-ಮಾನಗಳನ್ನು ಮರಳಿ ದಯಪಾಲಿಸುವೆನು. ಈಗ ಈ ದುಷ್ಟನ ಹಾವಳಿಯಿಂದಾಗಿ ಹೆಸರಿಲ್ಲದಂತಾಗಿರುವ ವರ್ಣಾಶ್ರಮ ಧರ್ಮಗಳನ್ನೂ ಪುನರುಜ್ಜೀವಗೊಳಿಸುವೆನು, ಆಗ ನೀವೆಲ್ಲ ಮೊದಲಿನಂತೆ ನಿಮ್ಮ ನಿಮ್ಮ ಪದವಿಗಳನ್ನು ಪಡೆದು ಸುಖವಾಗಿ ಜೀವಿಸುವಿರಿ. ನಿಮ್ಮೆಲ್ಲರನ್ನೂ ಪರಿಪರಿಯಿಂದ ಪೀಡಿಸುತ್ತಲಿರುವ ಈ ದುಷ್ಟ ದೈತ್ಯ, ಸಿಂಧು ನನ್ನಿಂದಲೇ ಹತನಾಗತಕ್ಕವನು. ಈ ವಿಷಯದಲ್ಲಿ ಸ್ವಲ್ಪ ಕೂಡ ಸಂದೇಹವನ್ನಿಟ್ಟುಕೊಳ್ಳಬೇಕಾಗಿರುವುದಿಲ್ಲ. ಹಿಂದೆ ಎಂದರೆ ದೇವತೆಗಳೇ ! ಕೃತಯುಗದಲ್ಲಿ ನಾನು ॥೪೧॥

ದುಷ್ಟನಿಗ್ರಹ-ಶಿಷ್ಟಪರಿಪಾಲನೆಗಳಿಗಾಗಿ ಅವತರಿಸಿದ್ದೆ. ಆ ಅವತಾರದಲ್ಲಿ ನನ್ನ ಆಕೃತಿ ದಶಭುಜಮಂಡಿತವಾಗಿದ್ದಿತು. ಮೃಗೇಂದ್ರನನ್ನೇ ವಾಹನವನ್ನಾಗಿ ಮಾಡಿಕೊಂಡಿದ್ದೆ. ಆ ರೂಪವನ್ನೇ ಪ್ರಕೃತ ನಿಮಗೆ ತೋರಿಸಿರುವುದು. ಆಗಿನ ನನ್ನ ದೇಹ ತೇಜೋಮಯವಾಗಿದ್ದಿತು. ನನಗೆ ಆಗ 'ವಿನಾಯಕ' ಎಂಬ ಅಭಿಧಾನವು ಇದ್ದಿತು. ತ್ರೇತಾಯುಗದಲ್ಲಿ ಧರ್ಮಸಂಸ್ಥಾಪನೆಗಾಗಿ ನಾನು ಅವತರಿಸಿದ್ದೆನಷ್ಟೇ ? ಆಗ ನನಗೆ ಆರು ಭುಜಗಳಿದ್ದವು. ಮಯೂರವ [ನವಿಲ] ನ್ನೇ ನಾನು ವಾಹನವನ್ನಾಗಿ ಮಾಡಿಕೊಂಡಿದ್ದೆನು. ಆಗ ನನ್ನ ದೇಹವು ಅಮೃತರಶ್ಮಿ; ಚಂದ್ರನಂತೆ ಶುಭ್ರವಾಗಿದ್ದಿತು. ॥೪೨॥

ತ್ರೇತಾಯುಗದಲ್ಲಿ ನನ್ನ ಅವತಾರಿಕ ದೇಹವು 'ಮಯೂರೇಶ್ವರ' ಎಂಬ ಅಭಿಧಾನದಿಂದ ಖ್ಯಾತವಾಯಿತು. ದ್ವಾಪರಯುಗದಲ್ಲಿ ನಾನು ಅವತರಿಸಿದಾಗ ನನ

**ತತಃ ಕಲಿಯುಗೇ ಪ್ರಾಪ್ತೇ ಶ್ಯಾಮವರ್ಣೋ ದ್ವಿಷನ್ಮಯಃ ।**
**[1] ಧೂಮಕೇತುರಿ' ತಿ ಖ್ಯಾತೋ ಭವಿಷ್ಯಾಮಿ ಸುರಾ! ಅಹಮ್ ॥೪೪॥**

---

ಶರೀರವು ರಕ್ತವರ್ಣವಾಗಿರುವುದು. ನಾಲ್ಕು ಬಾಹುಗಳಿಂದ ವಿರಾಜಿತನಾದ ನಾನು ಆ ಯುಗದಲ್ಲಿ ಮೂಷಕವ (ಇಲಿಯ) ನ್ನೇ ವಾಹನವನ್ನಾಗಿ ಮಾಡಿ ಕೊಂಡಿದ್ದೆನು. ಆಗ ನನ್ನನ್ನು ಎಲ್ಲರೂ 'ಗಜಾನನ' ಎಂದು ಕೂಗಿ ವ್ಯವಹರಿಸಿದರು. ।೪೩॥

ಅನಂತರ ಕಲಿಯುಗ ಪ್ರಾಪ್ತವಾಯಿತು. ಇತರ ಮೂರು ಯುಗಗಳಲ್ಲಿದ್ದವರು ಪರಮ ಸುಸಂಸ್ಕೃತ ಮನೋವೃತ್ತಿಯುಳ್ಳವರಾಗಿದ್ದರು. ದೈವವನ್ನು ಭಜಿಸಿ ಪೂಜಿಸಲಿಕ್ಕೆ ಅವರಲ್ಲನೇಕರಿಗೆ ಪ್ರತೀಕಗಳ ಅವಶ್ಯಕತೆ ಇರಲಿಲ್ಲ. ಆದುದರಿಂದ ಕೇವಲ ಕೆಲವು ಕಾಲ ಮಾತ್ರ ನಾನು ಮೈದೋರಿದ್ದರೂ, ಜನಜೀವನದಲ್ಲಿ ದೈವೀಭಾವವನ್ನು ಚಿರಕಾಲ ನಿಲ್ಲುವಂತೆ ಪ್ರಚೋದನಗೊಳಿಸಬಹುದಾಗಿದ್ದಿತು. ಆದರೆ, ಕಲಿಯುಗದ ಪರಿಸ್ಥಿತಿ ಹಾಗಲ್ಲ. ಏತಕ್ಕೆಂದರೆ ಚತುಷ್ಪಾತ್ತಾದ (ನಾಲ್ಕು ಭಾಗಗಳಾದ) ಧರ್ಮವು ಒಂದೊಂದು ಯುಗದಲ್ಲೂ ಒಂದೊಂದು ಪಾದದಂತೆ ಕಡಿಮೆಯಾಗುತ್ತ ಬಂದು, ಕೊನೆಗೆ ಕಲಿಯುಗದಲ್ಲಿ ಒಂದಂಶದಿಂದ ಮಾತ್ರ ಉಳಿದಿರುವುದು, ಎಂದ ಮೇಲೆ ಜನರು ಎಷ್ಟರಮಟ್ಟಿಗೆ ಧಾರ್ಮಿಕ ಮನೋವೃತ್ತಿಯುಳ್ಳವರಾಗಿರಬಹುದೆಂಬುದನ್ನು ನೀವೇ ಆಲೋಚಿಸಿ. ಅವರ ಮನಸ್ಸು ಸರ್ವದಾ ವಿಷಯ ಭೋಗಗಳ ಅಭಿಲಾಷೆಯಲ್ಲೇ ಆಸಕ್ತವಾಗಿರುವುದರಿಂದ ಪ್ರತೀಕಗಳ ಸಹಾಯವಿಲ್ಲದ್ದರೆ, ಅವರಿಗೆ ದೈವೀಭಾವನೆ ಉಂಟಾಗುವುದೇ ಇಲ್ಲ. ಆದುದರಿಂದ ಕಲಿಯುಗಗಳಲ್ಲಿ ನಾನು ಸರ್ವದಾ ಈ ಲೋಕಗಳಲ್ಲೇ ನೆಲಸಬೇಕಾಗಿರುವುದು. ಅಂತೆಯೇ ನಾನು ಗಣಪತಿ, ಮಹಾವಿಷ್ಣು, ಪರಶಿವ,ಲಕ್ಷ್ಮೀ, ಸೂರ್ಯ, ರಾಮ, ಮಾರುತಿ,ದೇವಿ ಮೊದಲಾದ ರೂಪಗಳಿಂದ ದೃಷನ್ಮೂ[ಶಿಲಾಮಯಮೂ)ರ್ತಿಯಾಗಿ ಅಲ್ಲಲ್ಲಿ ನೆಲೆಸಿ, ಭಕ್ತರ ಭಾವನೆಗನುಗುಣವಾಗಿ ಫಲಗಳನ್ನು ಕೊಡುತ್ತ, ಅವರಲ್ಲಿ ಸದ್ಭಾವನೆಗಳನ್ನು ಬೆಳೆಸಲು ಪ್ರಯತ್ನಿಸುವೆನು. ಈ ಅವತಾರ

---

[1] ವಿವರಣೆಗೆ ಪರಿಶಿಷ್ಟವನ್ನು ನೋಡಿರಿ.

ಶೀಘ್ರಮೇವ ಕರಿಷ್ಯಾಮಿ ಭವತಾಂ ವಾಂಛಿತಂ ಸುರಾಃ ! ।

ಕ ಉವಾಚ :—

ಏವಂ ನಿವೇದ್ಯ ತಾನ್ ದೇವಸ್ತತ್ರೈವಾಂತರ್ದಧೇ ವಿಭುಃ ॥೪೫॥

ಆನಂದಂ ಚ ಸುರಾಃ ಪ್ರಾಪುಸ್ಸ್ವಕಾರ್ಯಕೃತನಿಶ್ಚಯಾಃ ।

ಯ ಇದಂ ಪರಮಾಖ್ಯಾನಂ ಶ್ರುಣುಯಾಚ್ಛ್ರಾವಯೇಚ್ಚ ಯಃ ॥೪೬॥

---

ದಲ್ಲಿ ನನ್ನ ದೇಹವು ಕೃಷ್ಣವರ್ಣವಾಗಿರುವುದು. ಈ ಯುಗದ ಅವತಾರಿಕ ಹೆಸರು 'ಧೂಮಕೇತು' ಎಂದು ದೇವತೆಗಳೇ ! ತಿಳಿಯಿರಿ. ॥೪೪॥

ಇರಲಿ, ನಿಮ್ಮ ಅಭಿಲಾಷೆಯನ್ನು ದೇವತೆಗಳೇ ! ಬಹಳ ಬೇಗನೆ ನೆರವೇರಿಸಿ ಕೊಡುವೆನು. ನೀವು ಚಿಂತಿಸಬೇಕಾಗಿಲ್ಲ.

ಬ್ರಹ್ಮಾ :—

ದೇವನು ತನ್ನ ಮುಂದಿನ ಉದ್ಯಮವನ್ನು ದೇವತೆಗಳಿಗೆ ವಿವರಿಸಿ ಹೇಳಿ, ತಾನು ಸರ್ವವ್ಯಾಪಿಯಾಗಿದ್ದರೂ, ಈಗ ತಳೆದ ಸಾಕಾರಮೂರ್ತಿಯನ್ನು ತಿರೋಧಾನಗೊಳಿಸಿದನು. ॥೪೫॥

ದೇವನ ನುಡಿಯನ್ನು ಆಲೈಸಿ ದೇವತೆಗಳು ಬಹಳ ಆನಂದಿಸಿದರು. ತಮ್ಮ ಮುಂದಿನ ಕರ್ತವ್ಯವಾವುದು? ಎಂಬುದನ್ನು ನಿಶ್ಚಯಿಸಿಕೊಂಡರು. ವತ್ಸ, ವ್ಯಾಸ ? ಎಂಥವರನ್ನೇ ಆಗಲಿ, ಅಜ್ಞಾನವು ಮೋಹಗೊಳಿಸಿಬಿಡುವುದು. ಈಗ ನೋಡು, ದೇವಜನ್ಮವು ತಿರ್ಯಕ್, ಮಾನವ ಮೊದಲಾದ ಜನ್ಮಗಳಿಗಿಂತಲೂ ಅತ್ಯುತ್ತಮವಲ್ಲವೇ ? ಆ ಜನ್ಮಗಳನ್ನು ಪಡೆದವರ ಮನೋಧರ್ಮಗಳು ಮುಂದಿನ ಮೆಟ್ಟಿಲಾದ ನಿರತಿಶಯಾನಂದರೂಪ ಸಾಯುಜ್ಯಮುಕ್ತಿಯನ್ನಷ್ಟೇ ಬಯಸಬೇಕು! ದೇವತೆಗಳು ಪೂರ್ಣ ಸತ್ತ್ವಶಾಲಿಗಳಾಗಿರುವುದರಿಂದ ಅವರಿಗೆ ಈ ಮುಕ್ತಿಪದವಿಯನ್ನು ಪಡೆಯುಲಿಕ್ಕೆ ಅಷ್ಟೇನೂ ಶ್ರಮ ಉಂಟಾಗುವುದಿಲ್ಲ. ದೇವತೆಗಳು ಇತರ ಪ್ರಾಣಿಗಳಂತೆ ಅಶಕ್ತರಲ್ಲ. ಬುದ್ಧಿಬಲವು ಅವರಿಗೆ ಬೆಂಬಲವಾಗಿರುವುದು.

**ಪಠೇಚ್ಚ ಪರಯಾ ಭಕ್ತ್ಯಾ ಧ್ಯಾತ್ವಾ ದೇವಂ ವಿನಾಯಕಮ್ ।**
**ಸರ್ವಾನ್ ಕಾಮಾನವಾಪ್ನೋತಿ ಪ್ರೇತ್ಯ ಬ್ರಹ್ಮಮಯೋ ಭವೇತ್**
**॥೪೭॥**

ಬೇಕೆನಿಸಿದಾಗ ಆ ಚಿನ್ಮಯಮೂರ್ತಿಯನ್ನು ಸಾಕಾರಗೊಳಿಸಿ, ಸಂದರ್ಶಿಸುವ ಭಾಗ್ಯ, ಯೋಗ್ಯತೆಗಳು ಅವರಿಗಿವೆ. ದೈವವೂ ಸಹ ಅವರಿಗೆ ಒಲಿದು ಅವರ ಅಭೀಷ್ಟಗಳನ್ನು ಪೂರ್ಣಗೊಳಿಸುತ್ತಲಿದೆ. ಹೀಗಿದ್ದರೂ ದೈವವನ್ನು ಅವರು ಸಂದರ್ಶಿಸಿದಾಗ ಯಾವ ದೇವತಾವ್ಯಕ್ತಿಯೇ ಆಗಲಿ, 'ಮುಕ್ತಿಸಾಮ್ರಾಜ್ಯವನ್ನನುಗ್ರಹಿಸೆ'ಂದು ಪ್ರಾರ್ಥಿಸಿಲ್ಲ. ಹಾಗೆ ಪ್ರಾರ್ಥಿಸಿದ್ದರೆ, ದೇವನು ಅವರಿಗೆ ಆ ಪದವನ್ನು ಖಂಡಿತವಾಗಿಯೂ ಅನುಗ್ರಹಿಸುತ್ತಲಿದ್ದನು. ಆಗ ಇವರಿಗೆ ಸ್ಥಾನ-ಮಾನಗಳ ಚ್ಯುತಿಯಾಗಲೀ, ಶತ್ರುವರ್ಗದವರಿಂದ ಪೀಡೆಯಾಗಲೀ ಎಂದೆಂದಿಗೂ ಉಂಟಾಗುತ್ತಲಿರಲಿಲ್ಲವಲ್ಲವೇ? ಆದರೂ ದೇವತೆಗಳೇಕೆ ಮುಕ್ತಿಯನ್ನು ಬಯಸಲಿಲ್ಲ ಎಂದು ನೀನು ಕೇಳಬಹುದು. ನಾನು ಮೊದಲೇ ಹೇಳಲಿಲ್ಲವೇ? 'ಅಜ್ಞಾನೇನಾವೃತಂ ಜ್ಞಾನಂ, ತೇನ ಮುಹ್ಯಂತಿ ಜಂತವಃ' ಎಂದು? ಇರಲಿ, ಇಂದ್ರಾದಿ ದೇವತಾಗಣವು ಭಗವಂತನನ್ನು ತಪಃಪ್ರಭಾವದ ಮೂಲಕ ಸಾಕ್ಷಾತ್ಕರಿಸಿಕೊಂಡ ಈ ಆಖ್ಯಾಯಿಕೆಯು ಪರಮ ಪವಿತ್ರವಾದುದು. ಯಾರು ಇದನ್ನು ಭಕ್ತಿ-ಶ್ರದ್ಧೆಗಳಿಂದ ಶ್ರವಣಮಾಡುವರೋ, ಮುಕ್ತು ಇತರರಿಗಾಗಿಯಾದರೂ ಶ್ರವಣಮಾಡಿ, ಮಾಡಿಸುವರೋ ॥೪೬॥

ಅಥವಾ ಭಗವಂತನಾದ ವಿನಾಯಕನನ್ನು ಏಕಾಗ್ರವಾಗಿ ಸರ್ವದಾ ಧ್ಯಾನಿಸುತ್ತ, ಶ್ರದ್ಧಾಭಕ್ತಿಯುತರಾಗಿ ಸ್ವಯಂ ಪಠಿಸುವರೋ, ಅವರು ಐಹಿಕಾಮುಷ್ಮಿಕ ಸಕಲ ಭೋಗಭಾಗ್ಯಗಳನ್ನೂ ಯಥೇಷ್ಟವಾಗಿ ಅನುಭವಿಸಿ, ಕೊನೆಗೆ ಎಂದರೆ ಕರ್ಮ ಸವೆದ ಬಳಿಕ, ಬ್ರಹ್ಮಮಯರಾಗುವರು, ಅರ್ಥಾತ್ ಪರಮಾತ್ಮನೊಂದಿಗೆ ಐಕ್ಯಗೊಳ್ಳುವಂತಹ ಮುಕ್ತಿಯನ್ನು ಪಡೆಯುವರು. ॥೪೭॥

ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ 'ಸುರರ್ಷಿ
ವರಪ್ರದಾನವರ್ಣನಂ' ನಾಮ ಅಷ್ಟಸಪ್ತ
ತಿತಮೋಽಧ್ಯಾಯಸ್ಸಮಾಪ್ತಃ

ಇಲ್ಲಿಗೆ ಶ್ರೀ ಗಣೇಶಪುರಾಣ-ಉತ್ತರಖಂಡದಲ್ಲಿ 'ಸುರರ್ಷಿವರಪ್ರದಾನವರ್ಣನೆ
ಎಂಬಲ್ಲಿಗೆ ಎಪ್ಪತ್ತೆಂಟನೆಯ ಅಧ್ಯಾಯಾನುವಾದವು ಪೂರ್ಣವಾದುದು.



॥ ಶ್ರೀ ಗಣೇಶಾಯ ನಮಃ ॥

# ಅಥೈಕೋನಾಶೀತಿತಮೋಽಧ್ಯಾಯಃ

ಕ ಉವಾಚ :—

ನಿರ್ಜಿತೇಷು ಸಿಂಧುನಾ ದೇವೇಷು ಜ್ಞಾತ್ವಾ ಶಂಭುರ್ನಿಜಸ್ಥಲಾತ್ ।
ಸಪ್ತಕೋಟಿಗಣಾಕೀರ್ಣಃ [1]ತ್ರಿಸಂಧ್ಯಾಕ್ಷೇತ್ರಮಭ್ಯಗಾತ್ ॥೧॥

ಸ್ವಾಹಾ-ಸ್ವಧಾವಷಟ್ಕಾರವೇದಾಧ್ಯಯನವರ್ಜಿತಾಃ ।
ನಿವಸಂತಿ ಭಯಾತ್ಸಿಂಧೋಃ[2]ಗೌತಮಾದ್ಯಾ ಮಹರ್ಷಯಃ ॥೨॥

---

॥ ಶ್ರೀ ಗಣೇಶಾಯ ನಮಃ ॥

## ೭೯ ನೆಯ ಅಧ್ಯಾಯ.

ಬ್ರಹ್ಮ :—

ಸಿಂಧುದೈತ್ಯನು ಇಂದ್ರಾದಿ ಸಮಸ್ತ ದೇವತಾಗಣವನ್ನೂ ಜಯಿಸಿದ ಸಂಗತಿ ಪರಮೇಶ್ವರನಿಗೆ ತಿಳಿಯಲು, ದೇವನು ತನ್ನ ವಸತಿಸ್ಥಳವಾದ ರಜತಗಿರಿಯನ್ನು ಬಿಟ್ಟು, ಏಳು ಕೋಟಿ ಸಂಖ್ಯೆಯಲ್ಲಿದ್ದ ತನ್ನ ಪ್ರಮಥಗಣಗಳ ಗುಂಪನ್ನು ಸಂಗಡ ಕರೆದುಕೊಂಡು 'ತ್ರಿಸಂಧ್ಯಾ' ಎಂದು ಪ್ರಖ್ಯಾತವಾದ ದಿವ್ಯ ಕ್ಷೇತ್ರವನ್ನು ಕುರಿತು ಪ್ರಯಾಣಮಾಡಿ ಅಲ್ಲಿಗೆ ಸುಖವಾಗಿ ಸೇರಿದನು. ॥೧॥

ಇತ್ತ ದೇವತಾರ್ಚನೆ, ಪೈತೃಕಕಾರ್ಯ, ಯಜ್ಞ-ಯಾಗಾದಿ ವೇದವಿಹಿತ ಅನುಷ್ಠಾನಗಳು ಮತ್ತು ವೇದಾಧ್ಯಯನ ಇವನ್ನು ಆಚರಿಸಲಿಕ್ಕೆ ಸಿಂಧುದೈತ್ಯನು ಅತಿಯಾಗಿ ಪ್ರತಿಬಂಧಿಸುತ್ತಲಿದ್ದನಾದುದರಿಂದ ಗೌತಮಾದಿ ಮಹರ್ಷಿಗಳಿಗೆ ಗಟ್ಟಿಯಾಗಿ ಶ್ವಾಸೋಚ್ಛ್ವಾಸಗಳನ್ನು ಬಿಡಲು ಸಹ ಅಂಜುವ ಪ್ರಸಂಗ ಬಂದು ಬಿಟ್ಟಿತು. ಸಿಂಧುವಿನ ರಾಜ್ಯದಲ್ಲಿ ಇವರು ವಾಸಮಾಡಿದ ಪ್ರತಿ ನಿಮಿಷವೂ

---

ವಿವರಣೆಗೆ ಪರಿಶಿಷ್ಟವನ್ನು ನೋಡಿರಿ.

**ದೃಷ್ಟ್ವಾ ತೇ ತ್ರ್ಯಂಬಕಂ ದೇವಂ ಪರಿವವ್ರುಃ ಸಮಂತತಃ ।**
**ಯಥಾ ತೀರ್ಥಂ ವಿಪ್ರವರಾ ಬಾಲಾಕಾ ಜನನೀಂ ಯಥಾ ॥೩॥**

**ಪ್ರಣಮ್ಯ ತಂ ಪ್ರಪೂಜ್ಯೈವ ಪ್ರೋಚುಃ**

**ಋಷಯ ಊಚುಃ :—**

**ಧನ್ಯತಮಾ ವಯಮ್ ।**
**ಅನುಷ್ಠಾನಂ ದೃಶಿರ್ಜನ್ಮ ಧನ್ಯಂ ಜ್ಞಾನಂ ಯತೋ ಹರಃ ॥೪॥**

ಭಯ, ಆತಂಕಗಳಿಂದ ಕೂಡಿದುದಾಗಿತ್ತು. ॥೨॥

ಪುಣ್ಯತಮ ತೀರ್ಥಗಳನ್ನು ಕಂಡಕೂಡಲೇ ಪರಮ ಧಾರ್ಮಿಕರಾದ ಶ್ರೋತ್ರಿಯರು ಸ್ನಾನಾನುಷ್ಠಾನಗಳಿಗಾಗಿ ಆತುರಗೊಂಡು, ಹೇಗೆ ಓಡಿ ಹೋಗುವರೋ, ಸ್ನೇಹ ಮೂರ್ತಿಯಾದ ಜನನಿಯನ್ನು ಕಂಡೊಡನೆಯೇ ಹಸಿದ ಹಸು-ಗೂಸುಗಳು ಅವಳ ಬಳಿಗೆ ಹೋಗಲು ಹೇಗೆ ತವಕಪಡುವುವೋ, ಅದರಂತೆ ದೇಶದ ಸುತ್ತು-ಮುತ್ತಲೂ ವಾಸವಾಗಿದ್ದ ಮಹರ್ಷಿಗಳೆಲ್ಲ ತ್ರಿಲೋಕೇಶ್ವರನಾದ ತ್ರಿಲೋಚನನು ರಾಕ್ಷಸ ಭೂಯಿಷ್ಠವಾದ ಆ ಕಲುಷಿತ ವಾತಾವರಣದಲ್ಲಿ ನೆಲೆಸಲು ಇಷ್ಟಪಡದೇ, ತ್ರಿಸಂಧ್ಯಾಕ್ಷೇತ್ರಕ್ಕೆ ಪ್ರಯಾಣಮಾಡಿದುದನ್ನು ಕಂಡು ಧಾವಿಸುತ್ತ ದೇವನ ಸಮೀಪಕ್ಕೆ ಬಂದರು. ॥೩॥

ದೇವನನ್ನು ಸಮೀಪಿಸಿದೊಡನೆಯೇ ಅವನಿಗೆ ಸಾಷ್ಟಾಂಗವೆರಗಿ, ಭಕ್ತಿಯಿಂದ ಪೂಜಿಸಿದರು, ಮತ್ತು ದೇವನನ್ನು ಕುರಿತು ಹೀಗೆಂದು ನುಡಿದರು.

ಋಷಿಗಳು :—

ದೇವ! ನಿನ್ನ ದರ್ಶನವು ನಮಗೆ ಲಭಿಸಿದ್ದರಿಂದ ಇಂದು ನಾವು ಧನ್ಯರಾದೆವು. ಇದುವರೆಗೂ ನಾವು ಆಚರಿಸಿದ ಅನುಷ್ಠಾನ, ತನ್ಮೂಲಕ ನಾವು ಆರ್ಜಿಸಿದ ಜ್ಞಾನಭಂಡಾರ ಮತ್ತು ನಮ್ಮ ಈ ನೇತ್ರಗಳು ಎಲ್ಲವೂ ಧನ್ಯವಾದವು. ಏತಕ್ಕೆಂದರೆ

**ಅಗೋಚರೋ ದೃಷ್ಟಿಗತೋ [1] ದಂಡಕಾರಣ್ಯಮಾಗತಃ ।**
**ದುರಿತಂ ವಿಲಯಂ ಯಾತಂ, ಪುಣ್ಯಂ ಚ ಫಲಿತಂ ಮಹತ್ ॥೫॥**

**ಇದಾನೀಂ ನ ಚ ದುಃಖಂ ನೋ ದೃಷ್ಟೇ ದೇವೇ ಭವಿಷ್ಯತಿ ।**
**ಯಥೋದಿತೇ ದಿವಾನಾಥೇ ನ [2] ಧ್ವಾಂತಂ ದೃಶ್ಯತೇ ಕ್ವಚಿತ್ ॥೬॥**

**ಕ ಉವಾಚ :—**

**ತತೋಽಬ್ರವೀನ್ಮಹಾದೇವಃ ಸರ್ವಾಂಸ್ತಾನ್ ಮುನಿಪುಂಗವಾನ್ ।**

---

ಸಕಲ ಲೋಕಹರನಾದ ಹರನು, ॥೪॥

ಸ್ವಯಮುಶರೀರಿಯಾದುದರಿಂದ ಯಾರ ಕಣ್ಣಿಗೂ ಎಂದೆಂದಿಗೂ ದೃಶ್ಯನಾಗತಕ್ಕವನಲ್ಲ. ಹೀಗಿರುವಾಗ ನಮ್ಮ ಮೇಲಿನ ಅನುಗ್ರಹವಿಶೇಷದಿಂದ ಸಾಕಾರ ರೂಪವನ್ನು ತಳೆದು ದರ್ಶನವನ್ನಿತ್ತುದು ಮಾತ್ರವಲ್ಲದೇ, ನಾವು ವಾಸಮಾಡಬೇಕೆಂದು ಆಯ್ದುಕೊಂಡಿದ್ದ ಈ ದಂಡಕಾರಣ್ಯಕ್ಕೆ ಬಂದು ನೆಲೆಸಲಿದ್ದಾನೆ. ಎಂದಮೇಲೆ ನಮ್ಮ ಭಾಗ್ಯ ಎಷ್ಟೆಂದು ವರ್ಣಿಸೋಣ ? ನಾವು ಜನ್ಮ ಜನ್ಮಾಂತರಗಳಿಂದ ಆಚರಿಸಿರಬಹುದಾದ ಪಾತಕ ಸಮುದಾಯವೆಲ್ಲ ಇಂದಿಗೆ ವಿಲಯವನ್ನು ಹೊಂದಿತು. ಮತ್ತು ಮಹತ್ತರವಾದ ಪುಣ್ಯವು ಫಲಿಸಿತು, ॥೫॥

ದೇವನ ದಿವ್ಯ ದರ್ಶನ ದೊರೆತ ಬಳಿಕ, ದುಃಖಲೇಶವೂ ಸಹ ನಮ್ಮನ್ನು ಸಂಪರ್ಕಿಸಲಾರದು. ಇನ್ನು ಮೇಲೆ ನಾವು ಈ ಬಗ್ಗೆ ಆಲೋಚಿಸಬೇಕಾದುದೇ ಇಲ್ಲ. ಜಗವನ್ನು ಬೆಳಗಲು ಅಂಬರಮಣಿಯು ಉದಿಸಿದನೆಂದ ಮೇಲೆ ಕತ್ತಲೆ ಎಲ್ಲಿಯಾದರೂ ಕಂಡುಬಂದೀತೇ? ॥೬॥

ಬ್ರಹ್ಮಾ:-

ಮಹರ್ಷಿಗಳು ಈ ರೀತಿ ಸ್ತುತಿಗೈದ ಬಳಿಕ, ಮಹಾದೇವನು ಮುನಿವರರಾದ ಅವರೆಲ್ಲರನ್ನೂ ಸಂಬೋಧಿಸಿ, ಹೀಗೆಂದು ನುಡಿದನು.

---

ವಿವರಣೆಗೆ ಪರಿಶಿಷ್ಟವನ್ನು ಓದಿರಿ.

ಶ್ರೀ ಭಗವಾನುವಾಚ :—

ಸಿಂಧುನಾಕ್ರಾಮಿ ತ್ರೈಲೋಕ್ಯಂ ಕೃತೋ ದೇವವಿನಿಗ್ರಹಃ ॥೭॥
ಮುನೀನಾಮಪಿ ಕೇಷಾಂಚಿತ್ತೇನ ಖಿನ್ನಂ ಮನೋ ಮಮ ।
ವಿಶ್ರಾಂತಿಂ ನ ಲಭೇ ಸ್ಥಾನೇ ತತೋಽಹಮಿಹ ಚಾಗತಃ ॥೮॥
ಭವತಾಂ ದರ್ಶನೇನಾಹಂ ಪರಿತುಷ್ಟೋ ಮುದಾನ್ವಿತಃ ।
ಇದಾನೀಮವಕಾಶಂ ಸಪರಿವಾರಸ್ಯ ದೀಯತಾಂ ವಃ ॥೯॥
ಅತಿಪುಣ್ಯೇನ ವಃ ಪ್ರಾಪ್ತಂ ದರ್ಶನಂ ಪಾಪನಾಶನಮ್ ।

---

ಶ್ರೀ ಭಗವಾನ್ :—

ದುಷ್ಟ ದೈತ್ಯನಾದ ಸಿಂಧು ದೇವತೆಗಳೊಡನೆ ವಿರೋಧವನ್ನು ಸಾಧಿಸಿ, ಮೂರು ಭುವನಗಳನ್ನೂ ಆಕ್ರಮಿಸಿ ಕುಳಿತಿರುವನು. ॥೭॥

ಇದರಿಂದ ದೇವತೆಗಳು ಅವನ ದುರಾಡಳಿತಕ್ಕೆ ಸಿಲುಕಿ, ನರಳುತ್ತಲಿದ್ದಾರೆ. ಅವರ ಜೊತೆಗೆ ಮುನಿಗಳು ಸಹ ಅಸಹನೀಯ ಸಂಕಟಕ್ಕೆ ಒಳಗಾಗಿದ್ದಾರೆ. ಈ ಸಂಗತಿಯನ್ನು ತಿಳಿದ ಬಳಿಕ, ನನಗೆ ಬಹಳ ಖೇದವೆನಿಸಿದೆ. ಎಲ್ಲೆಲ್ಲಿಗೆ ಹೋಗಿ ನೆಲೆಸಲು ಪ್ರಯತ್ನಪಟ್ಟರೂ ನನ್ನ ಮನಸ್ಸಿಗೆ ವಿಶ್ರಾಂತಿಯೇ ದೊರೆಯಲೊಲ್ಲದು. ವಿಶ್ರಾಂತಿಸುಖಕ್ಕೆ ತಕ್ಕುದಾದ ಸ್ಥಳವನ್ನರಸುತ್ತ ಪ್ರಕೃತ ಈ ಪ್ರದೇಶಕ್ಕೆ ಬಂದಿದ್ದೇನೆ. ॥೮॥

ಮಹಾಮಹಿಮರಾದ ನಿಮ್ಮೆಲ್ಲರ ದರ್ಶನ ನನಗೆ ಲಭಿಸಿತು. ಇದರಿಂದ ನನ್ನ ಮನಸ್ಸಿಗೆ ಬಹಳ ಮಟ್ಟಿಗೆ ಸಂತೋಷ ಉಂಟಾಗಿದೆ. ನಾನು ಸುಖ-ಸಂತೋಷಗಳಿಂದ ಇಲ್ಲಿಯೇ ವಾಸಿಸಬೇಕೆಂದು ಅಪೇಕ್ಷಿಸುತ್ತೇನೆ. ನನ್ನ ಈ ಪರಿವಾರದೊಂದಿಗೆ ಇಲ್ಲಿಯೇ ವಾಸಿಸಲು ನೀವೆಲ್ಲರೂ ನನಗೆ ಅವಕಾಶವನ್ನು ಕಲ್ಪಿಸಿಕೊಡಬೇಕು. ॥೯॥

ನಾನು ಅತಿಯಾಗಿ ಪುಣ್ಯಕರ್ಮವನ್ನಾಚರಿಸಿದ್ದೆನೆಂದೇ, ಇಂದು ತಮ್ಮಂತಹ

ಯತ್ರ ಸ್ಥಿತ್ವಾ ಪರಂ ಧ್ಯಾನಂ ಕರಿಷ್ಯೇ [1] ಜಗದೀಶಿತುಃ ॥೧೦॥

ಕ ಉವಾಚ :—

ಇತಿ ಶೂಲಿವಚಃ ಶ್ರುತ್ವಾ ಪ್ರೋಚುಃ ಸರ್ವೇ ಮಹರ್ಷಯಃ ।

ಋಷಯ ಊಚುಃ :—

ಸರ್ವೇಶ್ವರಸ್ಯ ತೇ ದೇವ ! ದಾತಾ ಸ್ಥಾನಸ್ಯ ಕೋ ಭವೇತ್ ? ॥೧೧॥

---

ಮಹಾಮುನಿಗಳ ಸಂದರ್ಶನ ನನಗೆ ಒದಗಿದೆ. ತಮ್ಮ ದರ್ಶನವು ಅತ್ಯಮೋಘ ವಾದುದು. ಸಂದರ್ಶಿಸುವವರ ಸಮಸ್ತ ಪಾತಕ ಪರ್ವತಗಳನ್ನೂ ಒಡನೆಯೇ ನಾಶಮಾಡತಕ್ಕದ್ದು. ಪ್ರಕೃತ, ನೀವೆಲ್ಲ ಉದಾರವಾದ ಅಂತಃಕರಣದಿಂದ ಇಲ್ಲಿ ವಾಸಿಸಲು ನನಗೆ ಅವಕಾಶವನ್ನು ಕೊಡುವಿರಾದರೆ, ಶಾಂತಮನಸ್ಸಿನಿಂದ ಇಲ್ಲಿ ಕುಳಿತು, ಜಗದೀಶ್ವರನ ಪರಮೋತ್ಕೃಷ್ಟವಾದ ಸಚ್ಚಿದಾನಂದಸ್ವರೂಪವನ್ನು ಧ್ಯಾನಿಸುತ್ತಿರುವೆನು. ॥೧೦॥

ಬ್ರಹ್ಮ :—

ಶೂಲಪಾಣಿಯು ಸರಳವಾಗಿ ಆಡಿದ ಈ ತಾತ್ತ್ವಿಕ ಮಾತುಗಳನ್ನುಕೇಳಿ, ಋಷಿ ಗಳೆಲ್ಲ ಪರಮಾಶ್ಚರ್ಯಭರಿತರಾದರು. ಮತ್ತು ದೇವನನ್ನು ಕುರಿತು ಹೀಗೆಂದರು.

ಋಷಿಗಳು :—

ಮಹೇಶ್ವರ! ಇದೇ ನೀನು ಈ ರೀತಿ ವಿನೋದವನ್ನು ಆರಂಭಿಸಿದೆ? ಚತುರ್ದಶ ಲೋಕಗಳಿಗೂ ಒಡೆಯನಾದ ನಿನಗೆ ನಾವು, ಕ್ಷುದ್ರ ಮಾನವರು ವಾಸಮಾಡಲು ಸ್ಥಾನವನ್ನು ಕೊಡಬೇಕೇ ? ನಿತ್ಯತೃಪ್ತನಾದ ನಿನಗೆ ದಾತನೊಬ್ಬನಿರುವನೇ ? ಇದೇನು ನಿನ್ನ ಲೀಲೆ ? ॥೧೧॥

[1] ವಿವರಣೆಗೆ ಪರಿಶಿಷ್ಟವನ್ನು ನೋಡಿರಿ.

ಕಲ್ಪದ್ರುಮಸ್ಯ ಕಃ ಕಾಮಃ ? ಕೇನಾಸೌ ಪರಿಪೂರ್ಯತೇ ! ?
ಕ್ಷೀರಾರ್ಣವತೃಷಾ ಕಂ ವಾ ಪಲ್ವಲೇನ ಗಮಿಷ್ಯತಿ ? ||೧೨||

ತವೈವ ರೂಪಂ ಪೃಥಿವೀ ತವ ವಶ್ಯಾತ್ರ ಸರ್ವದಾ ।
ತ್ವಮೀಶಃ ಸರ್ವಲೋಕಸ್ಯ ಯಥೇಚ್ಛಸಿ, ತಥಾ ಕುರು ||೧೩||

ದರ್ಶಯಾಮಃ ಸುರಪತೇ ! ಸುಂದರಂ ತವ ಚಾಶ್ರಮಮ್ ।
ನಾನಾ ವೃಕ್ಷ-ಲತಾಕೀರ್ಣಂ ರಮ್ಯವಾಪೀ-ಸರೋಜಲಮ್ ||೧೪||

---

ಭಜಕರು ಬಯಸುವ ಭೋಗ್ಯವಸ್ತುಗಳನ್ನೆಲ್ಲ ಒಡನೆಯೇ ಒದಗಿಸಿಕೊಡ ಬಲ್ಲ ಕಲ್ಪವೃಕ್ಷಕ್ಕೆ ಯಾವ ವಸ್ತುವಿನ ಬಗ್ಗೆಯಾದರೂ, ಎಂದಿಗಾದರೂ ಆಶೆ ಇರುವುದು ಸಾಧ್ಯವೇ ? ಅದಕ್ಕೆ ಆಶೆ ಇದ್ದಿತೆಂದೇ ಒಂದು ವೇಳೆ ಭಾವಿಸುವುದಾದರೂ, ಅದನ್ನು ತೃಪ್ತಿಪಡಿಸತಕ್ಕವರಾದರೂ ಯಾರಿದ್ದಾರೆ? ಸಕಲರ ತೃಷೆಯನ್ನೂ ತೃಪ್ತಿಪಡಿಸಬಲ್ಲ ಕ್ಷೀರಸಮುದ್ರಕ್ಕೆ ಬಾಯಾರಿಕೆಯುಂಟಾಗುವುದೆಂದರೇನು ? ಅದರ ನೀರಡಿಕೆಯನ್ನು ಒಂದು ಚಿಕ್ಕ ಕುಂಟೆಯ ಜಲದಿಂದ ಹೋಗಲಾಡಿಸಲು ಸಾಧ್ಯವಾದೀತೇ ? ||೧೨||

ನಮಗೆ ಸರ್ವಾತ್ಮನಾ ಆಧಾರವಾಗಿರುವ ಈ ಭೂದೇವಿಯೇ ನಿನ್ನ ಸ್ವರೂಪವಾಗಿರುವಳು. ಮತ್ತು ಅವಳು ಸರ್ವದಾ ನಿನಗೆ ವಶವರ್ತಿನಿಯಾಗಿಯೇ ಇರತಕ್ಕ ನೀನೋ, ಸಕಲ ಲೋಕಗಳನ್ನೂ ನಿಯಮನಮಾಡತಕ್ಕ ಪ್ರಭು. ಆದ್ದರಿಂದ ಯಾವ ರೀತಿ ನಡೆದರೆ ಯುಕ್ತವೆನಿಸುವುದೋ, ಅದರಂತೆ ನೀನು ನಡೆಯಬಹುದು. ನಿನ್ನನ್ನು ನಿಯಮಿಸತಕ್ಕವರಾರಾದರೂ ಇದ್ದಾರೆಯೇ ? ||೧೩||

ಸ್ವಾಮಿನ್, ಸುರೇಶ್ವರ ! ನೀನೆಂದಂತೆಯೇ ಆಗಲಿ, ನಿನ್ನ ವಸತಿಗೆ ಯೋಗ್ಯವಾದ ಪ್ರದೇಶವನ್ನು ನೋಡಿ, ಅಲ್ಲಿ ಆಶ್ರಮವನ್ನು ನಿರ್ಮಿಸೋಣ. ಇಲ್ಲೊಂದು ಅತಿ ಪವಿತ್ರವೂ, ಪ್ರಕೃತಿಮನೋಹರವೂ ಮತ್ತು ಪ್ರಶಾಂತವೂ ಆದ ಆಶ್ರಮವಿದೆ. ಅದು ನಿನ್ನ ಮನಸ್ಸಿಗೆ ರುಚಿಸುವುದಾದರೆ, ಹೋಗಿ ನೋಡಿಕೊಂಡು ಬರೋಣ. ನಾನಾವಿಧಗಳಾದ ವೃಕ್ಷ, ಲತೆಗಳು ಆ ಆಶ್ರಮದ ಸುತ್ತಲೂ ಬೆಳೆದು ನಿಂತಿವೆ. ಅಲ್ಲಿರತಕ್ಕ ಭಾವಿ, ಕೊಳ, ಸರೋವರಗಳ ಜಲವು ಅತಿ ಸ್ವಚ್ಛವೂ, ಸ್ವಾದುತಮವೂ ಆದುದು. ||೧೪||

ಸ್ವಾದು ಕಂದ.ಫಲೋಪೇತಂ ಮೃದು¹ಘಾಸಸಮನ್ವಿತಮ್ ॥೧೫॥

ಯದೀಚ್ಛಾತ್ರ ವಸ ತ್ರ್ಯಕ್ಷ! ಪರಿಪಾಲಯ ನೋಽಖಿಲಾನ್ ।

ಕ ಉವಾಚ :–

ತತ್ರಾವಸನ್ಮಹಾದೇವೋ ಗಂಗಾ-ಗೌರೀಗಣೈರ್ಯುತಃ ॥೧೬॥

ಕೈಲಾಸಾದಧಿಕಂ ಮೇನೇ ಮುನೇರಾಶ್ರಮಮಂಡಲಮ್ ।

---

ಜಲಚರ ಪಕ್ಷಿಗಳಾದ ಹಂಸ.ಕಾರಂಡ್ವ ಮೊದಲಾದುವು ಈ ಜಲಾಶಯಗಳಲ್ಲಿ ಆನಂದದಿಂದ ವಿಹರಿಸುತ್ತಲಿವೆ. ದೊಡ್ಡ ದೊಡ್ಡ ವೃಕ್ಷಗಳು ದಟ್ಟವಾಗಿ ಬೆಳೆದು ನಿಂದಿರುವುದರಿಂದ ಬಿಸಿಲಿನ ಬೇಗೆಗೆ ಇಲ್ಲಿ ಸ್ವಲ್ಪವೂ ಅವಕಾಶವೇ ಇರುವುದಿಲ್ಲ. ಈ ಪ್ರದೇಶದಲ್ಲಿ ಬಹು ರಸವತ್ತಾದ ಗೆಡ್ಡೆ.ಗೆಣಸುಗಳೂ, ಫಲ.ಪುಷ್ಪಗಳೂ ವಿಪುಲವಾಗಿ ದೊರೆಯುವವು. ಎಲ್ಲಿ ನೋಡಿದರೂ, ಎಳೆಯ ಹಸಿರು ಹುಲ್ಲು ಬೆಳೆದು ನಿಂದಿದೆ. ॥೧೫॥

ಭಗವನ್ ! ಈ ಪ್ರದೇಶವು ನಿಮ್ಮ ಮನಸ್ಸಿಗೆ ರುಚಿಸುವುದಾದರೆ, ಇಲ್ಲಿ ವಾಸವಾಗಿದ್ದು, ನಮ್ಮೆಲ್ಲರನ್ನೂ ಎಡೆಬಿಡದೆ ಪರಿಪಾಲಿಸಬೇಕು.

ಬ್ರಹ್ಮಾ :—

ಋಷಿಗಳು ತೋರಿಸಿದ ಆಶ್ರಮಪ್ರದೇಶ ಮಹಾದೇವನ ಮನಸ್ಸಿಗೆ ಬಹಳ ಹಿಡಿಸಿತು. ಅವರ ಸಮುಚಿತ ಸಲಹೆಯನ್ನು ಬಹಳ ಸಂತೋಷದಿಂದ ಮನ್ನಿಸಿ, ತನ್ನ ಪ್ರಿಯ ರಮಣಿಯರಾದ ಗಂಗಾ-ಗೌರೀದೇವಿಯರಿಂದಲೂ, ಪ್ರಮಥಗಣಗಳಿಂದಲೂ ಪರಿವೃತನಾಗಿ, ಆನಂದದಿಂದ ಅಲ್ಲಿ ವಾಸಮಾಡತೊಡಗಿದನು. ॥೧೬॥

ಮುನಿಗಳ ಆಶ್ರಮದ ಸ್ವಾಭಾವಿಕ ಸರಳ ಸೌಂದರ್ಯ, ಪ್ರಶಾಂತವಾತಾವರಣ, ಚಿತ್ರ-ವಿಚಿತ್ರ ಪಶು-ಪಕ್ಷಿಗಳು, ಕುಸುಮ–ಫಲಭರಿತ ಲತಾ–ವೃಕ್ಷಗಳು, ಅವುಗಳ ಸಾರವನ್ನು ಸೀತ್ಕರಿಸಲು ಝೇಂಕರಿಸುತ್ತ ಹಾರಾಡಿ ಬರುತ್ತಿರುವ ಮಧುರ ಮಧುಕರಗಳ ಸಮುದಾಯ, ಶುಕ.ಪಿಕ ಮಯೂರ ಮೊದಲಾದ ಪಕ್ಷಿಗಳು ಹೃದಯ

---

¹ ವಿವರಣೆಗೆ ಪರಿಶಿಷ್ಟವನ್ನು ನೋಡಿರಿ.

ತದಾಶ್ರಯೇಣ ತೇ ಸರ್ವೇ ಗೌತಮಾದ್ಯಾ ಮಹರ್ಷಯಃ ॥೧೭॥
ಚೇರುಸ್ತಪಾಂಸಿ ವಿವಿಧಾನ್ಯಾಸಂಸ್ತೇ ವಿಗತಜ್ವರಾಃ ।
ಶಿವೋಽಪಿ ತಪ ಆರೇಭೇ ಗಂಗಾ-ಗೌರೀಸಹಾಯವಾನ್ ॥೧೮॥
ತತೋ ಗಣಾಶ್ಚ ಸಾಮಗ್ರೀಂ ತಸ್ಯ ಚಕ್ರುರ್ಮಹಾತ್ಮನಃ ।
ಕಸ್ಮಿಂಶ್ಚಿತ್ಸಮಯೇ ಗೌರೀ ಪೃಚ್ಛತಿ ಸ್ಮ ಸದಾಶಿವಮ್ ॥೧೯॥

ವನ್ನೇ ಸೂರೆಗೊಳ್ಳುವಂತೆ ಉನ್ಮಾದಕ ಸ್ವನದಿಂದ ಗೈಯುವ ಕಲ-ಕಲ ನಾದ ಇವನ್ನು ನೋಡಿ, ಕೇಳಿದ ಮೇಲಂತೂ ಪರಮೇಶ್ವರನು ತನ್ನ ಮಾಯೆಯು ನಿರ್ಮಿಸಿದ್ದ ಈ ಚಮತ್ಕಾರ ಸೃಷ್ಟಿಗೆ ತಾನೇ ತಲೆದೂಗಿದನು. ಇಷ್ಟೇ ಅಲ್ಲ, ಆ ಪ್ರದೇಶವನ್ನು ಕೈಲಾಸಗಿರಿಯ ತಪ್ಪಲಿಗಿಂತಲೂ ಮಿಗಿಲಾದುದೆಂದು ಭಾವಿಸಿದನು. ಭಗವಂತನ ಕೃಪಾಶ್ರಯದಲ್ಲಿ ಭಕ್ತರಾದ ಗೌತಮಾದಿ ಮಹರ್ಷಿಗಳು ॥೧೭॥

ಅನೇಕ ಬಗೆಯ ತಪಸ್ಸನ್ನು ಆನಂದದಿಂದ ಅನುಷ್ಠಿಸಲಾರಂಭಿಸಿದರು. ಇದುವರೆಗೂ ಅವರ ಅಂತರಂಗವನ್ನು ಕೊರೆಯುತ್ತಿದ್ದ ಭೀತ್ಯಾತಂಕಗಳು ಈಗ ಇಲ್ಲವಾದವು. ಇತ್ತ, ಪರಶಿವನು ಸಹ ಗಂಗಾ-ಗೌರಿಯರ ನೆರವಿನಿಂದ ತಾನೂ ತಪಸ್ಸನ್ನು ಆಚರಿಸಲಾರಂಭಿಸಿದನು. ॥೧೮॥

ದೇವನು ತಪೋಽನುಷ್ಠಾನವನ್ನು ಆರಂಭಿಸಿದಕೂಡಲೇ, ಪ್ರಮಥಗಣಗಳೆಲ್ಲ ಪೂಜೋಪಕರಣಗಳಾದ ಗಂಧ-ಮಾಲ್ಯಾದಿಗಳು, ಪಾಕಸಾಧನಗಳಾದ ನೀವಾರ, ಧಾನ್ಯ, ಗೆಡ್ಡೆ-ಗೆಣಸುಗಳು, ಪರಿಪಕ್ವ ಹಾಗೂ ಸ್ವಾದುಮಯ ನಾನಾಜಾತಿಯ ಹಣ್ಣುಗಳು ಇವನ್ನು ಕಾಲ ಕಾಲಕ್ಕೆ ಸರಿಯಾಗಿ ತಂದು ಒದಗಿಸುತ್ತ, ಮಹಾತ್ಮನಾದ ನೀಲಕಂಠನಿಗೆ ಸೇವೆಯನ್ನು ಸಲ್ಲಿಸಲಾರಂಭಿಸಿದವು. ಹೀಗೆಯೇ ಕಾಲವು ಕ್ರಮಿಸುತ್ತಿರುವಾಗ, ಒಂದು ಸಮಯ ಗೌರಿಯು ಸದಾಶಿವನು ಬಹಿರ್ಮುಖನಾದ ಸು-ಸಂಧಿಯನ್ನು ಸಾಧಿಸಿ, ಈ ರೀತಿ ಪ್ರಶ್ನಿಸತೊಡಗಿದಳು. ॥೧೯॥

ಗೌರ್ಯುವಾಚ :—

ತ್ವಮೇವ ಕರ್ತಾ ಹರ್ತಾ ತ್ವಂ ಪಾತಾ ವಿಶ್ವಸ್ಯ ಶಂಕರ ! ।
[1]ಅಷ್ಟಮೂರ್ತಿರಮೂರ್ತಿಸ್ತ್ವಂ ಸರ್ವೇಶಃ ಸರ್ವಭಾವನಃ ॥೨೦॥

ಸರ್ವಶ್ರೇಷ್ಠತಮಸ್ತ್ವಂ ಚ ಸರ್ವೇಷಾಂ ಸರ್ವಕಾಮದಃ ।
[2]ಅಷ್ಟಾನಾಂ ಕರ್ಮಣಾಂ ದೇವ ! ಫಲದಾತಾಖಿಲಾರ್ಥವಿತ್ ॥೨೧॥

ತ್ವತ್ತಃ ಶ್ರೇಷ್ಠತಮಃ ಕೋಽಸ್ತಿ? ಯಂ ತ್ವಂ ಧ್ಯಾಯಸಿ ತಂ ವದ ।
ದೇವಾಶ್ಚ ಮುನಯೋ ನಾಗಾ ಯಕ್ಷ-ಮಾನುಷ-ರಾಕ್ಷಸಾಃ ॥೨೨॥

---

ಗೌರೀ :—

ಭಗವನ್, ಲೋಕಶಂಕರ ! ವಿವಿಧವಾದ ಈ ವಿಶ್ವವನ್ನು ಸೃಜಿಸುವವನೂ, ಪರಿಪಾಲಿಸುವವನೂ ಹಾಗೂ ಉಪಸಂಹರಿಸುವವನೂ ನೀನೇ ಆಗಿರುವೆ. ಅಷ್ಟಮೂರ್ತಿಗಳ ಸ್ವರೂಪದಿಂದ ನೀನು ತೋರಿಬರುವೆಯಾದರೂ, ಸ್ವಯಮಾಕಾರ ರಹಿತನಾಗಿರುವೆ. ಸಕಲ ಚರಾಚರ ವಸ್ತುಗಳಿಗೂ ಅಂತರಾತ್ಮನಾಗಿರುವುದರಿಂದ ಎಲ್ಲವನ್ನೂ ನಿಯಮನ ಮಾಡುವೆ. ಆದುದರಿಂದಲೇ ಎಲ್ಲರೂ ನಿನ್ನನ್ನು 'ಸರ್ವೇಶ್ವರ' ಎಂದು ಕರೆಯುತ್ತಾರೆ. ಯಾವುದನ್ನೇ ನಾವು ಭಾವಿಸಿದರೂ ಅದು ಪರಮಾರ್ಥತಃ ನಿನ್ನ ಸ್ವರೂಪಕ್ಕೆ ಹೊರತಾಗಿಲ್ಲ ॥೨೦॥

ಶ್ರೇಷ್ಠರೆನಿಸುವವರಿಗೆಲ್ಲ ನೀನು ಶ್ರೇಷ್ಠತಮನಾಗಿರುವೆ. ಎಲ್ಲರ ಕಾಮಿತಗಳನ್ನೂ ಒಡನೆಯೇ ನೀನು ಪೂರ್ಣಗೊಳಿಸತಕ್ಕವನು. ಎಂಟು ಬಗೆಯ ಕರ್ಮಗಳಿಗೂ ದೇವ ! ಸತ್ಫಲಗಳನ್ನು ಕೊಡತಕ್ಕನೂ ನೀನೇ. ಯಾವ ವಿಷಯವೇ ಆಗಲಿ, ಅದು ನಿನಗೆ ಅರಿವಾಗದೇ ಇರುವುದೇ ಇಲ್ಲ. ಆದುದರಿಂದಲೇ ತಿಳಿದವರು ನಿನ್ನನ್ನು 'ಸರ್ವಜ್ಞ' ಎನ್ನುವರು. ॥೨೧॥

ಎಂದ ಬಳಿಕ, ನಿನಗಿಂತಲೂ ಶ್ರೇಷ್ಠತಮನಾದವನು ಮತ್ತೆ ಯಾರಿರುವರು ? ಹಾಗೆ ಯಾರಾದರೂ ನಿನಗಿಂತಹ ಹಿರಿಯರಾದವರಿದ್ದಿದ್ದರೆ, ಅವರನ್ನು ನೀನು ಧ್ಯಾನಿ

---

ವಿವರಣೆಗೆ ಪರಿಶಿಷ್ಟವನ್ನು ನೋಡಿರಿ.

**ಯತ್ಸತ್ತ್ವಯಾಖಿಲಂ ವಿಶ್ವಂ ತ್ವತ್ತಃ ಶ್ರೇಷ್ಠತಮಸ್ತು ಕಃ ? ।**
**ತ್ರಯಸ್ತ್ರಿಂಶತ್ಕೋಟಿದೇವೈಃ ಪೂಜ್ಯಸೇ ಸಿದ್ಧ–ಸಾಧಕೈಃ ॥೨೩॥**

**ಕ ಉವಾಚ :—**

**ಇತಿ ತದ್ವಚನಂ ಶ್ರುತ್ವಾ ಶಿವೋ ವಚನಮಬ್ರವೀತ್ ।**

**ಶ್ರೀ ಭಗವಾನುವಾಚ :—**

**ಸಮ್ಯಕ್ಪೃಷ್ಟಂ ತ್ವಯಾ ದೇವಿ ! ತುಷ್ಟೋ ವಾಕ್ಯೇನ ತೇಽನಘೇ ! ॥೨೪॥**

ಸಬಹುದಿತ್ತು. ಆದುದರಿಂದ ಈಗ ನೀನು ಯಾರನ್ನು ಧ್ಯಾನಿಸುತ್ತಿರುವೆ ? ಎಂಬು ದನ್ನು ನನಗೆ ಹೇಳು. ಮೂವತ್ತು ಮೂರು ಕೋಟಿ ದೇವತೆಗಳು, ಮುನಿಗಳು ಪಾತಾಳಲೋಕವಾಸಿಗಳಾದ ಸರ್ಪಜಾತಿಯವರು, ಯಕ್ಷರು, ಮನುಷ್ಯರು, ರಾಕ್ಷಸರು ॥೨೨॥

ಇವರೇ ಮೊದಲಾದವರು ಮಹಾತ್ಮನಾದ ನಿನ್ನ ಅಸ್ತಿತ್ವವನ್ನೇ ಅವಲಂಬಿಸಿ ಕೊಂಡು ಉಜ್ಜೀವನಗೊಂಡಿರುವರೋ, ಅಂತಹ ನಿನಗಿಂತಲೂ ಶ್ರೇಷ್ಠತಮನೆನಿಸಿ ದವನು ಮತ್ತೆ ಯಾರಿದ್ದಾರೆ? ಮೂವತ್ತು ಮೂರು ಕೋಟಿ ದೇವತೆಗಳೂ ನಿನ್ನನ್ನು ಭಕ್ತಿಯಿಂದ ಅರ್ಚಿಸುತ್ತಾರೆ. ತಪಸ್ಸಿದ್ಧರೂ, ಹಾಗೂ ಸಾಧಕರೂ ಆದವರಿಗೆಲ್ಲ ನೀನು ಧ್ಯೇಯವಸ್ತುವಾಗಿರುವೆ. ಎಂದ ಮೇಲೆ, ನೀನು ಧ್ಯಾನಿಸುತ್ತಿರುವುದು ಯಾರನ್ನು? ಈ ವಿಷಯದಲ್ಲಿ ನನಗೆ ಬಹಳ ಕುತೂಹಲ ಉಂಟಾಗಿದೆ. ಅದನ್ನು ತಿಳಿಸಬೇಕು. ॥೨೩॥

ಬ್ರಹ್ಮಾ:—

ಮಹಾದೇವಿಯು ಈ ರೀತಿಯಾಗಿ ಪ್ರಶ್ನಿಸಿದುದನ್ನು ಕೇಳಿ, ಸಕಲ ಲೋಕ ಶರಣನಾದ ಮಹಾದೇವನು ಅವಳನ್ನು ಕುರಿತು ಹೀಗೆಂದು ಉತ್ತರಿಸಿದನು.

ಶ್ರೀ ಭಗವಾನ್ :—

ದೇವಿ ! ನೀನು ಪವಿತ್ರಾತ್ಮಳು. ನಿನ್ನ ಪ್ರಶ್ನೆ ಅಸಮಂಜಸವಾದುದಲ್ಲ,

ಶೃಣುಷ್ವಾವಹಿತಾ ದೇವಿ ! ವಿಸ್ತರೇಣ ಬ್ರವೀಮಿ ತೇ ।
ಅದ್ಯಾಪಿ ನ ಕಥಂ ಜ್ಞಾತೋ ಯಂ ಧ್ಯಾಯಾಮಿ ಸುರೇಶ್ವರಿ ! ॥೨೫॥

ತತ್ಸ್ವರೂಪಂ ನಿರೂಪಿಷ್ಯೇ ತವ ಪ್ರೀತಿಚಿಕೀರ್ಷಯಾ ।
ಲೋಕಾನಾಮುಪಕಾರಾಯ ಸಂಸಾರೋತ್ತಾರಣಾಯ ಚ ॥೨೬॥

ಯೋ ದೇವಃ ಸರ್ವಭೂತೇಷು ಗೂಢಶ್ಚರತಿ ವಿಶ್ವಕೃತ್ ।
ಯೋಽನಂತಶೀರ್ಷಾನಂತ ಶ್ರೀರನಂತಚರಣಃ ಸ್ವರಾಟ್ ॥೨೭॥

---

ಸಾಧುಗಳೂ, ಬುಭುತ್ಸುಗಳೂ ಕೇಳಬೇಕಾದುದನ್ನೇ ನೀನೂ ಕೇಳಿದೆ. ಇದರಿಂದ ನನಗೆ ಬಹಳ ಸಂತೋಷ ಉಂಟಾಗಿದೆ. ॥೨೪॥

ದೇವಿ ! ನಿನಗೆ ಈ ಸಂಗತಿಯನ್ನೆಲ್ಲ ವಿಸ್ತಾರವಾಗಿಯೇ ತಿಳಿಸಿ ಹೇಳುವೆನು. ನೀನು ಏಕಾಗ್ರಚಿತ್ತಳಾಗಿ ಇದನ್ನು ಅವಧರಿಸು. ಸುರೇಶ್ವರಿ ! ಇದೇನು ? ನೀನು ಆಡುವುದು ಅತ್ಯಾಶ್ಚರ್ಯಕರವಾಗಿದೆ. ನನ್ನೊಂದಿಗೆ ಇಷ್ಟು ಸು-ದೀರ್ಘಕಾಲ ಅರ್ಧದೇಹರೂಪದಿಂದ ಇರುವೆಯಾದರೂ, 'ನಾನು ಯಾರನ್ನು ಧ್ಯಾನಿಸುತ್ತಿರುವೆನು' ಎಂಬ ಅಂಶವೇ ನಿನಗೆ ಗೊತ್ತಾಗಲಿಲ್ಲವೇ ? ಇದಕ್ಕೆ ಕಾರಣವಾದರೂ ಏನಿರಬಹುದು ?

ಇರಲಿ, ನನ್ನ ಧ್ಯೇಯವಸ್ತುವಿನ ತಾತ್ತ್ವಿಕ ಸ್ವರೂಪವನ್ನು ನಿನಗೆ ನಿರೂಪಿಸುವೆನು. ನಿನಗೆ ಸಂತೋಷವನ್ನುಂಟುಮಾಡುವುದಕ್ಕಿಂತ ಹೆಚ್ಚಿನ ಪ್ರಿಯಕರವಾದ ಕೆಲಸ ನನಗೆ ಮತ್ತಾವುದಿದೆ ? ಕೇಳು. ಸಂಸಾರಪಂಕನಿಮಗ್ನರಾದ ಪ್ರಾಣಿಗಳನ್ನು ಉದ್ಧರಿಸಲಿಕ್ಕಾಗಿಯೂ, ದುಷ್ಟಚೇತನರ ಹಾವಳಿಯನ್ನು ತಪ್ಪಿಸಿ, ಪ್ರಾಣಿವರ್ಗವು ಆಯಾ ಭೋಗಗಳನ್ನು ಭೋಗಿಸುವಂತೆ ಅನುಕೂಲಮಾಡಿಕೊಡುವುದಕ್ಕಾಗಿಯೂ ಯಾವ ಸಚ್ಚಿದಾನಂದ ವಸ್ತು ಪಂಚ ಮಹಾಭೂತಗಳಲ್ಲೂ, ಮತ್ತು ಸಕಲ ಜೀವರಾಶಿಯಲ್ಲೂ ಒಳಹೊಕ್ಕು, ಆಯಾ ಕೆಲಸಗಳನ್ನು ಮಾಡುವಂತೆ ಪ್ರೇರಿಸುವುದೋ, ಆ ವಿಶ್ವಕರ್ತನು 'ಸಹಸ್ರಶೀರ್ಷಾ ಪುರುಷಃ ॥ ಸಹಸ್ರಾಕ್ಷಃ ಸಹಸ್ರಪಾತ್' ಮೊದ

ಅನಂತಶ್ರುತಿನೇತ್ರಶ್ಚಾನಂತನಾಮಾ ಗುಣಾತಿಗಃ ।
ಅನಂತರೂಪೀ ಯೋ ದೇವೋ ವೇದಕರ್ತಾಖಿಲಾರ್ಥದಃ ॥೨೮॥

ಯೋಽನಂತಶಕ್ತಿರ್ವಿಶ್ವಾತ್ಮಾನುಪಮೇಯಃ ಪುರಾತನಃ ।
ನೋಪಮಾಶೇಷಚಂದ್ರಾಬ್ಧಿವ್ಯೋಮ್ನಾಂ ನಾರಾಯಣಸ್ಯ ಚ ॥೨೯॥

ಲಾಗಿ ವೇದವು ಸ್ತುತಿಸುತ್ತಿರುವಂತೆ ಎಣಿಸಲಾರದಷ್ಟು ತಲೆಗಳುಳ್ಳವನಾಗಿಯೂ, ಅನಂತವಿಭವ ಉಳ್ಳವನಾಗಿಯೂ, ಅನಂತ ಚರಣನಾಗಿಯೂ, ಸರ್ವತಂತ್ರ ಸ್ವತಂತ್ರನಾಗಿಯೂ ಇರುವನು. ॥೨೬-೨೭॥

ದೇವನು ಅನಂತ ಶ್ರೋತ್ರಗಳುಳ್ಳವನು. (ಎಂದರೆ ಎಲ್ಲರ ಶ್ರೋತ್ರಗಳೂ ದೇವನವೇ ಆಗಿವೆ. ಇದರಂತೆಯೇ ಸರ್ವತ್ರ ಅರ್ಥಮಾಡತಕ್ಕದ್ದು.) ಅನೇಕ ನೇತ್ರಗಳುಳ್ಳವನು. ಅನಂತ ನಾಮಧೇಯಗಳುಳ್ಳವನು. ಸತ್ತ್ವ, ರಜಸ್ತಮೋಗುಣಗಳನ್ನೂ ಅವನು ಮೀರಿದವನು. ಅನಂತರೂಪಿಯಾದವನು. ಆ ದೇವನು ಸಕಲ ರಹಸ್ಯಗರ್ಭಿತವಾದ ವೇದರಾಶಿಯನ್ನೇ ಶ್ವಾಸೋಚ್ಛ್ವಾಸಗಳಂತೆ ಉಸುರಿದವನು. ಭಿನ್ನ ವಿಭಿನ್ನ ಮನೋವೃತ್ತಿಯುಳ್ಳ ಯಾವ ಭಕ್ತನೇ ಆಗಲಿ, ಅವನು ಯಾವುದನ್ನೇ ಬಯಸಲಿ, ಅವನ್ನೆಲ್ಲ ದೇವನು ತಡೆಯಿಲ್ಲದೆ ಅನುಗ್ರಹಿಸತಕ್ಕವನು. ॥೨೮॥

ಅವನ ಶಕ್ತಿಯ ರೂಪದ ಇಯತ್ತೆ (ಅಳತೆ) ಯನ್ನು ಅಳೆದು ತಿಳಿಯಲಿಕ್ಕೆ ಯಾರಿಂದಲೂ ಶಕ್ಯವಾದ ಸಂಗತಿಯಲ್ಲ. ದೇವನು ಆದುದರಿಂದಲೇ 'ಅನಂತಶಕ್ತಿಯುತ' ಎಂದು ಕರೆಯಲ್ಪಡುತ್ತಾನೆ. ಅಣು, ರೇಣು, ತೃಣ, ಕಾಷ್ಠಗಳಲ್ಲೂ ಸತ್ತಾರೂಪವಾಗಿ ಅಡಗಿರುವುದರಿಂದ ಸರ್ವಕ್ಕೂ ಆತ್ಮನಾಗಿದ್ದಾನೆ. ಅವನಿಗಿಂತಲೂ ಹಿರಿಯನಾದವನು ಮತ್ತೊಬ್ಬನಿರುವುದಿಲ್ಲ. ಪರಮಾತ್ಮನಾದ ದೇವನಿಗೆ ಹೋಲುವವಸ್ತುವು ಯಾವುದೊಂದೂ ಇರುವುದೇ ಇಲ್ಲ. ನಮ್ಮ ಅನುಭವದಲ್ಲಿ ಅತ್ಯಂತ ಶ್ರೇಷ್ಠ, ಆಹ್ಲಾದಕರ ಹಾಗೂ ವಿಶಾಲಗಳಾದ ಚಂದ್ರ, ಸಮುದ್ರ, ಅಂತರಿಕ್ಷಮಂಡಲ, ಶ್ರೀಮನ್ನಾರಾಯಣ ॥೨೯॥

ಭಾರತಸ್ಯ ಚ ವೇದಸ್ಯ ವ್ಯಾಸಸ್ಯ ಚ ಮುನೇರಪಿ ।
ಯತೋ ಜೀವಾ ಅನಂತಾಶ್ಚ ಜಾಯಂತೇಽಂಬುಮುಚೋ ಯಥಾ

ಜಲಧಾರಾ ಯಥಾಗ್ನೇರ್ವಾ ವಿಸ್ಫುಲಿಂಗಾ ವಮಂತಿ ಹಿ ।
ಬ್ರಹ್ಮವಿಷ್ಣುಶಿವಾದೀನಾಂ ಗುಣತ್ರಯಪ್ರದಃ ಪ್ರಭುಃ ॥೩೦॥

ಸೃಷ್ಟಿಪಾಲನಸಂಹಾರಾನಾಜ್ಞಾಪಯತ ತ್ರೈರಿಹ ।
ತತೋ ಗುಣವಿಭಾಗೇನ 'ಗುಣೇಶ' ಇತಿ ಪಪ್ರಥೇ ॥೩೧॥

---

ಕಾವ್ಯ ಗ್ರಂಥಗಳಲ್ಲೆಲ್ಲ ಮಹತ್ತ್ವಪೂರಿತವಾದ ಮಹಾಭಾರತ, ಅಳತೆಗೆ ಸಿಲುಕದ ಜ್ಞಾನ ಭಂಡಾರವೆನಿಸಿದ ವೇದಗಳು, ಮುನಿವರ್ಯ; ವೇದವ್ಯಾಸ ಇವರೆಲ್ಲರಿಗಿಂತಲೂ ಪರಮಾತ್ಮನು ಅತ್ಯಧಿಕ ಮಹಿಮಾಶಾಲಿಯಾದುದರಿಂದ ಇವರಾರನ್ನೂ ದೇವನಿಗೆ ಉಪಮಾನವನ್ನಾಗಿ ಕೊಡಲು ಸಾಧ್ಯವಿರುವುದಿಲ್ಲ. ವರ್ಷಾಕಾಲದಲ್ಲಿ ಜೀವನದಿಗಳಿಂದ ಜಲಪ್ರವಾಹವು ಏಕಪ್ರಕಾರವಾಗಿ ಬರುತ್ತಿರುವಂತೆ ಸಕಲ ಜಗಜ್ಜೀವಾತುವಾದ ಜಗದೊಡೆಯ ಗುಣೇಶನ ಮೂಲಕ ಜೀವರು ಅಸಂಖ್ಯಾತರಾಗಿ ಹೊರಹೊಮ್ಮುವರು. ॥೩೦॥

ಪರ್ಜನ್ಯದಿಂದ ಜಲವು ಹೇಗೆ ಧಾರಾಕಾರವಾಗಿ ಸುರಿಯುವುದೋ, ಅಗ್ನಿಜ್ವಾಲೆಯಿಂದ ಹೇಗೆ ಕಿಡಿಗಳು ಹೊರಹೊಮ್ಮುವುವೋ ಅದರಂತೆ ಪರಮಾತ್ಮನಿಂದ ಬ್ರಹ್ಮಾ, ವಿಷ್ಣು, ಶಿವರೂ., ಇಂದ್ರಾದಿ ದೇವತೆಗಳೂ ಮತ್ತು ಪಾತಾಳಲೋಕವಾಸಿಗಳಾದ ಸರ್ಪಗಳೂ ಒಮ್ಮೆಲೇ ಹೊರಹೊಮ್ಮಿಬರುವುವು. ದೇವೋತ್ತಮರೆನಿಸಿದ ತ್ರಿಮೂರ್ತಿಗಳಿಗೆ ಗುಣಗಳನ್ನು ವಿಭಜಿಸಿ ಕೊಟ್ಟು, ತನ್ಮೂಲಕ ಅವರು ಆಯಾ ಕೆಲಸಗಳನ್ನು ನಿರ್ವಹಿಸುವಂತೆ ಮಾಡಿದವನು ಮಹಾಪ್ರಭು, ಅವನೇ ಪರಬ್ರಹ್ಮನು. ॥೩೦॥

ದೇವನ ಆಜ್ಞಾನುಸಾರವಾಗಿ ಆ ತ್ರಿಮೂರ್ತಿಗಳು ಸೃಷ್ಟಿ,ಸಂರಕ್ಷಣ ಹಾಗೂ

ತಮೀಮಮಂ ಪರಮಾತ್ಮಾನಂ ಪರಾತ್ಪರತರಂ ವಿಭುಮ್ ।
ಗುಣೇಶಮನಿಶಂ ಧ್ಯಾಯೇ ಪರಬ್ರಹ್ಮಸ್ವರೂಪಿಣಮ್ ॥೩೩॥

ಗೌರ್ಯುವಾಚ :—

ತುಷ್ಟಾಹಂ ತವ ವಾಕ್ಯೇನ ಪ್ರತ್ಯಯೋ ಮೇ ಕಥಂ ಭವೇತ್ ? ।
ತಂ ಗುಣೇಶಂ ಕಥಂ ಸಾಕ್ಷಾತ್ಕರೋಮಿ ಚ ಭಜಾಮಿ ಚ ॥೩೪॥

---

ಸಂಹಾರರೂಪ ಕಾರ್ಯಗಳನ್ನು ನಿಯಮಿತ ರೀತಿಯಲ್ಲಿ ನಿರ್ವಹಿಸುತ್ತಲಿರುವರು. ದೇವನು ಅವರವರ ಕರ್ಮಾನುಗುಣವಾಗಿ ಸತ್ತ್ವಾದಿಗುಣಗಳನ್ನು ವಿಭಜಿಸಿದವ ನಾದುದರಿಂದ ಅವನು 'ಗುಣೇಶ' ಎಂಬ ದಿವ್ಯಾಭಿಧಾನದಿಂದ ಖ್ಯಾತಿಯನ್ನು ಪಡೆದಿರುವನು. ॥೩೨॥

ಪರವಸ್ತುಗಳಿಗೂ ಪರತಮವಾದ ಸರ್ವವ್ಯಾಪಿ, ಆ ಪರಮಾತ್ಮನನ್ನು ನಾನು ಅನವರತ ಧ್ಯಾನಿಸುತ್ತಿರುವೆನು. ಅವನೇ 'ಗುಣೇಶ' ಎನ್ನುವವನು. ಅವನೇ ಪರಬ್ರಹ್ಮಸ್ವರೂಪಿಯಾದವನು. ॥೩೩॥

ಗೌರೀ :—

ಭಗವನ್, ಭಗನೇತ್ರಭಂಜಕನೇ ! ನಿನ್ನ ಸದುಪದೇಶ ವಾಕ್ಯಾಮೃತವನ್ನು ಪಾನಮಾಡಿ ನನಗೆ ಬಹಳ ಸಂತೋಷ ಉಂಟಾಗಿರುತ್ತದೆ. ಆದರೆ, ಕಣ್ಣಿಗೆ ಕಾಣದ, ಕಿವಿಗೆ ಕೇಳದ, ಸ್ಪರ್ಶಕ್ಕೆ ಗೋಚರಿಸದ, ಮನಸ್ಸಿಗೂ ಅಳವಡದಂತಹ ವಸ್ತು ಒಂದಿದೆ. ಅದೇ ಪರಬ್ರಹ್ಮ, ಅದನ್ನೇ ನಾನು ಆರಾಧಿಸುತ್ತಿರುವೆನು. ಎಂದು ಹೇಳಿದರೆ, 'ಆಕಾಶ ಪುರಾಣ'ದಂತಹ ಈ ಕಥನದಲ್ಲಿ ನನಗೆ ನಂಬುಗೆ ಯಾದರೂ ಹೇಗೆ ಉಂಟಾಗಬೇಕು ? ಆ 'ಗುಣೇಶ'ನು ನನಗೆ ಸಾಕ್ಷಾತ್ಕಾರ ವಾಗುವಂತಾದರೆ, ಆಗ ನನಗೆ ಪ್ರತೀತಿ ಉಂಟಾದೀತು. ನಾನು ಆ ದೇವನನ್ನು ಪ್ರತ್ಯಕ್ಷೀಕರಿಸಿಕೊಳ್ಳುವುದಕ್ಕೆ ತಕ್ಕಂತಹ ಉಪಾಯವನ್ನು ದಯೆ ಇಟ್ಟು ತಿಳಿಸಬೇಕು. ಅವನನ್ನು ಹೇಗೆ ಭಜಿಸಲಿ, ? ಮತ್ತು ಯಾವ ಪ್ರಯತ್ನದಿಂದ ಸಾಕ್ಷಾತ್ಕಾರಮಾಡಿ ಕೊಳ್ಳಲಿ ? ॥೩೪॥

ತಮುಪಾಯಂ ವದ ವಿಭೋ! ಯದಿ ತುಷ್ಟೋಽಸಿ ಶಂಕರ! ।

ಕ ಉವಾಚ :—

ಇತಿ ತಸ್ಯಾ ವಚಃ ಶ್ರುತ್ವಾ ಪುನರೂಚೇ ಮಹೇಶ್ವರಃ ॥೩೫॥

ಶ್ರೀ ಭಗವಾನುವಾಚ :—

ಏಕನಿಷ್ಠತಯಾ ಯಾವತ್ತಪಸಾರಾಧಿತೋ ನ ತೇ ।
ತಾವತ್ಪ್ರತ್ಯಕ್ಷತಾಂ ದೇವಿ! ಕಥಂ ಯಾಸ್ಯತಿ ಸ ಪ್ರಭುಃ? ॥೩೬॥

ದೇವ್ಯುವಾಚ :—

ಕಥಂ ಮಯಾ ತಪಃ ಕಾರ್ಯಂ? ಕೇನೋಪಾಯೇನ ವಾ ವಿಭೋ! ।

---

ವಿಭೋ, ಪ್ರಾಣನಾಥ! ನೀನು ನನ್ನ ವಿಷಯದಲ್ಲಿ ಪರಿತುಷ್ಟನಾಗಿರುವುದೇ ನಿಜವಾಗಿದ್ದರೆ, ಇದಕ್ಕೆ ತಕ್ಕ ಉಪಾಯವನ್ನು ತಿಳಿಸು.

ಬ್ರಹ್ಮಾ :—

ತನ್ನ ಪಟ್ಟದರಸಿಯು ಹೀಗೆ ಹೇಳಿದುದನ್ನು ಕೇಳಿ, ಮಹೇಶ್ವರನು ಪರಮೇಶ್ವರಿಯನ್ನು ಕುರಿತು ಪುನಃ ಹೀಗೆ ನುಡಿದನು. ॥೩೫॥

ಶಂಕರ :—

ದೇವಿ! ಪರಮಾತ್ಮನನ್ನು ತದೇಕ ನಿಷ್ಠೆಯಿಂದ ಅಹರ್ನಿಶಿ ಧ್ಯಾನಿಸುವೆಯಾದರೆ, ದೇವನು ಖಂಡಿತವಾಗಿಯೂ ಪ್ರಸನ್ನನಾಗಿ ದರ್ಶನವನ್ನೀಯುವನು. ಇದರಲ್ಲಿ ಸಂದೇಹವೇ ಇರುವುದಿಲ್ಲ. ತಪಸ್ಸಿನ ಏಕಾಗ್ರತೆಯಲ್ಲಿ ನ್ಯೂನತೆಯುಂಟಾಗುವುದಾದರಾಗಲೀ ಅಥವಾ ಧ್ಯಾನಿಸದೆಯೇ ಇದ್ದರಾಗಲೀ ದೇವನು ಹೇಗೆ ಪ್ರತ್ಯಕ್ಷನಾದಾನು? ॥೩೬॥

ದೇವೀ :—

ಎನ್ನ ಜೀವನಸರ್ವಸ್ವ, ವಿಭೋ! ತಪಸ್ಸನ್ನಾಚರಿಸಬೇಕೆಂದು ಅ

ಯದಿ ತುಷ್ಟೋಽಸಿ ದೇವೇಶ ! ವದ ಸತ್ಯಂ ಮಮಾನಘ ! ॥೩೭॥

**ಕ ಉವಾಚ :—**

**ಏವಂ ತದಾದರಂ ಬುದ್ಧ್ವಾ ಪ್ರೋವಾಚ ಗಿರಿಜಾಂ ಹರಃ ।**
**ಯೇನ ತಸ್ಮಾ ಭವೇತ್ಪ್ರೀತೋ ಗುಣೇಶೋ ಗುಣವಲ್ಲಭಃ ॥೩೮॥**

**ಏಕಾಕ್ಷರಮನುಂ ತಸ್ಯೈ ದದೌ ಸಮ್ಯಕ್ ಹರಸ್ತದಾ ।**

ಕೊಡಿಸಿದೆಯಲ್ಲವೇ? ಆ ತಪೋಽನುಷ್ಠಾನವನ್ನು ಮಾಡುವ ಬಗೆಯೊದರೂ ಹೇಗೆ? ಅನುಷ್ಠಾನಕಾಲದಲ್ಲಿ ಯಾವ ನಾಮವನ್ನು ಅನುಸಂಧಾನಮಾಡಬೇಕು? ಅಪಹತ ಪಾಪ್ಮ, ದೇವೇಶ ! ನನ್ನ ವಿಷಯದಲ್ಲಿ ನೀನು ತುಷ್ಟನಾಗಿದ್ದರೆ, ದಯೆ ಇರಿಸಿ ಮೇಲ್ಕಂಡ ವಿವರಗಳನ್ನು ಉಪದೇಶಿಸಬೇಕೆಂದು ಬೇಡುವೆನು. ವಾಸ್ತವವಾಗಿ ನೀನೇ ಜಗದೀಶ್ವರನಾಗಿದ್ದು, ವಿನೋದಕ್ಕಾಗಿ ' ಬೇರೊಬ್ಬ ಈಶ್ವರನಿರುವನು ' ಎಂದು ಹೇಳಿ, ನನ್ನನ್ನು ಮೋಹಗೊಳಿಸಬೇಡ. ನಿಜಾಂಶವನ್ನು ವಿವರಿಸಬೇಕು. ॥೩೭॥

ಬ್ರಹ್ಮಾ :—

ಪಾರ್ವತೀ ದೇವಿಗಿರುವ ಆತ್ಮಾತುರ, ಕುತೂಹಲಗಳನ್ನು ಕಂಡು ಕಪರ್ದಿಯು ತಲೆದೂಗಿದನು. ಯಾವ ಮಂತ್ರವನ್ನು ಉಪದೇಶಿಸಿದರೆ ಅವಳನ್ನು ಅನುಷ್ಠಾನಕ್ಕೆ ಪ್ರಚೋದನಗೊಳಿಸಿದಂತಾಗುವುದೋ, ಯಾರ ದಿವ್ಯ ನಾಮವನ್ನು ಜಪಿಸಿದರೆ, ದೇವನನ್ನು ಪ್ರತ್ಯಕ್ಷಗೊಳಿಸಿಕೊಳ್ಳಬಹುದೋ, ಯಾವ ಮಂತ್ರದಿಂದ ಗುಣಾಧೀಶ್ವರನಾದ ಗುಣೇಶನು ಅತ್ಯಂತ ಸಂತುಷ್ಟನಾಗುವನೋ, ಅದನ್ನು ದೇವಿಗೆ ಉಪದೇಶಿಸಿದನು. ॥೩೮॥

ವತ್ಸ, ವ್ಯಾಸ ! ಕೇಳು. ದೇವನು ದೇವಿಗೆ ಉಪದೇಶಿಸಿದ ಮಂತ್ರ ಏಕವರ್ಣ ಉಳ್ಳದ್ದು. ಈ ಮಂತ್ರದ ವಿವರಣೆಯನ್ನು ಹಿಂದೆ ಉಪಾಸನಾ ಖಂಡದಲ್ಲೇ ಹೇಳಿರುವೆನು. ನೆನಪಿದೆಯೇ ? ಅದೇ ಮಂತ್ರವನ್ನೇ ಪ್ರಕೃತ ಯೋಗ್ಯ

ಶ್ರೀ ಭಗವಾನುವಾಚ :—

ದ್ವಾದಶಾಬ್ದಂ ಕುರು ತಪಸ್ತತಸ್ತುಷ್ಟೋ ಭವೇದ್ವಿಭುಃ ॥೩೯॥

ಸಾಕ್ಷಾತ್ಕಾರಂ ಗುಣೇಶಸ್ತೇ ಪ್ರದಾಸ್ಯತಿ ನ ಸಂಶಯಃ ।

ಕ ಉವಾಚ :—

ತದೈವ ಸಾ ನಮಸ್ಕೃತ್ಯ ಗಿರೀಶಂ ಹೃಷ್ಟಮಾನಸಾ ॥೪೦॥

ಜಗಾಮ ತಪಸೇ ಗೌರೀ ಮಂತ್ರ-ಧ್ಯಾನಪರಾಯಣಾ ।

---

ವಾದುದೆಂದು ಭಗವಂತನು ಭಾವಿಸಿದನು. ಅದರ ಬೀಜಾಕ್ಷರ, ಅಂಗನ್ಯಾಸಗಳು, ಧ್ಯಾನಶ್ಲೋಕ ಇವನ್ನು ಹೇಳಲಿಕ್ಕೆ ಮರೆಯಲಿಲ್ಲ.

ಶ್ರೀ ಭಗವಾನ್ :—

ಪ್ರಿಯತಮೆ, ಗೌರಿ! ಈ ಮಂತ್ರವನ್ನು ಕೇವಲ ಕೆಲವು ಕಾಲ ಮಾತ್ರ ಜಪಿಸಿದರೆ ಸಾಲದು. ನೆನಪಿರಲಿ, ಹನ್ನೆರಡು ವರ್ಷಗಳವರೆಗೆ ಜಪಿಸಬೇಕು. ಅನಂತರದಲ್ಲಿ ದೇವರ ದೇವನು ಪ್ರಸನ್ನನಾಗುವನು. ॥೩೯॥

ಗುಣೇಶನು ಪ್ರತ್ಯಕ್ಷನಾದನೆಂದರೆ ನಿರತಿಶಯವಾದ ಅಂಖಡಾನಂದವು ಸರ್ವದಾ ಅನುಭವಕ್ಕೆ ಬರುತ್ತಲೇ ಇರುವುದು. ಈ ವಿಷಯದಲ್ಲಿ ಸ್ವಲ್ಪ ಸಹ ಸಂದೇಹ ಪಡಬೇಕಾಗಿರುವುದಿಲ್ಲ.

ಬ್ರಹ್ಮಾ :—

ದೇವನ ಆಶ್ವಾಸನ ವಚನಗಳನ್ನು ಕೇಳಿದೊಡನೆಯೇ ಪರಮೇಶ್ವರಿಯು ಪರಿತುಷ್ಟಾಂತಃಕರಣ ಉಳ್ಳವಳಾದಳು. ದೇವನಿಗೆ ಭಕ್ತಿಯಿಂದ ನಮಸ್ಕರಿಸಿದಳು. ೪॥೦॥

ಒಡನೆಯೇ ತಪಸ್ಸಿಗೂ ತೆರಳಿದಳು. ಇವಳು ತನ್ನ ತಪೋಽನುಷ್ಠಾನಕ್ಕಾಗಿ

ಜೀರ್ಣಾ ಪುರಾದುತ್ತರೇ ತು 'ಲೇಖನಾದ್ರಿಂ' ಮನೋಹರಮ್ ॥೪೧॥

ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ 'ಗೌರ್ಯಾ
ಮಂತ್ರಪ್ರದಾನಂ' ನಾಮೈಕೋನಾಶೀತಿತ
ಮೋಽಧ್ಯಾಯಃ

---

ಆಯ್ದುಕೊಂಡ ಪ್ರದೇಶವು ಆ ನಗರದ ಉತ್ತರದಿಕ್ಕಿನಲ್ಲಿದ್ದ 'ಲೇಖನಾದ್ರಿ'ಯು ಅತ್ಯಂತ ಮನೋಹರವೂ ಫಲ-ಪುಷ್ಪಭರಿತವೂ ಆದ ತಪ್ಪಲಾಗಿದ್ದಿತು. ಅಲ್ಲಿ ಕುಳಿತು, ಆಹಾರ–ಪಾನೀಯಗಳ ಮೇಲೆ ಸಹ ಗಮನವನ್ನಿಡದೇ, ಏಕಾಗ್ರತೆಯಿಂದ ತಪಿಸಲಾರಂಭಿಸಿದಳು. ಇವಳ ದೇಹವು ದಿನಕ್ರಮೇಣ ಸವೆಯಲಾರಂಭಿಸಿತು. ॥೪೧॥

ಇಲ್ಲಿಗೆ ಶ್ರೀ ಗಣೇಶಪುರಾಣ, ಉತ್ತರಖಂಡದಲ್ಲಿ 'ಗೌರಿಗೆ
ಮಂತ್ರೋಪದೇಶ' ಎಂಬಲ್ಲಿಗೆ ಎಪ್ಪತ್ತೊಂಭತ್ತನೆಯ
ಅಧ್ಯಾಯಾನುವಾದವು ಪೂರ್ಣವಾದುದು.



|| ಶ್ರೀ ಗಣೇಶಾಯ ನಮಃ ||

## ಅಥಾಶೀತಿತಮೋಽಧ್ಯಾಯಃ

ಕ ಉವಾಚ :—

ತತ್ರ ಸಾ ಕಾನನಂ ದೃಷ್ಟ್ವಾ ರಮ್ಯಂ ಪುಷ್ಪಜಲಾನ್ವಿತಮ್ ।
ತಸ್ಥೌ ಪದ್ಮಾಸನಗತಾ ನಾಸಾಗ್ರನ್ಯಸ್ತಲೋಚನಾ ||೧||

ಗಣೇಶಧ್ಯಾನನಿರತಾ ಪ್ರಾಙ್ಮುಖೀ ಜಪತತ್ಪರಾ ।
ಏಕಾಕ್ಷರಸ್ಯ ಮಂತ್ರಸ್ಯ ಶುಷ್ಕದ್ರುಮ ಇವ ಸ್ಥಿತಾ ||೨||

---

|| ಶ್ರೀ ಗಣೇಶಾಯ ನಮಃ ||

## ೮೦ ನೆಯ ಅಧ್ಯಾಯ.

ಬ್ರಹ್ಮ :—

ವ್ಯಾಸ! ಕೇಳು. ಜಗದೀಶ್ವರಿಯು ಲೇಖನಾದ್ರಿಗೆ ತಪೋಽನುಷ್ಠಾನಕ್ಕಾಗಿ ತೆರಳಿದಳಷ್ಟೇ? ಅಲ್ಲಿ ದಟ್ಟವಾಗಿ ಬೆಳೆದಿದ್ದ ಅಡವಿಯನ್ನು ನೋಡಿದಳು. ಅದರ ನಡುವೆ ಹೊಕ್ಕು ತನ್ನ ಜೊಗಸೆಗಣ್ಣುಗಳನ್ನು ಸುತ್ತಲೂ ಬೀರಿ, ಮತ್ತೊಮ್ಮೆ ನೋಡಿದಳು. ಅಲ್ಲೊಂದು ಫಲ-ಪುಷ್ಪಭರಿತವೂ ಅನೇಕ ಜಲಾಶಯಗಳಿಂದ ಮಂಡಿತವೂ, ಆದ ರಮಣೀಯ ಪ್ರದೇಶವು ಕಂಡುಬಂದಿತು. ಆ ಸ್ಥಳವೇ ತನ್ನ ತಪೋಽನುಷ್ಠಾನಕ್ಕೆ ಯೋಗ್ಯವಾದ ಸ್ಥಳವೆಂದು ನಿಶ್ಚಯಿಸಿ, ಅಲ್ಲಿ ಪದ್ಮಾಸನಾಸೀನಳಾಗಿ ಕುಳಿತಳು. ಸಂಪಿಗೆಯ ಮೊಗ್ಗಿನಂತೆ ಸು-ಕೋಮಲವಾದ ನಾಸಿಕೆಯ ತುದಿಯಲ್ಲಿ ತನ್ನ ದೃಷ್ಟಿಯ ನಿಲುವನ್ನು ಇರಿಸಿದಳು. ||೧||

ಅವಳು ಪೂರ್ವದಿಕ್ಕಿಗೆ ಅಭಿಮುಖಳಾಗಿ ಕುಳಿತಿದ್ದಳು. ಅವಳ ದೇಹಾಂತ

ನ ಫಲಂ ನ ಜಲಂ ಮೂಲಂ ಪರ್ಣಂ ಕಂದಂ ನ ಮಾರುತಮ್ ।
ಅತ್ತಿ ಸಾ ನಿಶ್ಚಲಾ ತತ್ರ ನಿರ್ವಾಣಂ ಪರಮಂ ಶ್ರಿತಾ ॥೩॥

ಏವಂ ಸಾ ದ್ವಾದಶಾಬ್ದಾನಿ ವ್ಯತೀತಾನಿ ತತೋ ವಿಭುಃ ।
ಕೃಪಯಾವಿರಭೂತ್ಪ್ರೀತೋ ಗುಣೇಶೋ ಗುಣವಲ್ಲಭಃ ॥೪॥

---

ಗತ ರಕ್ತನಾಳಗಳೆಲ್ಲ ಭಗವಂತನ ದಿವ್ಯ ನಾಮವನ್ನು ನುಡಿಯುತ್ತಲಿದ್ದವು. ದೇವಿಯು ಸರ್ವದಾ ತನ್ನ ಮನಸ್ಸಿನಲ್ಲಿ ಗಣೇಶನನ್ನು ಧ್ಯಾನಿಸುತ್ತಲೇ ಇದ್ದಳು. ಬಾಯಿಯಿಂದ ಮಹಾಗಣಪತಿಯ ಏಕಾಕ್ಷರ ಮಂತ್ರವನ್ನು ಜಪಿಸುತ್ತಲಿದ್ದಳು. ಅವಳು ಕುಳಿತಿರುವ ಭಾವವನ್ನು ನೋಡಿದರೆ, ಒಣಗಿ ಹೋದ ಮೋಟು ಮರ ನಿಂತಂತೆ ಕಂಡುಬರುತ್ತಲಿದ್ದಿತು. ॥೨॥

ದೇವಿಯು ದೇಹಪೋಷಣೆಯನ್ನು ಸರ್ವಾತ್ಮನಾ ತ್ಯಜಿಸಿಬಿಟ್ಟಳು. ಫಲಗಳನ್ನಾಗಲೀ, ಜಲವನ್ನಾಗಲೀ, ಕಂದ-ಮೂಲಗಳನ್ನಾಗಲೀ, ತರಗೆಲೆಗಳನ್ನಾಗಲೀ, ಸೇವಿಸುವುದನ್ನು ಬಿಟ್ಟುಬಿಟ್ಟಳು. ಇಷ್ಟೇ ಅಲ್ಲ. ಗಾಳಿಯನ್ನು ಸಹ ಸೇವಿಸದಷ್ಟು ಕಟ್ಟು-ನಿಟ್ಟಾಗಿ ಇದ್ದಳು. ಇಷ್ಟಾದರೂ ಅವಳ ಚಿತ್ತವು ಪರಾತ್ಪರ ವಸ್ತುವಿನಲ್ಲೇ ಲೀನವಾಗಿ ಹೋಯಿತು. ಧ್ಯಾನ, ಧ್ಯಾತೃ ಹಾಗೂ ಧ್ಯೇಯ ಇವುಗಳ ಕಲ್ಪನೆಯು ಸಹ ಅವಳಿಗೆ ಉಳಿಯಲಿಲ್ಲ. ॥೩॥

ಇದೇ ರೀತಿಯಾಗಿ ಒಟ್ಟು ಹನ್ನೆರಡು ವರ್ಷಗಳ ಕಾಲ ಪಾರ್ವತಿಯು ಅಖಂಡವಾಗಿ ತಪಸ್ಸನ್ನು ನಿಷ್ಠೆಯಿಂದ ಆಚರಿಸಿದಳು. ಆಗ ಗುಣಗಳಿಗೆ ಮಾರು ಹೋಗುವವನಾದ ಗುಣೇಶನು ಇವಳ ಏಕಾಗ್ರ ತಪೋಽನುಷ್ಠಾನಕ್ಕೆ ಬಹಳ ಸಂತೋಷಪಟ್ಟನು. ಭಕ್ತರ ವಿಷಯದಲ್ಲಿ ಸ್ವಭಾವತಃ ಕರುಣಾಶಾಲಿಯಾದ ಪರಮ ಪುರುಷನು ದೇವಿಯ ಮೇಲೆ ದಯೆದೋರಿ, ಒಡನೆಯೇ ಆವಿರ್ಭವಿಸಿ ಎದುರುನಿಂತನು. ॥೪॥

ಕಿರೀಟ-ಕುಂಡಲಧರೋ ದಶಬಾಹುಸ್ತ್ರಿಶೂಲಭೃತ್ ।
ಭಾಲಚಂದ್ರಃ ಶಂಖಚಕ್ರಮುಕ್ತಾಮಾಲಾವಿಭೂಷಿತಃ ॥೫॥

ಅಕ್ಷಮಾಲಾಂ ಚ ಕಮಲಂ ಕಸ್ತೂರೀತಿಲಕಂ ದಧತ್ ।
ಮಧ್ಯೇ ನಾರಾಯಣಮುಖೋ ದಕ್ಷಿಣೇ ಚ ಶಿವಾನನಃ ॥೬॥

ವಾಮೇ ಬ್ರಹ್ಮಮುಖಃ ಶೇಷೇ ಪದ್ಮಾಸನಗತೋ ವಿಭುಃ ।
ತತ್ಫಣಾಮಂಡಲಚ್ಛಾಯಃ ಕುಂದ-ಕರ್ಪೂರಸನ್ನಿಭಃ । ॥೭॥

---

ಕರುಣಾಸಾಗರನು ಕಿರೀಟ-ಕುಂಡಲಗಳಿಂದ ಮಂಡಿತನಾಗಿದ್ದನು. ಹತ್ತು ಸು-ದೀರ್ಘ ಬಾಹುಗಳು ದೇವನ ಭವ್ಯತೆಯನ್ನು ಹೆಚ್ಚಾಗಿ ತೋರಿಸುತ್ತಲಿದ್ದವು. ಕೈಯ್ಯಲ್ಲಿ ತ್ರಿಶೂಲವನ್ನು ಧರಿಸಿದ್ದನು. ಫಾಲಪ್ರದೇಶದಲ್ಲಿ ಅಲಂಕಾರಾರ್ಥವಾಗಿ ಚಂದ್ರನನ್ನು ಇರಿಸಿಕೊಂಡಿದ್ದನು. ಶಂಖ-ಚಕ್ರಗಳನ್ನು ಧರಿಸಿದ್ದನು. ಶಂಖದಂತೆ ನುಣುಪಾಗಿಯೂ, ಶುಭ್ರವಾಗಿಯೂ ಹೊಳೆವ ತನ್ನ ಕಂಠದಲ್ಲಿ ದೊಡ್ಡ ದೊಡ್ಡ ಮುತ್ತಿನ ಮಾಲಿಕೆಗಳನ್ನು ಹಾಕಿಕೊಂಡಿದ್ದನು. ಇದರಿಂದ ದೇವನ ದಿವ್ಯ ರೂಪವು ಸಾಸಿರಾರು ಪಾಲು ಸುಂದರತಮವಾಗಿ ತೋರುತ್ತಲಿದ್ದಿತು. ॥೫॥

ಅಕ್ಷಮಾಲೆ, ಅರಳಿದ ಕಮಲಕುಸುಮ ಇವನ್ನು ಕೈಗಳಲ್ಲಿ ಧರಿಸಿದ್ದನು. ವಿಶಾಲವಾದ ತನ್ನ ಹಣೆಗೆ ಕಸ್ತೂರೀ ವಿಮಿಶ್ರಿತವಾದ ತಿಲಕವನ್ನು ಸುಂದರವಾಗಿ ತೋರುವಂತೆ ತಿದ್ದಿದ್ದನು. ದೇವನ ಮುಖಗಳಲ್ಲಿ ಮಧ್ಯದಲ್ಲಿದ್ದುದು ಭಗವಾನ್ ಶ್ರೀಮನ್ನಾರಾಯಣನ ಮುಖವಾಗಿದ್ದಿತು. ಬಲಭಾಗದ ಮುಖವು ಪರಶಿವನಂತೆ ತೋರಿಬರುತ್ತಲಿದ್ದಿತು. ॥೬॥

ಎಡಪಾರ್ಶ್ವದ ಮುಖವು ಕಮಲಾಸನನಂತೆ ಇದ್ದಿತು. ಆದಿಶೇಷನನ್ನೇ ಪೀಠವನ್ನಾಗಿ ಮಾಡಿಕೊಂಡು, ಅದರಲ್ಲಿ ಪದ್ಮಾಸನದಿಂದ ದೇವನು ಮಂಡಿತನಾಗಿದ್ದನು. ಮಹಾಶೇಷನು ತನ್ನ ಅನಂತ ಹೆಡೆಗಳನ್ನೂ ವಿಸ್ತಾರವಾಗಿ ಪಸರಿಸಿ,

ಉವಾಚ ಜಗದಂಬಾಂ ತಾಂ

ಶ್ರೀ ಭಗವಾನುವಾಚ :—

' ಗುಣೇಶೋ ಗುಣೇಶ ' ಇತಿ ಸೋಽಹಂ ತೇ ದರ್ಶನಂಗತಃ ||೩||

ತವ ನಿಷ್ಠಾಂ ಚ ಭಕ್ತಿಂ ಚ ತಪ ಉಗ್ರಮವೇಕ್ಷ್ಯ ಚ |
ಮಮ ಸ್ವರೂಪಂ ವಕ್ಷ್ಯಾಮಿ ಪ್ರೀತಸ್ತವ ವರಾನನೇ ! ||೯||

ತ್ರಯಸ್ತ್ರಿಂಶತ್ಕೋಟಿದೇವೇಷ್ವಧಿಕೋ ನ ಚ ಮತ್ಪರಃ |

---

ದೇವನ ಉತ್ತಮಾಂಗದ ಮೇಲೆ ಛತ್ರಿಯಂತೆ ನಿಲಿಸಿದ್ದನು. ಸ್ವರ್ಣ ಬಾಗೂ ಕರ್ಪೂರಗಳಂತೆ ಭಗವಂತನ ಅಂಗಕಾಂತಿಯು ನಿರ್ಮಲವಾಗಿ ಹೊಳೆಯುತ್ತಿದ್ದಿತು. ||೭||

ತ್ರಿಭುವನೇಶ್ವರನು ಜಗದಂಬೆಯನ್ನು ಕುರಿತು ವಾತ್ಸಲ್ಯದಿಂದ ಹೀಗೆ ನುಡಿದನು.

ಶ್ರೀ ಭಗವಾನ್ :—

ಆದಿ ಮಹಾಶಕ್ತಿಸ್ವರೂಪಿಣಿ, ಪಾರ್ವತಿ ! ಯಾವ ಸ್ವರೂಪವನ್ನು ' ಗುಣೇಶ, ಗಣೇಶ ' ಎಂದು ನೀನು ಅಹರ್ನಿಶಿ ಹಂಬಲಿಸಿ ಧ್ಯಾನಿಸುತ್ತಲಿರುವೆಯೋ ಇದೋ ಆ ಸ್ವರೂಪನಾದ ನಾನೇ ನಿನ್ನೆದುರು ಪ್ರತ್ಯಕ್ಷವಾಗಿ ಬಂದು ನಿಂದಿವೆನು. ||೮||

ಭಾವ ಪೂರಿತವಾದ ನಿನ್ನ ಭಕ್ತಿ, ಅಭಿನಿವೇಶಪೂರ್ವಕವಾದ ನಿಷ್ಠೆ, ಪರಮೋಗ್ರವಾದ ತಪಸ್ಸು ಇವನ್ನು ನೋಡಿ ನಾನು ಬಹಳ ಮಟ್ಟಿಗೆ ಹರ್ಷಿಸಿದ್ದೇನೆ. ಸರ್ವಮಂಗಲೇ ! ನಿನ್ನ ವಿಷಯದಲ್ಲಿ ನಾನು ಬಹಳ ವಾತ್ಸಲ್ಯ ಉಳ್ಳವನಾಗಿರುವೆನು. ಆದುದರಿಂದಲೇ ನನ್ನ ತಾತ್ತ್ವಿಕ ಸ್ವರೂಪವಾವುದೆಂಬುದನ್ನು ನಿನಗೆ ಈಗ ತಿಳಿಸುವೆನು, ಇದು ಅನನ್ಯವೇದ್ಯವಾದುದು. ಕೇಳು. ||೯||

ದೇವತೆಗಳು ಒಟ್ಟು ಮೂವತ್ತು ಮೂರು ಕೋಟಿ ಇದ್ದಾರಷ್ಟೇ ? ಅವರ

ಗುಣತ್ರಯವಿಭಾಗಾಚ್ಚ 'ಗುಣೇಶ' ಇತಿ ಮಾಂ ವಿದುಃ ॥೧೦॥

ತ್ರಿದೇಹೋಽಗುಣತಶ್ಚಾಹಂ ಸಂತುಷ್ಟಸ್ತಪಸಾ ಚ ತೇ ।
ವರಂ ವರಯ ಮತ್ತಸ್ತ್ವಂ ಯತ್ತೇ ಮನಸಿ ವರ್ತತೇ ॥೧೧॥

ಪೈಕಿ ಯಾರೊಬ್ಬರೂ ನನ್ನನ್ನು ಮೀರಿಸುವಂತಹ ಪ್ರತಾಪ, ಮಹಿಮಾಶಾಲಿ ಹಿಂದೆ ಇರಲಿಲ್ಲ, ಈಗ ಇರುವುದೂ ಇಲ್ಲ. ಮುಂದಂತೂ ಉಂಟಾಗುವುದೇ ಇಲ್ಲ. ಇರಲಿ, ಆಯಾ ಪ್ರಾಣಿವರ್ಗದ ಪ್ರಾಕ್ಕರ್ಮಾನುಗುಣವಾಗಿ ಸತ್ತ್ವ ರಜಸ್ತಮೋಗುಣಗಳನ್ನು ಅವರವರಿಗೆ ವಿಭಜಿಸಿ ಕೊಡುವೆನಾದುದರಿಂದ ನನ್ನನ್ನು ಎಲ್ಲರೂ 'ಗುಣೇಶ' ಎಂದು ತಿಳಿದಿದ್ದಾರೆ. ॥೧೦॥

ಸತ್ತ್ವಾದಿ ಗುಣಗಳಿಂದ ಆಕೃತಿಗೊಂಡು ಕಂಡುಬರುವ ಬ್ರಹ್ಮಾ, ವಿಷ್ಣು, ಮಹೇಶ್ವರರ ರೂಪಗಳಿಂದ ನಾನು ಸರ್ವದಾ ಅಭಿವ್ಯಕ್ತಿಗೊಳ್ಳುವೆನು. ಅದು ನಿನಗೆ ಅಳವಡಲೆಂದೇ ನಾನು ತ್ರ್ಯಾತ್ಮಕ ಮೂರ್ತಿಯಾಗಿ ನಿನ್ನೆದುರು ಈಗ ಆವಿರ್ಭವಿಸಿರುವೆನು. ತ್ರ್ಯಾತ್ಮಕವಾದ ಒಂದೇ ರೂಪ ನಿನ್ನದಾಗಿದ್ದರೆ ಬ್ರಹ್ಮಾ, ವಿಷ್ಣು, ರುದ್ರರಾಗಿ ಭಿನ್ನಭಿನ್ನವಾಗಿ ತೋರಿ ಬರುವ ಈ ಆಕೃತಿತ್ರಿತಯಕ್ಕೆ ಅರ್ಥವೇನು? ಎಂದು ಪ್ರಶ್ನಿಸಬಹುದು. ಜಗದುತ್ಪತ್ತಿ, ಸ್ಥಿತಿ, ಲಯಗಳು ಪ್ರಾಣಿಗಳ ಪ್ರಾಕ್ಕರ್ಮಾಧೀನವಾಗಿ ನಡೆಯಬೇಕಾದುದೆಂಬುದು ಸರಿಯಷ್ಟೇ? ಅವನ್ನು ನಿರ್ವಹಿಸುವುದಕ್ಕಾಗಿ ತನ್ಮಾತ್ರ ಗುಣನಿರ್ಮಿತಗಳಾದ ಅಪ್ರಾಕೃತಿಕ ದೇಹಗಳಲ್ಲಿ ನಾನು ಪ್ರವೇಶಿಸಬೇಕಾಗಿಬರುವುದು. ಅವನ್ನೇ 'ತ್ರಿಮೂರ್ತಿಗಳು' ಎಂದು ಹೇಳುವರು. ಪ್ರಕೃತ ನಾನು ನಿನ್ನ ತಪೋಽನುಷ್ಠಾನಕ್ಕಾಗಿ ಮೆಚ್ಚಿ ಬಂದಿರುವೆನು. ಯಾವ ಫಲವನ್ನು ಪಡೆಯಬೇಕೆಂಬ ಉದ್ದೇಶ್ಯದಿಂದ ನೀನು ನನ್ನನ್ನು ಕುರಿತು ಇಷ್ಟು ಕಠಿಣವಾಗಿ ತಪಿಸಿರುವೆಯೋ ಆ ಫಲವನ್ನು ವರವನ್ನಾಗಿ ಬೇಡು. ನಾನು ಅದನ್ನು ಅನುಗ್ರಹಿಸುವೆನು. ॥೧೧॥

**ಅಸಾಧ್ಯಮಪಿ ದಾಸ್ಯಾಮಿ ತ್ರೈಲೋಕ್ಯೇsಸ್ಮಿನ್ ಮಹೇಶ್ವರಿ ! ।**

**ಕ ಉವಾಚ :—**

**ಇತಿ ತದ್ವಚನಂ ಶ್ರುತ್ವಾ ಹರ್ಷಗದ್ಗದನಿಃಸ್ವನಾ ॥೧೨॥**

**ಉನ್ಮೀಲ್ಯ ನಯನೇ ಗೌರೀ ಪಶ್ಯತಿ ಸ್ಮ ಪುರೋ ವಿಭುಮ್ ।**
**ಗುಣೇಶಂ ತ್ರಿಗುಣೇಶಂ ಚ ತ್ರಿತನುಂ ಪ್ರಣನಾಮ ಸಾ ॥೧೩॥**

**ಉವಾಚ**

---

ನೀನು ಬೇಡಬಹುದಾದ ವರ ಎಷ್ಟೇ ಅಸಾಧ್ಯವಾದುದಿರಲಿ, ಇದುವರೆಗೂ ಅಂತಹ ವರವನ್ನು ಪಡೆದವರು ತ್ರಿಭುವನಗಳಲ್ಲಿ ಯಾರೂ ಇಲ್ಲದೇ ಇರಬಹುದು. ಮಹೇಶ್ವರಿ! ನೀನು ಚಿಂತಿಸಬೇಡ, ನಾನು ಅದನ್ನು ಅನುಗ್ರಹಿಸುವೆನು. ಸಂಕೋಚ ಪಡದೇ ವರವನ್ನು ಬೇಡು,

ಬ್ರಹ್ಮಾ :—

ದೇವನ ಈ ಮಾತುಗಳನ್ನು ಕೇಳಿ ಜಗದೀಶ್ವರಿಯು ಹರ್ಷಪುಲಕಿತಳಾದಳು. ಆನಂದವು ಉಕ್ಕಿ ಹರಿದು ಕಂಠನಾಳವನ್ನು ಬಂಧಿಸ ತೊಡಗಿತು. ಗದ್ಗದ ಕಂಠ ದಿಂದಲೇ ದೇವನೆದುರು ಹೀಗೆ ಮಾತನಾಡಿದಳು. ॥೧೨॥

ತನ್ನ ಬೊಗಸೆಕಣ್ಣುಗಳನ್ನು ಅರಳಿಸಿ ಎದುರಿಗೆ ಆವಿರ್ಭವಿಸಿ ನಿಂದಿರುವ ಜಗದೀಶ್ವರನ ದಿವ್ಯ ಮಂಗಲರೂಪವನ್ನು ಎವೆ ಇಕ್ಕದೇ ನೋಡತೊಡಗಿದಳು. ಸತ್ತ್ವ, ರಜಸ್ತಮೋಗುಣಗಳಿಗೆ ಒಡೆಯನಾದ ಭಗವಾನ್ ಗುಣೇಶನು ದೇವೋ ತ್ತಮರಾದ ತ್ರಿಮೂರ್ತಿಗಳ ಆಕೃತಿಯಿಂದ ತೋರಿಬರಲು, ದೇವಿಯು ಮತ್ತಷ್ಟು ಅಚ್ಚರಿಗೊಂಡು, ಒಡನೆಯೇ ದೇವನನ್ನು ಭಕ್ತಿಯಿಂದ ವಂದಿಸಿದಳು. ॥೧೩॥

ಮತ್ತು ತನ್ನ ಮನೋಗತವನ್ನು ದೇವನೆದುರು ಸರಳತನದಿಂದ ನುಡಿ ದಳು.

ಗೌರ್ಯುವಾಚ :—

ಜನ್ಮ ನಿಷ್ಠಾ ಚ ತಪೋ ಮಂತ್ರೋ ಹರೋಽಪಿ ಚ ।
ಅದ್ಯ ಧನ್ಯತನೋ ಜಾತೋ ದೃಷ್ಟ್ವಾ ತೇ ಪದಪಂಕಜಮ್ ॥೧೪॥

ಅದ್ಯ ಸಿದ್ಧಿಃ ಪರಾ ಪ್ರಾಪ್ತಾ ಸಾಕ್ಷಾದ್ದೃಷ್ಟೋ ಯತೋ ಭವಾನ್ ।
ನ ಕಾಂಕ್ಷೇಽನ್ಯಂ ಪರಂ ಕಂಚಿತ್ತ್ವದ್ವಾಕ್ಯಂ ನ ಚ ಲಂಘಯೇ ॥೧೫॥

ಅತಸ್ತ್ವಂ ಪುತ್ರತಾಂ ಯಾಹಿ ಮಮ ಪ್ರೀತಿಕರೋ ಭವ ।

---

ಗೌರೀ :—

ಭಗವನ್, ಪರಮ ಪುರುಷ! ನಿನ್ನ ಚರಣ ಕಮಲಗಳನ್ನು ನಾನು ಸಂದರ್ಶಿಸಿದೆನಾದ್ದರಿಂದ ನನ್ನ ಜನ್ಮ, ನಿಯಮಿತತನ, ತಪೋಽನುಷ್ಠಾನ, ನಾನು ಜಪಿಸಿದ ಏಕಾರ್ಣವ ಮೂಲ ಮಹಾಮಂತ್ರ, ಇದನ್ನು ಪ್ರೀತಿ–ವಾತ್ಸಲ್ಯಗಳಿಂದ ನನಗೆ ಉಪದೇಶವನ್ನಿತ್ತ ಪರಮೇಶ್ವರ, ಎಲ್ಲರೂ ಇಂದಿಗೆ ಧನ್ಯತಮರೆನಿಸಿದರು.॥೧೪॥

ನಾನು ಇಂದು ಪರಮ ಸಿದ್ಧಿಯನ್ನು ಗಳಿಸಿದಂತಾಯಿತು. ಇಲ್ಲವಾಗಿದ್ದರೆ, ನನ್ನ ಈ ಕಣ್ಣುಗಳಿಂದ ಮಹಾತ್ಮನಾದ ನಿನ್ನನ್ನು ಸಂದರ್ಶಿಸುವುದಕ್ಕೆ ಸಾಧುವಾಗುತ್ತಲಿದ್ದಿತೇ ? ನಿನ್ನನ್ನು ಪ್ರತ್ಯಕ್ಷವಾಗಿ ನೋಡಬೇಕೆಂಬ ಬಯಕೆಯ ಮೂಲಕ ಇಷ್ಟು ಕಠಿಣವಾಗಿ ತಪಸ್ಸನ್ನು ಮಾಡಬೇಕಾಯಿತೇ ಹೊರತು, ಮತ್ತಾವ ಫಲವನ್ನು ಪಡೆಯಬೇಕೆಂದೂ ಅಲ್ಲ. ಆದರೂ 'ವರವನ್ನು ಯಾಚಿಸು, ಕೊಡುವೆನು' ಎಂದು ನೀನು ಅಪ್ಪಣೆಯನ್ನು ಮಾಡುತ್ತಿರುವೆ. ನನಗೆ ವರಗಳು ಬೇಡವಾಗಿದ್ದರೂ, ನಿನ್ನ ಅಪ್ಪಣೆಯನ್ನು ಮೀರಿ ನಾನು ನಿನಗೆ ಅಪಚಾರವನ್ನು ಮಾಡಲಾರೆನು. ॥೧೫॥

ಆದುದರಿಂದ ಜಗದೀಶ್ವರ! ನೀನು ನನಗೆ ಪುತ್ರನಾಗಿ ಜನಿಸಬೇಕೆಂದು ಬಯಸುವೆನು. ನೀನು ಅದರಂತೆ ಅನುಗ್ರಹಿಸಿ, ನನಗೆ ಸಂತೋಷವನ್ನುಂಟು ಮಾಡು. ನೀನು ನನಗೆ ಮಗನಾಗಿ ಜನಿಸಿದರೆ, ಸರ್ವದಾ ನಾನು ನಿನ್ನನ್ನು

ನಿರಂತರಂ ದರ್ಶನಂ ತೇ ಸೇವನಂ ಪೂಜನಂ ಭವೇತ್ ||೧೬||

ಕ ಉವಾಚ :—

ಇತಿ ತಸ್ಯಾ ವಚಃ ಶ್ರುತ್ವಾ ಗುಣೇಶೋ ಹರ್ಷನಿರ್ಭರಃ |
ಉವಾಚ ಗಿರಿಜಾಂ ತಾಂ ಸ

ಶ್ರೀ ಭಗವಾನುವಾಚ :—

ಭವಿಷ್ಯಾಮಿ ಸುತಸ್ತವ ||೧೭||

ವಾಂಛಿತಂ ಪೂರಯಿಷ್ಯಾಮಿ ಲೋಕಾನಾಂ ಚ ತವಾಪಿ ಚ |

---

ನೋಡುತ್ತಲಿರಬಹುದು. ಸೇವೆಗೈಯ್ಯಬಹುದು, ಹೆಚ್ಚೇನು ? ಮನಃಪೂರ್ವಕವಾಗಿ ಪೂಜಿಸಲೂ ಬಹುದು. ಇದಕ್ಕಿಂತಲೂ ಹೆಚ್ಚಳವಾದುದು ಬೇರೆ ಏನಿದೆ? ||೧೬||

ಬ್ರಹ್ಮ :—

ಪಾರ್ವತಿಯ ಅಚಂಚಲವಾದ ಈ ಭಕ್ತಿಯನ್ನು ಕಂಡು ಪ್ರಭು; ಜಗದೊಡೆಯನು ಬಹಳ ಹರ್ಷಿತನಾದನು. ಆಗ ದೇವಿಯನ್ನು ಆಶ್ವಾಸಿಸುತ್ತ ಈ ರೀತಿ ಉತ್ತರಿಸಿದನು.

ಶ್ರೀ ಭಗವಾನ್ :—

ಹಾಗೆಯೇ ಆಗಲಿ, ನಿನಗೆ ನಾನು ಪುತ್ರನಾಗಿ ಜನಿಸುವೆನು. ಚಿಂತಿಸಬೇಡ. ||೧೭||

ಜಗತ್ತಿನಲ್ಲಿ ದುಷ್ಟಾತ್ಮರ ಸಂಖ್ಯೆ ಹೆಚ್ಚಿಹೋಗಿದೆ. ಇವರನ್ನು ನಿಗ್ರಹಿಸಿ, ಜಗತ್ತಿನಲ್ಲಿ ಸುಖ-ಶಾಂತಿಗಳನ್ನು ನೆಲೆಗೊಳಿಸಲು ಪ್ರಕೃತ ನಾನು ಅವತರಿಸಬೇಕೆಂದು ಲೋಕವೆಲ್ಲವೂ ಪ್ರಾರ್ಥಿಸುತ್ತಲಿದೆ. ಈಗ ನಾನು ಅವತರಿಸಿದರೆ, ನಿನ್ನ ಇಚ್ಛೆಯನ್ನ ಪೂರ್ಣಗೊಳಿಸುವುದರ ಜೊತೆಗೆ ಲೋಕದ ಹಿತವನ್ನೂ ಸಾಧಿಸಿದಂತಾಗುವುದು. ಆದ್ದರಿಂದ ನಿನ್ನ ಇಷ್ಟವನ್ನು ನೆರವೇರಿಸಿಕೊಡುವೆನು.

ಕ ಉವಾಚ :—

ಏವಮುಕ್ತ್ವಾ ಗುಣೇಶಸ್ತ್ವಂತರ್ಧಾನಮಗಾತ್ಕ್ಷಣಾತ್ ।೧೮।
ನ ದದರ್ಶ ಯದಾ ದೇವೀ ಗುಣೇಶಂ ತಂ ಕ್ಷಣಾತ್ತದಾ ।

ದೇವ್ಯುವಾಚ :—

ಅನನ್ಯತಮಯಾ ದೃಷ್ಟಃ ಸ್ವಪ್ನಃ ಕಿಂ ಸುಖದಃ ಕ್ಷಣಮ್ ? ॥೧೯॥
ಈಶ್ವರಸ್ಯೋಪದೇಶೇನ ದೃಷ್ಟೋ ದೇವೋಽಖಿಲಾರ್ಥದಃ ।
ನ ಸೋಢುಂ ವಿರಹಂ ತಸ್ಯ ಶಕ್ತಾಸ್ಮಿ

ಕ ಉವಾಚ :—

ತಿ ವ್ಯಥಾಚ್ಛಿವಾ ॥೨೦॥

ಬ್ರಹ್ಮ :—

ಗುಣೇಶನು ಹೀಗೆ ನುಡಿದು ಸರ್ವಮಂಗಳೆಯನ್ನು ಸಮಾಶ್ವಾಸನಗೊಳಿಸಿ, ತತ್ಕ್ಷಣವೇ ತನ್ನ ಸಾಕಾರ ರೂಪವನ್ನು ಅದರ್ಶನೀಯವಾಗುವಂತೆ ಮಾಡಿದನು. ॥೧೮॥

ಇದುವರೆಗೂ ಸ್ಪಷ್ಟವಾಗಿ ಕಾಣುತ್ತಲಿದ್ದ ದೇವನ ದಿವ್ಯ ರೂಪವು ಒಂದು ಕ್ಷಣದೊಳಗಾಗಿಯೇ ಕಣ್ಣಿಗೆ ಕಾಣದಂತಾಗಲು, ಕಾತ್ಯಾಯನಿಯು ಬಹಳ ಕಳವಳ ಗೊಂಡು ತನ್ನೊಳಗೆ ಹೀಗೆ ಚಿಂತಿಸತೊಡಗಿದಳು.

ದೇವೀ :—

'ಇದೇನು ? ನಾನು ಅನನ್ಯಭಾವನೆಯಿಂದ ದೀರ್ಘಕಾಲ ತಪಿಸಿದ್ದಕ್ಕೆ ಈ ಬಗೆಯ ಕ್ಷಣಿಕ ಸುಖಸ್ವಪ್ನವನ್ನು ನಾನು ಕಂಡಿರಬಹುದೇ ? ॥೧೯॥

ನನ್ನ ಪ್ರಾಣವಲ್ಲಭನಾದ ಪರಮೇಶ್ವರನು ಅಂತಹ ಪ್ರಭಾವಶಾಲಿಯಾದ ಮಂತ್ರವನ್ನು ಉಪದೇಶಿಸಿದ್ದರಿಂದಲ್ಲವೇ, ಅಖಿಲಾರ್ಥದನಾದ ಜಗದೀಶ್ವರನನ್ನು, ನಾನು ಕಂಡಿದ್ದು? ಇಲ್ಲವಾಗಿದ್ದರೆ, ಆ ಭಾಗ್ಯವೂ ನನಗೆ ಸಿಗುತ್ತಲಿರಲಿಲ್ಲ. ಆಹಹ! ದೇವನ ವಿರಹವನ್ನು ನಾನು ಹೇಗೆ ಸಹಿಸಲಿ? ನನ್ನಿಂದ ಇದು ಸಾಧ್ಯವಾಗುವಂತೆ ತೋರುವುದಿಲ್ಲವಲ್ಲ ? ಮುಂದೇನು ಗತಿ ?

ಬ್ರಹ್ಮಾ :-

ಎಂದು ಶಿವೆಯು ಸಂಕಟಪಟ್ಟು ನುಡಿದಳು. ॥೨೦॥

ಗುಣೇಶಪ್ರತಿಮಾಂ ಕೃತ್ವಾ ಸ್ಥಾಪಯಾಮಾಸ ಸಾದರಮ್ ।
ಪ್ರಾಸಾದಂ ಕಾರಯಾಮಾಸ ಚತುರ್ದ್ವಾರಂ ಸು-ಶೋಭನಮ್ ॥೨೧॥

'ಗಿರಿಜಾತ್ಮಜೇ'ತಿ ತನ್ನಾಮ ಸ್ಥಾಪಯಾಮಾಸ ಸುಂದರಮ್ ।
'ಸಿದ್ಧಿಕ್ಷೇತ್ರಮಿತಿ ಖ್ಯಾತಂ ಭವಿಷ್ಯತಿ ನೃಣಾಮಿಹ ॥೨೨॥

ಅನುಷ್ಠಾನವತಾಂ ಸಿದ್ಧಿರ್ಭವಿಷ್ಯತಿ ನ ಸಂಶಯಃ' ।
ಇತಿ ದತ್ವಾ ವರಂ ತತ್ರ ಸಂಪೂಜ್ಯ ಚ ಯಥಾವಿಧಿ ॥೨೩॥

ಕೈಮೀರಿಹೋಗಿದೆ, ಪಾಪ! ಏನನ್ನು ಮಾಡಿಯಾಳು ? ತಾನು ಕಂಡಂತೆ ಗುಣೇಶನ ಪ್ರತಿಮೆಯೊಂದನ್ನು ನಿರ್ಮಿಸಿದಳು. ದೇವನು ಯಾವ ಸ್ಥಳದಲ್ಲಿ ತನಗೆ ದರ್ಶನವನ್ನಿತ್ತಿದ್ದನೋ, ಪವಿತ್ರವಾದ ಆ ಪ್ರದೇಶದಲ್ಲಿ ಅದನ್ನು ಪ್ರೀತ್ಯಾದರಗಳಿಂದ ಪ್ರತಿಷ್ಠಿಸಿದಳು. ಅದರ ಸುತ್ತಲೂ ಬಹು ವಿಸ್ತಾರವಾದ ಮಂದಿರ ಒಂದನ್ನು ಕಟ್ಟಿಸಿದಳು. ಆ ಮಂದಿರಕ್ಕೆ ನಾಲ್ಕು ದಿಕ್ಕುಗಳಿಗೂ ಮಹಾದ್ವಾರಗಳಿರುವಂತೆ ಏರ್ಪಡಿಸಿದಳು. ಮಂದಿರವಂತೂ ನೋಡಲು ಬಹಳ ಸುಂದರವಾಗಿದ್ದಿತು. ॥೨೧॥

'ಆ ಮೂರ್ತಿಯೇ ತನ್ನ ಮಗು' ಎಂಬುವಷ್ಟು ಮೋಹವು ದೇವಿಯನ್ನಾವರಿಸಿಬಿಟ್ಟಿತು. ಆದಿಮಾಯಾಸ್ವರೂಪಿಣಿಯನ್ನೂ ದೈವೀಮಾಯೆಯು ಮುಸುಕಿತೆಂದರೆ ಅದೆಷ್ಟು ಅದ್ಭುತವಾಗಿ ತೋರಿರಬಹುದು? ದೇವಿಯು ಆ ಮೂರ್ತಿಗೆ 'ಗಿರಿಜಾತ್ಮಜ' ಎಂದು ಮುದ್ದಾದ ಹೆಸರನ್ನಿಟ್ಟು ಕರೆದಳು. ದೇವನನ್ನು ಪ್ರತಿಷ್ಠಿಸಿದ ಸುತ್ತ-ಮುತ್ತಣ ಪ್ರದೇಶಕ್ಕೆಲ್ಲ 'ಸಿದ್ಧಿಕ್ಷೇತ್ರ' ಎಂದು ಹೆಸರನ್ನಿಟ್ಟು, ಅದು ಮಾನವರಿಗೆ ಪರಮ ಪವಿತ್ರಕ್ಷೇತ್ರವಾಗಿ ಪರಿಣಮಿಸಲೆಂದು ಅನುಗ್ರಹಿಸಿದಳು. ॥೨೨॥

'ಈ ಕ್ಷೇತ್ರದಲ್ಲಿ ಕುಳಿತು ಯಾರು ತಪೋಽನುಷ್ಠಾನವನ್ನು ಮಾಡುವರೋ, ಅವರಿಗೆ ಒಡನೆಯೇ ಸಿದ್ಧಿಗಳು ದೊರೆಯುವಂತಾಗಲಿ' ಎಂದು ನುಂತಾಗಿ ಮಹಿಮೆಯನ್ನು ಅನುಗ್ರಹಿಸಿದಳು.' ಈ ವಿಷಯದಲ್ಲಿ ಯಾರೂ ಸಂದೇಹಪಡಬೇಕಾಗಿಲ್ಲ, ಎಂದು ಎಲ್ಲರಿಗೂ ತಿಳಿಯುವಂತೆ ಸಾರಿ ಸಾರಿ ಹೇಳಿದಳು- ಈ ರೀತಿಯಾಗಿ

ಪ್ರದಕ್ಷಿಣಾನಮಸ್ಕಾರಾನ್ ಕೃತ್ವಾ ಚ ದ್ವಿಜಪೂಜನಮ್ ।
ದತ್ವಾ ದಾನಾನಿ ತೇಭ್ಯಶ್ಚ [1] ಗೃಹೀತ್ವಾಶೀರ್ವಚೋ ದ್ವಿಜಾತ್ ॥೨೪॥

ತ್ರಿ-ಸಂಧ್ಯಾಕ್ಷೇತ್ರಮಗಮದ್ಯೋಗಸ್ಥಂ ದದೃಶೇ ಹರಮ್ ।
ತತ್ಪಾದಪಂಕಜೇ ಸ್ವೀಯಂ ಶಿರಃಪದ್ಮಂ ನ್ಯಧಾಚ್ಛಿವಾ ॥೨೫॥

ಉವಾಚ ನಿಜವೃತ್ತಾಂತಂ
ಗೌರ್ಯುವಾಚ :—

ಆಜ್ಞಾಂ ಪ್ರಾಪ್ಯ ವಿಭೋ! ತವ

ಆ ಸ್ಥಳಕ್ಕೆ ಅತ್ಯಪೂರ್ವ ಮಹಿಮೆಗಳನ್ನನುಗ್ರಹಿಸಿ, ದೇವನನ್ನು ವಿಧಿವಿಹಿತವಾದ ಮಂತ್ರ ಹಾಗೂ ಸಾಮಗ್ರಿಗಳಿಂದ ಪೂಜಿಸಿದಳು. ॥೨೩॥

ಪೂಜೆಯು ಸಾಂಗವಾಗಿ ನೆರವೇರಿದ ಬಳಿಕ ಗುಣೇಶನ ಮೂರ್ತಿಯ ಸುತ್ತಲೂ ಪ್ರದಕ್ಷಿಣೆ ಬಂದಳು. ಸಾಷ್ಟಾಂಗವೆರಗಿ ಅದಕ್ಕೆ ಗೌರವವನ್ನು ಸಲ್ಲಿಸಿದಳು. ಅನಂತರ ಆ ಪ್ರದೇಶದಲ್ಲಿ ನೆಲೆಸಿ ಅನುಷ್ಠಾನ ರತರಾಗಿದ್ದ ಮಹರ್ಷಿ ವರ್ಗವನ್ನೂ, ಇತರ ಬ್ರಾಹ್ಮಣೋತ್ತಮರನ್ನೂ ತನ್ನ ಸಮೀಪಕ್ಕೆ ಬರಮಾಡಿಕೊಂಡು ಭಕ್ತಿಯಿಂದ ಅವರನ್ನೆಲ್ಲ ಅರ್ಚಿಸಿದಳು. ಮತ್ತು ಬಹಳ ಬೆಲೆಬಾಳುವ ಅತ್ಯಪೂರ್ವ ವಸ್ತುಗಳನ್ನು ಆದರದಿಂದ ಅವರಿಗೆ ವಿಪುಲವಾಗಿ ದಾನಕೊಟ್ಟು ಅವರಿಂದ ಶುಭಾಶೀರ್ವಾದವನ್ನು ಪಡೆದಳು. ॥೨೪॥

ವಿಧಿವಿಹಿತ ಕರ್ತವ್ಯಗಳನ್ನೆಲ್ಲ ತನ್ನ ಮನಸ್ತೃಪ್ತಿಯಾಗುವಂತೆ ಮಾಡಿದ ಬಳಿಕ, ದೇವಿಯು ಮರಳಿ ತ್ರಿಸಂಧ್ಯಾಕ್ಷೇತ್ರಕ್ಕೆ ಹೊರಟು ಬಂದಳು. ಇತ್ತ, ಲೋಕಹರನಾದ ಕಾಲಹರನು ಯೋಗಾರೂಢನಾಗಿ ಆನಂದದಿಂದ ಕುಳಿತಿದ್ದನು. ಇದನ್ನು ನೋಡಿದ ಗಿರಿಜೆಯು ಭಕ್ತ್ಯನ್ವಿತಳಾಗಿ ದೇವನ ಚರಣಾರವಿಂದಗಳ ಮೇಲೆ ತನ್ನ ಶಿರಃ ಕಮಲವನ್ನು ಇರಿಸಿದಳು. ॥೨೫॥

ಪರಮೇಶ್ವರನು ದೇವಿಯ ಅಂಗಸ್ಪರ್ಶದಿಂದ ಬಹಿರ್ಮುಖನಾಗಲು

---

[1] ವಿವರಣೆಗೆ ಪರಿಶಿಷ್ಟವನ್ನು ನೋಡಿ.

ಉಪದೇಶಂ ಮನೋಃಶ್ಚಾಪಿ ದ್ವಾದಶಾಬ್ದಂ ಕೃತಂ ತಪಃ ॥೨೬॥

ಅವಾಯುಭಕ್ಷಯಾ ಸ್ವಾಮಿಂಸ್ತತಸ್ತುಷ್ಟೋ ಗುಣೇಶ್ವರಃ ।
ಉವಾಚ ಪರಮಪ್ರೀತೋ ಭಾವಂ ಜ್ಞಾತ್ವಾ ಪರಂ ಮಮ ॥೨೭॥

ಶ್ರೀ ಭಗವಾನುವಾಚ :—

ತವೋದರೇಽವತಾರಂ ತು ಕರಿಷ್ಯಾಮ್ಯಚಲಾತ್ಮಜೇ ! ।
ವಾಂಛಿತಂ ಚ ಕರಿಷ್ಯಾಮಿ ದೇವಾನಾಂ ಚ ತವಾಪಿ ಚ ॥೨೮॥

ದೇವಿಯು ತನ್ನ ಅದುವರೆಗಿನ ವೃತ್ತಾಂತವನ್ನೆಲ್ಲ ಈ ರೀತಿಯಾಗಿ ನಿವೇದಿಸಿದಳು.

ದೇವೀ :—

ವಿಭೋ ! ತಮ್ಮಿಂದ ಏಕಾರ್ಣವ ಮೂಲ ಮಹಾಮಂತ್ರವನ್ನು ಉಪದೇಶ ಪಡೆದು ತಮ್ಮ ಅನುಮತಿಯಂತೆ ತಪಶ್ಚರ್ಯೆಗೆ ಹೊರಟೆನಷ್ಟೇ ! ಒಟ್ಟು ಹನ್ನೆರಡು ವರ್ಷಗಳ ವರೆಗೆ ನಾನು ಕಠಿಣವಾಗಿ ತಪಿಸಿದೆನು. ॥೨೬॥

ತಪೋಽನುಷ್ಠಾನ ಕಾಲದಲ್ಲಿ ವಾಯುವನ್ನು ಸಹ ನಾನು ಆಹಾರವಾಗಿ ಸೇವಿಸುತ್ತಿರಲಿಲ್ಲ. ಸ್ವಾಮಿ! ಇದರಿಂದ ಭಗವಾನ್ ಗುಣೇಶನು ಬಹಳ ಸಂತುಷ್ಟನಾಗಿ, ನನಗೆ ತನ್ನ ದಿವ್ಯ ರೂಪವನ್ನು ಅಭಿವ್ಯಕ್ತಿಗೊಳಿಸಿದನು. ನನ್ನ ಏಕಾಗ್ರತೆಗಾಗಿ ದೇವನು ಬಹಳ ಮಟ್ಟಿಗೆ ಮೆಚ್ಚಿದನು. ಮತ್ತು ನನ್ನನ್ನು ಸಂಬೋಧಿಸಿ ವಾತ್ಸಲ್ಯದಿಂದ ಹೀಗೆಂದು ನುಡಿದನು.

ದೇವ :—

ಪರ್ವತನಂದಿನಿ ! ನಿನ್ನ ಉದರದಲ್ಲಿ ನಾನು ಅವತರಿಸುವೆನು. ಇದರಿಂದ ನಿನ್ನ ಅಭಿಲಾಷೆಯನ್ನು ಪೂರ್ಣಗೊಳಿಸಿದಂತೆ ಆಗುವುದು. ಇಷ್ಟೇ ಅಲ್ಲ, ಲೋಕದಲ್ಲಿ ದುಷ್ಟ ದೈತ್ಯರು ಹೆಚ್ಚಿಹೋಗಿ, ಧಾರ್ಮಿಕರಾದ ಯೋಗಿಗಳಿಗೂ, ದೇವತೆಗಳಿಗೂ ಮತ್ತು ಇತರ ಸಾತ್ತ್ವಿಕರಿಗೂ ವಿಶೇಷ ರೀತಿಯಿಂದ ತೊಂದರೆಯನ್ನು

ಗೌರ್ಯುವಾಚ :—

ಏವಮುಕ್ತ್ವಾ ಕ್ಷಣೇನಾಸೌ ತತ್ರೈವಾಂತರ್ದಧೇ ವಿಭುಃ ।
ತತೋಽಹಂ ಪರಮಪ್ರೀತಾ ಮೂರ್ತಿಂ ಪ್ರಾಸಾದಮೇವ ಚ ॥೨೯॥

ವಿಧಾಯ ಸ್ಥಾಪಯಿತ್ವಾ ತಾಂ ತವ ಅಂತಿಕಮುಪಾಗತಾ ।

ಕ ಉವಾಚ :—
ಏವಂ ಶ್ರುತ್ವಾ ಪ್ರಿಯಾವಾಕ್ಯಂ ಪ್ರಹೃಷ್ಟಮಾನಸೋ ಹರಃ ॥೩೦॥

ಕೊಡುತ್ತಿರುವುದರಿಂದ ನಿರ್ವಿಣ್ಣರಾದ ದೇವತೆಗಳು ನನ್ನನ್ನು ಕುರಿತು ತಪಿಸಿ 'ಕೂಡಲೇ ಅವತರಿಸಬೇಕೆ'ಂದು ಪ್ರಾರ್ಥಿಸಿರುವರು. ಈಗ ನಾನು ಅವತರಿಸುವೆನಾದರೆ, ಅವರ ಕಾರ್ಯವನ್ನೂ ಸಾಧಿಸಿಕೊಟ್ಟಂತಾಗುವುದು. ॥೨೮॥

ಗೌರೀ :—

ಹೀಗೆ ಹೇಳಿ ಒಂದು ಕ್ಷಣದೊಳಗಾಗಿಯೇ ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು. ಅಮೃತೋಪಮಮಯ ಕರ್ಣರಸಾಯನ ಈ ನುಡಿಗಳನ್ನು ಕೇಳಿ ನನಗೆ ಬಹಳ ಸಂತೋಷ ಉಂಟಾಯಿತು. ದೇವನು ಯಾವ ರೂಪದಿಂದ ನನಗೆ ದರ್ಶನವನ್ನಿತ್ತಿದ್ದನೋ, ಅದನ್ನೇ ಹೋಲುವಂತಹ ಒಂದು ಸುಂದರ ಮೂರ್ತಿಯನ್ನು ನಿರ್ಮಿಸಿ, ದೇವನು ದರ್ಶನವಿತ್ತ ಪವಿತ್ರ ಸ್ಥಳದಲ್ಲಿ ಅದನ್ನು ವಿಧಿಪೂರ್ವಕವಾಗಿ ಪ್ರತಿಷ್ಠಿಸಿದೆನು, ಮತ್ತು ಅದರ ಸುತ್ತಲೂ ಭವ್ಯವಾದ ಮಂದಿರ ಒಂದನ್ನೂ ಕಟ್ಟಿಸಿರುವೆನು. ॥೨೯॥

ಮೊದಲು ಆ ಮೂರ್ತಿಯನ್ನು ನಾನು ಪೂಜಿಸಿದ್ದಲ್ಲದೇ, ಪ್ರತಿ ದಿವಸ ತ್ರಿಷವಣಗಳಲ್ಲೂ ಪೂಜಾ ನಿವೇದನಾದಿಗಳು ತಪ್ಪದೆ ನಡೆಯುತ್ತ ಬರುವಂತೆ ಏರ್ಪಾಡನ್ನೂ ಮಾಡಿ ಅನಂತರ ಪ್ರಾಣನಾಥ ! ತಮ್ಮ ಚರಣಕಮಲಗಳ ಸಂದರ್ಶನಕ್ಕಾಗಿ ಧಾವಿಸುತ್ತ ಇಲ್ಲಿಗೆ ಬಂದಿರುವೆನು.

ಬ್ರಹ್ಮಾ :—

ಪ್ರೇಯಸಿಯ ಶ್ರವಣಮಧುರ ಮಾತುಗಳನ್ನು ಕೇಳಿದೊಡನೆಯೇ ತ್ರಿಪುರ

ಪ್ರೋತ್ಫುಲ್ಲನಯನಃ ಪ್ರಾಹ

ಶ್ರೀ ಭಗವಾನುವಾಚ :—

ಧನ್ಯಾಸಿ ಗಿರಿಜಾತ್ಮಜೇ ! ।
ಸಾಕ್ಷಾದ್ದೃಷ್ಟೋ ಗುಣೇಶಸ್ತೇ ಗೃಹೇ ಸೋಽವತರಿಷ್ಯತಿ ॥೩೦॥
ಹನಿಷ್ಯತಿ ಮಹಾದೈತ್ಯಂ ಭೂ–ಭಾರಂ ಚ ಹರಿಷ್ಯತಿ ।
ಇಂದ್ರಾದಿಲೋಕಪಾಲಾನಾಂ ಸ್ವ–ಪದಾನಿ ಪ್ರದಾಸ್ಯತಿ ॥೩೧॥

ಹರನು ಪ್ರಹೃಷ್ಟಾಂತಃಕರಣನಾದನು. ॥೩೦॥

ಜಗದೊಡೆಯ ತ್ರಿಲೋಚನನು ಹರ್ಷಾತಿರೇಕದಿಂದ ತನ್ನ ಮೂರೂ ಕಣ್ಣು ಗಳನ್ನು ಅರಳಿಸಿ ಆದಿಮಾಯೆಯನ್ನು ನೋಡುತ್ತ ಹೀಗೆಂದು ನುಡಿದನು.

ಶ್ರೀ ಭಗವಾನ್ :—

ಗಿರಿರಾಜವಂಶವರ್ಧಿನಿ ! ನೀನೇ ಪರಮಧನ್ಯಳು. ಯೋಗಿಮಾನಸಸರೋವರ ರಾಜಹಂಸನಾದ ಗುಣೇಶನನ್ನು ಸಹ ಸಾಕ್ಷಾತ್ಕರಿಸಿಕೊಂಡಿರುವೆ. ನಿನ್ನಂತಹ ಭಾಗ್ಯ ಶಾಲಿನಿಯನ್ನು ಮತ್ತೆಲ್ಲೂ ನಾನು ಕಂಡಿರುವುದಿಲ್ಲ. ಅಷ್ಟೇ ಅಲ್ಲದೇ, ಅವನು ನಿನ್ನ ಮನೆಯಲ್ಲೇ ಶಿಶುರೂಪದಿಂದ ಅವತರಿಸಬೇಕೆಂದು ಬೇಡಿ ಅದಕ್ಕೂ ಅವನನ್ನು ಒಡಂಬಡಿಸಿರುವೆ, ಎಂದ ಮೇಲೆ ಇದಕ್ಕೂ ಹೆಚ್ಚಿನ ಭಾಗ್ಯ ಮತ್ತಾವುದಿದೆ ? ದೇವನು ನಿಶ್ಚಯವಾಗಿಯೂ ನಿನ್ನ ಉದರದಲ್ಲಿ ಅವತರಿಸುತ್ತಾನೆ, ಚಿಂತಿಸಬೇಡ. ॥೩೦॥

ಮಹಾದೈತ್ಯನಾದ ಸಿಂಧುರಾಕ್ಷಸನನ್ನು ಸಪರಿವಾರವಾಗಿ ನಿಗ್ರಹಿಸಿ, ಭೂ–ದೇವಿಗೆ ದುಷ್ಟರಿಂದ ಉಂಟಾಗಿರುವ ಭಾರವನ್ನು ಇಳುಹುವನು. ಇಂದ್ರಾದಿ ಲೋಕಪಾಲಕರಿಗೆಲ್ಲ ಕೈಬಿಟ್ಟು ಹೋಗಿರುವ ಅವರವರ ಸ್ಥಾನ–ಮಾನಗಳನ್ನು ಹಿಂದಿರುಗಿ ಕೊಡುವನು. ॥೩೧

ಏತನ್ಮಮ ವಚೋ ದೇವಿ ! ನ ಚ ವಿಸ್ಮರ್ತುಮರ್ಹಸಿ ।

ಕ ಉವಾಚ :—

ಏವಮುಕ್ತ್ವಾ ಶಿವೋ ದೇವ ಆಲಿಲಿಂಗ ಶಿವಾಂ ತದಾ ॥೩೩॥

ಆನಂದಾಶ್ರೂಣಿ ಮುಂಚಂತೌ ರೋಮಾಂಚಿತತನೂ ಉಭೌ ।
ತಿಷ್ಠಂತೌ ಪರಮಾಹ್ಲಾದಯುತಾವಂಬಾ-ಮಹೇಶ್ವರೌ ॥೩೪॥

ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ 'ಗಿರಿಜಾವರಪ್ರಾಪ್ತಿಕಥನಂ'
ನಾಮಾಶೀತಿತಮೋಽಧ್ಯಾಯಃ

---

ಮಹಾದೇವಿ ! ನಾನು ನುಡಿದುದು ವಾಸ್ತವವಾದುದು ಎಂಬುದು ಈಗ ಲಾದರೂ ನಿನ್ನ ಅನುಭವಕ್ಕೆ ಬಂದಿತೇ ? ಇದೋ ! ನೋಡು ನಾನು ಮೇಲೆ ಹೇಳಿದ ಈ ಮಾತುಗಳಲ್ಲಾವುದನ್ನೂ ಮರೆಯಬೇಡ.

ಬ್ರಹ್ಮ :—

ಹೀಗೆ ಹೇಳಿ ಮಹಾದೇವನು ಹರ್ಷೋದ್ರೇಕಗೊಂಡು ಜಗನ್ಮಾತೆಯನು ಬಿಗಿದಪ್ಪಿಕೊಂಡನು. ॥೩೩॥

ಇಬ್ಬರೂ ರೋಮಾಂಚಾಂಚಿತದೇಹಿಗಳಾದರು. ಆನಂದಾಶ್ರುಗಳನ್ನು ಧಾರಾಕಾರವಾಗಿ ಸುರಿಸಿದರು. ಜಗತ್ತಿಗೇ ತಾಯಿ-ತಂದೆಯರಾದ ಭವಾನೀ, ಭವಾನೀವಲ್ಲಭ ಇವರಿಬ್ಬರೂ ಅತ್ಯಂತ ಆಹ್ಲಾದದಿಂದ ಎಷ್ಟೋ ಹೊತ್ತು ತಲ್ಲೀನ ರಾಗಿ ನಿಂತುಬಿಟ್ಟರು. ॥೩೪॥

ಇಲ್ಲಿಗೆ ಶ್ರೀ ಗಣೇಶಪುರಾಣ ಉತ್ತರಖಂಡದಲ್ಲಿ 'ಗಿರಿಜಾ ವರಪ್ರಾಪ್ತಿ
ಕಥನ' ಎಂಬಲ್ಲಿಗೆ ಎಂಭತ್ತನೆಯ ಅಧ್ಯಾಯಾನುವಾದವು
ಪೂರ್ಣವಾದುದು.



॥ ಶ್ರೀ ಗಣೇಶಾಯ ನಮಃ ॥

## ಅಷ್ಟೈಕಾಶೀತಿತಮೋಽಧ್ಯಾಯಃ

ಕ ಉವಾಚ :—

ತತಃ ಸಾ ಪಾರ್ವತೀ ಹೃಷ್ಟಾ ಸಖೀಜನಮನುಗಾನ್ನಿಜಮ್ ।
ವೃತ್ತಾಂತಂ ಸರ್ವಮಾಚಖ್ಯೌ ಹೃಷ್ಟರೂಪೋಽಪಿ ಸೋಽಭವತ್ ॥೧॥
ತತಃಪ್ರಭೃತಿ ಸಾ ದೇವೀ ಗುಣೇಶಮಾನಸಾಭವತ್ ।
ಪಶ್ಯತಿ ಸ್ಮಾನ್ಯಬಾಲಂ ಸಾ 'ಗುಣೇಶೋಽಯಂ ಭವೇದಿ'ತಿ ॥೨॥

॥ ಶ್ರೀ ಗಣೇಶಾಯ ನಮಃ ॥

## ೮೧ ನೆಯ ಅಧ್ಯಾಯ.

ಬ್ರಹ್ಮ :—

ಅನಂತರ ಜಗದೀಶ್ವರಿಯು ಪ್ರಸನ್ನಾಂತಃಕರಣಗೊಂಡು ತನ್ನ ಸಖೀಜನರ ಬಳಿಗೆ ಧಾವಿಸಿ ಹೋದಳು. ನಡೆದ ವೃತ್ತಾಂತವನ್ನೆಲ್ಲ ಬಹಳ ಉತ್ಸಾಹದಿಂದ ಉಸುರಿದಳು. ತಮ್ಮ ಸಖಿಯು ಸಾಧಿಸಿದ ಈ ಅಪೂರ್ವ ವರಕ್ಕಾಗಿ ಸಖಿಯರು ಅತಿಯಾಗಿ ಹರ್ಷಿಸಿದರು. ॥೧॥

ಅಂದು ಮೊದಲ್ಗೊಂಡು ಗಿರಿಜಾದೇವಿಗೆ ಗುಣೇಶನ ಗೀಳೇ ಹಿಡಿದು ಹೋಯಿತು. ಸರ್ವದಾ ಗುಣೇಶನನ್ನೇ ಧ್ಯಾನಿಸತೊಡಗಿದಳು. ಅವರಿವರ ಬಾಲಕರನ್ನು ಕಂಡ ಕೂಡಲೇ ಪ್ರೇಮಾರ್ದ್ರ ದೃಷ್ಟಿಯಿಂದ ಅವರನ್ನು ದಿಟ್ಟಿಸುತ್ತ 'ಗುಣೇಶನಾಗಿರಬಹುದೇ ?' ಎಂದು ಹಂಬಲಿಸುವಳು. ॥೨॥

ಗೃಹೀತುಂ ಧಾವತಿ ಯದಾ ತನ್ಮಾತ್ರಾ ಸಾ [1] ನಿಷಿಧ್ಯತೇ ।
ನ ಕ್ವಾಪಿ ವಿಶ್ರಮಂ ಯಾತಿ ಗುಣೇಶಧ್ಯಾನತತ್ಪರಾ ॥೩॥

ತನ್ನಾಮ ಜಪತೇ ನಿತ್ಯಂ ತನ್ಮಯಂ ಲೋಕತೇ ಜಗತ್ ।
ಪಪ್ರಚ್ಛ ಚ ಸಖೀಃ ಸರ್ವಾ

ಗೌರ್ಯುವಾಚ :—

' ಗುಣೇಶೋಽಽಯಾಸ್ಯತೇ ಕದಾ ? ॥೪॥

ಈ ಭಾವನೆಯು ಅವಳ ಮನಸ್ಸಿಗೆ ಹೊಳೆದೊಡನೆಯೇ ಆ ಬಾಲಕನ ಸಮಾಪಕ್ಕೆ ಧಾವಿಸಿ ನಡೆದು, ಅವನನ್ನು ಎತ್ತಿಕೊಳ್ಳಲು ಹವಣಿಸುವಳು. ಆದರೆ, ಆ ಬಾಲಕರ ಜನನಿಯರು ಇವಳ ಹುಚ್ಚುತನವನ್ನು ಕಂಡು ನಸು ನಕ್ಕು ' ಇವನು ತಮ್ಮ ಬಾಲಕ ' ಎಂಬುವನ್ನು ಸ್ಪಷ್ಟಪಡಿಸಿ, ಅವನನ್ನು ಎತ್ತಿಕೊಳ್ಳದಂತೆ ನಿಷೇಧಿಸುವರು. ಯಾವ ಬಾಲಕನನ್ನು ಎತ್ತಿಕೊಂಡರೂ ಹೀಗೆಯೇ ಆಗಲಾರಂಭಿಸಿದುದರಿಂದ ದೇವಿಯು ಬಹಳ ನಿರಾಶೆಗೊಂಡಳು. ಯಾವ ಸ್ಥಳಕ್ಕೆ ಹೋದರೂ ಅವಳಿಗೆ ನೆಮ್ಮದಿಯೇ ದೊರೆಯಲಿಲ್ಲ. ಸರ್ವದಾ ದೇವನನ್ನೇ ಧ್ಯಾನಿಸುತ್ತಲಿದ್ದಳು. ॥೩॥

ಬಾಯಿಯಿಂದ ಭಗವಾನ್ ಗುಣೇಶನ ದಿವ್ಯ ನಾಮಗಳನ್ನೇ ಜಪಿಸತೊಡಗಿದಳು. ಯಾರನ್ನೇ ನೋಡಲಿ, ಅವಳಿಗೆ ಅವರು ಗುಣೇಶನಂತೆಯೇ ತೋರಿಬರುವರು. ಸಜೀವ-ನಿರ್ಜೀವ ವಸ್ತುಗಳ ಪರಿವೆಯು ಸಹ ಕೊನೆಕೊನೆಗೆ ಅವಳಿಗೆ ಆಗಲೊಲ್ಲದು. ಆಗ ಸಖಿಯರನ್ನು ಕುರಿತು ಹೀಗೆಂದು ಪ್ರಶ್ನಿಸಲಾರಂಭಿಸಿದಳು.

ಗೌರೀ :—

ಸಖಿಯರೇ ! ಗುಣೇಶನು ಎಂದಿಗೆ ನನಗೆ ಪುತ್ರನಾಗಿ ಜನಿಸಿಯಾನು, ಹೇಳಬಲ್ಲಿರಾ ? ॥೪॥

---

[1] ವಿವರಣೆಗೆ ಪರಿಶಿಷ್ಟವನ್ನು ಓದಿರಿ.

ಪಿತ್ರಾ ಮೇ ಕಥಿತಂ ಪೂರ್ವಂ ವ್ರತಮೀಶಾಪ್ತಯೇ ಶುಭಮ್ ।
ಪಾರ್ಥಿವಸ್ಯ ಗಣೇಶಸ್ಯ ಪೂಜನಂ ಚ ಯಥಾವಿಧಿ ॥೫॥

ತೇನ ವ್ರತಪ್ರಭಾವೇಣ ಪ್ರಾಪ್ತಾಸ್ಮಿ ಶಂಕರಂ ಪ್ರಿಯಮ್ ।
ಪುನಸ್ತದಾಚರಿಷ್ಯಾಮಿ ಗಣೇಶಪ್ರಾಪ್ತಯೇಽಧುನಾ ॥೬॥

ತತೋ ಭಾದ್ರಚತುರ್ಥ್ಯಾಂ ಸಾ ಕೃತ್ವಾ ಮೂರ್ತಿಂ ಮುದಾನ್ವಿತಾ ।
ಉಪಚಾರೈಃ ಷೋಡಶಭಿಃ ಪುಪೂಜ ಚ ಗಜಾನನೀಮ್ ॥೭॥

---

ಬಹಳ ಹಿಂದೆ, ಎಂದರೆ ನಾನು ಕನ್ಯೆಯಾಗಿದ್ದಾಗ ಪರಮೇಶ್ವರನನ್ನೇ ಪತಿಯನ್ನಾಗಿ ಪಡೆಯಬೇಕೆಂದು ಅಭಿಲಷಿಸಿದೆನಷ್ಟೇ! ನನ್ನ ಈ ಸದಭಿನಿವೇಶವನ್ನು ಅರಿತ ನನ್ನ ಜನಕ; ಮಹಾಜ್ಞಾನಿಯಾದ ಹಿಮವಂತನು ಶಂಕರನನ್ನು ಪಡೆಯಲಿಕ್ಕೆ ಸಾಧಕವಾದ ಒಂದು ಅಪೂರ್ವ ವ್ರತವನ್ನು ಉಪದೇಶಿಸಿದನು. ಅದು ಬಹಳ ಶುಭವಾದ ವ್ರತ. ಇದನ್ನೇ 'ಗಣೇಶನ ವ್ರತ' ಎಂದು ತಿಳಿದವರು ಕರೆಯುತ್ತಾರೆ. ಶುದ್ಧವಾದ ಮೃತ್ತಿಕೆಯನ್ನು ತಂದು, ಅದರಿಂದ ಗಣೇಶನ ಮೂರ್ತಿಯನ್ನು ಮಾಡಿ, ವಿಧಿಪೂರ್ವಕವಾಗಿ ಅರ್ಚಿಸುವುದೇ ಈ ವ್ರತಾಚರಣೆಯ ವಿಧಾನ, ॥೫॥

ಅದರ ಪ್ರಭಾವ ವಿಶೇಷದಿಂದಲೇ ಪ್ರಿಯರಮಣನಾದ ಪರಮೇಶ್ವರನನ್ನು ಪತಿಯನ್ನಾಗಿ ಪಡೆಯುವಂತಾದೆನು. ಈಗಲಾದರೂ ಮತ್ತೊಮ್ಮೆ ಈ ವ್ರತವನ್ನು ವಿಧಿಪೂರ್ವಕವಾಗಿ ಆಚರಿಸುವೆನು. ಎಂದರೆ ಪರಮಾತ್ಮನಾದ ಗಣೇಶನನ್ನು ನಾನು ಮಗನನ್ನಾಗಿ ಪಡೆಯುವೆನು. ॥೬॥

ಅನಂತರ ಪರಮೇಶ್ವರಿಯು ಭಾದ್ರಪದ ಶುಕ್ಲ ಚತುರ್ಥೀ ದಿವಸ ನಸುಕಿನಲ್ಲೇ ಎದ್ದು ಪ್ರಾತರ್ವಿಧಿಗಳನ್ನು ಮುಗಿಸಿಕೊಂಡು ಸರ್ವಾಂಗಸುಂದರವಾದ ಮಹಾಗಣೇಶನ ಮಣ್ಮಯ ಮೂರ್ತಿಯೊಂದನ್ನು ನಿರ್ಮಿಸಿದಳು. ಸಕಲ ವಿಧ ಪೂಜೋಪಕರಣಗಳನ್ನೂ ಸಂಗ್ರಹಿಸಿಕೊಂಡು ಬಂದು ಹದಿನಾರು ಬಗೆಯ ಉಪಚಾರಗಳನು ಸಲ್ಲಿಸಿ ಆ ಗಜಾನನ ಮೂರ್ತಿಯನ್ನು ಭಕ್ತಿಯಿಂದ ಅರ್ಚಿಸಿದಳು. ॥೭॥

[1]ಷಡ್ಭಿರ್ಧ್ಯಾನಾದಿಕೈಃ ಪಂಚಾಮೃತೈರ್ವಸ್ತ್ರೈರನೇಕಶಃ ।
ಯಜ್ಞೋಪವೀತಗಂಧೈಶ್ಚ ಧೂಪದೀಪೈರ್ಯಥಾವಿಧಿ ॥೮॥

ನಾನಾಪುಷ್ಪೈಶ್ಚ ನೈವೇದ್ಯೈರ್ನಾನಾವಿಧಫಲೈರಪಿ ।
ತಾಂಬೂಲೈರಾದ್ರಪೂಗೈಶ್ಚ ಲವಂಗಾದಿಸಮನ್ವಿತೈಃ ॥೯॥

ದೂರ್ವಾಭಿಶ್ಚ ಶಮೀಪತ್ರೈರ್ದಕ್ಷಿಣಾಭಿರನೇಕಶಃ ।
ಆರಾರ್ತಿಕೈರ್ವಿಚಿತ್ರೈಶ್ಚ ಮಂತ್ರಪುಷ್ಪೈಃ ಸ್ತವೈರಪಿ ॥೧೦॥

---

ಆರು ಬಗೆಯಿಂದಲೂ ಧ್ಯಾನವನ್ನು ಮಾಡಿದಳು. ಹಾಲು, ಮೊಸರು, ತುಪ್ಪ, ಜೇನುತುಪ್ಪ, ಸಕ್ಕರೆ ಇವನ್ನು ದೇವನ ಮೂರ್ತಿಗೆ ಎರೆದಳು. ದಿವ್ಯ ವಸ್ತ್ರಗಳನ್ನು ಉಡಿಸಿ, ಹೊದಿಸಿದಳು. ಎಷ್ಟೆಷ್ಟು ಬೆಲೆಬಾಳುವ ವಸ್ತ್ರಗಳನ್ನು ಧರಿಸಿದರೂ ಅವಳಿಗೆ ತೃಪ್ತಿಯೇ ಆಗಲೊಲ್ಲದು. ಸ್ವರ್ಣನಿರ್ಮಿತ ಯಜ್ಞೋಪವೀತವನ್ನು ಸಮರ್ಪಿಸಿದಳು. ದಿವ್ಯ ಪರಿಮಳ ಗಂಧವನ್ನು ದೇವನ ದೇಹಕ್ಕೆ ಪೂಸಿದಳು. ಧೂಪ, ಏಕಾರ್ತಿಕ್ಯದೀಪ ಇವನ್ನು ವಿಧಿಪೂರ್ವಕವಾಗಿ ಭಕ್ತಿಯಿಂದ ಎತ್ತಿದಳು. ॥೮॥

ಬಗೆ ಬಗೆಯ, ವರ್ಣ ವರ್ಣದ ಸುಗಂಧಿ ಕುಸುಮಗಳನ್ನು ಯಥೇಷ್ಟವಾಗಿ ತಂದು, ಆ ಮೂರ್ತಿಯನ್ನು ತನಗೆ ಸೊಗಸಿದಂತೆ ಅಲಂಕರಿಸಿದಳು. ವಿವಿಧ ಪಕ್ವಾನ್ನಗಳನ್ನೂ, ಅನೇಕ ಬಗೆಯ ಸು-ಪಕ್ವ ಫಲಗಳನ್ನೂ ತಂದು ಒಪ್ಪಿಸಿದಳು. ಸು-ಕೋಮಲ ನಾಗವಲ್ಲೀದಳ (ವೀಳೆಯದೆಲೆ) ಗಳನ್ನೂ, ಸ್ನಿಗ್ಧ, ಮಧುರ ಪೂಗಫಲಚೂರ್ಣ (ಅಡಿಕೆಯ ಪುಡಿಯ) ವನ್ನೂ ಕೊಟ್ಟಳು. ಲವಂಗ, ಏಲಕ್ಕಿ, ಬಾಲಮೆಣಸು, ಜಾಜೀಕಾಯಿ, ಪತ್ರೆ ಮೊದಲಾದ ಮುಖವಾಸಕ ವಸ್ತುಗಳನ್ನು ಆ ತಾಂಬೂಲದೊಂದಿಗೆ ಇರಿಸಿದಳು. ॥೯॥

ಎಳೆಯ ದೂರ್ವಾದಳ, ಶಮೀಪತ್ರ ಇವನ್ನು ಪ್ರೀತಿಯಿಂದ ಅರ್ಪಿಸಿದಳು. ಸುವರ್ಣ, ರತ್ನರಾಶಿ ಇವನ್ನು ದಕ್ಷಿಣಾಸ್ಥಾನದಲ್ಲಿರಿಸಿದಳು. ತನ್ನ ಲಲಿತಕಲಾಕೌಶಲವನ್ನೆಲ್ಲ ವಿನಿಯೋಗಿಸಿ ಸಿದ್ಧಪಡಿಸಿದ ತಟ್ಟೆಗಳಲ್ಲಿ ದೇವನಿಗೆ ಕರ್ಪೂರಾರ್ತಿ

ಪ್ರದಕ್ಷಿಣಾಪ್ರಾರ್ಥನಾಭಿರ್ಬ್ರಾಹ್ಮಣಾನಾಂ ಚ ಪೂಜನೈಃ !
ಪರಿತುಷ್ಟಾ ಮೂರ್ತಿರಸೌ ಪಾರ್ಥಿವೀ ಚೇತನಾಮಗಾತ್ ॥೧೧॥

ತದೈವ ಪ್ರಭಯಾ ತಸ್ಯಾಃ ಕೋಟಿಸೂರ್ಯಪ್ರಭಾ ಜಿತಾ ।
ಕಲ್ಪಾನಲಾರ್ಚಿರ್ವಿಜಿತಾನಂತಚಂದ್ರಪ್ರಭಾ ಹೃತಾ ॥೧೨॥

ಹತನೇತ್ರಪ್ರಭಾ ಗೌರೀ ಮೂರ್ಛಿತಾ ಪತಿತಾ ಭುವಿ ।
ಮುಹೂರ್ತಾತ್ಸಾವಧಾನಾ ಸಾ ಪ್ರೋವಾಚ ಜಗದೀಶ್ವರಮ್ ॥೧೩॥

ಯನ್ನು ಎತ್ತಿದಳು. ಮಂತ್ರಪುಷ್ಪಸಮರ್ಪಣೆಯಾದನಂತರ ಅನೇಕ ಬಗೆಯಿಂದ ಸ್ತುತಿಸಲಾರಂಭಿಸಿದಳು. ॥೧೦॥

ಬಹಳ ಸಲ ಆ ಮೂರ್ತಿಗೆ ಪ್ರದಕ್ಷಿಣೆ ಬಂದು, ಸಾಷ್ಟಾಂಗವಾಗಿ ಪ್ರಣಮಿಸಿದಳು. ಅನೇಕ ಬೇಡಿಕೆ (ಪ್ರಾರ್ಥನೆ) ಗಳನ್ನು ದೈವೀಮೂರ್ತಿಯಲ್ಲಿ ನಿವೇದಿಸಿದಳು. ತಾನು ಅನುಷ್ಠಿಸಿದ ಪೂಜಾಸಾಂಗತಾಸಿದ್ಧಿಗೋಸ್ಕರ ಅನೇಕ ಮಂದಿ ಬ್ರಾಹ್ಮಣವರ್ಯರನ್ನು ಸಮೀಪಕ್ಕೆ ಬರಮಾಡಿಕೊಂಡು, ಅವರನ್ನೂ ವಿಧಿವಿಹಿತ ವಿಧಾನದಿಂದ ಪೂಜಿಸಿದಳು. ವತ್ಸ, ವ್ಯಾಸ ! ಮುಂದೆ ನಡೆದ ಚಮತ್ಕೃತಿಯನ್ನಾದರೂ ಕೇಳು. ದೇವಿಯು ಸಲ್ಲಿಸಿದ ಭಾವಪರಿಪೂರಿತ ಪೂಜೆ, ಪೂಜಾಕಾಲದಲ್ಲಿ ಉಚ್ಚರಿಸಿದ ವೇದಮಂತ್ರಗಳು ಇವುಗಳ ಪ್ರಭಾವದಿಂದ ಪರಮ ಸಂತುಷ್ಟನಾದ ಪರಮಾತ್ಮನು ಆ ಮೃಣ್ಮಯಮೂರ್ತಿಯಲ್ಲಿ ಇದ್ದಕ್ಕಿದ್ದಂತೆಯೇ ಆವೇಶಗೊಂಡು ಅದು ಸಚೇತನವಾಗುವಂತೆ ಮಾಡಿದನು. ॥೧೧॥

ಆಗ ಆ ಪಾರ್ಥಿವ ಮೂರ್ತಿಯಲ್ಲಿ ಸ್ವಾಭಾವಿಕವಾದ ತೇಜವು ಅರ್ಥಾತ್ ಜೀವಕಳೆಯು ಉಕ್ಕಲಾರಂಭಿಸಿತು. ಆ ತೇಜವು ಕೋಟಿ ಸೂರ್ಯರು ಒಮ್ಮೆಲೇ ಉದಿಸಿದರೆ ಉಂಟಾಗುವ-ಪ್ರಭೆಯನ್ನೂ ಮೀರಿಸುತ್ತಲಿದ್ದಿತು. ಪ್ರಲಯಕಾಲದ ಅಗ್ನಿಜ್ವಾಲೆಗಳಿಗಿಂತಲೂ ಪ್ರಖರತಮವಾಗಿದ್ದಿತು. ಕೋಟ್ಯವಧಿ ಅಮೃತರಶ್ಮಿಗಳ ತಂಪನ್ನೂ ಜಯಿಸುತ್ತಲಿದ್ದಿತು. ॥೧೨॥

ದೇವನ ಆ ಪ್ರಚಂಡ ಪ್ರಭೆಯನ್ನು ಕಂಡೊಡನೆಯೇ ಗಿರಿಜೆಯ ದೃಕ್ಶಕ್ತಿ

ದೇವ್ಯುವಾಚ :—

ಕಿಂ ಮಯಾ ವಿಕೃತಂ ದೇವ ! ಪೂಜನೇ ನ ಚ ತರ್ಕಯೇ |
ಅಭಿಚಾರೋಽಥವಾ ಕೇನ ಪ್ರಯುಕ್ತೋಽಯಂ ನ ವೇದ್ಮಿ ತವ್ ||೧೪||
ಕಥಂ ಮೇ ವಿಫಲೋ ಯತ್ನೋ ಜಾತೋ ? ದೇವ, ಕೃಪಾನಿಧೇ ! |

ಕ ಉವಾಚ :—

ಶ್ರುತ್ವೇತ್ಥಂ ವಚನಂ ತಸ್ಯಾಸ್ಸೌಮ್ಯತೇಜಾ ಅಭೂತ್ಪ್ರಭುಃ ||೧೫||

---

ಯೇ ಕುಂಠಿತವಾಗಿ ಹೋಯಿತು. ಕಣ್ಣು ಕತ್ತಲೆ ಗುಡಿಸಿದಂತಾಗಿ, ಬವಳಿ ಬಂದು ನೆಲದಲ್ಲಿ ಬಿದ್ದು ಬಿಟ್ಟಳು. ಒಂದು ಮುಹೂರ್ತಕಾಲದ ಒಳಗಾಗಿಯೇ ಸಾವರಿಸಿ ಕೊಂಡು ಎದ್ದು ಕುಳಿತಳು. ಮತ್ತು ತನ್ನ ಪ್ರತೋದ್ದಿಷ್ಟವಾದ ದೈವ; ಗಣೇಶನನ್ನು ಕುರಿತು ಅಂತರಂಗದಲ್ಲಿಯೇ ಹೀಗೆಂದು ಪ್ರಾರ್ಥಿಸಿದಳು. ||೧೩||

ಪಾರ್ವತೀ :—

ಭಗವನ್ ! ನಿನ್ನನ್ನು ಆರಾಧಿಸುವ ವಿಷಯದಲ್ಲಾಗಲೀ, ಧ್ಯಾನ ಮಾಡುವಾಗಲಾಗಲೀ, ನಾನು ವೈಪರೀತ್ಯ ಅಪಚಾರವೆಸೆಗಿದಂತೆ ನನಗೆ ನೆನಪಿರುವುದಿಲ್ಲ. ನಾನು ದೇವನಾದ ನಿನ್ನನ್ನು ಅರ್ಚಿಸುತ್ತಿರುವುದನ್ನು ನೋಡಿ ಸಹಿಸಲಾರದೇ ಯಾರೋ ದುರಾತ್ಮರು ಮಾಟ, ಮಾಯೆಗಳನ್ನೇನಾದರೂ ಪ್ರಯೋಗಿಸಿರುವರೋ, ಒಂದೂ ತಿಳಿಯಲೊಲ್ಲದಲ್ಲ ? ಮುಂದೇನು ಗತಿ ? ||೧೪||

ದೇವ, ಕೃಪಾನಿಧೇ ! ಹನ್ನೆರಡು ವರ್ಷಗಳ ಕಾಲ ನಾನು ಕಠಿಣವಾಗಿ ತಪಸ್ಸನ್ನು ಆಚರಿಸಿ ನಿನ್ನನ್ನು ಒಲಿಸಿಕೊಂಡು ಪಡೆದ ವರಕ್ಕೆ ಪ್ರಕೃತ ಅಡ್ಡಿಯಾಗುತ್ತಲಿದೆಯಲ್ಲ ? ನನ್ನ ಪ್ರಯತ್ನವೆಲ್ಲವೂ ವಿಫಲವಾಗಬೇಕೇ ? ಸ್ವಾಮಿನ್ !

ಬ್ರಹ್ಮಾ :-

ದೇವಿಯ ಕಳವಳವನ್ನು ಕಂಡು ಕಪಿಲ (ಗಣೇಶ) ನು ತನ್ನ ಕಾಂತಿಯ

ಸಾ ತದೈವಾಭವದ್ಧೃಷ್ಟಾ ಬಾಲಂ ವೀಕ್ಷ್ಯ ಪುರೋಗತಮ್ ।
ಅಸಂಖ್ಯವಕ್ತ್ರನಯನಮಸಂಖ್ಯಾಂಘ್ರಿಶಿರೋಧರಮ್ ॥೧೬॥

ಅಸಂಖ್ಯಮುಕುಟಂ ಸೂರ್ಯಚಂದ್ರಾಗ್ನಿಲೋಚನಂ ವಿಭುಮ್ ।
ಮುಕ್ತಾಮಣಿಮಯೀಂ ಮಾಲಾಂ ಬಿಭ್ರಂತಂ ದೀಪ್ತಿಮತ್ತರಮ್ ॥೧೭॥

ಅನೇಕಾಯುಧಹಸ್ತಂ ಚ ಸರ್ವಾವಯವಸುಂದರಮ್ ।
ದೃಷ್ಟ್ವಾ ತು ಪಾರ್ವತೀ ರೂಪಂ ಪವಿತ್ರಂ ಪರಮಾದ್ಭುತಮ್ ॥೧೮॥

---

ಪ್ರಖರತೆಯನ್ನು ಬಹುಮಟ್ಟಿಗೆ ಕಡಿಮೆ ಮಾಡಿ, ಶಾಂತ-ಗಂಭೀರ ಕಾಂತಿಯಿಂದ ಶೋಭಿಸತೊಡಗಿದನು. ॥೧೫॥

ಆಗ ಪಾರ್ವತಿಗೆ ಒಬ್ಬ ಸುಂದರತನುವಿನ ಬಾಲಕನು ತನ್ನೆದುರಿಗೆ ನಿಂತಂತೆ ಕಂಡು ಬಂದಿತು. ಆ ಬಾಲಕನ ವಿಚಿತ್ರಮಯ ಮೂರ್ತಿಯನ್ನು ವ್ಯಾಸ ! ಬಣ್ಣಿಸುವೆನು, ಕೇಳು. ಎಣಿಸಲಿಕ್ಕೆ ಬಾರದಷ್ಟು ಮುಖಗಳೂ, ಅವಕ್ಕೆ ದ್ವಿಗುಣಿತ ಕಣ್ಣುಗಳೂ, ಅಷ್ಟೇ ಚರಣಗಳೂ, ತಲೆಗಳೂ ಆ ಬಾಲಕನಿಗೆ ಇದ್ದಂತೆ ಪಾರ್ವತೀ ದೇವಿಗೆ ಭಾಸವಾಗತೊಡಗಿತು. ॥೧೬॥

ಆ ಬಾಲಕನು ತನ್ನ ತಲೆಗಳಿಗೆ ಧರಿಸಿದ ಮಣಿಮಯ ಮುಕುಟಗಳು ಸಂಖ್ಯಾತೀತವಾದುವು. ಸೂರ್ಯ, ಚಂದ್ರಾಗ್ನಿಗಳೇ ನೇತ್ರಗಳಾಗಿಯುಳ್ಳವನು, ತನ್ನ ಕಂಬುಕಂಠದಲ್ಲಿ ಮುತ್ತು, ರತ್ನ ಮೊದಲಾದ ಅನರ್ಘ್ಯ ಮಣಿಮಯಗಳಾದ ದಿವ್ಯ ಮಾಲಿಕೆಗಳನ್ನು ಧರಿಸಿದ್ದನು. ಮೊದಲೇ ಮಹಾ ತೇಜಸ್ವಿಯಾದ ಆ ಬಾಲಕನು ಈ ಮಾಲಿಕೆಗಳ ಕಾಂತಿಯಿಂದ ಮತ್ತಷ್ಟು ಕಾಂತಿಯುಳ್ಳವನಾದನು. ಇವನ ಕಾಂತಿಯೊಂದುಳಿದು ಮತ್ತಾವ ವಸ್ತುವೂ ಕಾಣದಂತಾಯಿತು. ॥೧೭॥

ಬಾಲಕನ ಅಸಂಖ್ಯ ಹಸ್ತಗಳ ಪ್ರತಿಯೊಂದು ಕೈಯ್ಯಲ್ಲೂ ಒಂದೊಂದು ಬಗೆಯ ನಿಶಿತ ಆಯುಧವು ಹೊಳೆಯುತ್ತಿತ್ತು. ಇಷ್ಟೆಲ್ಲ ಅದ್ಭುತತನ ತೋರಿ ಬರುತ್ತಿದ್ದರೂ, ಬಾಲಕನ ಸೌಂದರ್ಯಕ್ಕೆ ಯಾವ ಕೊರತೆಯೂ ಉಂಟಾಗಿರ

ಅತರ್ಕಯಚ್ಚೇತಸಾ ಸಾ ನಿಮಿಲ್ಯ ನಯನೇ ಶುಭೇ ।
ಕಂಪಮಾನಾಂಗಯಷ್ಟಿಸ್ಸಾ ಕರ್ತವ್ಯಂ ನಾಭ್ಯಪದ್ಯತ　　॥೧೯॥

ಪಾರ್ವತ್ಯುವಾಚ :—

ಚಿಂತಿತಂ ಕಿಂ ? ಮಯಾ ದೃಷ್ಟಮರಿಷ್ಟಮದ್ಭುತಂ ನು ಕಿಂ ।

ಕ ಉವಾಚ :—

ಉನ್ಮೀಲ್ಯ ನಯನೇಽಪಶ್ಯದ್ದಿವ್ಯದೃಷ್ಟಿರ್ಧರಾತ್ಮಜಾ　　॥೨೦॥

ಲಿಲ್ಲ. ಅವನು ಸರ್ವಾವಯವಸುಂದರನಾಗಿ ತೋರಿಬರಲಾರಂಭಿಸಿದನು. ಪವಿತ್ರವೂ, ಪರಮಾದ್ಭುತವೂ ಆದ ಆ ಬಾಲಕನ ದಿವ್ಯ ಮೂರ್ತಿಯನ್ನು ನೋಡಿದ ಪಾರ್ವತೀದೇವಿಯು. ॥೧೮॥

ತನ್ನ ಅರವಿಂದ ಸದೃಶ ನಯನಗಳನ್ನು ಒನ್ಮೆಲೇ ಮುಚ್ಚಿಕೊಂಡಳು. ಮತ್ತು ಮನಸ್ಸಿನಲ್ಲೇ ಹೀಗೆ ಚಿಂತಿಸತೊಡಗಿದಳು. ಎಳೆಯ ಬಳ್ಳಿಯಂತೆ ಬಳುಕುವ ಅವಳ ದೇಹವು ಈ ಅದ್ಭುತವನ್ನು ಕಂಡು ಮತ್ತಿಷ್ಟು ಗಡ ಗಡ ನಡುಗಲಾರಂಭಿಸಿತು ಮುಂದೆ ಹೇಗೆ ವರ್ತಿಸಬೇಕೆಂಬುದೇ ಅವಳ ಬುದ್ಧಿಗೆ ಹೊಳೆಯದಂತಾಯಿತು.

ದೇವೀ :—　　॥೧೯॥

ನಾನು ಯಾವ ಪರವಸ್ತುವನ್ನು ಕಾಣಬೇಕೆಂದು ಧ್ಯಾನಿಸಿದೆ ? ಆದರೆ ಇದೆಂತಹ ‘ ಅರಿಷ್ಟ ’ ರೂಪವು ನನ್ನ ಕಣ್ಣುಗಳಿಗೆ ಕಾಣಲಾರಂಭಿಸಿದೆ ? ಏನೀ ವಿಪರೀತ ?

ಬ್ರಹ್ಮಾ :—

ಧರಾತ್ಮಜೆ, ಪಾರ್ವತೀದೇವಿಯು ಎಷ್ಟೆಂದರೂ ಚಿಚ್ಛಕ್ತಿಯಲ್ಲವೇ? ವ್ಯಾಸ ! ತನ್ನಲ್ಲೇ ಸ್ವಲ್ಪಮಟ್ಟಿಗೆ ಧೈರ್ಯವನ್ನು ತಂದುಕೊಂಡು, ನಯನಗಳನ್ನರಳಿಸಿ, ಎದುರಿಗೆ ಕಂಡುಬಂದ ವಸ್ತುವನ್ನು ಪುನಃ ದೃಷ್ಟಿಸಿದಳು. ॥೨೦॥

ತಾನಚ್ಛಿವೋಪದಿಷ್ಟಂ ತದವೇದೀಚ್ಛ್ಯ ಜಗಾದ ಚ ।

ಪಾರ್ವತ್ಯುವಾಚ :—

ಅಸ್ಯೈವ ಮಾಯಯಾ ಭ್ರಾಂತಾ ನ ಜಾನಾಮಿ ವಿಭುಂ ಪ್ರಭುಮ್
॥೨೧॥

ಕ ಉವಾಚ ;—

ಪಪ್ರಚ್ಛ ತಂ ತತಃ

ಪಾರ್ವತ್ಯುವಾಚ :—

ಕಸ್ತ್ವಂ ? ಕುತ ಆಗಮನಂ ತವ ? ।

---

ಆ ವೇಳೆಗೆ ಸರಿಯಾಗಿ ಪರಶಿವನು ಉಪದೇಶಿಸಿದ ಗುಣೇಶನ ಅಚಿಂತ್ಯಾದ್ಭುತಶಕ್ತಿ-ಮಹಿಮೆಗಳು ನೆನಪಿಗೆ ಬಂದವು ಆಗ ' ಇದೇನಿರಬಹುದು ' ಎಂಬುದು ದೇವಿಗೆ ಅರಿವಾಗಿ ಹೋಯಿತು. ಮುಗುಳು ನಗೆ ನಗುತ್ತ ತನ್ನಲ್ಲೇ ಹೀಗೆ ಮಾತನಾಡಿಕೊಂಡಳು.

ಪಾರ್ವತೀ :—

ಏನಾಶ್ಚರ್ಯವಿದು? ಪ್ರಭುವಿನ ಮಾಯೆಯನ್ನು ಅರಿಯಲು ನನ್ನಂತಹ ಪಾಮರಳಿಗೆ ಸಾಧ್ಯವಾದೀತೇ ? ಇವನ ಮಾಯೆಯಿಂದ ' ಇವನು ಜಗತ್ಪ್ರಭು ' ಎಂಬುದನ್ನು ಸಹ ನಾನು ಅರಿಯಲಾರದೇ ಹೋದೆನಲ್ಲ ? ॥೨೧॥

ಬ್ರಹ್ಮಾ :—

' ಏನೇ ಇರಲಿ, ವಸ್ತುಸ್ಥಿತಿಯನ್ನು ಇವನ ಬಾಯಿಯಿಂದಲೇ ಹೊರಡಿಸೋಣ ' ಎಂದು ನಿಶ್ಚಯಿಸಿ, ದೇವನನ್ನು ಕುರಿತು ಹೀಗೆಂದು ಪ್ರಶ್ನಿಸಿದಳು.

ಪಾರ್ವತೀ :—

ಓ, ಭವ್ಯ ತೇಜೋಮೂರ್ತಿಯೇ ! ನೀನು ಯಾರು ? ನೀನು ಎಲ್ಲಿಂದ,

ಕಿಮರ್ಥಂ ? ತ್ವಂ ಗುಣೇಶಶ್ಚೇದ್ಭವಿತಾಸಿ ? ವದಸ್ವ ಮಾಮ್ ॥೨೨॥

ಕ ಉವಾಚ ;—

ಇತಿ ತದ್ವಚನಂ ಶ್ರುತ್ವಾವದತ್ಸ ಪುರುಷೋ ಮಹಾನ್ ।
ಸ್ವನೇನ ನಾದಯನ್ ಸರ್ವಾ ದಿಶೋ ವಿದಿಶ ಏವ ಚ ॥೨೩॥

ಶ್ರೀ ಭಗವಾನುವಾಚ :—

ಯಂ ಧ್ಯಾಯಸಿ ದಿವಾ-ರಾತ್ರಾವನುಷ್ಠಾನವತೀ ಶುಭೇ ! ।
ಸೋऽಹಂ ಗುಣೇಶಸ್ತೇ ಗೇಹೇऽವತೀರ್ಣಃ ಪರಮಃ ಪುಮಾನ್ ॥೨೪॥

ಮತ್ತು ಏತಕ್ಕಾಗಿ ಇಲ್ಲಿಗೆ ಬಂದಿರುವೆ ? ನೀನು ಸಾಕ್ಷಾತ್ ಗುಣೇಶನೇ ಆಗಿರುವ ಪಕ್ಷದಲ್ಲಿ ಆ ವಿಷಯವನ್ನಾದರೂ ನನಗೆ ಸ್ಪಷ್ಟವಾಗಿ ತಿಳಿಸು. ॥೨೨॥

ಬ್ರಹ್ಮ :—

ಜಗದಂಬೆಯ ಈ ಪ್ರಶ್ನಮಾಲಿಕೆಯನ್ನು ಕೇಳಿ, ಆ ಮಹಾಪುರುಷನು ದೇವಿಯನ್ನು ಕುರಿತು ಹೀಗೆಂದು ನುಡಿದನು. ಘನ ಗರ್ಜನೆಯಂತೆ ಗಂಭೀರವಾಗಿದ್ದ ದೇವೇಶನ ಧ್ವನಿಯು ದಿಗ್ವಿದಿಕ್ಕುಗಳನ್ನೆಲ್ಲ ವ್ಯಾಪಿಸಿ, ಅವು ಪ್ರತಿಧ್ವನಿಗೈಯ್ಯುವಂತೆ ಮಾಡಿತು. ॥೨೩॥

ಶ್ರೀ ಭಗವಾನ್ :—

ಸರ್ವಮಂಗಳೇ! ಹೆದರಬೇಡ. ಯಾವನನ್ನು ಸಂದರ್ಶಿಸಬೇಕೆಂದು ನೀನು ಇದುವರೆಗೂ ಅಹರ್ನಿಶಿ ಧ್ಯಾನಿಸುತ್ತಲಿದ್ದೆಯೋ, ಆ ಪರಾತ್ಪರ ಪುರುಷನೇ ನಾನು. ನಿನಗೆ ಪುತ್ರನಾಗಿ ಜನಿಸುವೆನೆಂದು ನಾನು ಹಿಂದೆ ವರವನ್ನನುಗ್ರಹಿಸಿದಂತೆ ಇದೋ, ಪ್ರಕೃತ, ನಿನ್ನ ಗೃಹದಲ್ಲಿ ಅವತರಿಸಿರುವೆನು. ನಾನೇ 'ಗುಣೇಶ' ತಿಳಿಯಿತೇ ? ॥೨೪॥

ಪರಾತ್ಪರತರೋ ಯಸ್ಮಾದವದಂ ತ್ವಾ ವರಾರ್ಥಿನೀಮ್ ।
ಯಾಸ್ಯೇ ತೇ ಪುತ್ರತಾಂ ದೇವಿ ! ಯತ್ಕೃತ್ಯಂ ಮೇ ಶೃಣುಷ್ವ ತತ್
॥೨೫॥

ಉಭಯೋಸ್ಸೇವನಂ ಕಾರ್ಯಂ ಸಿಂಧುದೈತ್ಯವಿನಾಶನಮ್ ।
ಅಮರಾಣಾಂ ಪದಪ್ರಾಪ್ತಿಂ ಕೃತ್ವಾ ಯಾಸ್ಯೇ ನಿಜಂ ಪದಮ್ ॥೨೬॥

**ಕ ಉವಾಚ** :—

**ಉವಾಚೇಹ**

---

ಹಿರಿದಾದ ವಸ್ತುಗಳಿಗೆಲ್ಲ ಅತ್ಯಂತ ಹಿರಿಯ ಎನಿಸಿದವನು ನಾನು. ವರವನ್ನು ಪಡೆಯಬೇಕೆಂದು ಅರಣ್ಯಕ್ಕೆ ಬಂದು, ಹನ್ನೆರಡು ವರ್ಷಗಳ ವರೆಗೆ ನೀನು ಕಠಿಣವಾಗಿ ತಪಿಸಿದೆ. ನನ್ನನ್ನು ಪುತ್ರನನ್ನಾಗಿ ಪಡೆಯಬೇಕೆಂದಿರುವ ನಿನ್ನ ಮನೋಗತವನ್ನು ನೀನು ಅರುಹಿದೆ. ಅಂತೆಯೇ ನಾನು ಆಗ ವರವನ್ನು ಅನುಗ್ರಹಿಸಿದ್ದೆನು. ದೇವಿ ! ಈ ಅವತಾರದಲ್ಲಿ ನಾನು ಮಾಡುವ ಕೆಲಸಗಳಾವುವು ಎಂಬುದನ್ನಾದರೂ ಹೇಳುವೆನು, ಕೇಳು. ॥೨೫॥

ಈ ಅವತಾರಕ್ಕೆ ಮೂಲಕಾರಣರಾದ ನಿಮ್ಮಿಬ್ಬರನ್ನೂ ಮನಃಪೂರ್ವಕವಾಗಿ ಸೇವಿಸುವೆನು. ಪರಮ ಸಾಹಸಶೀಲನಾದ ದುಷ್ಟ, ಸಿಂಧುದೈತ್ಯನನ್ನು ನಿಪಾತಗೊಳಿಸುವೆನು. ದೇವತೆಗಳಂತೂ ತಮ್ಮ ಸ್ಥಾನ-ಮಾನಗಳನ್ನು ಕಳೆದುಕೊಂಡು ಭಿಕ್ಷುಕರಂತೆ ಅತ್ತಿತ್ತ ಅಲೆದಾಡುತ್ತಲಿದ್ದಾರೆ. ಅವರು ಮೊದಲಿನಂತೆ ತಮ್ಮ ತಮ್ಮ ಅಧಿಕಾರವೃತ್ತದಲ್ಲಿರುವಂತಾಗಬೇಕು, ಅವರಿಗೆಲ್ಲ ಅವರವರ ಪದವಿಗಳನ್ನು ಕೊಡುವೆನು. ಇಷ್ಟೇ ಈ ಅವತಾರದ ಕೆಲಸಗಳು. ಇದೆಲ್ಲ ಮುಗಿದ ಬಳಿಕ, ನನ್ನ ಪದವಾದ ಆನಂದಧಾಮಕ್ಕೆ ಹಿಂದಿರಳುವೆನು. ॥೨೬॥

ಬ್ರಹ್ಮಾ:—

ಅಮೃತವರ್ಷದಂತಿರುವ ದೇವನ ವಾಗ್ರಸವನ್ನು ಪಾನಮಾಡಿದ ಗಿರಿಜಾ

ಗಿರಿಜೋವಾಚ :—

ಪರಂ ಭಾಗ್ಯಂ ಪರಮಂ ಮೇ ತಪಃಫಲಮ್ । ॥೨೭॥

ನಾಯಕೋಽನಂತಕೋಟೀನಾಂ ಬ್ರಹ್ಮಾಂಡಾನಾಂ ವಿಭುರ್ಮಯಾ ।
ದೃಷ್ಟಶ್ಚಿದಾನಂದಘನೋ ಯಸ್ಮಾತ್ಸೃಷ್ಟಮನೇಕಶಃ ॥೨೮॥

ಪಂಚಭೂತಾನಿ ಬ್ರಹ್ಮೇಶಹರಿಶ್ಚಂದ್ರೇಂದ್ರಭಾಸ್ಕರಾಃ ।
ನಕ್ಷತ್ರಾಣಿ ಚ ಗಂಧರ್ವಾ ಯಕ್ಷಾ ಮುನಿಗಣಾ ದ್ರುಮಾಃ ॥೨೯॥

ದೇವಿಯು ಬಹಳ ಹೃಷ್ಟಳಾದಳು. ಮತ್ತು ದೇವನನ್ನು ಕುರಿತು ಹೀಗೆಂದು ನುಡಿದಳು.

ದೇವೀ :—

ಜಗದೀಶ್ವರ ! ನನ್ನ ಭಾಗ್ಯಕ್ಕೆ ಎಣೆಯುಂಟೇ ? ನನ್ನ ತಪಸ್ಸಿಗೆ ನಾನು ನಿರೀಕ್ಷಿಸಿದುದಕ್ಕಿಂತಲೂ ಶತಗುಣಿತವಾದ ಫಲವನ್ನು ಪಡೆದಿರುವೆನು. ॥೨೭॥

ಅನಂತಕೋಟಿ ಬ್ರಹ್ಮಾಂಡಗಳಿಗೆಲ್ಲ ನಾಯಕನಾದ ಸರ್ವವ್ಯಾಪಿ, ಜಗದೊಡೆಯನನ್ನು ನಾನು ಕಂಡಿರುವೆನು. ಭಗವನ್ ! ನೀನು ಜಗನ್ಮಯನಾಗಿರುವೆಯಾದರೂ ಜಗದ ಜಾಡ್ಯವಾಗಲೀ, ದುಃಖಲೇಶವಾಗಲೀ ನಿನ್ನನ್ನು ಅಂಟಲಾರದು. ನೀನು ಆನಂದಘನನಾಗಿರುವೆ. ಚಿತ್ರ-ವಿಚಿತ್ರವಾದ ಈ ವಿಶ್ವವನ್ನು ನೀನು ಅನೇಕ ಸಲ, ಅನೇಕ ವಿಧದಿಂದ ಸೃಜಿಸಿರುವೆ. ॥೨೮॥

ಪ್ರಪಂಚಕ್ಕೆ ಮೂಲಕಾರಣಗಳಾದ ಪೃಥಿವ್ಯಪ್ತೇಜೋ, ವಾಯ್ವಾಕಾಶಗಳನ್ನೂ ಅವನ್ನು ನಿಯಮನ ಮಾಡಲಿಕ್ಕಾಗಿ ಬ್ರಹ್ಮಾ, ಈಶ್ವರ, ನಾರಾಯಣ, ಚಂದ್ರ, ದೇವೇಂದ್ರ, ಭಾಸ್ಕರ, ಇವರನ್ನೂ, ನಕ್ಷತ್ರಗಳು, ಗಂಧರ್ವರು, ಮುನಿಗಳ ಸಮುದಾಯ, ನಾನಾಬಗೆಯ ಗಿಡ-ಮರಗಳು ॥೨೯॥

ಶೈಲಾಃ ಪಕ್ಷಿಗಣಾಃ ಸರ್ವೇ ಭುವನಾನಿ ಚತುರ್ದಶ ।
ಸ್ಥಾವರಂ ಜಂಗಮಂ ಯಸ್ಮಾತ್ಸಚೇತನಮಚೇತನಮ್ ॥೩೦॥

ಸ ತ್ವಂ ಮಮ ಕುಮಾರತ್ವಂ ಪ್ರಾಪ್ತೋಽಸೀತಿ ವಿಡಂಬನಮ್ ।
ಅಥ ತ್ವಾಂ ಪ್ರಾರ್ಥಯೇ ದೇವ! ಪ್ರಾಕೃತೋ ಭವ ಸಾಂಪ್ರತಮ್ ॥೩೧॥

ಯೇನ ತೇ ಲಾಲನಂ ಕುರ್ಯಾಂ ಸೇವನಂ ಪರಮಾದರಾತ್ ।

---

ಶೈಲಪರ್ವತಗಳು, ಎಲ್ಲ ಬಗೆಯ ವಿಹಂಗಮಗಳು, ಚತುರ್ದಶ ಭುವನಗಳು, ಹೆಚ್ಚೇನು ? ಸಕಲ ಸ್ಥಾವರ-ಜಂಗಮಗಳೂ ನಿನ್ನಿಂದಲೇ ಸೃಷ್ಟವಾದುವು. ಅವು ಸ್ವಭಾವತಃ ಅಚೇತನವಾಗಿದ್ದರೂ ಮಹಾಮಹಿಮಾಶಾಲಿಯಾದ ನಿನ್ನ ಸಾನ್ನಿಧ್ಯವಿಶೇಷದಿಂದ ಚೈತನ್ಯವನ್ನು ಹೊಂದಿ, ಅಸಾಧ್ಯ ಕಾರ್ಯಗಳನ್ನೂ ಸಾಧಿಸಲು ಯತ್ನಿಸುವುವೋ, ಭಗವನ್! ಅಂತಹ ವಿಭೂತಿಪುರುಷನಾದ ನಿನ್ನನ್ನು ನಾನು ಇಂದು ಸಂದರ್ಶಿಸಿ, ಪರಮ ಧನ್ಯಳಾಗಿರುವೆನು. ॥೩೦॥

ಇಂತಹ ವಿಭೂತಿಪುರುಷನಾದ ನೀನು ನನ್ನಂತಹ ಪಾಮರಳಿಗೆ ಕುಮಾರನಾಗಿ ಅವತರಿಸಿರುವೆ ಎಂದರೆ ಇದು ಲೋಕವನ್ನು ವಿಡಂಬನಮಾಡುವುದಕ್ಕಾಗಿಯೇ ಹೊರತು, ಬೇರೆ ಏನೂ ಅಲ್ಲ. ನೀನು ಸ್ವತಂತ್ರೇಚ್ಛಾ, ಜ್ಞಾನ, ಕ್ರಿಯಾಶಕ್ತಿಯುತನಾಗಿರುವುದರಿಂದ 'ಹೀಗೆಯೇ ಮಾಡು' ಎಂದು ನಿನ್ನನ್ನು ನಿಯಮಿಸಲು ಯಾರಿಗೂ ಶಕ್ತಿ ಸಾಲದು. ಇರಲಿ, ಪ್ರಕೃತ ನೀನು ನನಗೆ ಅಭಿವ್ಯಕ್ತಿಗೊಳಿಸಿರುವ ಈ ದಿವ್ಯ ರೂಪವನ್ನು ಉಪಸಂಹರಿಸು. ಪ್ರಾಕೃತ ಬಾಲಕನಂತೆ ರೂಪವನ್ನು ಧರಿಸು. ನಾನು ವಿನಯದಿಂದ ಪ್ರಾರ್ಥಿಸುವೆನು.' ॥೩೧॥

ನೀನು ಪ್ರಾಕೃತ ಬಾಲಕನಾಗಿ ಮಾರ್ಪಟ್ಟರೆ, ನಿನ್ನನ್ನು ಆಟವಾಡಿಸುತ್ತ ನಿನ್ನೊಂದಿಗೆ ನಲಿಯುತ್ತಲಿರಬಹುದು. ನಿನ್ನನ್ನು ಆದರದಿಂದ ಸೇವಿಸಲೂ ಬಹುದು.

**ಕ ಉವಾಚ :—**

**ಯಾಪದ್ವದತಿ ಸ್ಯೈವಂ ತು ದದರ್ಶ ಪುರತಸ್ತು ತವುಽ ||೩೭||**

**ಷಡ್ಭುಜಂ ಚಂದ್ರಸುಭಗಂ ಲೋಚನತ್ರಯಭೂಷಿತವುಽ |**
**ಸುನಾಸಂ ಸುಭ್ರುವದನಂ ಸ್ಥೂಲವಕ್ಷಸವಿಸ್ತರವುಽ ||೩೩||**

**ಧ್ವಜಾಂಕುಶೋರ್ಧ್ವರೇಖಾಬ್ಜಚಿನ್ಹಿತಂ ಪಾದಪಂಕಜವುಽ |**
**ಕೋಟಿಸ್ಫಟಿಕಸಂಕಾಶಂ ಕೋಟಿಚಂದ್ರಪ್ರಭಂ ವಿಭುವುಽ ||೩೪||**

ಬ್ರಹ್ಮ :—

ಪಾರ್ವತಿಯು ವಿನಯದಿಂದಲೂ ದೈನ್ಯದಿಂದಲೂ, ಹೀಗೆ ಬೇಡುತ್ತಿರುವಷ್ಟರಲ್ಲಿ ಇದುವರೆಗೂ ಅವಳಿಗೆ ಕಂಡುಬರುತ್ತಿದ್ದ ಭವ್ಯ ರೂಪಕ್ಕಿಂತಲೂ ಭಿನ್ನವಾದ ಸುಂದರರೂಪವು ಕಂಡುಬಂದಿತು. 'ಇಚ್ಛಾಮಾತ್ರಂ ಪ್ರಭೋಸ್ಸೃಷ್ಟಿಃ' ಆದುದರಿಂದ ಈ ರೀತಿಯ ಬದಲಾವಣೆಗೆ ದೇವನು ಶ್ರಮಿಸಬೇಕೇ? ಅಥವಾ ವಿಲಂಬವಾದೀತೇ ||೩೨||

ಮಾರ್ಪಟ್ಟ ದೇವನ ರೂಪಕ್ಕೆ ನೀಳವಾದ ಆರು ಭುಜದಂಡಗಳಿದ್ದವು. ಪೂರ್ಣ ಚಂದ್ರಮನಂತೆ ಕಣ್ಮನಗಳಿಗೆ ಆಹ್ಲಾದಕರವಾಗಿದ್ದಿತು, ಅವನ ದೇಹ ಕಾಂತಿ. ಸೂರ್ಯ, ಚಂದ್ರ, ವಹ್ನಿಗಳೇ ಕಣ್ಣುಗಳಾಗಿಯುಳ್ಳವನಾಗಿದ್ದನು. ಕೋಮಲವಾದ ದೀರ್ಘ ಸು-ನಾಸಿಕೆಯಿಂದ ಗಣೇಶನ ಮುಖಮಂಡಲವು ಮತ್ತಷ್ಟು ಮುದ್ದಾಗಿ ಕಾಣುತ್ತಲಿದ್ದಿತು. ಹುಬ್ಬುಗಳು ಬಳ್ಳಿಗಳಂತೆ ಹಬ್ಬಿದ್ದವು. ಬಹಳ ವಿಶಾಲವೂ, ಉಬ್ಬಿದುದೂ ಆದ ಎದೆಯು ಜಗದೀಶ್ವರನದಾಗಿದ್ದಿತು. ||೩೩||

ದೇವನ ಪಾದಾರವಿಂದಗಳಲ್ಲಿ ಧ್ವಜ, ಅಂಕುಶ, ಕಮಲ ಮೊದಲಾದ ಮಹಾ ಪುರುಷರ ಲಕ್ಷಣಗಳು ಚಿನ್ಹಿತವಾಗಿದ್ದವು. ಕೋಟ್ಯವಧಿ ಸ್ಫಟಿಕ ಶಿಲೆಗಳನ್ನು ಏಕತ್ರ ಮೇಲನಗೊಳಿಸಿದಾಗ ಉಂಟಾಗುವಂತಹ ಶುಭ್ರವಾದ ಹೊಳಪು ದೇವನ ದೇಹದಿಂದ

ಹೇಮ-ತಾರಾನಿಭಾನ್ ಕೇಶಾನ್ ದಧಂತಂ ಬಾಲರೂಪಿಣಮ್ ।
ಕುರ್ವಂತಂ ಪ್ರಥಮಂ ಶಬ್ದಂ ಕಂಪಯಂತಂ ವಸುಂಧರಾಮ್ ॥೩೫॥

ಜನಾಃ ಸ್ಥಾನಾನಿ ಮರ್ಯಾದಾಂ ತತ್ಯಜುಸ್ತಸ್ಯ ಶಬ್ದತಃ ।
ನೀರಸಾ ವೃಕ್ಷನಿಚಯಾಃ ಸ-ಪಲ್ಲವಚಯಾಸ್ತದಾ ॥೩೬॥

ಹೊರಹೊಮ್ಮುತ್ತಲಿದ್ದಿತು. ಎಂದ ಮಾತ್ರಕ್ಕೆ ನೋಡುವವರ ಕಣ್ಣುಗಳನ್ನು ಕುಕ್ಕುವಂತೆ ಪ್ರಖರವಾಗಿದ್ದಿತೆಂದು ಭಾವಿಸಬೇಡ. ಕೋಟ್ಯವಧಿ ಚಂದ್ರರುದಿಸಿದರೆ, ಉಂಟಾಗುವಂತಹ ಆಹ್ಲಾದಕರ ಕಾಂತಿಯಾಗಿದ್ದಿತು, ದೇವನದು. ॥೩೪॥

ಸುವರ್ಣ ಮತ್ತು ನಕ್ಷತ್ರಗಳು ಹೊಳೆವಂತೆ ಹೊಳೆವ ಶಿರೋರುಹ ಉಳ್ಳವನು ಪ್ರಭು. ವಯಃಪ್ರಮಾಣ, ಕೋಮಲತೆ, ಕಮನೀಯಭಾವ ಇವನ್ನು ಗಮನಿಸಿದರೆ ಎಳೆಯ ಕೂಸಿನಂತೆ ದೇವನು ತೋರಿಬಂದನು. ಹಸುಗೂಸಿನ ರೂಪವನ್ನು ತಳೆದೊಡನೆಯೇ, ಆಗಿನ್ನೂ ಜನಿಸಿದ ಮಗುವಿನಂತೆ ದೇವನು ಒಮ್ಮೆ ಘಟ್ಟಿಯಾಗಿ ರುದಿಸಲಾರಂಭಿಸಿದನು. ಮತ್ತು ಈ ಗಂಭೀರವಾದ ಅಳುವಿನ ಶಬ್ದದಿಂದ ಇಡೀ ಈ ಧರಾತಳವನ್ನೇ ಗಡ-ಗಡ ನಡುಗಿಸಿ ಬಿಟ್ಟನು. ॥೩೫॥

ವರ್ಷಾಕಾಲದ ಘನ ಗರ್ಜನೆಯಂತೆ ಗಂಭೀರವಾಗಿಯೂ, ವಿಪಕ್ಷ ಹೃದಯ ವಿದಾರಕವಾಗಿಯೂ, ಸಾಧು.ಸತ್ಪುರುಷರಾದ ಯೋಗಿವರ್ಯರ ಚಿತ್ತಾಹ್ಲಾದಕರವಾಗಿಯೂ ಇದ್ದ ಶಿಶುವಿನ ರೋದನದ ಆ ಧ್ವನಿಯನ್ನು ಕೇಳಿದೊಡನೆಯೇ ಜನರೆಲ್ಲರೂ ತಾವು ಕುಳಿತಿದ್ದ ಸ್ಥಳಗಳನ್ನು ಬಿಟ್ಟೆದ್ದು ಹೊರಭಾಗಕ್ಕೆ ಓಡೋಡಿ ಬಂದರು. ಜನರಿಗೆ ಇದೊಂದು ಬಗೆಯ ಉತ್ಪಾತವೆಂದೇ ತೋರಿತು. ಯಾರಿಗೂ ಏತರ ಪರಿವೆಯೂ ಉಳಿಯಲೇ ಇಲ್ಲ. ಭೀತ್ಯತಿರೇಕದಿಂದ ಸ್ತ್ರೀ-ಪುರುಷರೆಂಬುದನ್ನು ಸಹ ಕ್ಷಣಕಾಲ ಮರೆತು ನಡೆದರು. ಬಾಲಕನ ಶಬ್ದವು ಅಷ್ಟು ಭಯಂಕರವಾಗಿದ್ದಿತು. ಕ್ಷುದ್ರ ಜಲಾಶಯಗಳು. ಬತ್ತಿ ಹೋದವು. ಕೆಲವೊಂದು ಗಿಡ ಮರಗಳಂತೂ ತಮ್ಮನ್ನಾಶ್ರಯಿಸಿ ಜೀವಿಸುತ್ತಿದ್ದ ಬಳ್ಳಿಗಳೊಂದಿಗೆ ಒಣಗಿ ನಿಂತವು. ॥೩೬॥

ಜಾತಾ ಗಾವೋ ಬಹುಕ್ಷೀರಾಸ್ತ್ರೈಲೋಕ್ಯಂ ಜಹೃಷೇ ಪುನಃ ।
ದೇವದುಂದುಭಯೋ ನೇದುಃ ಪುಷ್ಪವೃಷ್ಟಿರಥಾಪತತ್ ॥೩೭॥

ದೃಷ್ಟ್ವಾ ಬಾಲಂ ತು ಗಿರಿಜಾ ಹಸ್ತಾಭ್ಯಾಂ ಜಗೃಹೇ ಮುದಾ ।
ಸ್ನಾಪಯಾಮಾಸ ಪಯಸಾ ತಪ್ತೇನ ಸ್ನೇಹಭಾವತಃ ॥೩೮॥

ಪ್ರಸ್ನುತೌ ಪಾಯಯಾಮಾಸ ಸ್ತನೌ ಪರಮಹರ್ಷಿತಾ ।
ಶಿವೋಽಪಿ ಜಹೃಷೇ ತೇನ ಶಿಶುನಾ ಪರಮೇಣ ಹ ॥೩೯॥

ಲೋಕೋಪಕಾರಿಗಳೂ, ಸಾಧುಜೀವಿಗಳೂ ದೈವಾಂಶಸಂಭೂತಗಳೂ ಆದ ಗೋವುಗಳು ಈ ಧ್ವನಿಯಿಂದ ಉತ್ಸಾಹಗೊಂಡು ಅಮೃತದಂತಹ ಹಾಲನ್ನು ಹೆಚ್ಚಾಗಿ ಕರೆಯಲಾರಂಭಿಸಿದವು. ಬರಡಾಗಿ ಹೋಗಿದ್ದ ಮುದಿ ಹಸುಗಳೂ ತೆನೆಗೊಂಡವು ಮತ್ತು ಹೊರತು, ತ್ರಿಲೋಕ ವಾಸಿಗಳೆಲ್ಲ ಹರ್ಷಗೊಂಡರು. ಧರ್ಮಯುಗವು ಮತ್ತೆ ಉದಿಸಿತೆಂದು ಮೂರು ಲೋಕಗಳಿಗೂ ನಂಬುಗೆಯುಂಟಾಯಿತು. ದೇವಲೋಕದ ದುಂದುಂಭಿಗಳು ಮೊಳಗಿದವು. ಅಂತರಿಕ್ಷ ಮಂಡಲದಿಂದ ಕುಸುಮ ವೃಷ್ಟಿಯು ಧಾರಾಕಾರವಾಗಿ ಸುರಿಯಿತು. ॥೩೭॥

ಇಂತಹ ಸುಕುಮಾರ; ತೇಜಸ್ವೀ ಬಾಲಕನನ್ನು ನೋಡಿದೊಡನೆಯೆ ಗಿರಿಜೆಗೆ ಹಿಡಿಸಲಾರದಷ್ಟು ಆನಂದ ಉಂಟಾಯಿತು. ಒಡನೆಯೇ ಆ ಕೂಸನ್ನು ತನ್ನ ಕೈಗಳಿಂದ ಎತ್ತಿಕೊಂಡಳು. ಅವಳ ಅಂತರಂಗದಲ್ಲಿ ಸ್ನೇಹರಸವು ಉಕ್ಕುಕ್ಕಿ ಹರಿಯಲಾರಂಭಿಸಿತು. ಮಗುವಿಗೆ ಛಳಿಯಾದೀತೆಂದು ಭಾವಿಸಿ, ಬಿಸಿ ನೀರನ್ನೆರೆದು ಸ್ನಾನಮಾಡಿಸಿದಳು. ॥೩೮॥

ಅವಳ ಎದೆಗಳು ತುಂಬಿ ಬಂದು ಮಧುರವಾದ ಕ್ಷೀರವನ್ನು ಕರೆಯಲಾರಂಭಿಸಿದವು. ಆಗ ದೇವಿಯು ಜಗದ್ಧಾತೃವಿಗೆ ಮೊಲೆಯುಣಿಸಿ, ಅವನ ಹಸಿವನ್ನಿಂಗಿಸಲು ಹವಣಿಸಿದಳು. ವ್ಯಾಸ ! ಎಂತಹ ವಿನೋದವಿದು ? ತನ್ನ ಮನೆಯಲ್ಲಿ

ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ 'ಶ್ರೀ ಗಣೇಶಾ-
ವಿರ್ಭಾವೋ' ನಾಮ್ನ್ಯೈಕಾಶೀತಿತಮೋಽ-
ಧ್ಯಾಯಸ್ಸಮಾಪ್ತಃ

ಇಂತಹ ಶಿಶು ಉದಿಸಿದುದನ್ನು ತಿಳಿದು ಪರಶಿವನೂ ಪರಮ ಹರ್ಷಿತನಾದನು. ಯಾರಿಗೆ ಹರ್ಷವಾಗಲಿಕ್ಕಿಲ್ಲ, ವ್ಯಾಸ ! ॥೩೯॥

ಇಲ್ಲಿಗೆ ಶ್ರೀ ಗಣೇಶಪುರಾಣ, ಉತ್ತರಖಂಡದಲ್ಲಿ 'ಶ್ರೀಗಣೇಶಾ-
ವಿರ್ಭಾವ' ಎಂಬಲ್ಲಿಗೆ ಎಂಭತ್ತೊಂದನೆಯ ಅಧ್ಯಾಯಾನು
ಪಾದವು ಪರಿಪೂರ್ಣವಾದುದು.



॥ ಶ್ರೀ ಗಣೇಶಾಯ ನಮಃ ॥

# ಅಥ ದ್ವ್ಯಶೀತಿತಮೋಽಧ್ಯಾಯಃ

**ಕ ಉವಾಚ :—**

**ತತಃ ಶಿವಗಣಾಃ ಶಂಭುಂ ವೃತ್ತಾಂತಂ ತಂ ನ್ಯವೇದಯನ್ ।**

**ಗಣಾ ಊಚುಃ :—**

**ಆಶ್ಚರ್ಯಂ ಪರಮಂ ದೇವ ! ಶಿವಾ ಪುತ್ರಸಮನ್ವಿತಾ ॥೧॥**

**ಜಾತಾ ಪುತ್ರಾವಲೋಕಾರ್ಥಂ ತತೋ ಯಾಹಿ ನಿಜಂ ಸ್ಥಳಮ್ ।**

---

॥ ಶ್ರೀ ಗಣೇಶಾಯ ನಮಃ ॥

## ೮೨ ನೆಯ ಅಧ್ಯಾಯ.

ಬ್ರಹ್ಮ :—

ಪಾರ್ವತೀದೇವಿಯು ಶಿಶುವನ್ನು ಎತ್ತಿಕೊಂಡು ಮೊಲೆಯುಣಿಸುತ್ತಿದ್ದುದನ್ನು ಕಂಡ ಶೃಂಗಿ, ಭೃಂಗಿ ಮೊದಲಾದ ಪ್ರಮುಖ ಪ್ರಮಥಗಣಗಳು ಒಂದೇ ಉಸಿರಿನಲ್ಲಿ ಹಾರಿಹೋಗಿ ಭಗವಾನ್ ಶಂಕರನೆದುರು ನಿಂದು, ತಮ್ಮದೇ ಆದ ಭಾಷಾ ವೈಖರಿ, ಉತ್ಸಾಹಗಳಿಂದ ಈ ವೃತ್ತಾಂತವನ್ನೆಲ್ಲ ನಿವೇದಿಸಿದವು.

ಗಣಗಳು ;—

ಭಗವನ್ ! ಬಹಳ ಆಶ್ಚರ್ಯದ ಸಂಗತಿ- ನಾವು ಏನೆಂದು ಹೇಳೋಣ ? ಪರಶಿವೆಯು ಪುತ್ರನನ್ನು ಪಡೆದುಬಿಟ್ಟಿದ್ದಾಳೆ. ಅದನ್ನು ಎತ್ತಿಕೊಂಡೇ ಕುಳಿತಿದ್ದಾಳೆ. ॥೧॥

ಬೇಗನೆ ಬಾ. ಹೋಗಿ ಮಗುವನ್ನು ನೋಡುವೆಯಂತೆ. ಆ ಸ್ಥಳಕ್ಕೆ

ಕ ಉವಾಚ :—

ಏವಂ ಗಣವಚಃ ಶ್ರುತ್ವಾ ತುತೋಷ ಗಿರಿಜಾಪತಿಃ ॥೨॥

ಆಗತ್ಯ ವೀಕ್ಷ್ಯ ತಂ ಬಾಲಮದ್ಭುತಂ ಶಶಿಸನ್ನಿಭಮ್ ।
ಸ್ಫಟಿಕಾದ್ರಿನಿಭಂ ಕುಂದಧವಲಂ ಕಂಜಲೋಚನಮ್ ॥೩॥

ಆಶ್ಚರ್ಯಂ ಪರಮಂ ಲೇಭೇ ಪ್ರೋವಾಚ ಚ ವಚಸ್ತದಾ ।

ಶಿವ ಉವಾಚ :—

ನಾಯಂ ಬಾಲೋಽನಾದಿಸಿದ್ಧೋ ಜರಾ, ಜನ್ಮವಿವರ್ಜಿತಃ ॥೪॥

---

ಹೋಗೋಣ. ನಾವೂ ಬರುತ್ತೇವೆ.

ಬ್ರಹ್ಮಾ :—

ಪ್ರಮಥರ ಈ ಮಾತುಗಳನ್ನು ಕೇಳಿ, ಗಿರಿಜಾರಮಣನು ಬಹಳ ಹರ್ಷಿತನಾದನು. ತನ್ನ ಗಣದವರ ಸಂತೋಷ, ಉತ್ಸಾಹ ಮತ್ತು ಚಾಪಲ್ಯಗಳು ದೇವನಿಗೆ ಮೋಜು ಎನಿಸಿರಬಹುದು. ॥೨।

ಒಡನೆಯೇ ದೇವಿ ಇದ್ದ ಸ್ಥಳಕ್ಕೆ ಶಿವನು ಧಾವಿಸಿ ಬಂದು ನೋಡಿದನು. ಚಂದ್ರನ ಕಾಂತಿಯಂತೆ ಹೊಳೆಯುತ್ತಿರುವ ಅದ್ಭುತವಾದ ಆ ಶಿಶುವನ್ನು ಕಣ್ಣು ತುಂಬ ನೋಡಿ ಸಂತೋಷಿಸಿದನು. ಬಾಲಕನು ಸ್ಫಟಿಕ ಮಣಿಮಯ ಪರ್ವತವೋ, ಎಂಬಂತೆ ತೋರಿಬರುತ್ತಲಿದ್ದಿತು. ಕರಗಿದ ಸುವರ್ಣದಂತೆ ಫಳ ಫಳ ಹೊಳೆಯುತ್ತಲಿದ್ದಿತು. ಶಿಶುವಿನ ಕಣ್ಣುಗಳು ಅರಳಿದ ಕಮಲದಂತೆ ವಿಸ್ತೃತವೂ, ಸ್ನಿಗ್ಧಮಯವೂ ಆಗಿದ್ದವು. ॥೩॥

ದೇವನಿಗೆ ಈ ಶಿಶುವನ್ನು ನೋಡಿದ ಬಳಿಕ ಉಂಟಾದ ಆಶ್ಚರ್ಯಕ್ಕೆ ಮಿತಿಯೇ ಉಳಿಯಲಿಲ್ಲ. ಆಗ ತನ್ನಷ್ಟಕ್ಕೆ ತಾನೇ ಹೀಗೆಂದು ಹೇಳಿಕೊಂಡನು.

ಶಿವ :—

ಇವನು ಸಾಮಾನ್ಯನಾದ ಬಾಲಕನಂತೂ ಅಲ್ಲವೇ ಅಲ್ಲ. ಇವನು ಸನಾ

**ಲೀಲಾವಿಗ್ರಹವಾನೇಷ ಸ್ವ-ಪ್ರಕಾಶೋ ಗುಣಾತಿಗಃ ।**
**ಶುದ್ಧಸತ್ತ್ವಮಯಃ ಸರ್ವಜೀವೇಶೋ ಭುವನೇಶ್ವರಃ ॥೫॥**

**ಮುನಿಧ್ಯೇಯೋಽಖಿಲಾಧಾರೋ ಬ್ರಹ್ಮಭೂತೋಽಖಿಲಪ್ರದಃ ।**

**ಕ ಉವಾಚ :—**

**ಏವಮುಕ್ತ್ವಾ ಕರಾಭ್ಯಾಂ ಸ ಬಾಲಮಾಧತ್ತ ಶಂಕರಃ ॥೬॥**

ತನ ಪುರುಷ. ಇವನಿಗೆ ಮುಪ್ಪು, ಜನ್ಮ ಇವಾವೂ ಇರುವುದೇ ಇಲ್ಲ. ॥೪॥

ಬಾಲಕನಂತೆ ಇವನು ತೋರಿಸುತ್ತಿರುವ ಈ ರೂಪವು ಇವನಿಗೆ ಸ್ವಾಭಾವಿಕವಾದುವಲ್ಲ. ಲೀಲೆಗಾಗಿ ಈ ರೂಪವನ್ನು ತಳೆದಿರುವನು. ಇವನಿಗೆ ಮತ್ತೊಂದು ಬೆಳಕಿನ ಆವಶ್ಯಕತೆಯೇ ಇರುವುದಿಲ್ಲ. ಇವನೇ ಈ ಬೆಳಕನ್ನೆಲ್ಲ ಬೆಳಗುವವನು. ಸತ್ತ್ವ, ರಜಸ್ತಮೋಗುಣಗಳನ್ನು ಇವನು ಮೀರಿದವನು. ಈಗ ಇವನು ಧರಿಸಿರುವ ಈ ವಿಗ್ರಹವೂ ರಜಸ್ತಮೋಗುಣದೂರವಾದುದು. ಮತ್ತು ಕೇವಲ ಸತ್ತ್ವಗುಣದಿಂದ ನಿರ್ಮಿತವಾದುದು. ಇವನು ಸಕಲ ಜೀವರನ್ನೂ ಜೀವನಗೊಳಿಸತಕ್ಕವನು. ಸಮಸ್ತ ಭುವನಗಳಿಗೂ ಇವನು ಅಧೀಶ್ವರನು. ॥೫॥

ಏಕಾಗ್ರಚಿತ್ತರಾದ ಮುನಿಗಳ ನಿರ್ವಿಕಲ್ಪಕ ಧ್ಯಾನದೃಷ್ಟಿಗೆ ಮಾತ್ರ ಇವನು ವೇದ್ಯನಾಗತಕ್ಕವನು. ಸಕಲಕ್ಕೂ ಮೂಲಾಧಾರವಾದ ಕೂಟಸ್ಥ ಬ್ರಹ್ಮನಿವನು. ಸಕಲರ ಅಭೀಷ್ಟಗಳನ್ನೂ ಅನುಗ್ರಹಿಸಿಕೊಡತಕ್ಕ ದಾತನು.

ಬ್ರಹ್ಮ :—

ಹೀಗೆ ಉದ್ಗಾರ ತೆಗೆದು, ಶಂಕರನು ತನ್ನ ನೀಳವಾದ ಎರಡೂ ಕೈಗಳನು ಮುಂದಕ್ಕೆ ಚಾಚಿ, ಆ ಬಾಲಕನನ್ನು ಎತ್ತಿಕೊಂಡನು. ॥೬॥

ಲಾಲಯಿತ್ವಾ ಹೃದಿ ಸ್ಥಾಪ್ಯ ಸರ್ವಹೃತ್ಸ್ಥೋಽಪಿ ಯಸ್ಸದಾ ।
ಪುನರೂಚೇ ಚ ಗಿರಿಜಾಂ ಶಿವೋಽಶಿವಹರೋ ವಿಭುಃ ॥೭॥

ಶಿವ ಉವಾಚ :—

ಪರಮಾತ್ಮಾ ಗುಣಾತೀತಃ ಪುತ್ರತಾಂ ತೇ ಸಮಾಗತಃ ।
ಪರಾನುಷ್ಠಾನತೋ ದೇವಿ ! ಸಾಕ್ಷಾದ್ದೃಷ್ಟೋ ವಿಭುಸ್ತ್ವಯಾ ॥೮॥

ಕ ಉವಾಚ :—

ತತೋ ವಿಸೃಜ್ಯ ಸಮಾಹೂಯ ಪೂಜಯಿತ್ವಾ ಗಣಾಧಿಪಮ್ ।

---

ಅತ್ತಿತ್ತ ಮಗುವನ್ನು ಕೊಂಚ ಕಾಲ ಆಗಾಡಿಸಿದನು. ಎದೆಗವಚಿಕೊಂಡನು. ದೇವರ ದೇವನಾದ ಗಣೇಶನು ಸಕಲ ಪ್ರಾಣಿಗಳ ಹೃದಾಶಯದಲ್ಲಿ ನಿರಂತರವಾಗಿ ವಾಸಮಾಡತಕ್ಕವನಾದಾಗ್ಯೂ ಪರಶಿವನು ಗಣೇಶನನ್ನು ಎದೆಗವಚಿಕೊಂಡುದು ಒಂದು ಬಗೆಯಿಂದ ಮೋಜಿನ ನಡೆವಳಿಕೆಯಾಗಿಯೇ ಕಂಡಬಂದಿತು. ಸಕಲರ ಅಶುಭಕರ್ಮಗಳನ್ನೂ ಹರಣಮಾಡತಕ್ಕ ದೇವ ; ಹರನು ಗಿರಿಜಾಮಾತೆಯನ್ನು ಕುರಿತು ಪುನಃ ಹೀಗೆಂದು ನುಡಿದನು. ॥೭॥

ಶಿವ :—

ಮಹಾದೇವಿ ! ನೀನು ಪುತ್ರನನ್ನಾಗಿ ಪಡೆದ ಈ ಮಹಾ ವಿಭೂತಿಪುರುಷನು ಸಾಮಾನ್ಯ ಬಾಲಕನೆಂದು ಮಾತ್ರ ತಿಳಿಯಬೇಡ. ಇವನೇ ಪರಮಾತ್ಮನು. ಗುಣಗಳ ಆಡಳಿತವನ್ನು ಸರ್ವಾತ್ಮನಾ ಮೀರಿದವನು. ನೀನು ಮಹಾ ಭಾಗ್ಯಶಾಲಿನಿಯಾದವಳು. ಇಲ್ಲವಾಗಿದ್ದರೆ, ನಿನ್ನಿಂದ ಅಂತಹ ಕಠಿಣವಾದ ತಪಸ್ಸನ್ನು ಮಾಡಲಿಕ್ಕೇ ಸಾಧ್ಯವಿರುತ್ತಲಿರಲಿಲ್ಲ. ಆ ರೀತಿಯಾಗಿ ಅನುಷ್ಠಿಸದಿದ್ದಿದ್ದರೆ ಈ ಭಗವಂತನ ಸಾಕ್ಷಾತ್ಕಾರ ಎಂದೆಂದಿಗೂ ಯಾರಿಗೂ ಲಭಿಸುತ್ತಿರಲಿಲ್ಲ. ಇವನ್ನೆಲ್ಲ ಗಮನಿಸಿದರೆ, ನಿನ್ನ ಭಾಗ್ಯವೇ ಈ ಸೌಭಾಗ್ಯಕ್ಕೆಲ್ಲ ಕಾರಣವೆಂಬುದು ದೃಢಪಡುವುದು. ॥೮॥

ಬ್ರಹ್ಮಾ :—

ಅನಂತರ ಋಗ್ವೇದ, ವೇದಾಂಗ ಪಾರಂಗತರಾದ ಬ್ರಾಹ್ಮಣೋತ್ತಮರನ್ನು ತನ್ನ

ಪುಣ್ಯಾಹಂ ವಾಚಯಿತ್ವಾ ಚ ಮಾತೃಪೂಜನಪೂರ್ವಕಮ್ ||೯||

ಕೃತ್ವಾಭ್ಯುದಯಿಕಂ ಶ್ರಾದ್ಧಂ ಪ್ರಾಶಯಿತ್ವಾ ಘೃತಂ ಮಧು |
ಅಭಿಮಂತ್ರ್ಯ ಶಿಶುಂ ಭೂಮಿಂ ಗಿರಿಜಾ ತಂ ಸ್ತನಂ ದದೌ ||೧೦||

ಗೌತಮಾದೀನ್ ಪೂಜಯಿತ್ವಾ ದದೌ ದಾನಾನ್ಯನೇಕಶಃ |
ತತಸ್ತೇ ತದನುಜ್ಞಾತಾ ನಾಮ ಪ್ರೋಚುರ್ಮಹರ್ಷಯಃ ||೧೧||

ಸಮೀಪಕ್ಕೆ ಬರಮಾಡಿಕೊಂಡು ಪರಶಿವನು ಶಿಶುವಿಗೆ ಜಾತಕರ್ಮ ಸಂಸ್ಕಾರವನು ಮಾಡಬಯಸಿದನು. ಸಂಕಲ್ಪಿಸಿದ ಕಾರ್ಯವು ನಿರ್ವಿಘ್ನವಾಗಿ ಪರಿಸಮಾಪ್ತಿಗೊಳ್ಳುವುದಕ್ಕಾಗಿ ಮೊದಲು ವಿಘ್ನೇಶ್ವರನ; ಮಹಾ ಗಣಪತಿಯ ಸಾಕಾರ ಮೂರ್ತಿಯನ್ನು ಭಕ್ತಿ-ಶ್ರದ್ಧೆಗಳಿಂದ ಅರ್ಚಿಸಿದನು. ಅನಂತರ ಸಪ್ತಮಾತೃಕಾಪೂಜೆಯೊಡನೆ ಪುಣ್ಯಾಹವಾಚನವನ್ನು ನೆರವೇರಿಸಿದನು. ||೯||

ನಾಂದೀಶ್ರಾದ್ಧವು ಯಥಾವಿಧಿಯಾಗಿ ನಡೆದ ಬಳಿಕ 'ಘೃತ-ಮಧು' ಗಳನ್ನು ಮಿಶ್ರಣಮಾಡಿ ವೇದಮಂತ್ರಗಳಿಂದ ಅಭಿಮಂತ್ರಿಸಿ, ಶಿಶುವಿಗೆ ಪ್ರಾಶನ ಮಾಡಿಸಿದನು. ಅನಂತರ ಜಗದಂಬೆ; ಗಿರಿಜಾದೇವಿಯು ಶಿಶುವನ್ನು ಎತ್ತಿಕೊಂಡು ತಾನು ಕುಳಿತುಕೊಳ್ಳಬೇಕೆಂದಿದ್ದ ಭೂಮಿಯನ್ನು ಪುಣ್ಯಾಹಜಲದಿಂದ ಪ್ರೋಕ್ಷಿಸಿ ಅಲ್ಲಿ ಕುಳಿತು, ಶಿಶುವಿಗೆ ಸ್ತನ್ಯವನ್ನು ಪಾನಮಾಡಿಸಿದಳು. ||೧೦||

ಈ ಜಾತಕರ್ಮ ಸಂಸ್ಕಾರ ಕಾರ್ಯನಿರ್ವಹಣಕ್ಕಾಗಿ ಪರಶಿವನು ತನ್ನ ಆಶ್ರಮ ಭೂಮಿಗೆ ಬರಮಾಡಿಕೊಂಡಿದ್ದ ಗೌತಮಾದಿ ಮಹರ್ಷಿಗಳನ್ನೆಲ್ಲ ವಿಧ್ಯುಕ್ತವಾದ ರೀತಿಯಲ್ಲಿ ಅರ್ಚಿಸಿದನು. ಮತ್ತು ಅವರಿಗೆಲ್ಲ ಅನೇಕ ವಿಧಗಳಾದ ದಾನಗಳನ್ನು ಸಮರ್ಪಿಸಿದನು. ಅನಂತರ ಆ ಋಷಿಗಳು ಜಗನ್ಮಾತಾ-ಪಿತೃಗಳಾದ ಪಾರ್ವತೀ ಪರಮೇಶ್ವರರ ಅನುಮತಿಯನ್ನು ಪಡೆದು 'ಶಿಶುವಿಗೆ ಎಂದು ಯಾವ ಹೆಸರನ್ನಿಡಬೇಕು' ಎಂಬ ಬಗ್ಗೆ ಈರೀತಿಯಾಗಿ ಮಾತನಾಡಿದರು. ||೧೧||

**ಋಷಯ ಊಚುಃ :—**

**ಅಯಂ ತೇ ಬಾಲತಾಂ ಯಾತೋಽನಾದಿಸಿದ್ಧೋಽಖಿಲೇಶ್ವರಃ ।**
**ನಿರ್ಮಾತಾ ಸರ್ವಲೋಕಾನಾಂ ಚರಾಚರಗುರೋರ್ಗುರುಃ ॥೧೨॥**

**ಮಾಯಾವೀ ವೇದ-ವೇದಾಂತಾಗೋಚರೋ ಮಧ್ಯಗೇ ರವೌ ।**
**ಅವತೀರ್ಣಃ ಸುಮುಹೂರ್ತೇ ಕೀರ್ತಿಮಾವಿಷ್ಕರಿಷ್ಯತಿ ॥೧೩॥**

**ಭಾದ್ರಶುಕ್ಲಚತುರ್ಥ್ಯಾಂ ತು ಶಶಿವಾರೇ ಚ ವಾಯುಭೇ ।,**

---

ಋಷಿಗಳು :—

ಮಹೇಶ್ವರ ! ಈಗ ನಿನ್ನ ಗೃಹದಲ್ಲಿ ಬಾಲಭಾವವನ್ನು ತಳೆದು ಅವತರಿಸಿರುವ ಮಹಾ ಪುರುಷನು ಅನಾದಿಸಿದ್ಧನಾದವನು. (ಪುರಾಣಪುರುಷನು.) ಸಕಲಕ್ಕೂ ಈಶ್ವರನೆನಿಸಿದವನು. ಈ ಲೋಕಗಳನ್ನೆಲ್ಲ ಸೃಜಿಸಿದವನೂ ಇವನೇ ಆಗಿದ್ದಾನೆ. ಚರಾಚರ ಸಕಲ ಪ್ರಪಂಚಕ್ಕೂ ಯಾರು 'ಗುರು' ಎನಿಸಿದವನೋ, ಅವನಿಗೂ ಈ ದೇವನು 'ಮೂಲಗುರು' ಎನಿಸಿರುವನು. ॥೧೨॥

ಕರ್ಮಬದ್ಧರಾದ ಜೀವಿಗಳು ತಮ್ಮ ಸ್ವರೂಪಗಳನ್ನರಿಯದೇ 'ನಾನು ನನ್ನದು' ಎಂಬ ಸಲ್ಲದ ವ್ಯಾಮೋಹಕ್ಕೆ ಬಲಿಯಾಗಿ ಈ ಪ್ರಪಂಚದಲ್ಲಿ ಬಿದ್ದು ತೊಳಲುವಂತೆ ಮಾಡುವ ಆ ಮಾಯಾ ಶಕ್ತಿಗೆ ಸಹ ಇವನು ಸಾಕ್ಷಾತ್ತಾಗಿ ಗೋಚರಿಸತಕ್ಕವನಲ್ಲ. ಇವನು ಅವತರಿಸಿದ ಸುಮುಹೂರ್ತವನ್ನು ಪರಿಶೀಲಿಸಿದರೆ, ಇವನು ತನ್ನ ಅಸಾಧಾರಣ ಬಲ-ಪರಾಕ್ರಮಗಳನ್ನು ಪ್ರಕಟ ಪಡಿಸಿ, ಬಹಳ ಮಟ್ಟಿಗೆ ಸತ್ಕೀರ್ತಿಯನ್ನು ಪಡೆಯುವನು. ಸೂರ್ಯದೇವನು ನಡು ನೆತ್ತಿಗೆ ಬಂದಾಗ ಇವನು ಅವತರಿಸಿರುವನು. ಇದನ್ನು 'ಶತ್ರುಂಜಯ ಮುಹೂರ್ತ' ಎಂದು ಜ್ಯೋತಿರ್ವಿದರು ಕರೆಯುತ್ತಾರೆ. ॥೧೩॥

ಇಂದು ಭಾದ್ರಪದಮಾಸ ಶುಕ್ಲಪಕ್ಷದ ಚತುರ್ಥೀ ತಿಥಿಯೂ ಆಗಿರುತ್ತದೆ. ಅಲ್ಲದೆ, ಸೋಮವಾರವೂ ಕೂಡಿರುವುದು ಒಂದು ವಿಶೇಷವೇ ಸರಿ. ಸಿಂಹ ಲಗ್ನವು

ಸಿಂಹಲಗ್ನೇ ಪಂಚಶುಭಗ್ರಹಯುಕ್ತೇ ಭವತ್ಸುತಃ ||೧೪||

ಶ್ರೀವರ್ಮಾ ಪರಾಕ್ರಮಯುತೋಽದ್ಭುತಕರ್ಮಾ ಮಹಾಬಲಃ ।

ಭವಿಷ್ಯತಿ ಚ ಲೋಕಾನಾಂ ಭಕ್ತಾನಾಮತಿಸೌಖ್ಯದಃ ||೧೫||

ಏಕಾದಶದಿನೇ ಶಂಭೋ ! ಕುರು ನಾಮಾಸ್ಯ ಸುಂದರಮ್ ।

ಕ ಉವಾಚ :—

ಏವಮುಕ್ತ್ವಾ ಗತಾಸ್ಸರ್ವೇ ಮುನಯೋ ನಿಜಮಂದಿರಮ್ ||೧೬||

---

ಶಿಶು ಪರಮ ವೀರ್ಯವಂತನಾಗುವನೆಂದು ಭವ್ಯ ಭವಿಷ್ಯವನ್ನು ಬೋಧಿಸುತ್ತಿದೆ. ಇತರ ಐದು ಗ್ರಹಗಳೂ ಉಚ್ಚಸ್ಥಾನದಲ್ಲಿರುವುದು ಬಹಳ ಶುಭವೆನಿಸುವುದು. ಇಂತಹ ಪವಿತ್ರತಮವಾದ ಸು.ಮುಹೂರ್ತದಲ್ಲಿ ನಿನ್ನ ಈ ಮಗನು ಅವತರಿಸಿರುವನು. ||೧೪||

ಇಂತಹ ಮುಹೂರ್ತದಲ್ಲಿ ಜನಿಸುವ ಪುರುಷನು ಆಢ್ಯನಾಗಿಯೂ, ಅತುಲ ವಿಕ್ರಮಶಾಲಿಯಾಗಿಯೂ ಬಾಳುವನು. ಪರೋಪಕಾರವೆಸಗುವುದರಲ್ಲಿ ಇವನು ಬಹಳ ಆಸಕ್ತಿಯುಳ್ಳವನಾಗುವನು. ಇವನನ್ನೇ ಅವಲಂಬಿಸಿ ಜೀವಿಸತಕ್ಕವರಿಗೆ ಇವನು ಬೇಡಿದುದನ್ನೆಲ್ಲ ಒಡನೆಯೇ ಅನುಗ್ರಹಿಸಿಕೊಡುವನು. ಭಕ್ತರ ಸುಖ-ದುಃಖಗಳು 'ತನ್ನವು' ಎಂದು ತಿಳಿಯುವಷ್ಟು ಉದಾರಸ್ವಭಾವದವನು ||೧೫||

ಶಂಭೋ ! ಇವನು ಅವತರಿಸಿದ ಹನ್ನೊಂದನೆಯ ದಿವಸ ಸುಂದರವಾದ ಹೆಸರೊಂದನ್ನು ಈತನಿಗೆ ಇರಿಸು.

ಬ್ರಹ್ಮ :—

ಹೀಗೆಂದು ನುಡಿದು ಮುನಿಗಳು ತಮ್ಮ ತಮ್ಮ ಮಂದಿರ (ಆಶ್ರಮ) ಗಳಿಗೆ ಹೊರಟು ಹೋದರು. ||೧೬||

ಹರೋ ಬಾಲಂ ವಿನಿಕ್ಷಿಪ್ಯ ಗಿರಿಜಾಶಯನೇ ಶುಭೇ ।
ವಿಸೃಜ್ಯ ಲೋಕಾನಖಿಲಾನ್ ಬಹಿರಾಯಾನ್ಮುದಾನ್ವಿತಃ ॥೧೭॥

ತತಃ ಶೇಷೋ ಯಯೌ ತತ್ರ ಫಣಾಚ್ಛಾಯಾಮಥಾಕರೋತ್ ।
ನೀರಜಸ್ಕಾಂ ಧರಾಂ ಚಕ್ರುರ್ಮೇಘಾಸ್ತತ್ರ ಸುಖೋ ವವೌ ॥೧೮॥

ಮಾರುತೋ ಮಾಲತೀಗಂಧೋ ನನೃತುಶ್ಚಾಪ್ಸರೋಗಣಾಃ ।
ಜಗುರ್ಗಂಧರ್ವಸಂಘಾಶ್ಚ ತುಷ್ಟುವುಶ್ಚಾರಣಾ ವಿಭುಮ್ ॥೧೯॥

ಹರನು ತಾನು ಎತ್ತಿಕೊಂಡಿದ್ದ ಶಿಶುವನ್ನು ಗಿರಿಜಾದೇವಿಯ ಹಂಸತೂಲಿಕಾ ತಲ್ಪದಲ್ಲಿ ಮಲಗಿಸಿ, ಈ ಸಂತೋಷ ಸಮಾರಂಭದಲ್ಲಿ ತನ್ನನ್ನೂ, ಶಿಶುವನ್ನೂ ನೋಡುವುದಕ್ಕಾಗಿ ಬಂದಿದ್ದ ಜನರನ್ನೆಲ್ಲ ಮರ್ಯಾದೆಯಿಂದ ಹಿಂದಿರುಗಿ ಕಳಿಸಿಕೊಟ್ಟು, ಹರ್ಷಾತಿರೇಕದಿಂದ ಹೊರಕ್ಕೆ ಬಂದನು. ॥೧೭॥

ಅನಂತರ ಆದಿಶೇಷನು ಶಿಶುವಿನ ಸಮೀಪಕ್ಕೆ ಸರಿದು ಬಂದು ತನ್ನ ಸಹಸ್ರ ಫಣಗಳನ್ನೂ ಪಸರಿಸಿ, ಶಿಶುವಿಗೆ ನೆರಳನ್ನುಂಟುಮಾಡಿದನು. ಮೋಡಗಳು ಗಂಭೀರವಾಗಿ ಮಳೆಯನ್ನು ಕರೆದು, ಭೂಮಿಯ ಧೂಳನ್ನು ಅಡಗಿಸಿ, ತಣುಗೊಳಿಸಿದವು. ವಾಯುದೇವನು ಸುಖಸ್ಪರ್ಶವನ್ನುಂಟುಮಾಡುವಂತೆ ಮಂದ-ಮಂದವಾಗಿ ಬೀಸಲಾರಂಭಿಸಿದನು. ॥೧೮॥

ಬೀಸುವ ಸಮೀರಣನು ಮಾಲತೀ ಮೊದಲಾದ ನವ ಮಂಜರಿಗಳ ಮೇಲೆಲ್ಲ ಸುಳಿದಾಡಿ ಬಂದು ಸರ್ವರಿಗೂ ಸು-ಗಂಧವನ್ನು ಬೀರಿ ಆನಂದಪಡಿಸುತ್ತಿದ್ದನು. ಅಪ್ಸರ ರಮಣಿಯರುನವೋಲ್ಲಾಸದಿಂದ ಕೂಡಿ ನರ್ತಿಸಲಾರಂಭಿಸಿದರು. ಗಂಧರ್ವ ಸಮುದಾಯವುಏಕತ್ರ ಮಿಲಿತರಾಗಿ ವೃಂದಗೀತವನ್ನು ಹೇಳಲಾರಂಭಿಸಿದರು. ಚಾರಣರು ವಿಭು; ಗುಣೇಶನನ್ನು ಬಾಯಿತುಂಬ ಹೊಗಳತೊಡಗಿದರು. ॥೧೯॥

ತತೋ ಮುನಿಗಣಾಸ್ಸರ್ವೇ ಮೃಣ್ಮೂರ್ತಿಂ ಚಕ್ರುರುತ್ತಮಾಮ್ ।
ಮಂಡಪಂ ಶೋಭನಂ ಕೃತ್ವಾ ಕದಲೀಪುಷ್ಪಮಂಡಿತಮ್ ॥೨೦॥

ಪುಪೂಜುಃ ಪರಯಾ ಭಕ್ತ್ಯಾ ಪದ್ಮಾಸನಗತಾ ಮುದಾ ।
'ಗಣೇಶೇ'ತಿ 'ಗಣೇಶೇ'ತಿ ಜೇಪುಸ್ಸರ್ವೇ ನಿರಂತರಮ್ ॥೨೧॥

ಅಹೋ-ರಾತ್ರೋಷಿತಾಸ್ಸರ್ವೇ ರಾತ್ರೌ ಚ ಜಾಗರಾನ್ವಿತಾಃ ।
ಯಥಾಶಕ್ತಿ ದ್ವಿಜಾನ್ ಭೋಜ್ಯ ಚಕ್ರುಸ್ತೇ ಪಾರಣಂ ದ್ವಿಜಾಃ ॥೨೨॥

---

ಅನಂತರ ಮುನಿಗಳೆಲ್ಲರೂ ಸೇರಿ ಪ್ರತಿಯೊಬ್ಬರೂ ಒಂದೊಂದರಂತೆ ಗಣ ಪತಿಯ ಮೃಣ್ಮಯ ಮೂರ್ತಿಯನ್ನು ರಚಿಸಿದರು. ಅವೆಲ್ಲವೂ ಒಂದನ್ನೊಂದು ಮೀರಿಸುವಷ್ಟು ಸುಂದರತಮವಾಗಿದ್ದವು. ಮೂರ್ತಿಗಳನ್ನಿರಿಸಿ ಪೂಜಿಸುವುದ ಕ್ಕಾಗಿ ಸುಂದರವಾದ ಮಂಡಪಗಳನ್ನು ಪ್ರತಿಯೊಂದು ಮೂರ್ತಿಗೂ ಒಂದೊಂದ ರಂತೆ ನಿರ್ಮಿಸಿದರು. ಅವಕ್ಕೆಲ್ಲ ಬಾಳೆಯ ಕಂದುಗಳನ್ನೂ, ಮಾವಿನ ಸೊಪ್ಪನೂ ಕಟ್ಟಿ ಅಲಂಕರಿಸಿದರು. ಅವುಗಳ ನಡುವೆ ಅಲ್ಲಲ್ಲಿ ಬಣ್ಣ ಬಣ್ಣದ ಹೂವಿನ ಗೊಂಚಲುಗಳನ್ನೂ, ಚಿಗುರುಗಳನ್ನೂ ಸಿಕ್ಕಿಸಿದರು. ॥೨೦॥

ತಮ್ಮ ತಮ್ಮ ಪ್ರಾತಃಕಾಲಿಕ ವಿಹಿತ ಕರ್ಮಗಳನ್ನು ಅನುಷ್ಠಿಸಿದ ಬಳಿಕ ಪದ್ಮಾಸನದಲ್ಲಿ ಕುಳಿತು, ದೇವನನ್ನು ಪರಮ ಭಕ್ತಿಯಿಂದ ಅರ್ಚಿಸಲಾರಂಭಿಸಿದರು. 'ಗಣೇಶ, ಗಣೇಶ' ಎಂದು ಘಟ್ಟಿಯಾಗಿ ಉಚ್ಚರಿಸುತ್ತ ದೇವನ ದಿವ್ಯ ನಾಮವನ್ನು ಅನವರತ ಜಪಿಸಲಾರಂಭಿಸಿದರು. ॥೨೧॥

ಅಹೋ-ರಾತ್ರಿಗಳ ಪರಿವೆಯು ಸಹ ಇಲ್ಲದೇ ಏಕಪ್ರಕಾರವಾಗಿ ಜಪಾಸಕ್ತ ರಾಗಿ ಕುಳಿತರು. ರಾತ್ರಿಯಾದ ಬಳಿಕ ಯಾರೊಬ್ಬರೂ ನಿದ್ರೆಗೆ ವಶರಾಗದೇ ಜಾಗ್ರತರಾಗಿಯೇ ಇದ್ದು, ದೇವನನ್ನು ಧ್ಯಾನಿಸಿದರು. ಮಾರನೆಯ ದಿವಸ ನಸುಕಿ ನಲ್ಲಿ ಇದ್ದು ತಮಗೆ ಶಕ್ತಿ ಇದ್ದಷ್ಟು ಆಹಾರ ಸಾಮಗ್ರಿಗಳನ್ನು ಒದಗಿಸಿಕೊಂಡು, ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿದರು. ಅವರೆಲ್ಲರಿಗೂ ಭೋಜನವಾದ ಬಳಿಕ ತಾವೂ ಪಾರಣೆಯನ್ನು ಮಾಡಿ ವ್ರತವನ್ನು ಮುಗಿಸಿದರು. ॥೨೨॥

ಏವಂ ದಶದಿನೇ ವಿಪ್ರಾಃ ಭೋಜಯಾಮಾಸುರಾದರಾತ್ ।
ಗೃಹೇ ಗೃಹೇ ಮಹೋತ್ಸಾಹಾಂಶ್ಚಕ್ರುರ್ದೇವಸ್ಯ ತುಷ್ಟಯೇ ॥೨೩॥

ಏಕಾದಶೇ ತು ದಿವಸೇ ಸರ್ವೇ ಮುನಿಗಣಾಃ ಶಿವಮ್ ।
ಆಹೂತಾ ಆಯಯುರ್ನಾಮ ಕರ್ತುಂ ಶಿವಸುತಸ್ಯ ಹ ॥೨೪॥

ಮಾನಿತಾಸ್ತೇನ ತೇ ಸಮ್ಯಕ್ಚಕ್ರುರ್ನಾಮಾಸುರುತ್ತಮಮ್ ।
ಸರ್ವೇಶತ್ವಾ'ದ್ಗುಣೇಶೇ'ತಿ ಸರ್ವವಿಘ್ನಹರಂ ಶುಭಮ್ ॥೨೫॥

---

ಹೀಗೆ ಒಟ್ಟು ಹತ್ತು ದಿವಸಗಳ ವರೆಗೂ ಬ್ರಾಹ್ಮಣರ ಸಂತರ್ಪಣೆಯು ಅವಿಚ್ಛಿನ್ನವಾಗಿ ನಡೆಯಿತು. ಭೋಜನಮಾಡಿಸುವಾಗ ಒಂದು ಸಲ ಸಹ ಯಾರೂ ಬೇಸರಪಡಲಿಲ್ಲ, ಬಹಳ ಆದರ-ವಿಶ್ವಾಸಗಳಿಂದಲೇ ಭೋಜನವನ್ನು ಮಾಡಿಸಿದರು. ಪ್ರತಿಯೊಬ್ಬನ ಮನೆಯಲ್ಲೂ ಮಹೋತ್ಸವಗಳು ವಿಜೃಂಭಣೆಯಿಂದ ನಡೆಯಲಾರಂಭವಾದವು. ಯಾವುದರಿಂದಲಾದರೂ ಭಗವಂತನು ತೃಪ್ತನಾಗಲೆಂಬುದೇ ಈ ಉತ್ಸವಗಳನ್ನು ಏರ್ಪಡಿಸಿದವರ ಆಂತರಿಕ ಧ್ಯೇಯವಾಗಿದ್ದಿತು. ॥೨೩॥

ದೇವನು ಅವತಾರವನ್ನೆತ್ತಿ ಹತ್ತು ದಿವಸಗಳು ಕಳೆದವು. ಹನ್ನೊಂದನೆಯ ದಿವಸ ಪರಶಿವನ ಆಹ್ವಾನದ ಮೇರೆಗೆ ಶಿಶುವಿಗೆ ವ್ಯಾವಹಾರಿಕ ಹೆಸರನ್ನಿಡುವುದಕ್ಕೋಸ್ಕರ ಮುನಿಗಳೆಲ್ಲರೂ ಸದಾಶಿವನ ಸನ್ನಿಧಿಗೆ ಬಂದು ಸೇರಿದರು. ॥೨೪॥

ಮನೆಗೆ ದಯೆಮಾಡಿದ ಮಾನ್ಯ ಅತಿಥಿಗಳಾದ ಮಹರ್ಷಿಗಳನ್ನು ಪರಶಿವನು ಬಹಳ ಆದರ-ವಿಶ್ವಾಸಗಳಿಂದ ಬರಮಾಡಿಕೊಂಡು ಅವರಿಗೆ ಯೋಗ್ಯವಾದ ಆತಿಥ್ಯವನ್ನಿತ್ತು ಗೌರವಿಸಿದನು. ಮೊದಲೇ ಸಂತುಷ್ಟಾಂತಃಕರಣಿಗಳಾದ ಮುನಿವರ್ಯರು ಆತಿಥ್ಯದಿಂದ ಮತ್ತಷ್ಟು ಹರ್ಷಿತರಾಗಿ, ಶಿಶುವಿಗೆ ಸರ್ವೋತ್ಕೃಷ್ಟವಾದ ಹೆಸರನ್ನು ಈ ರೀತಿಯಾಗಿ ಇರಿಸಿದರು. ಅಖಂಡಚಿನ್ಮಯ ಮೂರ್ತಿಯಾದ ಈ ದೇವನು ಸಕಲ ಸ್ಥಾವರ-ಜಂಗಮ ಪ್ರಪಂಚಕ್ಕೂ ಈಶ್ವರನಾದುದರಿಂದಲೂ, ಸತ್ತ್ವ ರಜಸ್ತಮೋಗುಣಗಳು ಇವನ ಇಚ್ಛಾಮಾತ್ರದಿಂದಲೇ ವ್ಯತ್ಯಯವನ್ನು ತಳೆದು ಸೃಷ್ಟಿಜಾತವು ಉದಿಸುವುದಕ್ಕಾರಂಭಿಸುವುದರಿಂದಲೂ ಇವನನ್ನು 'ಗುಣೇಶ'

ಶಿವೋಽಪಿ ತಾ೯ ಮುನೀ೯ ಪ್ರಾಹ

ಶಿವ ಉವಾಚ :—

ಸಮ್ಯಗ್ಜ್ಞಾಮ ಸಮಿೂರಿತಮ್ |

ಸರ್ವಾರಂಭೇಷು ಪೂಜ್ಯೋಽಯಂ

ಕ ಉವಾಚ :—

ಇತಿ ತಸ್ಮೈ ವರ. ದದೌ ||೨೬||

ಪೂಜಿತಾ ಮುನಯಸ್ಸರ್ವೇ ದತ್ವಾ ದಾನಾನಿ ಸರ್ವಶಃ |

---

ಎಂಬ ಶುಭನಾಮದಿಂದ ಕರೆದರು. ಈ ಪವಿತ್ರವಾದ ನಾಮವು ಸಮಸ್ತ ವಿಘ್ನ ಗಳನ್ನೂ ಪರಿಹರಿಸಿಬಿಡುವಂತಹದು. ||೨೫||

'ಗುಣೇಶ' ಎಂದು ಮುನಿಗಳು ತನ್ನ ಕುಮಾರನಿಗೆ ಹೆಸರಿಟ್ಟು ಕರೆದುದನ್ನು ಕೇಳಿ ಪರಶಿವನು ಪರಮ ಹರ್ಷಗೊಂಡು ಆ ಮುನಿಗಳನ್ನು ಕುರಿತು ಹೀಗೆಂದು ನುಡಿದನು.

ಪರಶಿವ :—

ನೀವು ಇರಿಸಿದ ಈ ನಾಮವು ಬಹಳ ಶ್ಲಾಘ್ಯವಾಗಿದೆ. ಪ್ರತಿಯೊಂದು ಕಾರ್ಯ ವನ್ನು ಆರಂಭಿಸುವಾಗಲೂ ಎಲ್ಲರೂ ಈತನನ್ನು ಮೊದಲು ಪೂಜಿಸತಕ್ಕದ್ದು ಎಂದರೆ ಆ ಕಾರ್ಯಗಳು ಸ್ವಲ್ಪವೂ ತಡೆ ಇಲ್ಲದೇ ಪರಿಸಮಾಪ್ತಿಗೊಳ್ಳುವುವು.

ಬ್ರಹ್ಮಾ :—

ಎಂದು ಮುಂತಾಗಿ ಅನೇಕವರಗಳನ್ನು ಅನುಗ್ರಹಿಸಿದನು. ||೨೬||

ಮುನಿಗಳನ್ನೆಲ್ಲ ಮತ್ತೊಮ್ಮೆ ಭಕ್ತಿಯಿಂದ ಅರ್ಚಿಸಿದನು. ಮುನಿಗಳಿಗೂ,

ಆಜ್ಞಾಂ ಗೃಹೀತ್ವಾ ಶಂಭೋಸ್ತೇ ಸ್ವ-ಸ್ವಾಶ್ರಮಪದಂ ಯಯುಃ ॥೨೭॥

ಅನ್ತರ್ಗೃಹಗತಾ ದೇವೀ ಪುಪೂಜೇ ದೇವತಾಃ ಸ್ವಯಮ್ ।
ತದಾದಿ ಸಾ ತಿಥಿಃ ಖ್ಯಾತಾ ಗುಣೇಶಸ್ಯ ವರಪ್ರದಾ ॥೨೮॥

ತಸ್ಯಾಂ ಮಹೋತ್ಸವಃ ಕಾರ್ಯಃ ಚತುರ್ಥ್ಯಾಂ ಸ್ವ-ಶುಭಾಪ್ತಯೇ ।
ಮೃಣ್ಮಯೀಂ ಪ್ರತಿಮಾಂ ಕೃತ್ವಾ ಪೂಜಯೇಚ್ಚ ಯಥಾವಿಧಿ ॥೨೯॥

ಕೃತ್ವಾ ಮಂಡಪಿಕಾಂ ಚಾರು ಉಪೋಷ್ಯ ಜಾಗೃಯಾನ್ನಿಶಿ ।
ಮೋದಕಾಪೂಪಲಡ್ಡುಕೈಃ ಪಾಯಸೈಃ ಪೂಜಯೇದ್ವಿಭುಮ್ ॥೩೦॥

---

ಇತರ ಬ್ರಾಹ್ಮಣೋತ್ತಮರಿಗೂ ಅನೇಕ ಅನರ್ಘ್ಯ ವಸ್ತುಗಳನ್ನು ದಾನವಾಗಿ ಕೊಟ್ಟನು. ಇಷ್ಟೆಲ್ಲ ನಡೆದ ಬಳಿಕ, ಇವರೆಲ್ಲರೂ ಶಂಭುವಿನ ಅನುಜ್ಞೆಯನ್ನು ಪಡೆದುಕೊಂಡು ತಮ್ಮ ತಮ್ಮ ಆಶ್ರಮ-ಪದಗಳಿಗೆ ಹಿಂದಿರುಗಿ ಹೋದರು. ॥೨೭॥

ಅನಂತರ ಪಾರ್ವತೀದೇವಿಯು ಅಂತಃಪುರವನ್ನು ಪ್ರವೇಶಿಸಿ, ಅಲ್ಲಿ ದೇವ ದೇವನಾದ ಗುಣೇಶನನ್ನೂ, ಮತ್ತು ಇದುವರೆಗೂ ತಾನು ಆರಾಧಿಸುತ್ತಿದ್ದ ಇತರ ದೇವತೆಗಳನ್ನೂ ಭಕ್ತಿಯಿಂದ ಅರ್ಚಿಸಿದಳು. ಅಂದು ಮೊದಲುಗೊಂಡು ಚತುರ್ಥೀ ತಿಥಿಯು ಬಹಳ ಖ್ಯಾತಿಗೆ ಬಂದಿತು. ಆ ತಿಥಿಯ ದಿವಸ ಶ್ರೀ ಗುಣೇಶ ನನ್ನು ಆರಾಧಿಸಿದರೆ ವಿಶೇಷ ಫಲವು ದೊರೆಯುವುದು. ॥೨೮॥

ಯಾರಿಗಾದರೂ ಒಳ್ಳೆಯದಾಗಬೇಕೆಂಬ ಅಭಿಲಾಷೆ ಇದ್ದರೆ, ಅವರು ಭಾದ್ರಪದ ಶುಕ್ಲ ಚತುರ್ಥಿಯ ದಿವಸ ಮಹಾಗಣಪತಿಯನ್ನುದ್ದೇಶಿಸಿ ದೊಡ್ಡ ಉತ್ಸವವನ್ನು ಮಾಡತಕ್ಕದ್ದು. ಗಣಪತಿಯ ಆಕಾರದ ಮೃಣ್ಮಯ ಮೂರ್ತಿ ಯೊಂದನ್ನು ನಿರ್ಮಿಸಿ, ಶಾಸ್ತ್ರೋಕ್ತವಾಗಿ ಷೋಡಶೋಪಚಾರ ಪುರಸ್ಸರ ಪೂಜೆ ಯನ್ನು ಸಲ್ಲಿಸತಕ್ಕದ್ದು. ॥೨೯॥

ಸುಂದರವಾದ ಒಂದು ಮಂಡಪವನ್ನು ರಚಿಸಿ, ಅದರ ನಡುವೆ ಧಾನ್ಯರಾಶಿ ಯನ್ನು ಹಾಕಿ, ಅದರ ಮೇಲೆ ಗುಣೇಶನ ಮೃಣ್ಮಯ ಮೂರ್ತಿಯನ್ನು ಇರಿಸ ತಕ್ಕದ್ದು. ಅಂದು ಸಾಧಕನು ಉಪವಾಸ ವ್ರತವನ್ನು ಆಚರಿಸತಕ್ಕದ್ದು.

ಅಪರಸ್ಮಿನ್ ದಿನೇ ವಿಪ್ರಾನ್ ಭೋಜಯೇಚ್ಚ ಯಥಾವಿಧಿ ।
ಏಕವಿಂಶತಿಸಂಖ್ಯಾಕಾನ್ ಯಥಾಶಕ್ತಿ ಚ ದಕ್ಷಿಣಾಮ್ ॥೩೧॥

ದತ್ವಾ ತೇಭ್ಯೋ ನಮಸ್ಕೃತ್ಯ ಪಶ್ಚಾದ್ಭೋಜನಮಾಚರೇತ್ ।
ಯೋ ನ ಪೂಜಯತೇ ಚಾಸ್ಯಾಂ ಗಣೇಶಂ ಮೃಣ್ಮಯಂ ನರಃ ॥೩೨॥

ರಾತ್ರಿಯ ವೇಳೆ ನಿದ್ರೆಗೆ ವಶನಾಗದೇ, ಭಗವನ್ನಾಮವನ್ನು ಉಚ್ಚರಿಸುತ್ತಲೇ ಜಾಗರಣೆಯನ್ನು ಮಾಡತಕ್ಕದ್ದು. ದೇವನಿಗೆ ನಿವೇದಿಸಲಿಕ್ಕಾಗಿ ಲಾಡು, ಮೋದಕ ಪಾಯಸ ಮೊದಲಾದ ಮಧುರ ಪಕ್ವಾನ್ನಗಳನ್ನು ಇರಿಸಿ, ಅವನ್ನು ಬ್ರಾಹ್ಮಣ ಸುವಾಸಿನಿಯರ ಸಂತರ್ಪಣೆಗೆ ವಿನಿಯೋಗಿಸತಕ್ಕದ್ದು. ಬ್ರಾಹ್ಮಣರನ್ನು ತೃಪ್ತಿ ಪಡಿಸುವುದರ ಮೂಲಕ ದೇವನನ್ನೂ ತೃಪ್ತಿಪಡಿಸತಕ್ಕದ್ದು. ॥೩೦॥

ಮೂರನೆಯ ದಿವಸವೂ ಸಹ ವಿಪ್ರದಂಪತಿಗಳನ್ನು ಆಹ್ವಾನಿಸಿ ಯಥಾವಿಧಿಯಾಗಿ ಅರ್ಚಿಸಿ ಅವರಿಗೆ ತೃಪ್ತಿಯಾಗುವಂತೆ ಭೋಜನವನ್ನು ಮಾಡಿಸಬೇಕು. ಇಪ್ಪತ್ತೊಂದು ಜನರಿಗೆ ಕಡಿಮೆ ಇಲ್ಲದಂತೆ ಭೋಜನಕ್ಕೆ ವಿಪ್ರರನ್ನು ಆಹ್ವಾನಿಸತಕ್ಕದ್ದು. ಶಕ್ತಿ ಇದ್ದರೆ ಇನ್ನೂ ಹೆಚ್ಚಾಗಿ ಆಹ್ವಾನಿಸಿ ಭೋಜನವನ್ನು ಮಾಡಿಸಬಹುದು. ಯಥಾಶಕ್ತಿ ದಕ್ಷಿಣೆಯನ್ನು ಭೋಜನೋತ್ತರ ತಾಂಬೂಲದೊಡನೆ ಅವರಿಗೆ ಕೊಡತಕ್ಕದ್ದು. ॥೩೧॥

ಇಷ್ಟೆಲ್ಲ ಉಪಚರಿಸಿದ ಬಳಿಕ, ಆ ಬ್ರಾಹ್ಮಣೋತ್ತಮರಿಗೆ ನಮಸ್ಕರಿಸಿ, ಅವರ ಅನುಮತಿಯನ್ನು ಪಡೆದು, ಅನಂತರ ವ್ರತಿಯಾದವನು ಭುಜಿಸತಕ್ಕದ್ದು. ಈ ಬಗೆಯ ವ್ಯಯಸಾಧ್ಯವಾದ ಅನುಷ್ಠಾನದಲ್ಲಿ ಸಾಮಾನ್ಯವಾಗಿ ಎಲ್ಲರಿಗೂ ನಂಬುಗೆಯುಂಟಾಗುವುದಿಲ್ಲ. ನಂಬಿ ಭಕ್ತಿಯಿಂದ ಈ ವ್ರತವನ್ನಾಚರಿಸಿದವರಿಗೆ ಲಭಿಸಬಹುದಾದ ಪುಣ್ಯಾತಿಶಯವನ್ನು ಬಣ್ಣಿಸಲಸದಳ. ಒಂದು ವೇಳೆ ಯಾರಾದರೂ ಅಶ್ರದ್ಧೆಯಿಂದಲೋ, ಕುಹಕತನದಿಂದಲೋ ಚತುರ್ಥಿಯ ದಿವಸ ಗಣಪತಿಯ ವ್ರತವನ್ನಾಚರಿಸಲಿಕ್ಕಾಗಲೀ, ಮೃಣ್ಮಯ ಮೂರ್ತಿಯನ್ನು ರಚಿಸಿ ಪೂಜಿಸುವುದಕ್ಕಾಗಲೀ ಮೈ ಮರೆತರೆ ॥೩೨॥

**ಸ ವಿಘ್ನೈರಭಿಭೂತಸ್ಸ್ಯಾನ್ನಾನಾ ರೋಗೈಃ ಪ್ರಪೀಡ್ಯತೇ ।**
**ನ ತಸ್ಯ ದರ್ಶನಂ ಕುರ್ಯಾತ್ಪತಿತಸ್ಯೇವ ಕರ್ಹಿಚಿತ್ ॥೩೩॥**

**ಜಾತೇ ತು ದರ್ಶನೇ ತಸ್ಯ ಗಣೇಶಂ ನಾಮ ಸಂಸ್ಮರೇತ್ ।**
**ಚತುರ್ಥ್ಯಾ ಮಹಿಮಾನಂ ನೋ ನ ಶಕ್ಯಂ ಸು-ನಿರೂಪಿತುಮ್ ॥೩೪॥**

**ಕರ್ಮಾಣಿ ತು ಗಣೇಶಸ್ಯ ಯಥಾಮತಿ ನಿರೂಪಯೇ ।**
**ಗುಪ್ತರೂಪಾಃ ಸಿಂಧುದೂತಾಃ ಶಂಕರಾಲಯಸಂಸ್ಥಿತಾಃ**

ಅವನು ಎಷ್ಟೇ ಸಾಹಸವನ್ನು ಮಾಡಿ ಯಾವುದೊಂದು ಪುಟ್ಟ ಕಾರ್ಯ ವನ್ನು ಮಾಡಲು ಆರಂಭಿಸಲಿ, ಅದಕ್ಕೆ ಸಹಸ್ರಾರು ವಿಘ್ನಗಳು ಒಂದರ ಮೇಲೊಂದರಂತೆ ಬಂದೊದಗಿ ಆ ಕೆಲಸ ಕೈಗೂಡದಿರುವಂತೆ ಮಾಡುವುದು ಮಾತ್ರವಲ್ಲದೇ, ಅವನು ಬಗೆಬಗೆಯ ರೋಗಗಳಿಗೆ ಸಿಲುಕಿ ನರಳುವಂತೆಯೂ ಮಾಡುವುದು. ಅವನು ಲೋಕದಲ್ಲಿ ಪರಮ ಪಾಪಿಷ್ಠನೆಂದು ಗಣಿತನಾಗುವನು ಇವನನ್ನು ನೋಡಿದವರಿಗೆ ಪಾಪಪಂಕವು ಅಂಟಿಕೊಳ್ಳುವುದರಲ್ಲಿ ಸಂದೇಹವಿರು ವುದಿಲ್ಲ. ಅವನನ್ನು ಪತಿತನೆಂದೇ ಎಲ್ಲರೂ ಭಾವಿಸತಕ್ಕದ್ದು. ॥೩೩॥

ಅಕಸ್ಮಾತ್ ಅಂತಹ ಪಾತಕಿಯು ದೃಗ್ಗೋಚರನಾಗುವುದಾದರೆ, ಒಡನೆಯೇ ತದ್ದೋಷಪರಿಹಾರಾರ್ಥವಾಗಿ ಮಹಾಗಣಪತಿಯನ್ನು ಮತ್ತು ಅವನ ದಿವ್ಯ ನಾಮ ಗಳನ್ನೂ ಸ್ಮರಿಸಿ ದರ್ಶನ ಜನ್ಯ ಮಹಾಪಾತಕವನ್ನ ಹೋಗಲಾಡಿಸಿಕೊಳ್ಳತಕ್ಕದ್ದು. ವತ್ಸ, ವ್ಯಾಸ! ಚತುರ್ಥೀ ತಿಥಿಯ ಮಹಾಮಹಿಮೆಯನ್ನು ಸಮಗ್ರವಾಗಿ ನಿರೂ ಪಿಸುವುದಕ್ಕಂತೂ ಯಾರಿಂದಲೂ ಸಾಧ್ಯವೇ ಇರುವುದಿಲ್ಲ. ತಿಳಿದಮಟ್ಟಿಗೆ ಅದನ್ನು ನಾನು ನಿನಗೆ ಹೇಳಿರುವೆನು. ॥೩೪॥

ಇನ್ನು ಈ ಅವತಾರದಲ್ಲಿ ಶ್ರೀ ಮಹಾಗಣಪತಿಯು ಯಾವ ಯಾವ ಅದ್ಭುತ ಕಾರ್ಯಗಳನ್ನು ನಡೆಸಿದನೆಂಬುದನ್ನು ಯಥಾಮತಿ ನಿರೂಪಿಸುವೆನು. ಸಾವ ಧಾನ ಮನಸ್ಕನಾಗಿ ಅದನ್ನು ನೀನು ಕೇಳಿ, ಅವಧರಿಸತಕ್ಕದ್ದು. ರಾಕ್ಷಸರು ಮಹಾ ಮಾಯಾವಿಗಳು ಎಂಬುದನ್ನು ಒತ್ತಿ ಹೇಳಬೇಕಾಗಿಲ್ಲ, ಕೇಳು. ಎಂದಾದ ರೊಂದು ದಿವಸ ಮಹಾಗಣಪತಿಯು ಯಾವುದಾದರೊಂದು ರೂಪದಿಂದ ಅವ

**ತಮುದಂತಂ ತು ತೇ ಗತ್ವಾ ಪ್ರಾವದ೯ ಸಿಂಧವೇ ತದಾ ।**
**ಸಮಾಸೀನಾಯ ಯೋಧೈಶ್ಚ ಬಹುಭಿರ್ವೇಷ್ಟಿತಾಯ ಚ ।೩೬॥**

**ಸ್ಥಾಪಯಿತ್ವಾಪ್ಸರೋನೃತ್ಯಂ ಗಾನಂ ಗಂಧರ್ವಸಂಭವಮ್ ।**

ತರಿಸಿ, ತಮ್ಮನ್ನು ನಿಗ್ರಹಿಸಿಯಾನು ಎಂದು ಜಾಣಾಕ್ಷರಾದ ಆ ರಾಕ್ಷಸರು ನಿರೀಕ್ಷಿಸಿದ್ದರು. ಅವೂ ಅಲ್ಲದೆ, ಮಹಾಗಣಪತಿಯು ಪರಶಿವನ ಆಲಯದಲ್ಲಿ ಅವತರಿಸುವನೆಂಬ ಸುದ್ದಿಯು ಕರ್ಣಾಕರ್ಣಿಕೆಯಾಗಿ ಇವರಿಗೂ ಮುಟ್ಟಿದ್ದಿತು. ಇದರ ರಹಸ್ಯವನ್ನು ಅನ್ವೇಷಿಸಲಿಕ್ಕಾಗಿ ರಾಕ್ಷಸರಾಜನಾದ ಸಿಂಧುದೈತ್ಯನು ತನ್ನ ಪರಿವಾರದವರ ಪೈಕಿ, ಕೆಲವು ಮಂದಿ ವಿಶ್ವಾಸಾರ್ಹ ಚತುರ ರಾಕ್ಷಸವೀರರನ್ನು ಮಾರುವೇಷದಿಂದ ಶಿವಾಲಯದಲ್ಲಿ ವಾಸವಾಗಿದ್ದು, ವಿಷಯವನ್ನು ತನಗೆ ಆಗಾಗ್ಗೆ ತಿಳಿಸುತ್ತಿರುವಂತೆ ನಿಯಮಿಸಿದ್ದನು. ಸ್ವಾಮಿನಿಷ್ಠರಾದ ದೈತ್ಯದೂತರು ಛದ್ಮವೇಷದಿಂದ ಶಿವಾಲಯದಲ್ಲಿ ನೆಲೆಸಿ, ಪ್ರಮಥಗಣಗಳಂತೆಯೇ ವರ್ತಿಸುತ್ತ ರಹಸ್ಯ ಸುದ್ದಿಯನ್ನು ತಿಳಿಯಲು ಹವಣಿಸಿ, ಕಾಲವನ್ನು ನಿರೀಕ್ಷಿಸುತ್ತಿದ್ದರು. ॥೩೫॥

ಗುಣೇಶನು ಅವತರಿಸಿದೊಡನೆಯೇ ಆ ಸಂಗತಿಯನ್ನು ಮೊದಲು ತಮ್ಮ ರಾಜನಾದ ಸಿಂಧು ದೈತ್ಯನಿಗೆ ವಿವರವಾಗಿ ಅರಿಕೆಮಾಡಲು ರಾಜನ ಸಭೆಗೆ ದೂತರು ಓಡಿ ಬಂದರು. ಆ ಸಮಯದಲ್ಲಿ ಸಿಂಧುರಾಜನು ತನ್ನ ಸೇನಾ ಪರಿವಾರದವರೊಂದಿಗೆ ತನ್ನ ರಾಜ್ಯಾಡಳಿತದ ಸ್ವಾಸ್ಥ್ಯದ ಬಗ್ಗೆ ವಿಚಾರಮಾಡುತ್ತ ಸಭಾಮಧ್ಯದಲ್ಲಿ ಕುಳಿತಿದ್ದನು. ಅವನ ಸುತ್ತಲೂ ಬಹು ಸಂಖ್ಯಾತರಾದ ಯೋಧವರ್ಗವು ಮುತ್ತಿ ನಿಂತಿದ್ದಿತು. ॥೩೬॥

ಸಿಂಧುರಾಜನ ಸಭೆಯಲ್ಲಿ ಅಪ್ಸರಸ್ತ್ರೀಯರು ಹಾವಭಾವಗಳನ್ನು ಪ್ರದರ್ಶಿಸುತ್ತ ಬಹಳ ಚಾತುರ್ಯದಿಂದ ನರ್ತಿಸುತ್ತಿದ್ದರು. ಸಭಿಕರೆಲ್ಲರೂ ಕಲೆಯ ಆಸ್ವಾದನೆಯಲ್ಲಿ ತಲ್ಲೀನರಾಗಿದ್ದರು. ಆದರೆ ಇಷ್ಟು ರಾಸಿಕ್ಯ ದೂತರಿಗೆಲ್ಲಿ ಬರಬೇಕು ? ಅವರಿಗೆ ತಾವು ಸಂಶೋಧಿಸಿದ ಸುದ್ದಿಯನ್ನು ಎಷ್ಟು ಬೇಗನೆ ತಮ್ಮ ರಾಜನಿಗೆ ಹೇಳಿ, ಕೃತಕೃತ್ಯರಾದೇವೋ ಎಂಬ ಆತುರ ಕ್ಷಣ ಕ್ಷಣಕ್ಕೂ ವೃದ್ಧಿಯಾಗುತ್ತಲೇ ಇದ್ದುದರಿಂದ ರಾಜ ಸಭೆಯಲ್ಲಿ ನಡೆದ ಗಾನನೃತ್ಯಗಳನ್ನು ಮುಗಿ

**ದೂತಾ ಊಚುಃ :—**

**ದಕ್ಷಿಣೇ ದಂಡಕಾರಣ್ಯೇ 'ತ್ರಿಸಂಧ್ಯಾ ಕ್ಷೇತ್ರ'ಸಂಜ್ಞಿತೇ ||೩೭||**

**ಗತ್ವಾ ತತ್ರ ದೃಷ್ಟವಂತೋ ಭಗವಂತಂ ಶಿವಾಭಿಧಮ್ |**
**ಅಷ್ಟಾಶೀತಿಸಹಸ್ರಾಣಾಂ ಮುನೀನಾಮಾಶ್ರಮಾನ್ ಬಹೂನ್ ||೩೮||**

**ಏಕಸ್ಮಿನ್ ದಿವಸೇ ಬಾಲಂ ಶಿವಾ ಪ್ರಾಸೂತ ಷಡ್ಭುಜಮ್ |**
**ಲಾವಣ್ಯಕೋಶಂ ತ್ರೈಲೋಕ್ಯೇಽನುಪಮಂ ಮಹಸೋಜ್ಜ್ವಲಮ್ ||೩೯||**

ಯಗೊಡುವಷ್ಟು ಸಹನ ಶಕ್ತಿ ಉಳಿಯಲಿಲ್ಲ. ಒಡನೆಯೇ ಕೆಟ್ಟ ಧ್ವನಿಯಿಂದ ಒಮ್ಮೆ ಕೂಗಾಡಿ, ವಿಚಿತ್ರವಾದ ಗದ್ದಲವನ್ನೆಬ್ಬಿಸಿ ಸಂಗೀತ-ನರ್ತನಗಳನ್ನೆಲ್ಲ ಒಮ್ಮೆಲೇ ನಿಲ್ಲಿಸಿ ಬಿಟ್ಟು, ತಾವು ತಂದ ಸುದ್ದಿಯನ್ನು ವಿವರಿಸಲಾರಂಭಿಸಿದರು.

ದೂತರು :—

ರಾಜನ್ ! ದಕ್ಷಿಣದೇಶದಲ್ಲಿ ಒಂದು ದೊಡ್ಡ ಅರಣ್ಯವಿದೆ. ಅದನ್ನು 'ದಂಡಕಾರಣ್ಯ' ಎಂದು ಕರೆಯುತ್ತಾರೆ. ಅದರ ನಡುವೆ- ಒಂದು ಪವಿತ್ರವಾದ ಕ್ಷೇತ್ರವಿದೆ. ಅದಕ್ಕೆ 'ತ್ರಿಸಂಧ್ಯಾಕ್ಷೇತ್ರ' ಎಂದು ಹೆಸರು. ||೩೭||

ಅಲ್ಲೆಲ್ಲ ನಾವು ಸಂಚರಿಸಿದೆವು. ಆ ಸ್ಥಳದಲ್ಲಿ ಭಗವಾನ್ ಪರಶಿವನು ವಾಸವಾಗಿರುವುದನ್ನೂ ನೋಡಿದೆವು. ಆ ಪುಣ್ಯತಮ ಕ್ಷೇತ್ರದಲ್ಲಿ ಎಂಭತ್ತೆಂಟು ಸಾವಿರ ತಪಸ್ವಿಗಳು ತಪೋಽನುಷ್ಠಾನನಿರತರಾಗಿ ಕುಳಿತುದು ಕಂಡುಬಂದಿತು. ಅವರ ಆಶ್ರಮ, ಪರ್ಣಕುಟೀನಿರ್ಮಾಣಕ್ರಮ ಇವು ಆ ಕ್ಷೇತ್ರ ಪ್ರದೇಶದಲ್ಲೆಲ್ಲ ಬಹಳ ರಾಮಣೀಯಕತೆಯನ್ನುಂಟುಮಾಡಿವೆ. ಇವನ್ನೂ ನಾವು ನೋಡಿದೆವು. ||೩೮||

ಹೀಗಿರುವಾಗ, ಒಂದು ದಿವಸ ಪರಶಿವೆಯು ಒಂದು ಗಂಡು ಶಿಶುವನ್ನು ಪ್ರಸವಿಸಿದಳು. ಆ ಮಗುವಿಗೆ ಆರು ಭುಜಗಳಿದ್ದವು. ಲಾವಣ್ಯಕ್ಕೆ ನಿಧಿಯಂತೆ ಆ ಶಿಶು ಇದೆ. ಅದಕ್ಕೆ ಸದೃಶವಾದ ಮತ್ತೊಂದು ಶಿಶು ಮೂರು ಲೋಕಗಳಲ್ಲಿ

ದಶಾಹಸ್ಸು ಮಹೋತ್ಸಾಹೈರ್ಗತೇಷು ಮುನಿಪುಂಗವಾಃ !
ಚಕ್ರುರ್ನಾಮ 'ಗುಣೇಶೇ'ತಿ ತಸ್ಯ ಬಾಲಸ್ಯ ಶಂಕರಃ ||೪೦||

ವಯಂ ವಾದಿತ್ರನಿರ್ಘೋಷೈರ್ಬಧಿರಾ ಇವ ತಸ್ಥಿಮ |
ಯದಿ ಹಂತುಂ ಗಮಿಷ್ಯಾಮಃ ಸಪ್ತಕೋಟಿಗಣಾಸ್ತದಾ ||೪೧||

ಏಕೈಕಸ್ಯ ಬಲಂ ಘೋರಂ ಪರ್ವತೋನ್ಮೂಲನಕ್ಷಮಮ್ |
ನಿಹನ್ಯುಃ ಸಹಸಾಭ್ಯೇತ್ಯ ವೃತ್ತಾಂತಂ ಕೋ ನಿವೇದಯೇತ್ ? ||೪೨||

---

ಹುಡುಕಿ ನೋಡಿದರೂ ಸಿಕ್ಕುವುದಿಲ್ಲ. ಆ ಮಗುವಿನ ದೇಹಕಾಂತಿಯು ಬಹಳ ಉಜ್ವಲವಾದುದು. |೩೯|

ಮಗು ಜನಿಸಿದ ಹತ್ತು ದಿವಸಗಳ ವರೆಗೆ ಆ ಪ್ರದೇಶದಲ್ಲಿದ್ದ ಋಷಿಗಳು, ಇತರರು ಎಲ್ಲರೂ ಅಖಂಡವಾಗಿ ಮಹೋತ್ಸವಗಳನ್ನು ನಡೆಸಿದರು. ಹನ್ನೊಂದನೆಯ ದಿವಸ ಋಷಿಗಳೆಲ್ಲರೂ ಪರಶಿವನ ಆಹ್ವಾನದ ಮೇರೆಗೆ ಶಿವಾಲಯಕ್ಕೆ ಬಂದು, ಆ ಬಾಲಕನಿಗೆ 'ಗುಣೇಶ' ಎಂಬ ಶುಭವಾದ ಅಂಕಿತವನ್ನು ಮಾಡಿದರು. ಶಂಕರನೂ ಇದನ್ನು ಸಂತೋಷದಿಂದ ಅನುಮೋದಿಸಿದನು. ||೪೦||

ಪುತ್ರನುದಿಸಿದ ಹತ್ತು ದಿವಸಗಳು, ಹಾಗೂ ನಾಮಕರಣದ ದಿವಸ ಅವರು ಏರ್ಪಡಿಸಿದ್ದ ವಿವಿಧ ಮಂಗಲ ವಾದ್ಯಗಳ ಧ್ವನಿಯನ್ನು ಕೇಳಿ ಕೇಳಿ ನಮ್ಮ ಕಿವಿಗಳು ಮರಗಟ್ಟಿಹೋಗಿವೆ. ನಮ್ಮ ಪೈಕಿ ಬಹಳ ಮಂದಿ ಸರ್ವಾತ್ಮನಾ ಕಿವುಡರೇ ಆಗಿ ಹೋಗಿದ್ದೇವೆ. 'ಏನೇ ಆಗಲಿ, ಆ ಬಾಲಕನನ್ನು ಕೊಂದು ಬಿಡೋಣ'ವೆಂದೂ ಒಮ್ಮೊಮ್ಮೆ ನಮ್ಮಲ್ಲಿ ಆಲೋಚನೆ ಬಂದಿತು. ಆದರೆ, ಮಾಡುವುದೇನು ? ಅವರ ಸೈನ್ಯವೋ, ಏಳು ಕೋಟಿ ಪ್ರಬಲರಾದ ಪ್ರಮಥಗಣದಿಂದ ಕೂಡಿರುವುದು. ನಾವೇನಾದರೂ, ಹೀಗೆ ಪ್ರಯತ್ನಿಸುತ್ತಿರುವುದು ಅವರಿಗೆ ತಿಳಿದಿದ್ದರೆ, ಅವರು ನಮ್ಮನ್ನು ನಸುಗಿ ಬಿಡುತ್ತಿದ್ದರು. ||೪೧||

ಆ ಪ್ರಮಥರ ಪೈಕಿ ಒಬ್ಬೊಬ್ಬನ ಕಾಯಿಕ ಶಕ್ತಿಯನ್ನು ಬಣ್ಣಿಸುವುದಾದರೆ, ಅವರು 'ಪರಾಕ್ರಮ ಪರ್ವತವೋ' ಎಂಬಂತಿರುವರು. ನಮ್ಮನ್ನು ನಾಶಗೊಳಿಸುವುದೆಂದರೆ ಅವರಿಗೆ ಸ್ವಲ್ಪವೂ ಪ್ರಯಾಸದ ಕೆಲಸವಾಗಿರಲಿಲ್ಲ. ನಾವು ಅವರ ಕೈಗಳಿಗೆ

**ಕ ಉವಾಚ :—**

**ಏವಂ ವದತ್ಸು ದೂತೇಷು ಶುಶ್ರುವೇ ವ್ಯೋಮವಾಕ್ತದಾ ।**

**ವ್ಯೋಮವಾಗುವಾಚ :—**

**ಉತ್ಪನ್ನಃ ಕ್ವಾಪಿ ತೇ ಹಂತಾ ಸಿಂಧೋ ! ಸಾವಧತಾಂ ವ್ರಜ ॥೪೩॥**

**ಸಿಂಧುರುವಾಚ :—**

**ವಧ್ಯತಾಂ, ವಧ್ಯತಾಂ ಕೋಽಯಂ ಬ್ರೂತೇ ದುಷ್ಟವಚೋಽತ್ರ ಹ ।**

---

ಸಿಕ್ಕಿಬಿಟ್ಟಿದ್ದರೆ, ನಿನಗೆ ಸುದ್ದಿಯನ್ನು ಮುಟ್ಟಿಸಲಿಕ್ಕೆ ಸಹ ಯಾರೂ ಉಳಿಯುತ್ತಲಿರಲಿಲ್ಲ. ॥೪೨॥

ಬ್ರಹ್ಮಾ :—

ದೂತರು ಆರಂಭಿಸಿದ ಅಪ್ರಾಸಂಗಿಕ ವರ್ಣನೆ, ವಾಕ್ಚಾತುರ್ಯ ಇವನ್ನು ಕೇಳಿ, ಸಿಂಧುದೈತ್ಯನು ಉರಿದುಬಿದ್ದನು. ಅಷ್ಟರಲ್ಲಿ ಅಶರೀರಿಣಿಯಾದ ವಾಕ್ಯೊಂದು ನಭೋಮಂಡಲದಿಂದ ಹೊರಹೊರಟಿತು. ಇದರಿಂದ ಸಿಂಧುದೈತ್ಯನು ತನ್ನ ದೂತರ ಮೇಲೆ ತನಗೆ ಉಂಟಾಗಿದ್ದ ಕ್ರೋಧಾನಲವನ್ನು ತಡೆದು ಹಿಡಿಯಬೇಕಾಗಿ ಬಂದಿತು. ಅಶರೀರವಾಣಿಯೇ ಈ ದೂತರ ಪ್ರಾಣಗಳನ್ನು ರಕ್ಷಿಸಿದಂತಾಯಿತು.

ಆಕಾಶವಾಣೀ :—

ಸಿಂಧೋ ! ಬಹಳ ಜಾಗರೂಕನಾಗಿರು. ನಿನ್ನ ಭಾಗದ ಮೃತ್ಯು ; ಭಗವಂತನು ಈಗಾಗಲೇ ಎಲ್ಲೋ ಅವತರಿಸಿ, ನಿನ್ನನ್ನು ನಿಗ್ರಹಿಸುವುದಕ್ಕೆ ಸಿದ್ಧನಾಗಿರುವನು. ॥೪೩॥

ಸಿಂಧು :—

ಯಾರದು ? ಇಂತಹ ಕಟು ವಾಕ್ಯಗಳನ್ನಾಡಿ ಬದುಕಲಪೇಕ್ಷಿಸಿದವರು ? ಮೊದಲು ಅವನನ್ನು ಕೊಲ್ಲಿರಿ, ಸ್ವಲ್ಪವೂ ವಿಲಂಬಿಸಬೇಡಿ, ಹಾಗೂ ದಯೆದೋರಬೇಡಿ.

ಕ ಉವಾಚ ;—

ಕೇಚಿದುದ್ವಿಗ್ನಾಯು ಪತಿತಾ ಧಾವಯಿತ್ವಾಪರೇ ಯಯುಃ ||೪೪||

ತಾವದ್ದೈತ್ಯೋ ಮಹಾ ಮೂರ್ಛಾಂ ಸಂಪ್ರಾಪ್ತಃ ಪತಿತೋ ಭುವಿ |
ಚಿಂತಾಮಗ್ನೋ ಮ್ಲಾನಮುಖೋ ನಿರುತ್ಸಾಹೋ ಹತಪ್ರಭಃ ||೪೫||

ಉವಾಚ ವಿಹ್ವಲದ್ವಾಚೋ ಮುಹೂರ್ತಾತ್ಪ್ರಾಪ್ಯ ಚೇತನಾಮ್ |

---

ಬ್ರಹ್ಮಾ:—

ತಮ್ಮ ದೊರೆಯ ಬಾಯಿಯಿಂದ ಈ ಆಜ್ಞೆ ಹೊರಟುದೇ ತಡ, ಕೆಲವರಂತೂ ಉದ್ದೇಶವನ್ನೇ ಅರಿಯದೇ, ಇದು ಸಾಧ್ಯವೇ ಅಥವಾ ಅಸಾಧ್ಯವೇ ? ಎಂಬುದನ್ನು ಸಹ ವಿಚಾರಮಾಡದೇ ಕೇವಲ ಹುಂಬತನದಿಂದ ಒಮ್ಮೆಲೇ ಮೇಲಕ್ಕೆ ನೆಗೆದು, ಏನೂ ಕಾಣದಿರಲು ನಿಲ್ಲಲು ಆಸುವಿಲ್ಲದೇ ಧೊಪ್ಪನೇ ನೆಲಕ್ಕೆ ಬಿದ್ದರು. ಮತ್ತೆ ಕೆಲವರು ದಾರಿ ಸಿಕ್ಕತ್ತ ಓಡಿಹೋಗಿ ಅಲ್ಲೆಲ್ಲ ಹುಡುಕಿ ನೋಡಿದರು. ||೪೪||

ಇತ್ತ ದೈತ್ಯನಿಗೆ ಮಹಾ ಮೂರ್ಛೆಯೇ ಬಂದುಬಿಟ್ಟಿತು. ಅವನೂ ಸಹ ಆಸುಗೆಟ್ಟು ನೆಲಕ್ಕೆ ಉರುಳಿದನು. ಸೇವಕರು ಮಾಡಿದ ವಿಶೇಷ ರೀತಿಯ ಶೈತ್ಯೋಪಚಾರದಿಂದ ಎಚ್ಚೆತ್ತನು. ಬಗೆಹರಿಯಲಾರದಂತಹ ಚಿಂತೆ ಅವನನ್ನಾವರಿಸಿಬಿಟ್ಟಿತು. ಮುಖವೆಲ್ಲವೂ ಕಪ್ಪಿಟ್ಟು ಕಳೆಗುಂದಿ ಹೋಯಿತು. ಯಾವುದರಲ್ಲೂ ಅವನಿಗೆ ಉತ್ಸಾಹವೇ ಉಳಿಯಲಿಲ್ಲ. ಒಂದು ಕ್ಷಣಕ್ಕೆ ಮೊದಲು ರಸಪುಷ್ಟಿಗೊಂಡಿದ್ದ ಸಿಂಧುದೈತ್ಯನು ಈಗ ಒಣಗಿದ ಸಂಡಿಗೆಯಂತಾದನು. ||೪೫||

ಒಂದು ಮುಹೂರ್ತದೊಳಗಾಗಿ ಅವನಿಗೆ ಸಂಪೂರ್ಣ ಎಚ್ಚರ ಉಂಟಾಯಿತು. ಆಗ ತನ್ನಷ್ಟಕ್ಕೆ ತಾನೇ ಹೀಗೆಂದು ಬಡಬಡಿಸಲಾರಂಭಿಸಿದನು. ಆಗಲೂ ಸಹ ಅವನ ಧ್ವನಿಯು ಚಾತುರ್ಥಿಕ ಛಳಿ ಬಂದವರಂತೆ ಗಡಗಡ ನಡುಗುತ್ತಲಿದ್ದಿತು.

ಸಿಂಧುರುವಾಚ :—

ತ್ರೈಲೋಕ್ಯಕಂಟಕಸ್ಯಾಪಿ ಕಂಟಕಃ ಕ ಉಪಸ್ಥಿತಃ ? ||೪೬||

ಕಥಂ ಹನ್ಯಾದ್ಗಜಃ ಸಿಂಹಂ ಮಶಕೋ ವಾಥ ವಾರಣಮ್? ।
ತ್ರಯಸ್ತ್ರಿಂಶತ್ಕೋಟಿದೇವಾ ನಿರ್ಜಿತಾ ಕ್ಷಣಮಾತ್ರತಃ ||೪೭||

ತಸ್ಯ ಮೇ ಮರಣಂ ಕಸ್ಮಾಜ್ಜಾಯೇತ? ವ್ಯೋಮವಾಙ್ಮೃಷಾ ।
ಋತಾಸ್ತು ವಾ ಗಮಿಷ್ಯಾಮಿ ಭಕ್ಷಿತುಂ ತಮಹಂ ರಿಪುಮ್ ||೪೮||

ಕ ಉವಾಚ :—

ಏವಮುಕ್ತ್ವಾ ಕ್ಷಣಾರ್ಧಾತ್ಸ ಭದ್ರಾಸನಗತೋಽಭವತ್ ।

ಸಿಂಧು :—

ಮೂರು ಲೋಕಗಳಿಗೂ ನಾನು ಮುಳ್ಳಿನಂತಿರುವವನು. ಹೀಗಿರುವಾಗ ನನಗೂ ಮತ್ತೊಬ್ಬನು ಕಂಟಕನಾಗಿ ಉದ್ಭವಿಸಿದನಲ್ಲ? ಮುಂದೇನ್ಗತಿ ?||೪೬||

ಇರಲಿ, ಆನೆಯು ಮೃಗೇಂದ್ರ, ಸಿಂಹವನ್ನು ವಧಿಸುವುದು ಎಂದಿಗಾದರೂ ಸಂಭವವಾದೀತೇ ? ಅಥವಾ ಒಂದು ಚಿಕ್ಕ ಸೊಳ್ಳೆ ಮದಿಸಿದ ಆನೆಯನ್ನೇನಾದರೂ ಕೊಂದೀತೋ ? ಮುವ್ವತ್ತುಮೂರು ಕೋಟಿ ದೇವತೆಗಳನ್ನೂ ಒಂದು ಕ್ಷಣಮಾತ್ರದಲ್ಲಿ ಜಯಿಸಿದ ಧೀರ, ನಾನು. ||೪೭||

ಇಂತಹ ವೀರನಾದ ನನ್ನನ್ನೂ ಕೊಲ್ಲುವಂತಹ ವೀರನೊಬ್ಬನಿದ್ದಾನೆಯೇ ? ಅಶರೀರವಾಣಿಯ ನುಡಿ ನಿಜವಲ್ಲವೇ ಅಲ್ಲ. ಇದನ್ನು ನಂಬಿ ನಡೆಯುವುದೆಂದರೇನು ? ಎಲ್ಲಿಯ ಮಾತು ? ಒಂದು ವೇಳೆ ನಿಜವೆಂದೇ ಭಾವಿಸಿದರೂ ಶತ್ರುವೆನಿಸಿದವನನ್ನು ನಾನು ಕಂಡುಹಿಡಿಯಲಾರೆನೇ ? ಮತ್ತು ಅವನನ್ನು ನುಂಗಿ ನೀರು ಕುಡಿಯಲಾರೆನೇ ? ಏನೇ ಆಗಲಿ, ಹಾಗೆಯೇ ಮಾಡುವೆನು. ||೪೮||

ಬ್ರಹ್ಮಾ :—

ಹೀಗೆ ನುಡಿದವನೇ ತನ್ನ ಭದ್ರಾಸನವನ್ನೇರಿ ಒಂದು ಕ್ಷಣಾರ್ಧದ ವರೆಗೂ

ಸರ್ವೇ ವೀರಾಸ್ತತೋ ಯಾತಾಃ ಶ್ರುತ್ವಾ ವಾರ್ತಾಂ ತಥಾವಿಧಾಮ್
॥೪೯॥

ದೈತ್ಯಾ ಊಚುಃ :—

ತ್ವಮೇವ ಮೃತ್ಯೋರ್ಮೃತ್ಯುಶ್ಚ ತವ ಮೃತ್ಯುಃ ಕಥಂ ಭವೇತ್ ? ।

ಕ ಉವಾಚ :—

ಇತ್ಯೂಚುಸ್ತೇ

---

ಮೌನದಿಂದ ಕುಳಿತುಬಿಟ್ಟನು. ಸಿಂಧುದೈತ್ಯನ ಸೈನ್ಯ ಪರಿವಾರವೆಲ್ಲೆಲ್ಲ ಕಡೆಗೂ ಒಂದು ಕ್ಷಣಮಾತ್ರದಲ್ಲಿ ಈ ಸುದ್ದಿಯು ಹರಡಿಹೋಯಿತು, ಒಂದು ಬಗೆಯಿಂದ ಎಲ್ಲರಿಗೂ ದಿಗ್ಭ್ರಮೆ ಹಿಡಿದಂತಾಯಿತು. ಯಾವುದೂ ಅವರ ವಿಚಾರಶಕ್ತಿಗೆ ಹೊಳೆಯದಂತಾಗಲು, ಒಮ್ಮೆಲೇ ಧಾವಿಸಿ ದೈತ್ಯನ ಬಳಿಗೆ ಬಂದು ಸೇರಿದರು. ಮತ್ತು ಈ ದುರ್ಘಟನೆಯೊದಗಿದುದಕ್ಕಾಗಿ ಕೆಲವು ಮಾತುಗಳನ್ನಾಡಿ ತಾವೂ ಆಶ್ಚರ್ಯವನ್ನು ವ್ಯಕ್ತಪಡಿಸಿದರು. ॥೪೯॥

ದೈತ್ಯವೀರರು :—

ಪ್ರಭೋ ! ನೀನೇ ಜಗತ್ತಿಗೆಲ್ಲ ಹೆಚ್ಚೇಕೆ ? ಮೃತ್ಯುವಿಗೆ ಸಹ ಮೃತ್ಯುಸ್ವರೂಪನಾಗಿರುವೆ. ಹೀಗಿರುವಾಗ ನಿನಗೂ ಒಬ್ಬನು ಮೃತ್ಯುವಾಗತಕ್ಕವನಿದ್ದಾನೆ ಎಂದರೆ ಇದು ಹುಡುಗಾಟಿಕೆಯ ಮಾತೇ ಹೊರತು, ಮತ್ತೆ ಬೇರೆ ಅಲ್ಲ.

ಬ್ರಹ್ಮಾ :—

ಹೀಗೆ ಹೇಳಿದವರೇ ದೈತ್ಯರಾಜನನ್ನು ಕುರಿತು ಆಶ್ವಾಸನಗೊಳಿಸುತ್ತ ಮತ್ತೆ ಹೀಗೆಂದು ನುಡಿದರು.

ಊಚುಃ :—

ಭವೇದ್ವಾಪಿ ತಂ ವಯಂ ಘಾತಯಾಮಹೇ ॥೫೦॥

ಸ್ವರ್ಗೇ ಭೂಮೌ ತಲೇ ವಾಪಿ ಗಗನೇ ವಾ ವಸೇದ್ಯದಿ ।
ದೇಹ್ಯಾಜ್ಞಾಂ ನೋ ಗಮಿಷ್ಯಾಮೋ

ಕ ಉವಾಚ :—

ದೈತ್ಯಸ್ತಾನಬ್ರವೀದಥ ॥೫೧॥

ದೈತ್ಯವೀರರು :-

ಇದ್ದರೆ ಇದ್ದುಕೊಳ್ಳಲಿ, ಅದಕ್ಕೇಕೆ ಇಷ್ಟು ಚಿಂತಿಸಬೇಕು? ಅದನ್ನು ಮೊಳಕೆಯಲ್ಲೇ ಚಿಗುಟಿ ಬಿಸುಟು ಬಿಟ್ಟರೆ ಸರಿ. ಅದರ ಆತಂಕ ತಪ್ಪುವುದೋ ಇಲ್ಲವೋ? ಈ ಕೆಲಸವನ್ನು ಸಾಧಿಸಲಿಕ್ಕೆ ನಾವು ಸಿದ್ಧರಾಗಿದ್ದೇವೆ. ॥೫೦॥

ನಿನಗೆ ಶತ್ರು ಎನಿಸಿದವನು ಭೂಮಿಯ ಮೇಲಿರಲಿ, ಸ್ವರ್ಗಲೋಕದಲ್ಲಿರಲಿ. ಪಾತಾಳ ಲೋಕಗಳಲ್ಲಡಗಿರಲಿ, ಅಥವಾ ಇನ್ನೂ ಬಲಿಷ್ಠನಾಗಿದ್ದು, ಅಂತರಾಳ ದಲ್ಲೇ ನೆಲೆಸಿರಲಿ, ಎಲ್ಲಿದ್ದರೂ ನಾವು ಬೇರೆ : ಅವನನ್ನು ಉಳಿಯಗೊಡಲಾರೆವು ನಮಗೆ ಈ ಕಾರ್ಯವನ್ನು ಸಾಧಿಸಿಕೊಂಡು ಬರಲಿಕ್ಕಾಗಿ ಮೊದಲು ಅನುಜ್ಞೆ ಯನ್ನು ಕೊಡು. ಇದೋ, ಒಂದು ಕ್ಷಣವನ್ನು ಸಹ ವ್ಯರ್ಥವಾಗಿ ಕಳೆಯದೇ ನಾವು ಹೊರಟೆವೆಂದೇ ತಿಳಿ.

ಬ್ರಹ್ಮಾ :—

ಇವರ ಸಮಯೋಚಿತ, ಉತ್ಸಾಹವರ್ಧಕ ಆಶ್ವಾಸನದ ನುಡಿಗಳನ್ನು ಕೇಳಿ ದೈತ್ಯನು ಇದ್ದುದರಲ್ಲೇ ಸ್ವಲ್ಪ ಸಮಾಧಾನವನ್ನು ಪಟ್ಟುಕೊಂಡು ಅವರನ್ನು ಕುರಿತು ಹೀಗೆಂದು ನುಡಿದನು. ॥೫೧॥

**ಸಖೀನಾಂ ಸೇವಕಾನಾಂ ಚ ಪೀತ್ವಾ ವಾಕ್ಯಾಮೃತಂ ಪರಮ್ ।**

**ಸಿಂಧುರುವಾಚ :—**

**ಪ್ರೀತೋಽಹಂ ಯಾಂತು ಶೀಘ್ರಂ ತು ಯತ್ರ ಮೇ ಸ ರಿಪುರ್ಭವೇತ್ ॥೫೨॥**

**ಅನೇಕಮಾಯಯಾ ಹತ್ವಾ ರಿಪುಂ ಮಾಮ ನಿವೇದ್ಯತಾಮ್ ।**

**ಕ ಉವಾಚ :—**

**ಏವಮಾಜ್ಞಾಂ ಗೃಹೀತ್ವಾ ತೇ ಸಂಖ್ಯಾತೀತಾ ಯಯುಸ್ತತಃ ॥೫೩॥**

---

ಇವನಿಗೆ ಆಶ್ವಾಸನವನ್ನಿತ್ತವರು ಸೇವಕರು ಮಾತ್ರವಲ್ಲದೇ, ಪ್ರಾಣಾಪ್ತ ಸ್ನೇಹಿತರಾದವರೂ ಕೆಲವರು ಆ ಗುಂಪಿನಲ್ಲಿದ್ದರು. ಅವರ ಮಾತುಗಳು ಅಮೃತ ವರ್ಷದಂತೆ ಶ್ರುತಿಮಧುರವಾಗಿದ್ದಿತು.

ಸಿಂಧು :—

ನಿಮ್ಮ ಜಾಣ್ಮೆಗೂ, ಸಮಯೋಚಿತ ವೀರವಾಣಿಗೂ ನಾನು ಬಹಳ ಸಂತುಷ್ಟ ನಾಗಿರುವೆನು. ಇದ್ದರೆ ನಿಮ್ಮಂತಹ ಆಪ್ತಮಿತ್ರರೂ, ಸೇವಕರೂ ಇರಬೇಕು. ನೀವು ತತ್ಕ್ಷಣವೇ ಹೊರಡಿರಿ. ನನ್ನ ಶತ್ರು ಎಲ್ಲಿ ಅಡಗಿ ಕುಳಿತಿರುವನೋ ಆ ಸ್ಥಳಕ್ಕೆ ಹೋಗಿ, ನಿಮಗೆ ತಿಳಿದಿರಬಹುದಾದ ಮಾಯೆಯನ್ನೆಲ್ಲ ಪ್ರಯೋಗಿಸಿ, ಅವನನ್ನು ಕೊಂದು ಬಿಡಿರಿ. ಈ ಸಂತೋಷದ ಸುದ್ದಿಯನ್ನು ನನಗೆ ತಿಳಿಸಿದಿರೆಂದರೆ ಆಗ ನಾನು ಮತ್ತಷ್ಟು ಸಂತೋಷಪಡುವೆನು.

ಬ್ರಹ್ಮಾ

ಸಿಂಧು ದೈತ್ಯನ ಈ ಆಜ್ಞೆಯನ್ನು ಶಿರಸಾ ಧಾರಣಮಾಡಿದ ಅವನ ಮಿತ್ರರೂ, ಸೇನಾವರ್ಗದವರೂ ಶತ್ರುನಿಗ್ರಹಕ್ಕಾಗಿ ಧಾವಿಸಿ ನಡೆದರು. ಅವರ ಸಂಖ್ಯೆಯನ್ನು ಇಷ್ಟೆಂದು ಎಣಿಸಿ ಹೇಳಲಿಕ್ಕೆ ಯಾರಿಗೂ ಸಾಧ್ಯವಿರಲಿಲ್ಲ. ॥೫೩॥

ತ್ರಿ-ಸಂಧ್ಯಾಕ್ಷೇತ್ರಮಾಸಾದ್ಯ ಗುಪ್ತರೂಪೇಣ ಚಾವಸನ್ ।
'ಗೌರೀಸುತಂ ಯತ್ರ ಕುತ್ರ ಮಾಯಯಾ ಹನ್ಮ' ಇತ್ಯುತ ॥೫೪॥

ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ 'ಭಗವದವತಾರ
ವರ್ಣನಂ, ರಾಕ್ಷಸೋದ್ಯಮಶ್ಚೇ'ತಿ ದ್ವ್ಯಶೀತಿತ'
ಮೋಽಧ್ಯಾಯಃ ಸಮಾಪ್ತಃ

---

ಅವರು ನೆಟ್ಟಗೆ ತ್ರಿಸಂಧ್ಯಾ ಕ್ಷೇತ್ರಕ್ಕೆ ಬಂದು ಗುಪ್ತರೂಪಗಳಿಂದ ಅಲ್ಲಿ ವಾಸ ಮಾಡತೊಡಗಿದರು. 'ಗೌರಿಯ ಸುತನು ಎಲ್ಲಿ ಯಾರಿಗೆ ಸಿಕ್ಕರೂ ಸರಿ, ಕೂಡಲೇ ಅವನನ್ನು ಯಾರಿಗೂ ತಿಳಿಯದಂತೆ ವಧಿಸಿಬಿಡೋಣ' ಎಂಬುದೊಂದೇ ಅವರಲ್ಲಿ ಪ್ರತಿಯೊಬ್ಬನ ಧ್ಯೇಯವಾಗಿದ್ದಿತು. ॥೫೪॥

ಇಲ್ಲಿಗೆ ಶ್ರೀ ಗಣೇಶಪುರಾಣ, ಉತ್ತರ ಖಂಡದಲ್ಲಿ 'ಭಗವದವತಾರ ವರ್ಣನೆ,
ಮತ್ತು ರಾಕ್ಷಸರ ಉದ್ಯಮ' ಎಂಬಲ್ಲಿಗೆ ಎಂಭತ್ತೆರಡನೆಯ
ಅಧ್ಯಾಯಾನುವಾದವು ಮುಗಿದುದು.



॥ ಶ್ರೀ ಗಣೇಶಾಯ ನಮಃ ॥

## ಅಥ ತ್ರ್ಯಶೀತಿತಮೋಽಧ್ಯಾಯಃ

**ಕ ಉವಾಚ :—**

**ಶುಕ್ಲ ಚಂದ್ರ ಇವ ಬ್ರಹ್ಮನ್ ! ವವೃಧೇ ಸ ದಿನೇ ದಿನೇ ।**
**ತತೋ ಹಿಮಾಲಯಃ ಪ್ರಾಯಾತ್ ಶ್ರುತ್ವಾ ಗೌರೀಸುತಂ ಶುಭಮ್ ॥೧॥**

**ಅಲಂಕಾರಾನ್ ಸಮಾದಾಯಾಮೂಲ್ಯರತ್ನಸಮನ್ವಿತಾನ್ ।**
**ಅಜಿರೇ ತಂ ನಿರೀಕ್ಷ್ಯೈವ ಧಾವಯಿತ್ವಾಯಯೌ ಸುತಾ ॥೨॥**

---

॥ ಶ್ರೀ ಗಣೇಶಾಯ ನಮಃ ॥

### ೮೩ ನೆಯ ಅಧ್ಯಾಯ.

ಬ್ರಹ್ಮಾ :-

ಬ್ರಾಹ್ಮಣೋತ್ತಮ, ವ್ಯಾಸ! ಮುಂದಿನ ಕಥೆಯನ್ನು ಹೇಳುವೆನು, ಅವಧರಿಸು. ಪಾರ್ವತೀನಂದನನು ಶುಕ್ಲಪಕ್ಷದ ಶೀತಕಿರಣನಂತೆ ದಿನೇ ದಿನೇ, ಕ್ಷಣ ಕ್ಷಣಕ್ಕೂ ವೃದ್ಧಿಯಾಗಲಾರಂಭಿಸಿದನು. ಕೆಲವು ಕಾಲ ಕಳೆದನಂತರ ಪರ್ವತರಾಜ ; ಹಿಮವಂತನು ತನ್ನ ಮುದ್ದುಗುವರಿ ;; ಗೌರಿಗೆ ಸುತನು ಜನಿಸಿದ ಸಂತೋಷದ ಸಂಗತಿಯನ್ನು ಕೇಳಿ, ಒಂದು ಸಲ ನೋಡಿಕೊಂಡು ಹೋಗೋಣವೆಂದು ಮಗಳ ಮನೆಗೆ ಧಾವಿಸಿ ಬಂದನು. ॥೧॥

ಸಕಲ ಶಾಸ್ತ್ರಗಳನ್ನೂ, ಸಂಪ್ರದಾಯಗಳನ್ನೂ ಬಲ್ಲವನಾದ ಗಿರಿರಾಜನು ಬರಿಗೈಯ್ಯಲ್ಲಿ ಬರದೇ, ಅಮೂಲ್ಯ ರತ್ನಖಚಿತ ಅನೇಕ ಆಭರಣವಸ್ತುಗಳನ್ನು ಸಂಗಡ ತೆಗೆದುಕೊಂಡೇ ಬಂದನು. ಮನೆಯ ಒಳ ಅಂಗಳಕ್ಕೆ ಬಂದು ನಿಂತ ತನ್ನ

ಆಲಿಲಿಂಗ ಮುದಾ ಗೌರೀ ಬಹುಕಾಲಾಗತಂ ಚ ತಮ್ ।
ಆನಂದಾಶ್ರೂಣಿ ಸಾಮುಂಚತ್ಸೋಽಪಿ ಸಾ ತಂ ತತೋಽವದತ್ ॥೩॥

ಗೌರ್ಯುವಾಚ :—

ಕಥಂ ನಿಷ್ಠುರತಾಂ ಯಾತೋ ? ವೃತ್ತಾಂತಂ ಮಮ ಕರ್ಹಿಚಿತ್ ।
ನ ಗೃಹ್ಣಾಸಿ, ನ ವಾ ಸ್ತ್ರೀಯಂ ಪ್ರೇಷಯಸ್ಯಪಿ ನಿರ್ದಯ ! ॥೪॥

---

ಪ್ರೀತಿಯ ತಂದೆಯನ್ನು ನೋಡಿದೊಡನೆಯೇ ಮಗಳಾದ ಗೌರಿಯು ಧಾವಿಸುತ್ತ ಅವನ ಸಮೀಪಕ್ಕೆ ಬಂದಳು. ॥೨॥

ತಂದೆಯನ್ನು ಕಂಡು ಬಹಳ ಕಾಲ ಕಳೆದು ಹೋಗಿದ್ದುದರಿಂದ ಅವಳಿಗೆ ಒಂದು ಬಗೆಯ ಅಪೂರ್ವ ಲಾಭವಾದಂತೆ ಭಾಸವಾಯಿತು. ತಾನು ' ಪ್ರೌಢೆ ' ಎಂಬುದನ್ನು ಸಹ ಕ್ಷಣಕಾಲ ಮರೆತು, ತನ್ನ ತಂದೆಯನ್ನು ಭರದಿಂದ ಅಪ್ಪಿ ಬಿಟ್ಟಳು. ಇಬ್ಬರ ಕರುಳೂ ಕರಗಿಹೋಗಿ, ಕಣ್ಣುಗಳಿಂದ ಆನಂದಾಶ್ರುಗಳು ಧಾರಾಕಾರವಾಗಿ ಸುರಿದವು. ಒಂದು ಮುಹೂರ್ತ ಕಾಲ ಯಾರೂ ಮಾತನಾಡ ದಂತಾದರು. ಕರುಳೇ ಅಂತಹದು, ವ್ಯಾಸ. ! ಆಗ ಗೌರಿಯು ಮಮತೆಯ ಮುನಿ ಸಿನಿಂದ ತಂದೆಯನ್ನು ಕುರಿತು ಹೀಗೆಂದು ಅಧಿಕ್ಷೇಪಿಸಿ ನುಡಿದಳು. ಅವಳ ಮಾತು ನಿಷ್ಠುರವಾಗಿದ್ದಂತೆ ತೋರುತ್ತಿದ್ದರೂ, ಮಮತಾಪೂರ್ಣವಾಗಿದ್ದುದರಿಂದ ಯಾ ರೊಬ್ಬರಿಗೂ, ವಿಶೇಷವಾಗಿ ಹಿಮವಂತನಿಗಂತೂ ವಿರಸವಾಗಿ ತೋರಲೇ ಇಲ್ಲ. ಮುದ್ದು ಮಕ್ಕಳ ಮಾತು ಯಾರಿಗಾದರೂ ಬೇಸರವನ್ನುಂಟುಮಾಡೀತೇ ? ॥೩॥

ಗೌರೀ :—

ಇದೇನು ? ತಂದೆ ! ಇಷ್ಟು ಕಟುಕನಾಗಿಬಿಟ್ಟೆ? ನಾನೊಬ್ಬಳಿರುವೆನೆಂ ಬುದು ನಿನಗೆ ನೆನಪೇ ಆಗಲಿಲ್ಲವೇನು ? ನನ್ನ ಯೋಗಕ್ಷೇಮವನ್ನು ಇಷ್ಟು ದಿವಸ ಗಳಾದರೂ ನೀನು ವಿಚಾರಿಸಲೇ ಬೇಡವೇ ? ಅಥವಾ, ನಿನ್ನ ಕ್ಷೇಮಸಮಾಚಾರ ವನ್ನಾದರೂ ತಿಳಿಸಬೇಡವೇ? ಇಷ್ಟೇಕೆ ನೀನು ನಿರ್ದಯನಾದೆ ? ॥೪॥

**ಹಿಮವಾನುವಾಚ :—**

**ಸತ್ಯಂ ವದಸಿ ಗೌರಿ ! ತ್ವಂ ಕಂಠೇ ಪ್ರಾಣಾ ಮಮ ಸ್ಥಿತಾಃ ।**
**ಅತಸ್ತ್ವದ್ದರ್ಶನಾಕಾಂಕ್ಷೀ ಪ್ರಾಪ್ತೋಽಹಂ ಹರವಲ್ಲಭೇ ! ॥೫॥**

**ವತ್ಸೇ ಧೇನುಮನೋ ಯದ್ವತ್ತದ್ವತ್ತ್ವಯಿ ಮನೋ ಮಮ ।**

**ಕ ಉವಾಚ :—**

**ಏವಮಾಕರ್ಣ್ಯ ತದ್ವಾಕ್ಯಂ ಸಾ ದದಾವಾಸನಂ ಶುಭಮ್ ॥೬॥**

---

ಹಿಮವಂತ :—

ನಿಜ, ಗೌರಿ ! ನನಗೆ ಅವಕಾಶವಾಗಲಿಲ್ಲವಮ್ಮ. ನೀನು ನನ್ನ ಶ್ವಾಸೋಚ್ಛ್ವಾಸವಿದ್ದಂತೆ ಇರುವೆ. ನಿನ್ನನ್ನು ಎಂದಿಗಾದರೂ ಮರೆತೇನೆಯೇ ? ಏನೋ ಅನಿವಾರ್ಯ, ಬರಲಾಗಲಿಲ್ಲ. ನಿನ್ನನ್ನು ನೋಡಿಯೇ ಬಿಡಬೇಕೆಂದು ನನ್ನ ಪ್ರಾಣಗಳು ಹಾತೊರೆದವು. ಆದುದರಿಂದಲೇ ಧಾವಿಸಿ ಇಲ್ಲಿಗೆ ಬಂದಿರುವೆನು. ಹರವಲ್ಲಭೇ ! ನನ್ನ ಮನಸ್ಸಿನ ತವಕವನ್ನು ನಾನೇ ಬಲ್ಲೆನಮ್ಮ ! ॥೫॥

ತಾಯಿಹಸು, ಎಷ್ಟೇ ದೂರಪ್ರದೇಶಕ್ಕೆ ಮೇಯಲು ಹೋಗಿರಲಿ, ಅದಕ್ಕೆ ತನ್ನ ಕರುವಿನಲ್ಲೇ ಮನಸ್ಸು ಲಗ್ನವಾಗಿರುವಂತೆ, ನಾನು ಬಹು ದೂರದಲ್ಲಿದ್ದಾಗ್ಯೂ ನನ್ನ ಮನಸ್ಸೆಲ್ಲ ನಿನ್ನಲ್ಲೇ ; ನಿನ್ನ ಹಿತಚಿಂತನೆಯಲ್ಲೇ ಮಗ್ನವಾಗಿತ್ತಮ್ಮ !

ಬ್ರಹ್ಮ :—

ಇಷ್ಟು ಮಾತನಾಡುವಷ್ಟರಲ್ಲೇ ಅವನ ಹೃದಯವು ಉಕ್ಕಿ ಬಂದು ಗಂಟಲನ್ನು ಬಿಗಿಯಾಗಿ ಹಿಡಿದುಬಿಟ್ಟಿತು. ಮುಂದೆ ಅವನ ಬಾಯಿಯಿಂದ ಅಕ್ಷರಗಳೇ ಹೊರಡಲಿಲ್ಲ. ಗೌರಿಯು ಗಿರಿರಾಜನ ಸ್ನೇಹಪರಿಪೂರ್ಣ ಈ ಮಾತುಗಳನ್ನು ಕೇಳಿ, ಸಂತೋಷ ಸಂಕೋಚಗಳೆರಡನ್ನೂ ಸಮಕಾಲದಲ್ಲಿಯೇ ಅನುಭವಿಸಿದಳು. ಮತ್ತು

**ಉಪವಿಷ್ಟೋಽಬ್ರವೀದ್ವಾಕ್ಯಂ ಪುನರ್ಗಿರಿವರಸ್ಸುತಾಮ್ ।**

**ಹಿಮವಾನುವಾಚ :—**

**ಶ್ರುತೋ ನಾರದವಾಕ್ಯೇನ ಪುತ್ರಸ್ತೇ ಪರಮಾದ್ಭುತಃ ॥೭॥**

**ತತಸ್ತಂ ದ್ರಷ್ಟುಮಾಯಾತಃ ಸರ್ವವಿಘ್ನಹರಂ ಶುಭಮ್ ।**

**ಕ ಉವಾಚ :—**

**ಪಾರ್ವತೀ ಬಾಲಮಾದಾಯ ಪಿತುರಂಕೇ ನ್ಯವೇಶಯತ್ ॥೮॥**

---

ಕುಳಿತುಕೊಳ್ಳಲು ಅತ್ಯುತ್ತಮವಾದ ಒಂದು ಆಸನವನ್ನು ತನ್ನ ತಂದೆಗೆ ತಂದು ಕೊಟ್ಟಳು. ॥೬॥

ಹಿಮವಂತನು ಗೌರಿ ಇತ್ತ ಆಸನದ ಮೇಲೆ ಸುಖವಾಗಿ ಕುಳಿತುಕೊಂಡು ಮಗಳನ್ನು ಕುರಿತು ಪ್ರೀತಿಯಿಂದ ಪುನಃ ಹೀಗೆಂದು ಮಾತನಾಡಿದನು.

ಹಿಮವಾನ್ :—

ಪ್ರಿಯ ಪುತ್ರಿ, ಗಿರಿಜೆ ! ನಿನಗೆ ಪುತ್ರನುದಿಸಿದ ಶುಭ ಸಮಾಚಾರವನ್ನು ದೇವರ್ಷಿ, ನಾರದರು ಬಂದು ನನಗೆ ತಿಳಿಸಿದರು. ನಿನ್ನ ಮಗನು ಬಹಳ ಅದ್ಭುತ ವಿಕ್ರಮಿಯಾಗಿದ್ದಾನಂತಲ್ಲ ? ॥೭॥

ಅವನನ್ನೊಮ್ಮೆ ನೋಡಿಕೊಂಡು ಹೋಗೋಣವೆಂದು ಮನಸ್ಸಿನಲ್ಲಿ ಬಾಧಿಸಿತು. ಅದಕ್ಕಾಗಿಯೇ ನಾನು ಈಗ ಹೊರಟುಬಂದೆ. ಅವನಿಗೆ ನಿನ್ನ ಪತಿಯು 'ಸರ್ವವಿಘ್ನಹರ' ಎಂದು ವರವನ್ನನುಗ್ರಹಿಸಿ ಹರಸಿದ್ದಾರಂತೆ. ಆ ಸಂಗತಿಯೂ ನನಗೆ ನಾರದರಿಂದಲೇ ತಿಳಿಯಿತು. ಬಹಳ ಒಳ್ಳೆಯದೇ ಆಯಿತು.

ಬ್ರಹ್ಮ :—

ಹೆಣ್ಣು ಮಕ್ಕಳಿಗೆ ಸಾಮಾನ್ಯವಾಗಿ ತಮ್ಮ ಮಕ್ಕಳನ್ನು ಯಾರಾದರೂ ಬಣ್ಣಿಸಿದರೆ, ಹಿಡಿಸಲಾರದಷ್ಟು ಆನಂದವಾಗುವುದು. ಪಾರ್ವತಿಯಾದರೋ ಈ ಮಗನನ್ನು

**ಸೋಽಲಂಕಾರೈರಲಂಕೃತ್ಯ ಮಹಿಮಾನಂ ತತೋಽಬ್ರವೀತ್ ।**

**ಹಿಮವಾನುವಾಚ ;—**

**ಅಯಂ ಬಾಲೋ ಮಹಾಮಾಯಃ ಕರಿಷ್ಯತಿ ಮಹೀಮಿಮಾಮ್ ॥೯॥**

**ನಿಷ್ಕಂಟಕಾಂ ಯಥಾ ಚಂದ್ರಃ ಶೀತಲಾಂ ಸ್ವಕರೈರಿಮಾಮ್ ।**

---

ಪಡೆಯಲಿಕ್ಕೆ ಹನ್ನೆರಡು ವರ್ಷಗಳ ವರೆಗೆ ಅಖಂಡವಾಗಿ ತಪಿಸಿ, ಶ್ರಮಿಸಿದ್ದಾಳೆ. ಇಂತಹ ಮಗನ ಬಗ್ಗೆ ಯಾರಾದರೂ, ಅದರಲ್ಲೂ ತನ್ನ ಜನಕನು ವರ್ಣನೆ ಮಾಡಿದರೆ ಮತ್ತೆಷ್ಟು ಸಂತೋಷವಾಗಿರಲಿಕ್ಕಿಲ್ಲ? ಒಡನೆಯೇ ಬಾಲಕನನ್ನು ಎತ್ತಿಕೊಂಡು ಬಂದು, ತನ್ನ ತಂದೆಯ ತೊಡೆಯ ಮೇಲೆ ಕುಳ್ಳಿರಿಸಿದಳು. ಆಗ ದೌಹಿತ್ರನನ್ನು ನೋಡಿ ಹಿಮವಂತನು ಆನಂದತುಂದಿಲನಾದನು. ಮತ್ತು ತಾನು ತಂದಿದ್ದ ಅಮೂಲ್ಯ ರತ್ನಾಭರಣಗಳನ್ನೆಲ್ಲ ಒಂದೊಂದನ್ನಾಗಿ ಈಚೆಗೆ ತೆಗೆದು ಶಿಶುವಿಗೆ ತೊಡಿಸಿ ಅಲಂಕರಿಸಿದನು. ಬಾಲಕನ ಮುಖಲಕ್ಷಣವನ್ನು ನೋಡುತ್ತ ಅವನ ಮಹಿಮೆಯನ್ನು ಹೀಗೆಂದು ವರ್ಣಿಸತೊಡಗಿದನು.

ಹಿಮವಾನ್ :—

ಮಗಳೇ! ಕೇಳು. ಬಾಲಕನಾಗಿ ತೋರಿಬರುವ ಇವನು ಮಹಾಮಾಯಾಧೀಶ್ವರನು. ಇವನ ಯೋಗಮಾಯಾಬಲದಿಂದಲೇ ಈ ಜಗವೆಲ್ಲವೂ ರೂಪಗೊಂಡು ಪ್ರವಾಹರೂಪದಿಂದ ನಡೆದು ಬರುತ್ತಲಿದೆ. ಭೂ-ಭಾರವನ್ನು ಹರಣ ಮಾಡುವುದಕ್ಕಾಗಿಯೇ ಈ ಪುರಾಣಪುರುಷನು ಅವತರಿಸಿರುವನು. ॥೮-೯॥

ಮಂದಮತಿಗಳಾದ ಮಾನವರು ಕಾಮ-ಕ್ರೋಧಗಳಿಗೆ ವಶರಾಗಿ ಮಾಡಬಾರದ ಕಾರ್ಯಗಳನ್ನೆಲ್ಲ ಸ್ವೇಚ್ಛೆಯಾಗಿ ಮಾಡುತ್ತ, ಕ್ರಮೇಣ ಈ ಅಭ್ಯಾಸವೇ ಪ್ರಬಲವಾಗಿ, ಅವರು ರಾಕ್ಷಸ ಯೋನಿಗಳಲ್ಲಿ ಜನಿಸುವರು. ಇಂಥವರು ಹೆಚ್ಚಿದಂತೆಲ್ಲ ಸಾಧು-ಸತ್ಪುರುಷರ ಜೀವನವು ಸಾಗದಂತಾಗಿ, ಧರ್ಮಕಾರ್ಯಗಳೇ ಲುಪ್ತವಾಗಿ ಹೋಗುತ್ತವೆ. ಪ್ರಪಂಚದ ರೀತಿ–ನೀತಿಗಳಿಗೆ ಆಧಾರಸ್ತಂಭವಾಗಿರುವ ಧರ್ಮ

ಸೇತುವೇ ಸಡಿಲವಾಗಿ ಹೋಗಿಬಿಟ್ಟರೆ ಧರ್ಮವೆಲ್ಲಿ ಉಳಿದೀತು ? ಧರ್ಮವು ನಶಿಸಿದಂತೆಲ್ಲ ಸತ್ಕ್ರಿಯೆಗಳು ಅಳಿಸುತ್ತ ಬಂದು, ಕಾಲಕಾಲಕ್ಕೆ ವೃಷ್ಟಿ, ತನ್ಮೂಲಕ ಧಾನ್ಯವೃದ್ಧಿ, ತನ್ನಿಮಿತ್ತ ಪ್ರಜಾಕ್ಷೇಮ ಇವೆಲ್ಲವೂ ಆಗದೇ, ರಸವತ್ತಾದ ಈ ಭೂಮಿಯು ಮರುಭೂಮಿಯಾಗಿ ಪರಿಣಮಿಸುವುದು. ಇಂತಹ ಭೂಮಿಯಿಂದ, ಸಸ್ಯ-ಧಾನ್ಯರೂಪ ಫಲವನ್ನು ಪಡೆಯಲು ಕೃತ್ರಿಮೋಪಾಯಗಳನ್ನು ಹೂಡಿ ಪಾಶವೀಸಾಮರ್ಥ್ಯದಿಂದ ದುಷ್ಟರು ಭೂಮಿಯನ್ನು ಕರ್ಷಿಸುವರು. ಬರಡು ಹಸು ವನ್ನು ಕರೆದರೆ, ಹಾಲು ದೊರೆತೀತೇ ? ಇದನ್ನು ತಿಳಿಯಲಾರದೇ ಇನ್ನೂ ಬಲಾ ತ್ಕಾರದಿಂದ ಕರೆದರೆ, ಆ ಹಸು ರಕ್ತವನ್ನು ಸುರಿಸುವಂತೆ, ಮರುಭೂಮಿಯಂತಾಗಿ ಹೋಗಿದ್ದ ಪೃಥ್ವಿಯನ್ನು ಬಲಾತ್ಕಾರದಿಂದ ಕರ್ಷಿಸುವುದು, ತದಭಿಮಾನಿ ದೇವತೆ ಯನ್ನು ಹಿಂಸಿಸುವುದು, ಇದರಂತೆ ವಾತಾವರಣದ ಅಭಿಮಾನಿ ದೇವತೆಗಳನ್ನೂ ಪೀಡಿಸುವುದು ಇವೇ ಮೊದಲಾದ ದುಶ್ಚೇಷ್ಟೆಗಳನ್ನಾರಂಭಿಸುವರು. ಮಾಡಬಾರ ದ್ದನ್ನು ಮಾಡಿದರೆ, ಆಗಬಾರದ್ದೇ ಆಗುವುದು' ಎಂಬ ನಾಣ್ನುಡಿ ಸುಳ್ಳಲ್ಲ, ವ್ಯಾಸ! ಆದರೆ ಕುಮಾರ್ಗವನ್ನವಲಂಬಿಸಿದವರನೇಕರು ಕಾರ್ಯವನ್ನು ಬಹು ಬೇಗನೆ ಸಾಧಿಸ ಬಲ್ಲ ? ಹೀಗಿರುವಾಗ ವಿಲಂಬಕಾರಿ, ಶ್ರಮಸಾಧ್ಯ ಸಾತ್ತ್ವಿಕ ಪ್ರಯೋಗವೇಕೆ ? ಎಂದು ಎಲ್ಲರಂತೆ ನೀನೂ ಪ್ರಶ್ನಿಸಬಹುದು. ಕೇಳು, ಉತ್ತರವನ್ನು ಹೇಳುವೆನು ಹಾಲನ್ನು ಹೆಪ್ಪಿಡದೆ ಹಾಗೆಯೇ ಇಟ್ಟರೂ ಅದು ಒಂದು ಬಗೆಯ ಪರಿಣಾಮವನು ಹೊಂದುವುದೇನೋ ನಿಜ, ಆದರೆ, ಅದು ' ಮೊಸರು ' ಎನಿಸಿಕೊಂಡು ನವನೀತ, ಘೃತ ಮೊದಲಾದ ಸತ್ಫಲಗಳನ್ನು ಕೊಡಲಾರದು. ಇದರಂತೆ ಕಾಲ ಕಾಲದಲ್ಲಿ ಮಳೆ ಹದವಾಗಿ ಬಿದ್ದರೆ, ಭೂಮಿ ತನುಗೊಂಡು, ಸಕಾಲದಲ್ಲಿ ಫಲವನ್ನು ಕೊಡುತ್ತದೆ. ಸುವೃಷ್ಟಿಯು ಸತ್ಕರ್ಮಾಚರಣೆಯಿಂದಲೇ ಸಾಧ್ಯವಾಗುವುದು. ಭೂಮಿಯ ತುಂಬ ಭಂಡರೇ ಹೆಚ್ಚಿಹೋದರೆ ಧರ್ಮಕಾರ್ಯಗಳೆಲ್ಲಿಂದ ನಡೆ ದಾವು ? ಧರ್ಮಕಾರ್ಯಗಳೇ ನಡೆಯದಿದ್ದ ಮೇಲೆ ಬೆಳೆ ಹೇಗೆ ಉಂಟಾದಾವು ? ಸು-ಭಿಕ್ಷವಿಲ್ಲದಿದ್ದರೆ, ಪ್ರಜೆಗಳು ಹೇಗೆ ನೆಮ್ಮದಿಯಿಂದ ಇದ್ದಾರು ? ಈ ಎಲ್ಲ ಏರ್ಪ ಪೇರುಗಳನ್ನು ಸರಿಪಡಿಸಿ ಸಮಸ್ಥಿತಿಗೆ ತರಲಿಕ್ಕಾಗಿ ದುಷ್ಟರನ್ನು ನಿಗ್ರಹಿಸಿ ಭೂಮಿ ಯನ್ನು ನಿಷ್ಕಂಟಕವನ್ನಾಗಿ ಇವನು ಮಾಡುವನು. ಬಿಸಿಲಿನ ಬೇಗೆಯಿಂದ ಬೆಂದು

ಅಯಂ ದೇವಗಣಾನ್ ಸರ್ವಾನ್ ಸ್ವ-ಸ್ಥಾನೇ ಸ್ಥಾಪಯಿಷ್ಯತಿ ||೧೦||

ಕರಿಷ್ಯತ್ಯಂಘ್ರಿಸೇವಾಂ ತೇ ಶಿಶೋರಸ್ಯ ಮುನೀಶ್ವರಾಃ |
ಏತಸ್ಯ ಸರ್ವರೂಪಾಣಿ ಸ್ಥಾವರಾಣಿ ಚರಾಣಿ ಚ ||೧೧||

ಅಯಮೇವ ಸದಾ ಧ್ಯೇಯೋ ಬ್ರಹ್ಮಾದೀನಾಂ ಸಹಸ್ರದೃಕ್ |
ಸಹಸ್ರಾಂಘ್ರಿಸ್ಸರ್ವಜಗತ್ಕಾರಣಾನಾಂ ಚ ಕಾರಣಮ್ ||೧೨||

ಸಹಸ್ರಾಸ್ಯೋsನಂತಮೂರ್ತಿಸ್ಸಮಷ್ಟಿ-ವ್ಯಷ್ಟಿ-ರೂಪವಾನ್ |
ತ್ರೈಲೋಕ್ಯೇ ನೇದೃಶೋ ಬಾಲೋ ದೃಷ್ಟಃ ಕ್ವಾಪಿ ಶುಭಾಯುವಾನ್ ||೧೩||

ಹೋದ ಸಸ್ಯ, ಹಾಗೂ ಪ್ರಾಣಿವರ್ಗ ಇವನ್ನು ಚಂದ್ರನು ತನ್ನ ಅಮೃತಕಿರಣಗಳಿಂದ ತನುಗೊಳಿಸಿ ಸಚೇತನವನ್ನಾಗಿ ಮಾಡುವಂತೆ ಇವನು ಎಲ್ಲರನ್ನೂ ಪುನರುಜ್ಜೀವನಗೊಳಿಸುವನು. ದೇವತೆಗಳನ್ನೆಲ್ಲ ಆಯಾ ಸ್ಥಾನಗಳಲ್ಲಿ ಮೊದಲಿದ್ದಂತೆ ಇರಿಸುವನು ||೧೦

ನಿನ್ನ ಪಾದಕಮಲಗಳನ್ನು ಭಕ್ತಿಯಿಂದ ಸೇವಿಸುವನು. ಈ ಶಿಶುವಿನ ಮಹಾ ಮಹಿಮೆಯನ್ನು ಮುನೀಶ್ವರರು ಬಲ್ಲರು. ಈ ಸಕಲ ಸ್ಥಾವರ, ಜಂಗಮ ವಸ್ತುಗಳೂ ಈತನ ರೂಪವೇ ಆಗಿವೆ. ||೧೧||

ಬ್ರಹ್ಮಾದಿ ದೇವೋತ್ತಮ ವರ್ಗಕ್ಕೆಲ್ಲ ಇವನೇ ಪರಮ ಧ್ಯೇಯವಸ್ತುವಾಗಿದ್ದಾನೆ. ಇವನನ್ನು ಶ್ರುತಿಗಳು 'ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್' ಎಂದರೆ, ಈತನು ಸಹಸ್ರಾರು ತಲೆಗಳುಳ್ಳ ಪುರುಷನು. ಸಾವಿರಾರು ಕಣ್ಣುಗಳುಳ್ಳವನು, ಹಾಗೆಯೇ ಸಹಸ್ರಾರು ಪಾದಗಳುಳ್ಳವನು ಎಂದು ಬಣ್ಣಿಸುತ್ತದೆ. ಅರ್ಥಾತ್ ಎಲ್ಲರಿಗೂ ಇವನು ಅಂತರಾತ್ಮನಾಗಿರುವುದರಿಂದ ಸಕಲರ ದೇಹೇಂದ್ರಿಯಗಳೂ ಇವನವೇ ಆಗಿವೆ ಎಂದರ್ಥ. ಜಗತ್ತಿಗೆ ಕಾರಣಗಳೆನಿಸಿದ ಸಮಸ್ತ ವಸ್ತುಗಳಿಗೂ ಇವನೇ ಮೂಲಕಾರಣನಾದವನು. ||೧೨||

ಇವನು ಸಹಸ್ರಾಸ್ಯನು. ಕಲ್ಲಾಗಿಯೂ, ಕಾಂತಮಣಿಯಾಗಿಯೂ, ಕುರೂಪಿಯಾಗಿಯೂ, ಕಮನೀಯನಾಗಿಯೂ ತೋರುವವನು ಇವನೇ. ಸ್ವಭಾವ

ಅಹಂ ತನ್ಮಯತಾಂ ಯಾತೋ ದೃಷ್ಟ್ವಾ ತತ್ಪಾದಪಂಕಜಮ್ ।
ಯಥಾಂಭಸಿ ಪಯಃ ಕ್ಷಿಪ್ತಂ ಯಾತಿ ತನ್ಮಯತಾಂ ಕ್ಷಣಾತ್ ॥೧೪॥

ಅಸ್ಯ ಯತ್ನಂ ಕುರು ಶುಭೇ ನಿಧಿರೇಷ ಪುರಾತನಃ ।

ಕ ಉವಾಚ::—

ಮಸ್ತಕೇ ಮುಕುಟಂ ಚಾಸ್ಯ ಸ್ವಾಂಗದೇ ಭುಜಯೋರಪಿ ॥೧೫॥

ಪಂಕಜಂ ಹೃದಿ ಶ್ರುತ್ಯೋಶ್ಚ ಕುಂಡಲೇ ರತ್ನಭೂಷಿತೇ

---

ಷತಃ ಅಖಂಡನಾಗಿಯೂ, ಮಾಯಾವಿದ್ಯೆಗಳಲ್ಲಿ ಪ್ರತಿಬಿಂಬಿತನಾಗಿರುವುದರಿಂದ ವ್ಯಷ್ಟಿಯಾಗಿಯೂ ತೋರುವನು. ಆದುದರಿಂದಲೇ ಇವನು 'ಅನಂತರೂಪಿ' ಎಂದು ವ್ಯವಹರಿಸಲ್ಪಡುತ್ತಾನೆ. ಇಂತಹ ಆಯಕಟ್ಟಿನ ದೇಹವಿನ್ಯಾಸ ಉಳ್ಳ ಬಾಲಕನು ಮೂರು ಲೋಕಗಳಲ್ಲಿ ಹುಡುಕಿದರೂ ಯಾರಿಗೂ, ಎಲ್ಲೂ ಸಿಕ್ಕತಕ್ಕವನಲ್ಲ. ನಾನಂತೂ ನೋಡಿಯೇ ಇರುವುದಿಲ್ಲ. ॥೧೩॥

ಈ ಬಾಲಕನನ್ನು ನೋಡಿದ ಲಾಗಾಯ್ತು ಇವನ ಚರಣಕಮಲಗಳಲ್ಲೀ ನನ್ನ ಮನಸ್ಸು ಲಗ್ನವಾಗಿ ಹೋಗಿದೆ. ದೊಡ್ಡದೊಂದು ಜಲಾಶಯದಲ್ಲಿ ಸ್ವಲ್ಪ ನೀರನ್ನು ಸುರಿದರೆ, ಅದು ಹೇಗೆ ತತ್ಕ್ಷಣವೇ ತನ್ಮಯವಾಗಿಯೇ ಹೋಗುವುದೋ, ಅದರಂತೆ ಸ್ವಲ್ಪವೂ ವಿಲಂಬವಿಲ್ಲದೆ ನಾನು ತನ್ಮಯನಾಗಿರುವೆನು. ॥೧೪॥

ಈತನೆಂದರೆ ಸಾಮಾನ್ಯ ಬಾಲಕನಲ್ಲ. ಅತ್ಯಪೂರ್ವವಾದ ಪುರಾತನ ನಿಧಿ ಇವನು. ನೀನು ಬಹಳ ಪ್ರಯತ್ನಪೂರ್ವಕವಾಗಿ ಈತನನ್ನು ಕಾಪಾಡಿಕೊಂಡು ಬರತಕ್ಕದ್ದು.

ಬ್ರಹ್ಮ :—

ಮಗುವಿನ ಮಸ್ತಕಕ್ಕೆ ಮಣಿಮಯ ಮುಕುಟವನ್ನು ಅಲಂಕರಿಸಿದನು. ಅದರಂತೆ ಬಾಜುಬಂದುಗಳನ್ನು ಎರಡು ಭುಜಗಳಿಗೂ ಕಟ್ಟಿದನು. ॥೧೫॥

ಹೃದಯ ಪ್ರದೇಶಕ್ಕೆ ರತ್ನಖಚಿತ ಪದ್ಮಾಕೃತಿಯ ಪದಕವುಳ್ಳ ಸ್ವರ್ಣ

ಕಟಿಸೂತ್ರಂ ಕಟೌ ಚಾಂಘ್ರ್ಯೋರ್ನರ್ಘಹಾಹಾರ್ಃ ಕ್ಷುದ್ರಘಂಟಿಕಾಃ
||೧೬||

ಏವಂ ದತ್ವಾ ಭೂಷಣಾನಿ ನಾಮ ಚಕ್ರೇ ಶುಭಂ ಗಿರಿಃ |
'ಹೇರಂಬೇ'ತಿ ಮಹಾವಿಘ್ನಹರಂ ಭಕ್ತಾಭಯಪ್ರದಮ್ ||೧೭||

ತತೋ ಭುಕ್ತ್ವಾ ಗೃಹೀತ್ವಾಜ್ಞಾಂ ಯಯೌ ಸ್ವ-ಸ್ಥಾನಮದ್ರಿರಾಟ್ |
ಏಕಸ್ಮಿನ್ ದಿವಸೇ ಬಾಲಶ್ಚಿಕ್ರೀಡ ನಿಜಮಂದಿರೇ ||೧೮||

ನಿರ್ಮಿತ ಮಾಲಿಕೆಯನ್ನು ಹಾಕಿದನು. ಕೂಸಿನ ಮೃದುವಾದ ಕರ್ಣಗಳಿಗೆ ಮಣಿಮಯ ಕುಂಡಲಗಳನ್ನು ಇರಿಸಿದನು. ಅನೇಕ ವರ್ಣದ ರತ್ನಗಳಿಂದ ರಚಿತವಾದ ಉಡಿದಾರವನ್ನು ಬಾಲಕನ ಕಟಿಪ್ರದೇಶಕ್ಕೆ ಕಟ್ಟಿದನು. ಬಾಲಕನಪ್ಪುಟ್ಟ ಪುಟ್ಟ ಚರಣಗಳಿಗೆ ಕಿರು ಗಂಟೆಗಳುಳ್ಳ ಸ್ವರ್ಣ ಕಾಲಂದಿಗೆಗಳನ್ನು ತೊಡಿಸಿದನು. ಇದರ ಬೆಲೆಯನ್ನು ಕಟ್ಟುವುದಕ್ಕೆ ಎಂತಹ ಅಭಿಜ್ಞರಿಗೂ ಸಾಧ್ಯವಿರಲಿಲ್ಲ. ||೧೬||

ಈ ರೀತಿಯಾಗಿ ಅನೇಕ ಆಭರಣಗಳನ್ನು ಮಗುವಿಗೆ ಕೊಟ್ಟು, ಪ್ರೀತಿಯಿಂದ ಅದಕ್ಕೆ ಶುಭವಾದ ಒಂದು ಹೆಸರನ್ನಿಡಬೇಕೆಂದು ಗಿರೀಂದ್ರನು ಅಪೇಕ್ಷೆಪಟ್ಟನು. ಅವನು ಚುನಾಯಿಸಿದ ಹೆಸರು 'ಹೇರಂಬ'. ಸಕಲ ವಿಘ್ನಗಳನ್ನೂ ಹರಣಮಾಡತಕ್ಕ, ಹಾಗೂ ಭಕ್ತರಿಗೆ ಅಭಯವನ್ನು ನೀಡತಕ್ಕ ಪ್ರಭುವಿಗೆ ಈ ಹೆಸರು ಬಹಳಮಟ್ಟಿಗೆ ಒಪ್ಪುವಂತಿದ್ದಿತು. ||೧೭||

ಇಷ್ಟೆಲ್ಲ ವ್ಯವಹಾರ ನಡೆದ ಬಳಿಕ ಮಗಳು ಪ್ರೀತಿಯಿಂದ ಏರ್ಪಡಿಸಿದ ಷಡ್ರಸೋಪೇತವಾದ ಭೋಜ್ಯ ವಸ್ತುಗಳನ್ನು ಸಂತೋಷದಿಂದ ಭುಜಿಸಿದ ಅದ್ರಿಯು ಮಗಳ ಹಾಗೂ ಅಳಿಯನ ಅನುಮತಿಯನ್ನು ಪಡೆದುಕೊಂಡು, ಮಗುವನ್ನು ಮುದ್ದಿಸಿ, ಅದ್ರಿರಾಜನು ತನ್ನ ಸ್ಥಾನಕ್ಕೆ ತೆರಳಿದನು. ಹೀಗೆಯೇ ಕೆಲವು ಕಾಲ ಕಳೆಯಲು, ಒಂದು ದಿವಸ ಈ ಬಾಲಕನು ತನ್ನ ಮಂದಿರದ ಬಳಿ ತನ್ನ ಪಾಡಿಗೆ ತಾನು ಆಟವಾಡುತ್ತಲಿದ್ದನು. ||೧೮||

ಗೃಧ್ರಾಸುರೋ ಗೃಧ್ರರೂಪೀ ಮಹಾಬಲ-ಪರಾಕ್ರಮಃ ।
ಪಕ್ಷವಾತೇನ ಯಸ್ಯಾದ್ರಿಚಯಶ್ಚೂರ್ಣತ್ವಮಾಯಿವಾನ್ ॥೧೯॥

ಗಂಡಶೈಲಾಶ್ಚ ವೃಕ್ಷಾಶ್ಚ ಪಾದಾಘಾತೇನ ತಸ್ಯ ಚ ।
ಸ ಪಕ್ಷಚ್ಛಾಯಯಾ ಬಾಲಮಾಚ್ಛಾದ್ಯ ಖೇಽಭ್ರಮತ್ತದಾ ॥೨೦॥

ನಯನಾನಿ ಚ ಸರ್ವೇಷಾಂ ಪಕ್ಷಾಘಾತರಜಃಕಣೈಃ ।
ಆಚ್ಛಾದಯನ್ಮಹಾಶಬ್ದೈಃ ಶ್ರೋತ್ರೇ ಬಧಿರತಾಮಿಯಾತ್ ॥೨೧॥

---

ಅಷ್ಟರಲ್ಲಿ ರಣಹದ್ದಿನಂತೆ ರೂಪಗೊಂಡ 'ಗೃಧ್ರಾಸುರ' ಎಂಬ ರಾಕ್ಷಸನೊಬ್ಬನು ಆ ಪ್ರದೇಶಕ್ಕೆ ಹಾರಿಬಂದನು. ಇವನು ಸಿಂಧು ದೈತ್ಯನ ಕಡೆಯವನು. ಇವನ ಬಲ-ಪರಾಕ್ರಮಗಳು ಅಮಿತವಾದುವು. ಇವನು ಮೊರದಂತೆ ಅಗಲವಾದ ತನ್ನ ರೆಕ್ಕೆಗಳನ್ನು ಒಂದು ಸಲ ಬೀಸಿದನೆಂದರೆ, ಅದರಿಂದೆದ್ದ ಗಾಳಿಯು ಸುಂಟರ ಗಾಳಿಯಂತಿದ್ದು, ಪರ್ವತ ಸಮುದಾಯಗಳನ್ನೆಲ್ಲ ಪುಡಿ-ಪುಡಿಮಾಡಿಬಿಡುತ್ತಲಿದ್ದಿತು. ॥೧೯॥

ಅವನು ತನ್ನ ಕಾಲುಗಳನ್ನು ಒಮ್ಮೆ ಕೊಡವಿದನೆಂದರೆ, ಪರ್ವತಗಳ ಮಹಾ ಮಹಾ ಶಿಖರಗಳೂ ಚೆಂಡಿನಂತೆ ಉರುಳುರುಳಿ ಬೀಳುತ್ತಲಿದ್ದವು. ಇಂತಹ ಬಲಿಷ್ಠನಾದ ದೈತ್ಯನು ತನ್ನ ಸಂಗಡಿಗರೊಂದಿಗೆ ಈ ಪೂರ್ವದಲ್ಲಿ ಸಂಕೇತಮಾಡಿಕೊಂಡಂತೆ ಬಾಲಕನು ಏಕಾಕಿಯಾಗಿ ಸಿಕ್ಕಾಗ ಯುಕ್ತಿಯಿಂದ ಕೊಂಡೊಯ್ದು ಕೊಂದುಬಿಡಲು ಹೊಂಚುಕಾದು, ಕುಳಿತಿದ್ದನು. ಬಾಲಕನು ಒಂಟಿಯಾಗಿ ಆಟವಾಡುತ್ತಿದ್ದುದನ್ನು ಕಂಡು 'ಇದೇ ಸರಿಯಾದ ಸಮಯ' ಎಂದು ಭಾವಿಸಿ, ಬಾಲಕನ ಸಮೀಪಕ್ಕೆಬಂದು ಊರಗಲದ ತನ್ನ ರೆಕ್ಕೆಗಳಿಂದ ಗುಣೇಶನನ್ನು ಒಮ್ಮೆಲೆ ಮುಚ್ಚಿಬಿಟ್ಟನು. ಮತ್ತು ಅವನನ್ನು ಎತ್ತಿಕೊಂಡು ಅಂತರಿಕ್ಷಕ್ಕೆ ಹಾರಿಹೋಗಿ, ಅಲ್ಲಿ ಮನಸ್ವೀ ಸುತ್ತಾಡತೊಡಗಿದನು. ॥೨೦॥

ಗೃಧ್ರಪಕ್ಷಿಯು ತನ್ನ ರೆಕ್ಕೆಗಳನ್ನು ಬಿರುಸಾಗಿ ಬೀಸಿದ್ದರಿಂದ ರಸ್ತೆಯ ಮಣ್ಣು-ಮರಳು ಎಲ್ಲವೂ ಎದ್ದು ಬಂದು, ಬಾಲಕನ ಸಮೀಪದಲ್ಲಿದ್ದ ಭೃತ್ಯರು, ದಾಸಿಯರು, ಮತ್ತಿತರರು ಎಲ್ಲರ ಕಣ್ಣುಗಳಲ್ಲೂ ತುಂಬಿತು. ಮತ್ತು ತನ್ನ

ತತಸ್ತಂಚ್ಯಾ ತು ತಂ ಬಾಲಂ ಗೃಹೀತ್ವಾ ಗೃಧ್ರಪುಂಗವಃ ।
ವ್ಯೋಮಮಾರ್ಗಂ ಗತೋ ದೂರಂ ಗರುಡೋ ಭುಜಗಂ ಯಥಾ ॥೨೨॥

ಬಭ್ರಾಮ ಗಗನೇ ದುಷ್ಟೋಽಜಾನನ್ ಬಾಲಪರಾಕ್ರಮಮ್ ।
ತತೋಽಪಶ್ಯದ್ಗಿರಿಸುತಾ 'ಬಾಲಃ ಕುತ್ರ ಗತೋ, ಗತಃ?' ॥೨೩॥

ನಾಪಶ್ಯಚ್ಚತ್ವರೇ ತಂ ತು ತತಃ ಶೋಕಾಕುಲಾಭವತ್ ।

---

ಭಯಂಕರವಾದ ಶಬ್ದದಿಂದ ಎಲ್ಲರ ಕಿವಿಗಳೂ ಮರಗಟ್ಟುವಂತೆ ಮಾಡಿತು. ಇದರಿಂದಾಗಿ ಗೃಧ್ರವು ಶಿಶುವನ್ನೆತ್ತಿಕೊಂಡು ಹೋದುದಾಗಲೀ, ಮಗುವು ಅತ್ತುದಾಗಲೀ ಯಾರಿಗೂ ಕಾಣಲೂ ಇಲ್ಲ, ಕೇಳಲೂ ಇಲ್ಲ. ೨೧॥

ಅನಂತರ ಗೃಧ್ರವು ಆ ಬಾಲಕನನ್ನು ತನ್ನ ಮೊನಚಾದ ಕೊಕ್ಕಿನಿಂದ ಬಲವಾಗಿ ಕಚ್ಚಿಕೊಂಡು, ನಭೋಮಾರ್ಗದಲ್ಲಿ ಬಹು ದೂರದ ವರೆಗೂ ಹಾರಿ ಹೋಯಿತು. ಇದನ್ನು ನೋಡಿದರೆ ಗರುಡಪಕ್ಷಿಯು ಸರ್ಪವನ್ನು ಕಚ್ಚಿಕೊಂಡು ಹಾರಿಹೋಗುತ್ತಿರುವಂತೆ ಕಂಡು ಬರುತ್ತಲಿದ್ದಿತು. ॥೨೨॥

ದುಷ್ಟಾತ್ಮನಾದ ಆ ಗೃಧ್ರಾಸುರನಿಗೆ ಜಗದೀಶ್ವರ, ಈ ಬಾಲಕನ ಶಕ್ತಿ-ಸಾಹಸಗಳ ಪರಿಚಯವೆಲ್ಲಿಂದ ಬರಬೇಕು? ಆದುದರಿಂದಲೇ ಈ ಬಾಲಕನನ್ನೆತ್ತಿಕೊಂಡು ಗಗನದಲ್ಲೆಲ್ಲ ಸ್ವಲ್ಪವೂ ವಿಚ್ಛಿತ್ತಿ ಇಲ್ಲದೇ ಸುತ್ತಾಡತೊಡಗಿದನು. ಇಷ್ಟರಲ್ಲಿ ಒಳಗಿದ್ದ ಗಿರಿಸುತೆಗೆ ಮಗನ ನೆನಪುಂಟಾಗಿ ಹೊರಕ್ಕೆ ಓಡಿಬಂದು ನೋಡಿದಳು. ಅಲ್ಲೆಲ್ಲೂ ಬಾಲಕನು ಕಾಣಬರಲಿಲ್ಲ. 'ಬಾಲಕನೆಲ್ಲಿ? ಎಲ್ಲಿಗೆ ಹೋದ?' ಎಂದು ಅತ್ತಿತ್ತ ತಿರುಗಿ ಹುಡುಕಾಡಿದಳು. ॥೨೩॥

ಒಂದು ಕ್ಷಣದ ಹಿಂದೆ ತನ್ನ ಪಾಡಿಗೆ ತಾನು ಆಡುತ್ತಲಿದ್ದ ಮುದ್ದು ಬಾಲಕನು ಅಂಗಳದಲ್ಲೆಲ್ಲೂ ಕಾಣದಿರಲು, ಗಿರಿಜೆಯ ಹೃದಯವೇ ಹೊರಕ್ಕೆ ಬಂದು

ಗೌರ್ಯುವಾಚ :—

ಕೇನ ನೀತೋ ಮಮ ಸುತೋ ದುಷ್ಟೇನ ಚ ದುರಾತ್ಮನಾ ||೨೪||

ಕ ಉವಾಚ :—

ಉಪವಿಷ್ಟಾ ತತೋಽಪಶ್ಯದ್ವ್ಯೋಮ್ನಿ ಗೃಧ್ರಮುಖೇ ಸುತಮ್ |
ಮೂರ್ಚ್ಛಿತಾ ಪತಿತಾ ಭೂಮೌ 'ಧಾವ ಧಾವೇ'ತಿ ಚಾಬ್ರವೀತ್ ||೨೫||

---

ಬಿಟ್ಟಿತು. ಅತಿಯಾಗಿ ಶೋಕಾಕುಲಳಾದಳು. ಮತ್ತು ತನ್ನ ಮನಸ್ಸಿಗೆ ತೋರಿದಂತೆ ಹೀಗೆ ಮಾತನಾಡತೊಡಗಿದಳು.

ಗೌರೀ :—

ಯಾವ ದುಷ್ಟನು ನನ್ನ ಮಗನನ್ನು ಅಪಹರಿಸಿಕೊಂಡು ಹೋಗಿದ್ದಾನು ? ನನ್ನ ಮಗುವನ್ನು ಅಪಹರಿಸುವಂತಹ ದುರಾತ್ಮರೂ ಇಲ್ಲಿ ಇರುವರೇ ? ಮುಂದೇನು ಗತಿ ? ||೨೪||

ಬ್ರಹ್ಮಾ :—

ಪಾರ್ವತೀದೇವಿಗೆ ಶೋಕವು ಮಿತಿಮೀರಿ ಬಂದುದರಿಂದ ಅವಳ ದೇಹದಲ್ಲಿ ಕಸುವೇ ಇಲ್ಲದಂತಾಗಲು, ನಿಂದಿರಲಾರದೇ ಹಾಸಿಗೆಯಲ್ಲಿ ಕುಳಿತುಬಿಟ್ಟಳು. ಬೆದರಿದ ಜಿಗರಿಯಂತೆ ಅತ್ತಿತ್ತ ನೋಡತೊಡಗಿದಳು. ಕೊನೆಗೆ ಮುಖವನ್ನು ಅಂತರಿಕ್ಷದ ಕಡೆಗೆ ತಿರುವಿ ಒಮ್ಮೆ ನೋಡಿದಳು. ಗೃಧ್ರಪಕ್ಷಿಯ ಕೊಕ್ಕಿಗೆ ತನ್ನ ಮಗನು ಸಿಲುಕಿ ಬಹಳ ಎತ್ತರದಲ್ಲಿ ಜೋಲಾಡುತ್ತಿರುವುದು ಕಂಡಿತು. ಇದನ್ನು ಕಂಡೊಡನೆಯೇ ಇವಳಿಗೆ ಬವಳಿಯೇ ಬಂದುಬಿಟ್ಟಿತು. ನೆಲಕ್ಕೆ ಬಿದ್ದುಬಿಟ್ಟಳು. ಹೊಟ್ಟೆಯ ಸಂಕಟವನ್ನು ತಡೆಯಲಾರದೇ ತಟಪಟ ಒದ್ದಾಡಿ, ತನ್ನ ಸಮೀಪದಲ್ಲಿದ್ದವರಿಗೆ ' ಓಡಿ, ಓಡಿ ಹೋಗಿ ಮಗುವನ್ನು ಬದುಕಿಸಿ ' ಎಂದು ಅಂಗಲಾಚಿ ಹೇಳಿದಳು.

ಗೌರ್ಯುವಾಚ :—

ಮಮ ಪ್ರಾಣಾ ಗಮಿಷ್ಯಂತಿ ವಿನಾ ಪುತ್ರಂ ಸುರೇಶ್ವರ ! ।
ಕಥಂ ಮಮೋಪರಿ ವ್ಯೋಮ ಪತಿತಂ ಶಂಕರಃ ಕಥೇಮ್ ? ॥೨೬॥

ನೈಷ್ಠುರ್ಯಂ ಪರಮಂ ಪ್ರಾಪ್ತೋ ಮಯ್ಯೇವ ಜಗದೀಶ್ವರಃ ।
ದ್ವಾದಶಾಬ್ದಂ ತಪಸ್ತಪ್ತಂ ನಿರಾಹಾರತಯಾ ಮಯಾ ॥೨೭॥

ಕರುಣಾಬ್ಧಿಃ ಸ್ವ-ಪ್ರಕಾಶೋಽವತೀರ್ಣೋಽಭೂನ್ಮಮಾಲಯೇ ।
ಸ ಗತೋ ನಿಧಿರೂಪೋ ಮೇಽಭಾಗ್ಯಾಯಾಃ ಪಾಪಸಂಚಯಾತ್ ॥೨೮॥

---

ಗೌರೀ :—

ಸುರೇಶ್ವರ, ಶಂಕರ ! ಈ ಪುತ್ರನು ಕೈ ತಪ್ಪಿ ಹೋಗಿಬಿಟ್ಟರೆ, ನನ್ನ ಪ್ರಾಣಗಳೇ ನಿಲ್ಲುವುದಿಲ್ಲ. ಒಂದು ನಿಮಿಷ ಸಹ ನಾನು ಬದುಕಿರಲಾರೆ. ಅಯ್ಯೋ, ಸರ್ವಶಕ್ತನಾದ ನನ್ನ ಪತಿದೇವ, ಶಂಕರನು ಸಹ ನನ್ನ ಮೇಲೆ ಉದಾಸೀನನಾಗಿರುವನಲ್ಲ ? ನನ್ನ ಮೇಲೆ ಅಂತರಿಕ್ಷಮಂಡಲವೇ ಕುಸಿದಂತಾಯಿತಲ್ಲ ? ಇದೇಕೆ ಹೀಗಾಗಿರಬಹುದು ? ॥೨೬॥

ಸರ್ವಲೋಕಶರಣ್ಯನಾದ ಜಗದೀಶ್ವರ, ಶಂಕರನೇ ನನ್ನ ವಿಷಯದಲ್ಲಿ ನಿರ್ದಯನಾದ ಮೇಲೆ, ನನ್ನನ್ನು ಯಾರು ರಕ್ಷಿಸಿಯಾರು ? ಅವನೇಕೆ ಹೀಗೆ ನೈಷ್ಠುರ್ಯವನ್ನು ತಳೆದಿರಬಹುದು ? ಅಯ್ಯೋ ! ನಾನು ಹನ್ನೆರಡು ವರ್ಷಗಳ ವರೆಗೆ ಕಠಿಣವಾಗಿ ತಪಸ್ಸನ್ನು ಆಚರಿಸಿದೆನಲ್ಲ ? ಆ ಸಮಯದಲ್ಲಿ ಒಂದು ತೊಟ್ಟು ಜಲವನ್ನು ಸಹ ಸ್ವೀಕರಿಸಲಿಲ್ಲವಲ್ಲ ? ॥೨೭॥

ಇದರಿಂದಲ್ಲವೇ ಕರುಣಾಬ್ಧಿಯಾದ ಜಗದೀಶ್ವರ; ಗಣೇಶನು ಸ್ವ-ಪ್ರಕಾಶದಿಂದ ನನ್ನ ಮನೆಯಲ್ಲಿ ಅವತರಿಸಿದುದು ? ಅಂತಹ ಅಪೂರ್ವ ನಿಧಿಯನ್ನು ಇಟ್ಟುಕೊಳ್ಳಲು ಭಾಗ್ಯಹೀನೆಯಾದ ನನಗೆ ಯೋಗ್ಯತೆ ಸಾಲದೇ ಹೋಯಿತು. ಆದುದರಿಂದಲೇ ಗೃಧ್ರವು ಕಚ್ಚಿಕೊಂಡು ಹೋಯಿತು. ನಾನು ಪರಮ ಪಾಪಿಷ್ಠಳು.

**ಗತೇ ಬಾಲೇ ಗತಂ ಸರ್ವಂ ಸುಖಮಾತ್ಯಂತಿಕಂ ಮಮ ।**

**ಕ ಉವಾಚ :—**

**ಏವಂ ತಸ್ಯಾಂ ತು ಶೋಚಂತ್ಯಾಂ ಶುಶುಚುಸ್ತತ್ರ ಸ್ತ್ರೀಜನಾಃ ॥೨೯॥**

**ತತಸ್ತಾಸ್ತತ್ಸಮಾಧಾನಂ ಚಕ್ರುರ್ಜ್ಞಾನೇನ, ಯುಕ್ತಿಭಿಃ ।**

**ಸಖ್ಯ ಊಚುಃ :—**

**ಅನಾದಿನಿಧನೇ ಬಾಲೇ ನ ಶೋಕಂ ಕರ್ತುಮರ್ಹಸಿ ॥೩೦॥**

---

ನನ್ನ ತಂದೆ ಮಗುವಿನ ಸಂರಕ್ಷಣೆಯ ವಿಷಯದಲ್ಲಿ ಬಹಳ ಜಾಗರೂಕತೆಯಿಂದಿರ ಬೇಕೆಂದು ಪೂರ್ವಭಾವಿಯಾಗಿಯೇ ಎಚ್ಚರಿಸಿದ್ದನು. ಆದರೂ ನಾನು ಮೈ ಮರೆತು ಹೋದೆನು. ॥೨೮॥

ಬಾಲಕನೇ ಹೋದನೆಂದ ಬಳಿಕ ಈ ಪ್ರಪಂಚದಲ್ಲಿ ನನ್ನ ಭಾಗಕ್ಕೆ ಉಳಿದಿರುವ ಸೌಖ್ಯವಾದರೂ ಯಾವುದು ? ನನ್ನ ಸರ್ವಸ್ವವೂ ಹೋದಂತೆಯೇ ಸರಿ.

ಬ್ರಹ್ಮ :—

ಪಾರ್ವತಿಯು ಈ ರೀತಿಯಾಗಿ ಹೃದಯವಿದ್ರಾವಕ ಸ್ಥಿತಿಯಲ್ಲಿ ಶೋಕಿಸುತ್ತಿರುವುದನ್ನು ಕಂಡು ಅವಳ ಸಖಿಯರೆಲ್ಲರೂ ಸಮದುಃಖಿಗಳಾಗಿ ಅವಳಂತೆಯೇ ಶೋಕಿಸಲಾರಂಭಿಸಿದರು. ॥೨೯॥

ಅವರ ಪೈಕಿ ಸ್ವಲ್ಪ ಧೈರ್ಯಶಾಲಿಗಳೂ, ಲೋಕಾನುಭವವನ್ನರಿತವರೂ ಆದ ವಯಸ್ಕ, ಕೆಲವು ರಮಣಿಯರು ತಮ್ಮ ಬುದ್ಧಿಚಾತುರ್ಯದಿಂದಲೂ, ಅನೇಕ ಯುಕ್ತಿಗಳನ್ನು ಉದಹರಿಸುತ್ತಲೂ ಪಾರ್ವತೀದೇವಿಯನ್ನು ಸಮಾಧಾನ ಪಡಿಸಲು ಪ್ರಯತ್ನಿಸಲಾರಂಭಿಸಿದರು.

ಸಖಿಯರು :—

ಪ್ರಿಯಸಖಿ ! ನಿನ್ನ ಮಗನೆಂದರೆ ಸಾಮಾನ್ಯನಾದ ಕ್ಷುಲ್ಲಕ ಬಾಲಕನೆಂದು

ಸ್ವ-ಪ್ರಕಾಶೇಽವತೀರ್ಣೋ ತೇ ಬತ್ಸಃ ಷಾನ್ಯಯೋಗತಃ ।
ಕುತ್ರ ವಾ ಮೃಣ್ಮಯೀ ಮೂರ್ತಿಶ್ಚೇತನಾಮುಗಮದ್ವದ ! ||೩೦||

ಸ್ಥಿರಾ ಭವ ಕ್ಷಣೇನ ತ್ವಂ ದ್ರಕ್ಷ್ಯಸೇ ಸ್ವ-ಸುತಂ ಶುಭೇ ! ।
ಅಂತಕಸ್ಯಾಂತಕೋ ಬಾಲಃ ಪುನರೇಷ್ಯತಿ ನಿಷ್ಠಯಾ ||೩೧||

---

ತಿಳಿದಿರುವೆಯ? ಅವನು ಜನನ-ಮರಣ ಪ್ರವಾಹಕ್ಕೆ ಸಿಲುಕದವನು. ಇಂಥವನಿಗೆ ನೋವು-ನೋವುಗಳೇನಾದರೂ ಸಂಭವಿಸಿಯಾವೇ ? ನೀನೂ ಅರಿಯದವಳಲ್ಲ. ಹೀಗಿದ್ದು, ಅವನ ಬಗ್ಗೆ ಅನಿಷ್ಟವನ್ನೇ ಚಿಂತಿಸುತ್ತಿರುವೆಯಲ್ಲ? ಹೀಗೆಲ್ಲ ಅಕಾರಣ ವಾಗಿ ಶೋಕಿಸಬಾರದಮ್ಮ ! ||೩೦||

ಎಲ್ಲ ವಿಧ ತೇಜೋಮಂಡಲಗಳನ್ನೂ ಅವನೇ ಬೆಳಗುವವನಾದುದರಿಂದ ಅವನನ್ನು ಪ್ರಕಾಶಿಸುವುದಕ್ಕೆ ಮತ್ತಾವ ತೇಜದ ಆವಶ್ಯಕತೆಯೂ ಇರುವುದಿಲ್ಲ. ನಿನ್ನ ಮಗನು 'ಅಯೋನಿಜ' ಎಂಬುದನ್ನು ಸಖಿ, ಗಿರಿಜೆ! ಮರೆಯಬೇಡ- ಅವನು ನಿನ್ನ ಮನೆಯಲ್ಲಿ ಅವತರಿಸಿರುವುದೂ ಒಂದು ಬಗೆಯ ಹೆಚ್ಚುಗಳವೇ ಸರಿ. ನೀನು ಕಠಿಣವಾಗಿ ತಪಸ್ಸನ್ನಾಚರಿಸಿದುದೇ ಭಗವಂತನ ಈ ಅವತಾರಕ್ಕೆ ಮೂಲಕಾರಣ ವಾಗಿದೆ. ಮಣ್ಣಿನ ಮುದ್ದೆಯಿಂದ ರಚಿಸಿದ ಮೂರ್ತಿಯು ಸಚೇತನವಾದ ಸಂಗತಿ ಯನ್ನು ಯಾರಾದರೂ ಕಂಡು ಅರಿತಿದ್ದಾರೆಯೋ ? ಮೃಣ್ಮಯ ಅಚೇತನವಾದ ಮೂರ್ತಿಯಲ್ಲಿ ಆವೇಶಗೊಳ್ಳಬೇಕಿದ್ದರೆ, ಇದು ದೇವನಿಗಲ್ಲದೆ ಮತ್ತಾರಿಗೆ ಸಾಧ್ಯವಾದೀತು ? ಈಗ ಹೇಳು, ನಿನ್ನ ಮಗನಾರೆಂಬುದನ್ನು ? ಇದನ್ನೇಕೆ ನೀನು ವಿಮರ್ಶಿಸಲಿಲ್ಲ ? ||೩೦||

ಆದುದರಿಂದ ನೀನು ಧೈರ್ಯದಿಂದಿರು. ಸ್ವಲ್ಪವೂ ಚಾಂಚಲ್ಯವನ್ನು ಹೊಂದಬೇಡ. ಸರ್ವಮಂಗಳೇ ! ಒಂದೇ ಒಂದು ಕ್ಷಣವೊಳಗೆ ನಿನ್ನ ಮಗನು ಸುರಕ್ಷಿತವಾಗಿ ಹಿಂದಿರುಗಿ ಬರುವುದನ್ನು ಈಗಲೇ ನೋಡುವೆ. ಬಾಲಕನು ಸಾಮಾ ನ್ಯನಾದವನೇನೂ ಅಲ್ಲ. ಸರ್ವಾಂತಕನಿಗೂ ಇವನು ಅಂತಕನಾದವನು. ಇವನ ಬಗ್ಗೆ ನೀನು ಚಿಂತಿಸಬೇಕಾಗಿಲ್ಲ. ನಿನ್ನ ನಿಷ್ಠೆಯೇ ಅಂತಹ ಏಕಾಗ್ರತೆಯುಳ್ಳದ್ದಾ ದ್ದರಿಂದ ಖಂಡಿತವಾಗಿಯೂ ನಿನ್ನ ಮಗನು ಓಡಿ ಬೇಗನೆ ಬರುವನು. ||೩೧||

**ಕ ಉವಾಚ :—**

**ಸಖೀಜನೇ ವದತ್ಯೇವಂ ತಾವದ್ಬಾಲಃ ಸ್ವ-ಮುಷ್ಟಿನಾ ।**
**ದಧಾರ ಚಂಚುಂ ಬಲವಾನ್ ಯಥಾ ಶ್ವಾಸೋ ನ ನಿರ್ಯಯೌ ॥೩೩॥**

**ಶ್ವಾಸರೋಧಾದ್ಗತಾಸುಸ್ಸ ಗೃಧ್ರಸ್ತೇನ ಸಮನ್ವಿತಃ ।**
**ನಿಪಪಾತ ಮಹೀಪೃಷ್ಠೇ ವಜ್ರಾಹತ ಇವಾಚಲಃ ॥೩೪॥**

**ಪತಮಾನೋ ಗೃಧ್ರದೇಹೋ ದಶಯೋಜನವಿಸ್ತೃತಃ ।**
**ಚೂರ್ಣಯಾಮಾಸ ಗೇಹಾನಿ ತಚ್ಚಿತ್ರಮಭವದ್ಭೃಶಮ್ ॥೩೫॥**

---

ಬ್ರಹ್ಮಾ :—

ತನ್ನ ಸಖೀಜನರು ಹೀಗೆ ಹೇಳಿ ಸಮಾಧಾನವನ್ನು ಪಡಿಸುತ್ತಿರುವಷ್ಟರಲ್ಲಿ ಗೃಧ್ರಾಸುರನ ಹಿಡಿತಕ್ಕೆ ಸಿಲುಕಿದ್ದ ಬಾಲಕನು ವಜ್ರದಂತಹ ತನ್ನ ಮುಷ್ಟಿಯಿಂದ ಆ ಅಸುರನ ಕೊಕ್ಕುಗಳೆರಡನ್ನೂ ಬಲವಾಗಿ ಬಿಗಿ ಹಿಡಿದುಬಿಟ್ಟನು. ಗೃಧ್ರನ ಶ್ವಾಸೋಚ್ಛ್ವಾಸಗಳೇ ಇವನ ಹಿಡಿತದಿಂದ ನಿಂತುಹೋದವು. ॥೩೩॥

ಶ್ವಾಸವೇ ಸಂಪೂರ್ಣವಾಗಿ ನಿಂತುಹೋದ ಬಳಿಕ, ಗೃಧ್ರಾಸುರನ ಪ್ರಾಣಗಳು ನಿಂತಾವೆಯೇ ? ಕೂಡಲೇ ಹಾರಿ ಹೋದವು. ಆಗ ಗೃಧ್ರನ ದೇಹವು ಬಾಲಕನೊಂದಿಗೆ ಉರುಳಿ ಭೂಮಿಗೆ ರಭಸದಿಂದ ಬಿದ್ದಿತು ಹಿಂದಕ್ಕೊಮ್ಮೆ ದೇವೇಂದ್ರನು ತನ್ನ ವಜ್ರಾಯುಧದಿಂದ ಪರ್ವತಗಳಿಗೆ ಹೊಡೆದು ಅವುಗಳ ರೆಕ್ಕೆಗಳನ್ನು ಕತ್ತರಿಸಿದಾಗ, ಅವು ನೆಲಕ್ಕುರುಳಿದಂತೆ ಗೃಧ್ರಾಸುರನು ಬಿದ್ದುದು ಕಂಡುಬಂದಿತು. ॥೩೪॥

ನೆಲಕ್ಕೆ ಬೀಳುವಾಗ ಗೃಧ್ರನ ದೇಹವು ಅತಿಯಾಗಿ ಬೆಳೆಯಿತು. ಅದರ ದೇಹದಿಂದ ಹತ್ತು ಯೋಜನಗಳಷ್ಟು ಸುತ್ತಳತೆಯ ಭೂ-ಭಾಗವು ಮುಚ್ಚಿ ಹೋಯಿತು. ಇದರಿಂದಾಗಿ ತ್ರಿ-ಸಂಧ್ಯಾಕ್ಷೇತ್ರದಲ್ಲಿದ್ದ ಅನೇಕ ಮನೆಗಳು ನುಚ್ಚು ನುಗ್ಗಾಗಿ ಹೋದವು. ಜನರ ದೃಷ್ಟಿಯಲ್ಲಿ ಇದೊಂದು ಬಗೆಯ ಅಭೂತಪೂರ್ವವಾದ ಉತ್ಪಾತವೋ, ಎಂಬಂತೆಯೇ ಕಂಡುಬಂದಿತು. ॥೩೫॥

[1]ಚೈತ್ಯ-ವೃಕ್ಷೇಷು ಭಗ್ನೇಷು ಯಯುಃ ಪಕ್ಷಿಗಣಾ ದಿಶಃ ।
ತತೋ ದೃಷ್ಟ್ವಾ ತುಂ ತಂ ಬಾಲಮುವಪತ್ಸ ಸಖೀಗಣಃ ॥೩೬॥

ಸಖೀಜನಾ ಊಚುಃ :—

ಅಯಮಕ್ಷತದೇಹಸ್ತು ಪತಿತೋ ಗಿರಿಜಾಸುತಃ ।

ಕ ಉವಾಚ :—

ಶ್ರುತ್ವೇತ್ಥಂ ವಚನಂ ತಸ್ಯ ತ್ವರಿತಾ ಬಾಲಮಾದದೇ ॥೩೭॥

ಗೌರೀ ನಿಧಾಯ ಹೃದಯೇ ಪರಮಾನಂದಮಾಪ ಚ ।
ಆಶ್ಚರ್ಯಂ ಪರಮಂ ಪ್ರಾಪ್ಯ ದದೌ ದಾನಾನ್ಯನೇಕಶಃ ॥೩೮॥

---

ಚೈತ್ಯ, ವೃಕ್ಷಗಳು ಇವೆಲ್ಲ ಮುರಿದುಬೀಳಲು, ಅವನ್ನಾಶ್ರಯಿಸಿದ್ದ ಪಕ್ಷಿ ಸಮುದಾಯವೆಲ್ಲ ಚೀತ್ಕಾರ ಧ್ವನಿಗೈಯ್ಯುತ್ತ ದಿಗ್ದಿದಿಕ್ಕುಗಳಿಗೆ ಹಾರಿಹೋದವು. ಆಗ ಪಾರ್ವತೀದೇವಿಯ ಸಖೀಜನರು ಆ ಬಾಲಕನನ್ನು ನೋಡಿ ತಮ್ಮ ತಮ್ಮೊಳಗೆ ಹೀಗೆಂದು ಮಾತನಾಡಿಕೊಂಡರು. ॥೩೬॥

ಸಖೀಜನರು :—

ನಾವು ಮೊದಲೇ ಹೇಳಲಿಲ್ಲವೇ ? ಈಗ ನೋಡಿರಿ, ಈ ಗಿರಿಜಾಸುತನು ಸ್ವಲ್ಪವೂ ಧಕ್ಕೆಗೆ ಒಳಗಾಗದೆ ಇಳಿದು ಬಂದಿದ್ದಾನೆ. ಇವನು ಸಾಮಾನ್ಯ ಬಾಲಕನಾಗಿದ್ದರೆ, ಇಂತಹ ವಿಪತ್ತಿನಿಂದ ಎಂದಿಗಾದರೂ ಪಾರಾಗಿ ಬರುತ್ತಲಿದ್ದನೇ?

ಬ್ರಹ್ಮಾ :-

ಈ ಮಾತುಗಳನ್ನು ಕೇಳಿ ಮೂರ್ಛೆಗೊಂಡಿದ್ದ ಪಾರ್ವತೀದೇವಿಯು ಒಮ್ಮೆಲೇ ಎಚ್ಚೆತ್ತು ಎದುರಿಗೆ ನೋಡಿದಳು. ಎಡವಿ ಬೀಳುವುದನ್ನೂ ಲಕ್ಷಿಸದೇ ಓಡಿ ಬಂದು ಶಿಶುವನ್ನು ಎತ್ತಿಕೊಂಡಳು. ॥೩೭॥

ಕೈ ಬಿಟ್ಟೇ ಹೋಗಿದ್ದ ಬಾಲಕನು ಸುರಕ್ಷಿತವಾಗಿ ಪುನಃ ದೊರೆತುದರಿಂದ

---

ಸಂಖ್ಯಾಚಿಹ್ನಿತಕ್ಕೆ ವಿವರಣೆಯನ್ನು ನೋಡಿ.

'ಗತಮಸ್ಯ ಮಹಾರಿಷ್ಟಮಗ್ರೇ ನ ಸ್ಯಾದಿ'ತಿ ದ್ವಿಜಾಃ ।
ನಮಸ್ಕೃತ್ಯ ದ್ವಿಜಾನ್ ಪ್ರಾಯಾನ್ಮಂದಿರಾಭ್ಯಂತರಂ ಶಿವಾ ॥೩೯॥

ಗೌರ್ಯುವಾಚ :—

ದಶಯೋಜನವಿಸ್ತಾರಃ ಕ್ವಾಸುರೋ ಬಲವತ್ತರಃ ? ।
ಕ್ವ ಬಾಲಃ ಕೋಮಲತನುಃ ? ಲಘುರೂಪೋ ಜಘಾನ ತಮ್ ?॥೪೦॥

ಗೌರಿಗೆ ಹಿಡಿಸಲಾರದಷ್ಟು ಆನಂದ ಉಂಟಾಗಿದ್ದಿತು. ಅವನನ್ನು ಎದೆಗವಚಿಕೊಂಡು ಮನಸ್ವೀ ಮುದ್ದಾಡಿದಳು. ಒಂದೇ ಒಂದು ತಿಂಗಳ ಹಸು ಗೂಸು, ಪರ್ವತಪ್ರಾಯನಾದ ಗೃಧ್ರಾಸುರನ ಕೈಗೆ ಸಿಕ್ಕು, ಅಂತರಿಕ್ಷದ ವರೆಗೆ ಒಯ್ಯಲ್ಪಟ್ಟರೂ, ಹಾಗೂ ಅಲ್ಲಿಂದ ಒಮ್ಮೆಲೇ ಭೂಮಿಗೆ ಬಿದ್ದರೂ ಯಾವುದೊಂದು ರೀತಿಯ ಅಪಘಾತಕ್ಕೂ ಬಲಿಯಾಗದಿದ್ದುದಕ್ಕೆ ಅವಳಿಗೆ ಬಹಳ ಆಶ್ಚರ್ಯ ಉಂಟಾಯಿತು. ಹೀಗೆ ಈ ಅನಿಷ್ಟ ಕಳೆದುಹೋದುದಕ್ಕೆ ಸಂತೋಷಪಟ್ಟು ವಿಪ್ರರಿಗೆ ಅನೇಕ ಬಗೆಯ ಅಪೂರ್ವ ವಸ್ತುಗಳನ್ನು ದಾನವಾಗಿ ಅರ್ಪಿಸಿದಳು. ॥೩೮॥

' ಈಗೇನೋ ಆಕಸ್ಮಾತ್ತಾಗಿ ಬಾಲಕನಿಗೆ ಇಂತಹ ವಿಪತ್ತು ಒದಗಿತು. ಇನ್ನು ಮುಂದೆ ಪ್ರಾಯ ಹೀಗೆ ಆಗಲಿಕ್ಕಿಲ್ಲ ' ಎಂದು ಸಮಾಧಾನದ ಮಾತುಗಳನ್ನು ಬ್ರಾಹ್ಮಣರು ಹೇಳಿದರು. ದೇವಿಗೆ ಎಷ್ಟೋ ರೀತಿಯಿಂದ ಇದು ಆಪ್ಯಾಯಮಾನವಾಯಿತು. ಬ್ರಾಹ್ಮಣರಿಗೆ ಭಕ್ತಿಯಿಂದ ಪ್ರಣಮಿಸಿದಳು. ಹಾಗೆಯೇ ಬಾಲಕನನ್ನೆತ್ತಿಕೊಂಡು ತನ್ನ ಮಂದಿರದ ಒಳಭಾಗಕ್ಕೆ ನಡೆದಳು. ಮತ್ತು ತನ್ನಷ್ಟಕ್ಕೆ ತಾನು ಹೀಗೆಂದು ಮಾತನಾಡಿಕೊಂಡಳು. ॥೩೯॥

ಗೌರೀ :—

ಅಬ್ಬಬ್ಬ ! ಎಂತಹ ರಾಕ್ಷಸನವನು ? ಹತ್ತು ಯೋಜನಗಳಷ್ಟು ವಿಸ್ತಾರವಾಗಿದ್ದನಲ್ಲ ! ಅಂತಹ ಬಲಿಷ್ಠನಾದ ದುಷ್ಟ ರಕ್ಕಸನೆಂದರೇನು ? ಸುಕೋಮಲ ತನುವಿನ ಪುಟ್ಟ ಈ ಬಾಲಕನೆಂದರೇನು ? ಅಂಥವನನ್ನು ಇವನು ಕೊಂದನೆಂದರೆ ಬಹಳ ಆಶ್ಚರ್ಯವೇ ಸರಿ. ॥೪೦॥

**ಏತಾವತೋ ಬಲಪಿಂಡಮುಗ್ರೇ ಕಿಂ ವಾ ಕರಿಷ್ಯತಿ ? ।**

**ಕ ಉವಾಚ :—**

**ಇತ್ಯುವಾಚ ಸಖೀಂ ಗೌರೀ ಸ್ತನಪಾನಂ ದದೌ ಮುದಾ ॥೪೦॥**

**ಸಖೀಜನಾ ಊಚುಃ :—**

**ಅಯಂ ಲಘುರ್ನ ಮಂತವ್ಯೋ ಯಥಾ ವಹ್ನಿಕಣೋ ದಹೇತ್ ।**
**ಮಹಾಂತಂ ಕಾಷ್ಠನಿಚಯಂ ತಥಾನೇನ ಹತೋಽಸುರಃ ॥೪೨॥**

---

ಎಷ್ಟು ತುಂಟನಪ್ಪ, ಇವನು ! ಈಗಲೇ ಹೀಗಿರುವನಲ್ಲ ! ಇನ್ನು ಮುಂದೆ ಪ್ರಾ[illegible]ಢ ವಯಸ್ಸಿಗೆ ಬಂದಾಗ ಏನೇನು ಮಾಡುವನೋ ! ಯಾರು ಕಂಡರು ?

ಬ್ರಹ್ಮ :—

ಹೀಗೆಂದುಕೊಂಡು ಸಂತೋಷದಿಂದ ಬಾಲಕನಿಗೆ ಸ್ತನ್ಯವನ್ನು ಪಾನಮಾಡಿಸಿದಳು. ಗೌರಿಯು ಈ ಮಾತುಗಳನ್ನು ಕೇಳಿ ಸಖೀಜನರು ದೇವಿಗೆ ಈ ರೀತಿ ಆಶ್ವಾಸನವನ್ನಿತ್ತರು. ॥೪೧॥

ಸಖೀಜನರು :—

ಇವನನ್ನು ಸಾಮಾನ್ಯನಾದ ಬಾಲಕನೆಂದು ತಿಳಿಯಬೇಡ, ಸಖಿ ! ಇವನು ಸಾಕ್ಷಾತ್ಪರಮಾತ್ಮನಾದುದರಿಂದ ಏನನ್ನು ಬೇಕಾದರೂ ಮಾಡಿಬಿಡಬಲ್ಲನು. ನೋಡು, ಇವನ ಸೃಷ್ಟಿಯೊಳಗೆ ಬಂದಾದ ಅಗ್ನಿಯ ಒಂದೇ ಒಂದು ಕಣ, ಪರ್ವತದಂತಹ ಕಟ್ಟಿಗೆಯ ರಾಶಿಯನ್ನೇ ಆಗಲಿ, ಸುಟ್ಟು ಬೂದಿಯನ್ನಾಗಿ ಮಾಡಿಬಿಡುವುದಿಲ್ಲವೇ? ಎಂದ ಮೇಲೆ ಇಡೀ ಈ ವಿಶ್ವಕ್ಕೇ ಕಾರಣಕರ್ತೃವಾದ ಪರಮೇಶ್ವರನಿಗೆ ಇನ್ನೆಷ್ಟು ಶಕ್ತಿ ಇರಬಹುದು ? ನೀನೇ ಆಲೋಚಿಸು. ಇವನಿಗಿರುವ ಶಕ್ತಿ-ಸಾಹಸಗಳನ್ನು ಪರಿಶೀಲಿಸಿದರೆ ಇವನು ಈ ರಾಕ್ಷಸನನ್ನು ಕೊಂದುದೇನೂ ಹೆಚ್ಚಲ್ಲ. ॥೪೨॥

ಕ ಉವಾಚ :—

ತತಸ್ತದ್ದೇಹ ಖಂಡಾನಿ ಗಣಾ ದೂರೇ ನಿ-ಚಿಕ್ಷಿಪುಃ ।
ಶ್ರುಣುಯಾದಿದಮಾಖ್ಯಾನಂ ಸೋಽಸುರೈರ್ನಾಭಿಭೂಯತೇ ॥೪೩॥

ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ ‘ ಗೃಧ್ರಾಸುರವಧೋ ’
ನಾಮ ತ್ರ್ಯಶೀತಿತಮೋಽಧ್ಯಾಯಃ ಸಮಾಪ್ತಃ

ಬ್ರಹ್ಮ :—

ಅನಂತರ ಪ್ರಮಥ ಗಣದವರು ಆ ಪ್ರದೇಶಕ್ಕೆ ಬಂದು ಸತ್ತು ರುಳಿ ಬಿದ್ದಿದ್ದ ಗೃಧ್ರಾಸುರನ ಮುರಿದ ಕಳೇಬರದ ತುಂಡುಗಳನ್ನು ಒಂದೊಂದನ್ನಾಗಿ ಎತ್ತಿಕೊಂಡು ಹೋಗಿ ಬಹು ದೂರ ಬಿಸುಟು ಬಂದರು. ಲೋಕದಲ್ಲಿ ಯಾವ ನರನು ಈ ಆಖ್ಯಾಯಿಕೆಯನ್ನು ಭಕ್ತಿ-ಶ್ರದ್ಧೆಗಳಿಂದ ಶ್ರವಣಮಾಡುವನೋ, ಅವನಿಗೆ ರಾಕ್ಷಸರಿಂದ ಯಾವ ಪೀಡೆಯೂ ಉಂಟಾಗುವುದಿಲ್ಲ. ॥೪೩॥

ಇಲ್ಲಿಗೆ ಶ್ರೀ ಗಣೇಶಪುರಾಣದ ಉತ್ತರಖಂಡದಲ್ಲಿ ‘ ಗೃಧ್ರಾಸುರವಧೆ ’ ಎಂಬಲ್ಲಿಗೆ ಎಂಭತ್ತು ಮೂರನೆಯ ಅಧ್ಯಾಯಾನುವಾದವು ಪೂರ್ಣವಾದುದು.



॥ ಶ್ರೀ ಗಣೇಶಾಯ ನಮಃ ॥

## ಅಥ ಚತುರಶೀತಿತಮೋಽಧ್ಯಾಯಃ

ಕ ಉವಾಚ :—

ಮಾಸೇ ದ್ವಿತೀಯೇ ಗೌರೀ ತಂ ಸಾಯಮಭ್ಯಜ್ಯ ಬಾಲಕಮ್ ।
ಸ್ಥಾಪಯಾಮಾಸ ದೋಲಾಯಾಂ ಗಾಯತಿ ಸ್ಮ ಮುದಾ ಬಹು ॥೧॥

ತಾವದಾಖೂ ಸಮಾಯಾತೌ ಮಾಯಾರೂಪಧರೌ ಸುತಮ್ ।
ತೌ ಕ್ಷೇಮ.ಕುಶಲೌ ದೈತ್ಯೌ ತದ್ವಧಾಕಾಂಕ್ಷಿಣಾವುಭೌ ॥೨॥

---

॥ ಶ್ರೀ ಗಣೇಶಾಯ ನಮಃ ॥

## ೮೪ ನೆಯ ಅಧ್ಯಾಯ.

ಬ್ರಹ್ಮ :—

ಶಿಶುವಿಗೆ ಒಂದು ತಿಂಗಳು ತುಂಬಿ ಎರಡನೆಯ ತಿಂಗಳು ನಡೆಯುತ್ತಲಿದ್ದಿತು. ಒಂದು ದಿವಸ ಪರ್ವತನಂದಿನಿಯು ಸಂಜೆ ಮಗುವಿಗೆ ಅಭ್ಯಂಜನವನ್ನು ಮಾಡಿಸಿ, ತೊಟ್ಟಿಲಿನಲ್ಲಿ ಮಲಗಿಸಿ, ಜೋಗುಳ ಪದ್ಯಗಳನ್ನುಸು-ಮಧುರ ಸ್ವರದಿಂದ ಗಾನಮಾಡಲಾರಂಭಿಸಿದಳು. ಆಗ ಮಗುವಿನ ಮುಗುಳು ನಗೆಯ ಸುಂದರವಾದ ಮುಖವನ್ನು ನೋಡಿ ನೋಡಿ, ಅವಳಿಗೆ ಬಹಳ ಸಂತೋಷವೆನಿಸಿದ್ದಿತು. ॥೧॥

ಅಷ್ಟರಲ್ಲಿ 'ಕ್ಷೇಮ' ಮತ್ತು 'ಕುಶಲ' ಎಂಬ ಹೆಸರಿನ ಸಿಂಧುದೈತ್ಯನ ಸೇವಕರಾದ ಅಸುರ ವೀರರಿಬ್ಬರು ತಮ್ಮ ಮಾಯಾಬಲದಿಂದ ದೊಡ್ಡ ದೊಡ್ಡ ಸೊಂಡೆಯ ಇಲಿಗಳಂತೆ ಕೃತ್ರಿಮ ರೂಪಗಳನ್ನು ಧರಿಸಿಕೊಂಡು, ಮಗುವನ್ನು ಮಲಗಿಸಿದ್ದ ಸ್ಥಳಕ್ಕೆ ಓಡುತ್ತ ಬಂದರು. ಅವರ ಹೃದಯದಲ್ಲಿ ಯಾವ ದುರ್ಭಾವನೆ ತುಂಬಿ

ನಖ-ದಂಷ್ಟ್ರಾಯುಧೌ ಘೋರೌ ಮಂದಿರಾಭ್ಯಂತರಂ ಗತೌ ।
ಯುಧ್ಯಂತೌ ಪಾಲನಾಭ್ಯಾಶೇ ಸ್ಫುರದಂಗರುಹೌ ಖಲೌ ॥೩॥

ಯಂಗೋಶ್ಚೀತ್ಕಾರಶಬ್ದೇನ ಶ್ರೋತ್ರಯೋ ಬಧಿರೀಕೃತಾಃ ।
ಪಾದಾಘಾತೇನ ಭೂಸ್ಸರ್ವಾ ಕೃಷ್ಟಕ್ಷೇತ್ರಸಮಾ ಕೃತಾ ॥೪॥

ತತೋ ಯಷ್ಟಿಂ ಗೃಹೀತ್ವಾ ಸಾ ಭೀಷಯಾಮಾಸ ತಾವುಭೌ ।
ಪಲಾಯನಪರೌ ಚೋಭಾವುಪರಿಷ್ಟಾದ್ಗತೌ ತದಾ ॥೫॥

---

ದ್ದಿತೆಂಬುದನ್ನು ವ್ಯಾಸ! ಪ್ರತ್ಯೇಕವಾಗಿ ಹೇಳಬೇಕಾಗಿಲ್ಲವಷ್ಟೇ? ಹೇಗಾದರೂ ಮಾಡಿ ಶಿಶುವನ್ನು ಕೊಂದುಬಿಡಬೇಕೆಂಬುದೇ ಅವರಿಬ್ಬರ ಹವಣಿಕೆಯಾಗಿದ್ದಿತು. ॥೨॥

ಮೊನಚಾದ ಕೋರೆ ಹಲ್ಲು, ಉಗುರುಗಳೇ ಅವಕ್ಕೆ ಆಯುಧಗಳಾಗಿದ್ದವು. ಇವು ಮಂದಿರದೊಳಕ್ಕೆ ಪ್ರವೇಶಮಾಡುವಾಗ ಪರಸ್ಪರವಾಗಿ ಹೋರಾಡುತ್ತಲೇ ಇದ್ದವು. ಬಹಳ ಬಿರುಸಿನಿಂದ ಒಂದನ್ನೊಂದು ಕಡಿದಾಡುತ್ತ ತೊಟ್ಟಿಲಿನ ಸಮೀಪಕ್ಕೇ ಓಡಿ ಬಂದವು. ಮಹಾ ದುಷ್ಟಸ್ವಭಾವದವರಾದ ಆ ರಾಕ್ಷಸರಿಬ್ಬರೂ ಕೋಪಾವೇಶದಿಂದ ಹೋರಾಡುವಾಗ (ಇಲಿಯ ರೂಪದ) ಅವರ ದೇಹಗಳ ಮೇಲಿದ್ದ ದಬ್ಬಳದಂತಹ ಕೂದಲು ಸೆಟೆದು ನಿಂತಿದ್ದವು, ॥೩॥

ಇಲಿಗಳು ಮಾಡುತ್ತಿದ್ದ ಚೀತ್ಕಾರ ಶಬ್ದದಿಂದ ಅನೇಕರ ಶ್ರವಣ ಪುಟಗಳು ಮುಚ್ಚಿಹೋಗಿ, ಅವರು ತೀರಾ ಕಿವುಡರಾದರು. ಅವು ತಮ್ಮ ಕಾಲುಗಳ ಉಗುರಿನಿಂದ ಬಲವಾಗಿ ಭೂಮಿಯನ್ನು ಕೆರೆಯುತ್ತಲಿದ್ದವು. ಇದರಿಂದಾಗಿ ಆ ಪ್ರದೇಶದ ಭೂ.ಭಾಗವೆಲ್ಲವೂ ನೇಗಿಲಿನಿಂದ ಕರ್ಷಿಸಿದ ಭೂಮಿಯೋ, ಎಂಬಂತೆ ಕಂಡು ಬರುತ್ತಲಿದ್ದಿತು. ॥೪॥

ಇವೆರಡನ್ನೂ ಪಾರ್ವತಿಯು ನೋಡಿದಳು. ಅವಳಿಗೆ ಬಹಳ ಭಯವಾಯಿತು. ಸಮೀಪದಲ್ಲಿದ್ದ ಒಂದು ಕೋಲನ್ನು ಕೈಗೆ ತೆಗೆದುಕೊಂಡು ಅವನ್ನು ಹೆದರಿಸಿ ಓಡಿಸಲು ಪ್ರಯತ್ನಿಸಿದಳು. ಹೆದರಿ ಓಡಿಹೋಗುವಂತೆ ನಟಿಸಿ, ಒಮ್ಮೆಲೆ ಅವು ಛಾವ

ಯುದ್ಧ್ಯಂತೌ ಪತಿತೌ ಘೋರೌ ಬಾಲಕೋಪರಿ ತಾವುಭೌ ।
ಉರಃಸ್ಥಲಾಭಿಘಾತಾತ್ಸ ಬುಬುಧೇ ಬಾಲಕೋತ್ತಮಃ ॥೬॥

ಕೃತ್ವಾ ಕರ್ಕಶಶಬ್ದಂ ತು ಸಾ ಬಿಭಾಯ ತದಾ ಶಿವಾ ।
ಬಾಲಭಾವೇನ ಹಸ್ತೌ ಸ ಚಾಲಯಾಮಾಸ ಭೀತಿತಃ ॥೭॥

ತದಾಘಾತಾದುಭೌ ನಷ್ಟಜೀವಿತೌ ಪತಿತಾವಧಃ ।
ವಮಂತೌ ರುಧಿರಂ ವಕ್ತ್ರಾದ್ದೃಷ್ಟ್ವಾ ಭ್ರಾಂತಾ ಶಿವಾಭವತ್ ॥೮॥

ಕಿಂಚಿಜ್ಜೀವಿತಶೇಷೌ ತೌ ಬಹಿರ್ನೀತೌ ಗಣೈಸ್ತದಾ ॥

---

ಣೆಯ ಒಳಭಾಗಕ್ಕೆ ಎಂದರೆ ತೊಟ್ಟಿಲಿನ ಮೇಲ್ಭಾಗಕ್ಕೆ ಏರಿ ಹೋದವು. ಮಹಾ ಘೋರರೂಪಿಗಳಾದ ಈ ಇಲಿಗಳು ಅಲ್ಲಿಯೂ ತಮ್ಮ ಯುದ್ಧವನ್ನು ಮುಂದು ವರಿಸಿ ಒಮ್ಮೆಲೇ ಶಿಶುವಿನ ಮೈ ಮೇಲೆ ಹಾರಿಬಿದ್ದು, ಅವನ ಎದೆಯ ಭಾಗವನ್ನೆಲ್ಲ ತಮ್ಮ ಉಗುರು-ಹಲ್ಲುಗಳಿಂದ ಪರಚಿ ಕಡಿದು ಬಿಟ್ಟವು. ಇವುಗಳ ಪರಚುವಿಕೆ ಯಿಂದ ಆ ಬಾಲಕೋತ್ತಮನು ಎಚ್ಚರಗೊಂಡನು. ॥೫-೬॥

ಮಗುವಿಗೆ ಎಚ್ಚರಿಕೆಯಾದೊಡನೆಯೇ ಈ ಇಲಿಗಳನ್ನು ನೋಡಿ ಬಹಳ ಕರ್ಣಕರ್ಕಶ ಶಬ್ದದಿಂದ ಒಮ್ಮೆ ಘಟ್ಟಿಯಾಗಿ ಗರ್ಜಿಸಿತು. ಇದನ್ನು ಕೇಳಿದ ಮೇಲಂತೂ ಪಾರ್ವತಿಗೆ ಪ್ರಾಣಗಳೇ ಹಾರಿಹೋದಂತಾಯಿತು. ಇಷ್ಟರಲ್ಲಿ ಗುಹೇ ಶನು ತನ್ನ ಪುಟ್ಟ ಕೈಗಳನ್ನು ಸಾಮಾನ್ಯ ಮಕ್ಕಳು ಅಲುಗಾಡಿಸುವಂತೆ ಬಡಿ ದಾಡಿದನು. ॥೭॥

ವ್ಯಾಸ! ಇದರಿಂದುಂಟಾದ ಪರಿಣಾಮವನ್ನು ಏನೆಂದು ವರ್ಣಿಸಲಿ? ಬಾಲಕನ ಕೈಗಳ ಏಟುಗಳು ತಗುಲಿದ ಕೂಡಲೇ ಆ ಇಲಿಗಳೆರಡಕ್ಕೂ ಪ್ರಾಣೋ ತ್ಕ್ರಾಂತಿಯೇ ಆದಂತಾಯಿತು. ಒಡನೆಯೇ ಕೆಳಕ್ಕೆ ಬಿದ್ದುಬಿಟ್ಟವು. ಅವುಗಳ ಬಾಯಿಯಿಂದ ರಕ್ತವು ಪ್ರವಾಹದಂತೆ ಹರಿಯಿತು. ಈ ಅದ್ಭುತವನ್ನು ಕಂಡು ಪರಶಿವೆಯು ಭ್ರಮಿಷ್ಠಳಂತೆ ಸುಮ್ಮನೆ ನಿಂತುಬಿಟ್ಟಳು. ॥೮॥

ಇಲಿಗಳು ಇನ್ನೂ ಸತ್ತಿರಲಿಲ್ಲ, ಉಸಿರು ಇನ್ನೂ ಸ್ವಲ್ಪ ಮಟ್ಟಿಗೆ ಆಡುತ್ತ

ನೋಕ್ಷಂ ಜಗ್ಮತುರಾಘಾತಾದ್ಗಣೇಶಕರಸಂಭವಾತ್ ॥೯॥

ತದ್ದೇಹೌ ಪತಿತೌ ಘೋರೌ ದಶಯೋಜನವಿಸ್ತೃತೌ ।
ಕೋಲಾಹಲೋ ಮಹಾನಾಸೀದ್ದೃಷ್ಟ್ವಾ ದೇಹೌ ತಥಾಗತೌ ॥೧೦॥

ಗಣಾನಾಂ ಚ ಸಖೀನಾಂ ಚ ಪಾರ್ವತ್ಯಾ ಸುಮಹಾಂಸ್ತದಾ ।
ವಿಧ್ವಸ್ತಾ ಆಶ್ರಮಾ ವೃಕ್ಷಾಃ ಪರ್ವತಾ ಭುವನಾನಿ ಚ ॥೧೧॥

ಪತದ್ಭ್ಯಾಂ ತಚ್ಛರೀರಾಭ್ಯಾಂ ನಿರ್ಜೀವಾಭ್ಯಾಂ ಮಹಾಂತ್ಯಪಿ ।

---

ಲಿದ್ದಿತು. ಆಗ ಪ್ರಮಥಗಣಗಳು ಆ ಸ್ಥಳಕ್ಕೆ ಬಂದು ಅವೆರಡನ್ನೂ ಮುಕ್ಕರಿಯುತ್ತ ಹೊರಕ್ಕೆ ಹೊತ್ತುಕೊಂಡು ಹೋದರು. ದೇವನ ಕರಸ್ಪರ್ಶದಿಂದ ಅವು ಗತಪ್ರಾಣ ಗಳಾದುದರಿಂದ ಅವಕ್ಕೆ ಸಾಕ್ಷಾನ್ಮುಕ್ತಿ ಸಾಮ್ರಾಜ್ಯವೇ ಲಭಿಸಿಬಿಟ್ಟಿತು. ॥೯॥

ಇಲಿಗಳ ದೇಹಗಳೂ ಚಿಕ್ಕ-ಪುಟ್ಟವಾಗಿರಲಿಲ್ಲ. ಅವು ರಾಕ್ಷಸೀ ಮಾಯೆ ಯಿಂದ ಇಲಿಗಳಾಗಿ ತೋರಿದವು, ಎಂದ ಮೇಲೆ ಎಷ್ಟು ಭಯಂಕರವಾಗಿದ್ದಿರ ಬಹುದು ? ವ್ಯಾಸ ! ನೀನೇ ವಿಚಾರಮಾಡು. ಒಂದೊಂದರ ಶರೀರವೂ ಹತ್ತು ಹತ್ತು ಯೋಜನಗಳಷ್ಟು ವಿಸ್ತೃತವಾಗಿದ್ದವು. ಮತ್ತು ಬಹಳ ಭಯವನ್ನುಂಟು ಮಾಡುತ್ತಿದ್ದವು. ಇಷ್ಟು ದೊಡ್ಡ ದೇಹಗಳು ಮೃತವಾಗಿ ಬಿದ್ದುದನ್ನು ಕಂಡು ತ್ರಿಸಂಧ್ಯಾಕ್ಷೇತ್ರದಲ್ಲಿ ದೊಡ್ಡ ಕೋಲಾಹಲವೇ ಉಂಟಾಯಿತು. ॥೧೦॥

ಪ್ರಮಥಗಣಗಳು ಆ ದೇಹಗಳನ್ನು ಹೊತ್ತೊಯ್ದುವರು, ಪಾರ್ವತೀದೇವಿ ಹಾಗೂ ಅವಳ ಸಖೀಜನ ಇವರು ಬಹಳ ಸಮೀಪದಲ್ಲಿ ಅವನ್ನು ನೋಡಿದವರು' ಎಂದ ಮೇಲೆ ಅವರಿಗೆಲ್ಲ ಎಷ್ಟು ಭಯ, ಬೇಸರಗಳುಂಟಾಗಿರಬಹುದು? ಆ ದೇಹ ಗಳು ಉರುಳಿ ಕೆಳಕ್ಕೆ ಬೀಳುವಾಗ ಅನೇಕ ಆಶ್ರಮಗಳು, ಮಹಾ ಮಹಾ ವೃಕ್ಷ ಗಳು, ಪರ್ವತಗಳು ಎಲ್ಲವೂ ಪುಡಿಪುಡಿಯಾದವು. ಇವುಗಳ ಚೂರು ಭೂಮಿಯ ಮೇಲೆಲ್ಲ ಹರಡಿಬಿಟ್ಟಿತು. ॥೧೧॥

ಇವು ನಿರ್ಜೀವವಾಗಿರುವಾಗಲೇ ಇಷ್ಟು ಅನಾಹುತ ಉಂಟಾಯಿತಲ್ಲ,

ಛಿತ್ವಾ ಛಿತ್ವಾ ತು ತದ್ದೇಹೌ ಗಣಾ ನಿಸ್ಸ್ಯಾರ್ಬಹಿಸ್ತದಾ ||೧೨||

ಪಾರ್ವತೀ ಭಯವಿತ್ರಸ್ತಾ ಬಾಲಮಾದಾಯ ಸತ್ವರಮ್ |
ಪಾಯಯಾಮಾಸ ಸ್ನೇಹೇನ ಸ್ತನ್ಯಂ ಬಾಲಕವತ್ಸಲಾ ||೧೩||

ಋಷಿಪತ್ನ್ಯಸ್ಸಮಾಯಾತಾ ಪಾರ್ವತೀಮೂಚಿರೇಽನಘಾಃ |

---

ಇವಕ್ಕೇನಾದರೂ ಜೀವಕಳೆ ಇದ್ದಿದ್ದರೆ ಇನ್ನೆಷ್ಟು ಹಾವಳಿ ಆಗುತ್ತಲಿದ್ದಿತೋ ಕಂಡವರಾರು? ಅದಿರಲಿ, ಪ್ರಮಥಗಣಗಳಲ್ಲಿದ್ದವರು ಎಷ್ಟೇ ಸ-ಶಕ್ತರಾಗಿದ್ದಾಗ್ಯೂ ಇಲಿಗಳ ರೂಪದ ರಾಕ್ಷಸರ ಕಳೇಬರಗಳನ್ನು ಇದ್ದಂತೆಯೇ ಹೊತ್ತೊಯ್ಯಲು ಸಾಧ್ಯವಾಗಲಿಲ್ಲ. ಆ ದೇಹಗಳನ್ನು ತುಂಡು-ತುಂಡಾಗಿ ಕತ್ತರಿಸಿ, ಆ ಚೂರುಗಳನ್ನೂ ಸಹ ಮುಕ್ಕರಿಯುತ್ತಲೇ ಸಾಗಿಸಬೇಕಾಗಿ ಬಂದಿತು, ಅಂತೂ ಗಣಗಳು ಸಾಹಸದಿಂದ ಆ ದೇಹಗಳನ್ನು ಹೊರಕ್ಕೆ ಸಾಗಿಸಿ, ಕೃತಕೃತ್ಯರಾದರು. ||೧೨||

ಪಾರ್ವತಿಯು ಈ ಅಪ್ಪೂ ದೃಶ್ಯವನ್ನೆಲ್ಲ ನೋಡಿ ಭಯದಿಂದ ನ್ಮೈ ನಡುಗಿ ಹೋದಳು. ರಾಕ್ಷಸೀಶವಗಳೆಲ್ಲ ಹೊರಕ್ಕೆ ಸಾಗಿದ ಬಳಿಕ ದೇವಿಗೆ ಮಗುವಿನ ಮೇಲೆ ಲಕ್ಷ್ಯ ಬಂದಿತು. ಓಡಿ ಹೋಗಿ, ಕೂಸನ್ನು ಎತ್ತಿಕೊಂಡು ಎದೆಗವಚಿಕೊಂಡಳು. ಮಗುವಿನ ವಿಷಯದಲ್ಲಿ ಬಹಳ ಕಳವಳ ಹಾಗೂ ವಿಶ್ವಾಸಗಳು ಒಮ್ಮೆಲೇ ಉಕ್ಕಿ ಬಂದವು. ಸ್ನೇಹಾತಿರೇಕದಿಂದ ಬಾಲಕನಿಗೆ ಸ್ತನಪಾನವನ್ನು ಮಾಡಿಸಿದಳು. ||೧೩||

ಇಲಿಗಳ ಕಾದಾಟದ ಈ ಸುದ್ದಿಯನ್ನು ಕೇಳಿ ಶಿಶುವಿನ ಯೋಗ-ಕ್ಷೇಮವನ್ನು ವಿಚಾರಿಸಲು ಆಶ್ರಮವಾಸಿಗಳಾದ ಋಷಿರಮಣಿಯರೆಲ್ಲ ಧಾವಿಸಿ ಪಾರ್ವತಿಯ ಅಂತಃಪುರಕ್ಕೆ ಬಂದಿದ್ದರು. ಬಾಲಕನು ಇಲಿಗಳನ್ನು ಕೊಂದು ಸುರಕ್ಷಿತವಾಗಿ ಇರುವುದನ್ನು ಕಂಡು ಪರಮ ಪತಿವ್ರತೆಯರೂ, ಪಾಪವನ್ನರಿಯದವರೂ ಆದ ಅವರಿಗೂ ಬಹಳ ಸಂತೋಷ ಉಂಟಾಯಿತು. ಆಗ ಪಾರ್ವತೀ ದೇವಿಯನ್ನು ಕುರಿತು ಹೀಗೆಂದು ಮಾತನಾಡಿ ಸಮಾಧಾನಪಡಿಸಿದರು.

**ಋಷಿಪತ್ನ್ಯ ಊಚುಃ :**

**ಪುಣ್ಯಂ ಮಹತ್ತು ತೇ ಗೌರಿ ! ಯೇನ ವಿಘ್ನಂ ವಿನಶ್ಯತಿ ||೧೪||**

**ದ್ವಿ-ಮಾಸಿಕೇನ ಬಾಲೇನ ಹತೌ ದುಷ್ಟೌ ಮಹಾಸುರೌ |**
**ಅಗ್ರೇ ತ್ರಿ-ಭುವನೇಽನೇನ ಸದೃಶೋ ನ ಭವಿಷ್ಯತಿ ||೧೫||**

**ಮಾ ತಂ ರಾಕ್ಷಸಭೂರತ್ರ ಯತ್ನಃ ಕಾರ್ಯಃ ಶಿಶಾವಿಹ |**
**ನೇಷ್ಯಂತಿ ರಾಕ್ಷಸಾ ಗುಪ್ತಾ ಅಸುರಾ ಮಾಯಿನಃ ಪರಮ್ ||೧೬||**

---

ಋಷಿಪತ್ನಿಯರು :—

ದೇವಿ, ಗೌರಿ ! ನಿನ್ನ ಹೊಟ್ಟೆಯ ಪುಣ್ಯ ಬಹಳ ದೊಡ್ಡದಮ್ಮ ! ಅದರ ಮಹಿಮೆಯಿಂದಲೇ ವಿಘ್ನಗಳು ಒಂದರ ಮೇಲೊಂದರಂತೆ ಬಂದರೂ, ಎಲ್ಲವೂ ಸುಲಭವಾಗಿ ನಶಿಸಿಹೋಗುತ್ತಲಿವೆ. ||೧೪||

ನೀನೇ ವಿಚಾರಮಾಡಿ ನೋಡು, ನಾವೇನೂ ಮುಖಸ್ತುತಿಯನ್ನು ಮಾಡುತ್ತಲಿಲ್ಲ. ಎರಡು ತಿಂಗಳ ಹಸುಗೂಸು, ಮಹಾ ಬಲಿಷ್ಠರಾಗಿದ್ದ ಅಂತಹ ಅಸುರ ವೀರರನ್ನು ಸ್ವಲ್ಪವೂ ಆಯಾಸವಿಲ್ಲದೆ ಕೊಲ್ಲುವುದೆಂದರೇನು ಹುಡುಗಾಟಿಗೆಯ ಮಾತೇ ? ಇವನ್ನೇ ಬಹಳ ಹೆಚ್ಚೆಂದು ಭಾವಿಸಬೇಡ, ಇವನು ಅಭಿವೃದ್ಧಿಸ್ಥಿತಿಗೆ ಬಂದ ಬಳಿಕ, ಎಂತೆಂತಹ ಅಮೋಘ ಸಾಹಸ ಕಲಸಗಳನ್ನು ಮಾಡುವನೋ ನೋಡುವೆಯಂತೆ. ಇವನು ತಾರುಣ್ಯದಶೆಗೆ ಬಂದಾಗ ಇವನಿಗೆ ಎದುರು ನಿಲ್ಲುವವರೇ ಯಾರೂ ಇಲ್ಲದಂತಾಗುವರು. ತಿಳಿಯಿತೇ ? ||೧೫||

ಇನ್ನೊಂದಂಶವನ್ನು ನೀನು ಗಮನಿಸಬೇಕಾದುದು. ಈ ವಿಷಯದಲ್ಲಿ ಮಾತ್ರ ಸ್ವಲ್ಪವೂ ಅಜಾಗರೂಕಳಾಗಿರಬೇಡ, ಈ ಆಶ್ರಮಭೂಮಿಯು ದುಷ್ಟರಾದ ರಾಕ್ಷಸರಿಂದ ತುಂಬಿಹೋಗಿದೆ. ಇವನನ್ನು ಪ್ರಯತ್ನಪೂರ್ವಕವಾಗಿ ಸಂರಕ್ಷಿಸು, ರಾಕ್ಷಸರು ಮಹಾ ಮಾಯಾವಿಗಳು. ಗುಪ್ತರೂಪದಿಂದ ಇಲ್ಲೆಲ್ಲ ಸಂಚರಿಸುತ್ತಲೇ ಇರುವರು, ಯಾವ ಘಳಿಗೆಗೆ ಎಂತಹ ರೂಪದಿಂದ ಬಂದು ಬಾಲಕನನ್ನು ಅಪಹರಿಸಿಕೊಂಡು ಹೋಗುವರೋ, ಹೇಳಲಿಕ್ಕೇ ಬರುವುದಿಲ್ಲ. ||೧೬||

ಕ ಉವಾಚ :—

ಏವಮುಕ್ತ್ವಾ ಗತಾ ದೇವ್ಯೋ ಗಣಾಸ್ತಾಂ ತು ಸಮೂಚಿರೇ ।

ಗಣಾ ಊಚುಃ ;—

ಅಯಂ ತು ತೇ ಶಿವೇ ! ಬಾಲೋ ಹನಿಷ್ಯತಿ ದಿನೇ ದಿನೇ　　॥೧೭॥

ಅಸ್ಮಾಭಿಸ್ತು ಕಿಯತ್ಕಾಲಂ ಬಹಿಃಕಾರ್ಯಾ ಹತಾಸುರಾಃ ? ।

ಬ್ರಹ್ಮಾ :—

ಋಷಿಪತ್ನಿಯರು ಗಿರಿಜೆಯನ್ನು ಹೀಗೆ ಎಚ್ಚರಿಸಿ, ತಮ್ಮ ತಮ್ಮ ಆಶ್ರಮಗಳಿಗೆ ಹೊರಟು ಹೋದರು. ಮನೆಯ ಅಂಗಳದಲ್ಲಿ ಚಲ್ಲಾಪಿಲ್ಲಿಯಾಗಿ ಬಿದ್ದಿದ್ದ ರಾಕ್ಷಸರಿಬ್ಬರ ದೇಹಗಳನ್ನೂ ಗಣಗಳು ಹೊರಕ್ಕೆ ಸಾಗಿಸಿದವು. ರಾಕ್ಷಸರ ಶವಗಳನ್ನು ಹೊತ್ತು ಹೊತ್ತು ಮೈ ಹುಳಿತು ಹೋದ ಗಣಗಳು ಪಾರ್ವತೀ ದೇವಿಯನ್ನು ಕುರಿತು ತಮ್ಮ ಕಷ್ಟದಶೆಯನ್ನು ಹೀಗೆಂದು ಹೇಳಿಕೊಂಡವು.

ಗಣಗಳು :—

ತಾಯೆ, ಶಿವೆ ! ನಿನ್ನ ಈ ಮಗನು ದಿನ ದಿನಕ್ಕೂ ರಾಕ್ಷಸರನ್ನು ಕೊಲ್ಲಲಾರಂಭಿಸಿರುವನು. ಈಗಾಗಲೇ ಮೂರು ಜನರಾದರು. ಇನ್ನು ಮುಂದೆ ಎಷ್ಟು ಮಂದಿಯನ್ನು ಕೊಲ್ಲುವನೋ, ತಿಳಿಯದು. ॥೧೭॥

ಹೀಗೆಯೇ ಮುಂದುವರಿಯುವುದಾದರೆ, ಸಾಯುವ ಈ ರಾಕ್ಷಸರನ್ನು ನಾವು ಎಷ್ಟು ಕಾಲ ಹೊತ್ತು ಹೊತ್ತು ಹೊರಕ್ಕೆ ಸಾಗಿಸೋಣ ? ಈಗಾಗಲೇ ನಮಗೆ ಸಾಕಾಗಿ ಹೋಗಿದೆ. ಮುಂದೇನು ಗತಿ ? ತಾಯೆ !

ಕ ಉವಾಚ :—

ತತಸ್ತು ಮುನಯೋ ಜಗ್ಮೂ ರಕ್ಷಾಂ ಚಕ್ರುರಥಾರ್ಭಕೇ ||೧೮||

ದದೌ ದಾನಾನಿ ತೇಭ್ಯಸ್ಸಾ ವಿಸಸರ್ಜ ಪ್ರಣಮ್ಯ ತಾನ್ ।

ತತಸ್ತೃತೀಯೇ ಮಾಸೇ ತು ಸ್ವ-ಸ್ವಕಾರ್ಯರತೇ ಜನೇ ||೧೯||

ಮಧ್ಯಾಹ್ನೇ ಪಾರ್ವತೀ ಬಾಲಂ ಗೃಹೀತ್ವಾ ಮಂಚಕೇಽಸ್ವಪತ್ ।

ತತ್ಪರಿಚಾರಿಕಾಃ ಸುಪ್ತಾಃ ಕಾಶ್ಚಿತ್ಕಾರ್ಯಾಂತರೇ ಸ್ಥಿತಾಃ ||೨೦||

---

ಇಷ್ಟರಲ್ಲಿ ಆಶ್ರಮವಾಸಿಗಳಾದ ಮುನಿವರ್ಯರು ಆ ಸ್ಥಳಕ್ಕೆ ಬಂದು ಮಗುವಿಗೆ ಯಾವ ಬಗೆಯ ಪೀಡೆಯೂ ಉಂಟಾಗದಂತೆ ಇರಲು ಒಂದು ರಕ್ಷಾಯಂತ್ರವನ್ನು ನಿರ್ಮಿಸಿ, ಅದನ್ನು 'ರಕ್ಷೋಘ್ನ' ಮಹಾ ಮಂತ್ರಗಳಿಂದ ಅಭಿಮಂತ್ರಿಸಿ, ಕೊರಳಿಗೆ ಬಂಧಿಸಿದರು. ||೧೮||

ಮುನಿವರರಿಗೆಲ್ಲ ಪಾರ್ವತಿಯು ದಾನಗಳನ್ನು ಕೊಟ್ಟು ವಿಶೇಷವಾಗಿ ಗೌರವಿಸಿದಳು, ಅನಂತರ ಅವರಿಗೆ ಭಕ್ತಿಯಿಂದ ಪ್ರಣಮಿಸಿ, ಅವರನ್ನು ಅವರವರ ಆಶ್ರಮಗಳಿಗೆ ಕಳಿಸಿಕೊಟ್ಟಳು. ಎರಡನೆಯ ತಿಂಗಳು ಕಳೆದು, ಶಿಶುವಿಗೆ ಮೂರನೆಯ ತಿಂಗಳು ಆರಂಭವಾಯಿತು. ರಕ್ಷೆ ಕಟ್ಟಿದ್ದರಿಂದ ಶಿಶುವಿಗೆ ಮತ್ತಾವ ಭಯವೂ ಒದಗಲಾರದೆಂಬ ನಂಬುಗೆಯು ಎಲ್ಲರಿಗೂ ಉಂಟಾಗಿದ್ದುದರಿಂದ ಅವರವರ ಕೆಲಸಗಳಲ್ಲಿ ಜನರೆಲ್ಲರೂ ನಿರತರಾಗಿದ್ದರು. ||೧೯||

ಒಂದು ದಿವಸ ಮಧ್ಯಾಹ್ನದ ಸಮಯ. ಗೌರಿಯು ಭೋಜನವನ್ನು ಮುಗಿಸಿಕೊಂಡು ಮಗುವಿನೊಡನೆ ಮಂಚದ ಮೇಲೆ ಮಲಗಿ ನಿದ್ರಾಸಕ್ತಳಾದಳು. ಅವಳ ಪರಿಚಾರಿಕೆಯರು ಹಗಲಿರುಳೂ ದುಡಿದು ದುಡಿದು ಶ್ರಮಿಸಿದ್ದರಾದುದರಿಂದ ಅವರೂ ಸಹ ವಿಶ್ರಾಂತಿಯನ್ನು ಪಡೆಯಲಿಚ್ಛಿಸಿ ಮಲಗಿಬಿಟ್ಟರು. ಮತ್ತೆ ಕೆಲವು ಜನ ಪರಿಚಾರಿಕೆಯರು ಬೇರೆ ಬೇರೆ ಕೆಲಸಗಳಲ್ಲಿ ಆಸಕ್ತರಾಗಿದ್ದರು. ||೨೦||

ಚಕ್ರುಃ ಕಾಶ್ಚಿದ್ದ್ವಾರಿ ವಾರ್ತಾಮೇತಸ್ಮಿನ್ನಂತರೇಽಸುರಃ ।
'ಕ್ರೂರಾ'ಖ್ಯ ಶ್ಚೋತುವೇಷೇಣ ವಿವೇಶ ಗಿರಿಜಾಲಯಮ್ ॥೨೧॥

ವಂಚಯಿತ್ವಾ ಲೋಕದೃಷ್ಟಿಂ ಶ್ವೇವ ದುಷ್ಟೋ ಮಹಾಬಲಃ ।
ಸ ನಿರೀಕ್ಷ್ಯ ಶಿವಾಂ ಸುಪ್ತಾಂ ಜಹೃಷೇ ಮನಸಾ ತದಾ ॥೨೨॥

ಉಳಿದ ...ವಿಕೆಯರು ಸೇವಕ ವರ್ಗದಲ್ಲಿ ತಮಗೆ ಬೇಕಾದವರೊಡನೆ ಹರಟೆಯನ್ನು ಕೊಚ್ಚುತ್ತ, ಬಾಗಿಲಲ್ಲಿ ಕುಳಿತಿದ್ದರು. ಇಂತಹ ಅಜಾಗರೂಕತೆಯ ಸನ್ನಿವೇಶವನ್ನೇ ಅಹರ್ನಿಶಿ ಕಾಯುತ್ತ ಕುಳಿತಿದ್ದ 'ಕ್ರೂರ' ಎಂಬ ರಾಕ್ಷಸವೀರನು ತನ್ನೊಂದು ಬೆಕ್ಕಿನ ಆಕೃತಿಯನ್ನು ಸ್ವೀಕರಿಸಿಕೊಂಡು ಪರಶಿವೆಯ ಆಲಯವನ್ನು ಪ್ರವೇಶಿಸಿದನು. ಬೆಕ್ಕು ಸಾಮಾನ್ಯವಾಗಿ ಎಲ್ಲರ ಮನೆಗಳಲ್ಲೂ ಸ್ವತಂತ್ರಿಸಿ ಸಂಚರಿಸುವ ಪ್ರಾಣಿಯಾದುದರಿಂದ ಜನರು ಇದು ಒಳಕ್ಕೆ ಹೋಗುವುದನ್ನು ಕಂಡರೂ ದುರ್ಲಕ್ಷಿಸಿಬಿಟ್ಟರು. ॥೨೧॥

ಕ್ರೂರನು ಕಾವಲುಗಾರರ ಕಣ್ಣುಗಳನ್ನೆಲ್ಲ ತಪ್ಪಿಸಿ, ಅವರಿಗೆ ತನ್ನ ಸ್ವರೂಪವನ್ನು ತಿಳಿಯಗೊಡದೆ, ನಾಯಿಯಂತೆ ಒಳಕ್ಕೆ ನುಗ್ಗಿ ನಡೆದನು. ದುಷ್ಟಾತ್ಮನಾದ ಆ ರಾಕ್ಷಸನು ಮಾಯಾವಿದ್ಯೆಯಲ್ಲಿ ಇತರ ಎಲ್ಲ ರಾಕ್ಷಸರಿಗಿಂತಲೂ ಬಹಳ ಪ್ರಬಲನಾಗಿದ್ದನು ದೇಹಸಾಮರ್ಥ್ಯಕ್ಕೂ ಸಹ ಯಾವ ಕೊರತೆಯೂ ಇರಲಿಲ್ಲ. ಒಳಗೆ ಹೋದನಂತರ ಎಲ್ಲೆಡೆ ದೃಷ್ಟಿಯನ್ನು ಬೀರಿ, ಸೂಕ್ಷ್ಮವಾಗಿ ಪರೀಕ್ಷಿಸಿ ಒಮ್ಮೆ ಸಿಸನು. ಎಲ್ಲರೂ ನಿದ್ರಿಸಿದ್ದರು. ಅವರಿಗೆ ಬೇಗನೆ ಎಚ್ಚರವಾಗುವಂತೆಯೂ ಇರಲಿಲ್ಲ. ಗಿರಿಜಾಮಾತೆಯೂ ಸಹ ಗಾಢವಾದ ನಿದ್ರೆಯಲ್ಲಿ ಆಸಕ್ತಳಾಗಿದ್ದಳು. ಇದನ್ನು ನೋಡಿದ ಮೇಲೆ ಕ್ರೂರನಿಗೆ ಬಹಳಮಟ್ಟಿಗೆ ಸಮಾಧಾನವೆನಿಸಿತು. ತನ್ನ ಕಾರ್ಯವು ಸುಲಭವಾಗಿ ಕೈಗೂಡಿತೆಂದೇ ಬಗೆದು, ಹರ್ಷೋನ್ಮತ್ತನಾದನು. ಮತ್ತು ತನ್ನ ಮನಸ್ಸಿನಲ್ಲೇ ಹೀಗೆಂದು ಚಿಂತಿಸಿದನು. ॥೨೨॥

ವಿವರಣೆಗೆ ಪರಿಶಿಷ್ಟವನ್ನು ನೋಡಿರಿ.

**ಕ್ರೂರ ಉವಾಚ :—**

**ಯಾವನ್ನಿದ್ರಾತಿ ಗಿರಿಜಾ ತಾವನ್ನೇಷ್ಯೇ ಶಿಶುಂ ತ್ವಹಮ್ ।**
**ಕ ಉವಾಚ :—**
**ಲಾಘವಾನ್ಮಂಚಕಾರೂಢೋ ಬಾಲಮಾದಾಯ ಮಸ್ತಕೇ ॥೨೩॥**

**ಮಂಚಕಾಧಃ ಪಪಾತಾಶು ಚುಕ್ರೋಶ ಬಾಲಕಸ್ತದಾ ।**
**ತತಃ ಪ್ರಬುದ್ಧಾ ಗಿರಿಜಾ ಬಿಡಾಲಾಸ್ಯಗತಂ ಶಿಶುಮ್ ॥೨೪॥**

**ನಿರೀಕ್ಷ್ಯ ‘ಧಾವ, ಧಾವೇ’ತಿ ಪ್ರಾಕ್ರೋಶದ್ಭಯವಿಹ್ವಲಾ ।**

---

ಕ್ರೂರ :—

ಗಿರಿಜೆಯು ನಿದ್ರೆಯಿಂದ ಎಚ್ಚರಗೊಳ್ಳುವುದರ ಒಳಗಾಗಿಯೇ ಈ ಶಿಶುವನ್ನು ಹರಣಮಾಡಿಬಿಡುವೆನು-

ಬ್ರಹ್ಮ :—

ಎಂದು ನುಡಿದವನೇ ಸ್ವಲ್ಪ ಸಹ ಸದ್ದಾಗದ ರೀತಿಯಲ್ಲಿ ಪಾರ್ವತಿಯು ಮಲಗಿದ್ದ ಮಂಚವನ್ನು ಏರಿದನು. ಶಿಶು ಪಾರ್ವತಿಯ ಪಕ್ಕದಲ್ಲೇ ಮಲಗಿದ್ದುದರಿಂದ ಅವಳಿಗೆ ಎಚ್ಚರವಾಗದಂತೆ ಮಗುವಿನ ತಲೆಯನ್ನು ಭದ್ರವಾಗಿ ಹಿಡಿದುಕೊಂಡುಬಿಟ್ಟನು. ॥೨೩॥

ಎಲ್ಲಿ ಗಿರಿಜೆಗೆ ಎಚ್ಚರವಾಗಿ ಹೋಗುವುದೋ ಎಂಬ ಹೆದರಿಕೆಯಿಂದ ರಾಕ್ಷಸನ ಎದೆ ಡವಗುಟ್ಟತೊಡಗಿತು. ಒಮ್ಮೆಲೇ ಮಂಚದಿಂದ ಮಗುವಿನೊಡನೆ ಕೆಳಕ್ಕೆ ಧುಮುಕಿದನು. ಬೆಕ್ಕಿನ ರೂಪದ ಕ್ರೂರನು ಧುಮುಕಿದ ರಭಸಕ್ಕೆ ಶಿಶು ಬಹಳ ಘಟ್ಟಿ ಧ್ವನಿಯಿಂದ ಆಕ್ರೋಶಮಾಡಲಾರಂಭಿಸಿತು. ಮಗು ಅತ್ತ ಧ್ವನಿಯು ದೇವಿಯನ್ನು ಎಚ್ಚರಗೊಳಿಸಿತು. ಗಾಬರಿಯಿಂದ ಎದ್ದು ಸುತ್ತಲೂ ನೋಡಿದಳು. ತನ್ನ ಮಗನು ಬೆಕ್ಕಿನ ಬಾಯಿಗೆ ಸಿಕ್ಕಿರುವುದು ಕಂಡುಬಂದಿತು. ॥೨೪॥

ಇದನ್ನು ನೋಡಿದ ಕೂಡಲೇ ಪಾರ್ವತಿಯು ತನ್ನ ಜನರನ್ನು ಸಂಬೋಧಿಸಿ-

ನಿಮೀಲ್ಯ ನಯನೇ ಮೂರ್ಛಾಮಗಾದ್ದುಃಖೇನ ಭೀಷಿತಾ ||೨೫||

ಕಂಠೇ ದಶತಿ ಯಾವತ್ಸ ತಾವದ್ಬಾಲೋ ದಧಾರ ತಮ್ |
ಕರ್ಣಯೋರುಭಯೋರ್ದೋರ್ಭ್ಯಾಂ ಸ್ವಭಾವಾತ್ಪಾದತಾಡನಾತ್ ||೨೬||

ನ್ಯಪಾತಯಚ್ಛಿರೋ ದೇಶೇ ಮಂಚಕಾಧೋ ಮಹಾಸುರಮ್ |
ಸ ಭಿನ್ನಹೃದಯೋಽಧಾವದ್ಬಹಿರ್ಗತ್ವಾ ಪಪಾತ ಹ ||೨೭||

---

'ಓಡಿ ಬನ್ನಿ, ಓಡಿ ಬನ್ನಿ' ಎಂದು ಅರಚುತ್ತ, ಕೂಗಿ ಕರೆದಳು. ಅವಳನ್ನು ಹೆದರಿಕೆಯು ತಾನೇ ತಾನಾಗಿ ಆವರಿಸಿಬಿಟ್ಟಿದ್ದಿತು. ದುಃಖ, ಭಯ ಇವೆರಡೂ ಒಮ್ಮೆಲೇ ತಮ್ಮ ಪ್ರಭಾವವನ್ನು ಅವಳ ಮೇಲೆ ಬೀರಿದ್ದರಿಂದ ಕಣ್ಣುಗಳೆರಡನ್ನೂ ಭದ್ರವಾಗಿ ಮುಚ್ಚಿಬಿಟ್ಟಳು. ಇಷ್ಟರಲ್ಲಿ ಅವಳಿಗೆ ಪ್ರಬಲವಾದ ಮೂರ್ಛೆಯೇ ಬಂದುಬಿಟ್ಟಿತು. ||೨೫||

ಕ್ರೂರ ದೈತ್ಯನು ಇನ್ನೇನು, ಮಗುವಿನ ಕತ್ತನ್ನು ಕಚ್ಚಿಬಿಡಬೇಕು. ಎನ್ನುವಷ್ಟರಲ್ಲಿ ಬಾಲಕ, ಗುಣೇಶನು ಅದರ ಎರಡು ಕಿವಿಗಳನ್ನೂ ಭದ್ರವಾಗಿ ಹಿಡಿದು ಸೆಳೆದು ಬಿಟ್ಟನು. ಮತ್ತು ಮಕ್ಕಳು ಸ್ವಾಭಾವಿಕವಾಗಿ ಕೈ-ಕಾಲುಗಳನ್ನು ಬಡಿಯುವಂತೆ ಇವನೂ ತನ್ನ ಕಾಲುಗಳನ್ನು ಬಡಿಯುತ್ತ ಆ ಬೆಕ್ಕಿನರೂಪೀರಾಕ್ಷಸನ ಎದೆಗೆ ಝಾಡಿಸಿ ಒದ್ದನು, ||೨೬||

ಒದೆದುದೂ ಅಲ್ಲದೇ, ಅವನು ಮಂಚದಿಂದ ತಲೆಕೆಳಗಾಗಿ ಒಮ್ಮೆಲೇ ಉರುಳುವಂತೆ ಮಾಡಿದನು. ಇವನು ಕೇವಲ ಬಾಲಕ, ಅವನೋ ಬಲಿಷ್ಠನಾದ ಅಸುರ. ಆದರೂ ಬಾಲಕನು ಬೆಕ್ಕನ್ನು ಉರುಳಿಸಿದ ಈ ಘಟನೆಯು ಎಲ್ಲರನ್ನೂ ಆಶ್ಚರ್ಯಗೊಳಿಸುತ್ತಲಿದ್ದಿತು. ರಾಕ್ಷಸನು ಕೆಳಕ್ಕೆ ಬಿದ್ದೊಡನೆಯೇ ಅವನ ಎದೆಯ ಭಾಗ ಸೀಳಿಹೋಯಿತು. ಹೊರಕ್ಕೆ ಓಡಿ ನಡೆದನು. ಅಷ್ಟರಲ್ಲೇ ಅವನ ದೇಹದ ತ್ರಾಣವು ಉಡುಗಿ ಹೋದುದರಿಂದ ಬಾಗಿಲಲ್ಲೇ ಬಿದ್ದುಬಿಟ್ಟನು. ||೨೭||

ಮಹಾವಾತೇನ ವೃಕ್ಷಾತ್ತು ಪಕ್ವಂ ಕಿಂಚಿತ್ಫಲಂ ಯಥಾ ।
ದುರ್ಗಂಧಂ ರುಧಿರಂ ತಸ್ಯ ಪತಿತಂ ಧರಣೀತಲೇ ॥೨೮॥

ಆಚ್ಛಾದನ್ನಾಸಿಕಾಂ ಸಾ ತು ಗಿರಿಜಾ ಶೋಕವಿಹ್ವಲಾ ।
ಆದಾಯ ತಸ್ಮೈ ಪ್ರಾದಾತ್ಸಾ ಸ್ತನಪಾನಂ ಶಿಶೋಸ್ತದಾ ॥೨೯॥

ಆಗತಾ ಬಾಲಶಬ್ದೇನ ಸರ್ವಾಸ್ತಾಃ ಪರಿಚಾರಿಕಾಃ ।
ಸ್ಪೃಶಂತಿ ಸ್ಮ ತದಂಗಾನಿ ಪ್ರತ್ಯೇಕಂ ಕೌತುಕಾನ್ವಿತಾಃ ॥೩೦॥

ಬಿರುಗಾಳಿಯ ಹೊಡೆತದಿಂದ ವೃಕ್ಷವು ಅಲ್ಲಾಡಿ, ಅದರಲ್ಲಿದ್ದ ಪಕ್ವಫಲವು ನೆಲಕ್ಕೆ ಉದುರಿಬಿದ್ದಂತೆ ಆಯಿತು. ಅವನು ಬಿದ್ದ ಹೊಡೆತಕ್ಕೆ ಅವನ ರಕ್ತವು ಸುತ್ತಲೂ ಚಿಮ್ಮಿ ಆ ಪ್ರದೇಶವನ್ನೆಲ್ಲ ದುರ್ಗಂಧಮಯವನ್ನಾಗಿ ಮಾಡಿತು. ಭೂಮಿಯು ಅವನ ರಕ್ತಾಭಿಷೇಕದಿಂದ ಕೆಂಪು ವರ್ಣವುಳ್ಳದ್ದಾಯಿತು. ॥೨೮॥

ಇದನ್ನು ನೋಡಿದ ಗಿರಿಜೆಯು ಬಹಳ ಅಸಹ್ಯಗೊಂಡಳು. ಎಲ್ಲರಂತೆ ಇವಳೂ ತನ್ನ ಮೂಗನ್ನು ಭದ್ರವಾಗಿ ಕೈಗಳಿಂದ ಮುಚ್ಚಿಕೊಂಡಳು. ತನ್ನ ಮಗನ ಗತಿ ಏನಾಗಿ ಹೋಗಿದೆಯೋ ಎಂಬ ದುಃಖವು ಅವಳನ್ನಾವರಿಸಿದ್ದಿತು- ಮೊದಲು ಮಗುವನ್ನೆತ್ತಿಕೊಂಡಳು. ದೈವಯೋಗದಿಂದ ಯಾವ ಅಪಾಯಕ್ಕೂ ಶಿಶು ಸಿಲುಕಿರಲಿಲ್ಲ. ಇವಳು ಹೆದರಿದ ಮಾತ್ರಕ್ಕೆ 'ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚ' ಎಂಬಂತಹ ಸ್ವರೂಪವುಳ್ಳ ದೇವನಿಗೆ ಯಾವುದರಿಂದಲಾದರೂ ಧಕ್ಕೆಯುಂಟಾದೀತೇ ? ಮಾತೃಹೃದಯ, ಶಿಶುವನ್ನೆತ್ತಿಕೊಂಡು ಅದಕ್ಕೆ ಸ್ತನ್ಯವನ್ನು ಪಾನಮಾಡಿಸಿದಳು. ॥೨೯॥

ಮಗುವಿನ ಚೀತ್ಕಾರ, ರಾಕ್ಷಸನ ಪತನ, ಗೌರಿಯು ಹೌಹಾರಿ ಕೂಗಿದುದು ಇವುಗಳಿಂದುಂಟಾದ ಶಬ್ದದಿಂದ ಎಲ್ಲ ಪರಿಚಾರಿಕೆಯರೂ ಎಚ್ಚೆತ್ತು ಆ ಸ್ಥಳಕ್ಕೆ ಓಡಿ ಬಂದು ನೋಡಿದರು. ವಿದ್ಯಮಾನವೆಲ್ಲವೂ ಕ್ಷಣಾರ್ಧದಲ್ಲೇ ಅವರಿಗೆ ಅವಗತವಾಯಿತು. ಮಗುವಿಗೆ ಎಲ್ಲಿಲ್ಲ ಪೆಟ್ಟು ತಗುಲಿದೆಯೋ ಎಂದು ಘಾಬರಿಯಿಂದ

ಅಜರಾಮರತಾಮಸ್ಯ ನಿಶ್ಚಿತ್ಯ ಮನಸಾ ತು ತಾಃ ।
ಸ ತು ದೀರ್ಘೋ ಬಿಡಾಲೋಽಭೂತ್ತದಾ ದ್ವಾದಶಯೋಜನಮ್ ॥೩೦॥

ಕಿಯತ್ಯಶ್ಚೂರ್ಣಿತಾಸ್ಸಖ್ಯಃ ಕಿಯತ್ಯಃ ಪರಿಚಾರಿಕಾಃ ।
ಗಣಾಶ್ಚೈವ ಸಮಾಯಾತಾ ಓತುಂ ದೃಷ್ಟ್ವಾ ತಥಾವಿಧಮ್ ॥೩೨॥

ಆಶ್ಚರ್ಯಂ ಪರಮಂ ಚಕ್ರುರ್ಬಾಲಕಸ್ಯ ಪರಾಕ್ರಮೇ ।

---

ಅದರ ಮೈ-ಕೈಗಳನ್ನು ಪ್ರತಿಯೊಬ್ಬರೂ ತಡವಿ ನೋಡಿದರು. ಏನೂ ಆಗಿರಲಿಲ್ಲ. ಇದು ಅವರಿಗೆ ಬಹಳ ಕೌತುಕವನ್ನುಂಟುಮಾಡಿತು. ॥೩೦॥

'ಈ ಬಾಲಕನಿಗೆ ಮುಪ್ಪು-ಸಾವುಗಳ ಸಂಪರ್ಕವೇ ಇರುವುದಿಲ್ಲ. ಇವನು ಪರಮಾತ್ಮನೇ ಸರಿ' ಎಂದು ಅವರೆಲ್ಲರೂ ಮನಸ್ಸಿನಲ್ಲಿಯೇ ನಿಶ್ಚಯಿಸಿಕೊಂಡರು. ಅದುವರೆಗೆ ಸಾಮಾನ್ಯಾಕಾರದಿಂದ ಕಂಡುಬರುತ್ತಲಿದ್ದ ಮಾಯಾರೂಪೀ ಆ ಬಿಡಾಲವು ಒಮ್ಮಿಂದೊಮ್ಮೆಲೇ ಹನ್ನೆರಡು ಯೋಜನಗಳ ಸುತ್ತಳತೆಯ ಪ್ರಮಾಣ ಉಳ್ಳದ್ದಾಯಿತು. ॥೩೧॥

ಬಿಡಾಲದ ದೇಹವು ನೆಲಕ್ಕೆ ಬೀಳುವಾಗ ಪಾರ್ವತೀದೇವಿಯ ಸಖಿಯರ ಪೈಕಿ ಎಷ್ಟೋ ಮಂದಿಯನ್ನು ಪುಡಿ ಪುಡಿ ಮಾಡಿತು. ಮೃತರಾದ ಪರಿಚಾರಿಕೆಯರ ಸಂಖ್ಯೆಯಂತೂ ಅಗಣಿತವಾಗಿದ್ದಿತು. ಮತ್ತಿಂತಹ ದುರ್ಧರ ಪ್ರಸಂಗ ಒದಗಿರುವುದೋ ಎಂದು ಚಿಂತಿಸುತ್ತ ಪ್ರಮಥಗಣಗಳೆಲ್ಲ ಧಾವಿಸಿ ಪಾರ್ವತಿಯ ಅಂತರ್ಗೃಹದ ಬಳಿ ಬಂದು ಸೇರಿದರು. 'ಇದಾವ ಜಾತಿಯ ಬೆಕ್ಕು' ಎಂಬುದನ್ನು ತಿಳಿಯಲು ಅವರು ಮುನ್ನುಗ್ಗಿ ಬಂದು ನೋಡಿ ॥೩೨॥

ಬೆಕ್ಕಿನ ಆ ಭಯಂಕರ ರೂಪಕ್ಕೂ, ಇಂತಹ ಬೆಕ್ಕನ್ನು ಲಕ್ಷ್ಯವಿಲ್ಲದೇ ಸದೆಬಡೆದ ಬಾಲಕನ ಬಲ-ಪರಾಕ್ರಮಗಳಿಗೂ ಪರಮಾಶ್ಚರ್ಯವನ್ನು ಹೊಂದಿದರು. ಮತ್ತು ಈ ಬಗ್ಗೆ ಹೀಗೆಂದು ತಮ್ಮ ತಮ್ಮೊಳಗೆ ನುಡಿದುಕೊಂಡರು.

**ಗಣಾ ಊಚುಃ :—**

**ಕ್ವ ದೈತ್ಯೋ ಮಾಯಿಕೋ ದುಷ್ಟಃ ? ಕ್ವ ಬಾಲಚರಣಾಹತಿಃ ? ||೩೩||**

**ಇಂದ್ರಾದೀನಾಮವಧ್ಯಾಯೋ ಹನ್ಯಂತೇಽನೇನ ಲೀಲಯಾ |**

**ಕ ಉವಾಚ :—**

**ಇತ್ಯುಕ್ತ್ವಾಜ್ಞಾಂ ಗೃಹೀತ್ವಾ ತೇ ಗಣಾ ಯಾತಾ ನಿಜಂ ಪದಮ್ ||೩೪||**

**ಕೇಚಿಚ್ಚ ಬಲಿನೋ ದೈತ್ಯಮಾಕೃಷ್ಯ ತತ್ಯಜುರ್ಬಹಿಃ |**
**ಕಟಿದೇಶೇ ಗೃಹೀತ್ವೈನಂ ಸಾವಿಶನ್ನಿಜಮಂದಿರಮ್ ||೩೫||**

---

ಗಣಗಳು ;—

ಬಲಿಷ್ಠನೂ, ಅತ್ಯಂತ ದುಷ್ಟನೂ ಆದ ಮಹಾ ಮಾಯಿಕ, ಈ ದೈತ್ಯನೆಂದರೇನು ? ಅಂಥವನನ್ನು ಮೃದು ದೇಹಯಾದ ಈ ಬಾಲಕನು ತನ್ನ ಪುಟ್ಟ ಪುಟ್ಟ ಕಾಲುಗಳಿಂದ ಒದೆದು ಸಾಯಿಸಿಬಿಟ್ಟನೆಂದರೇನು ? ಇದು ಸಾಮಾನ್ಯ ಸಾಹಸದ ಕಾರ್ಯವೆನಿಸೀತೇ ? ||೩೩||

ನಾವು ನೋಡಿದಂತೆಯೇ ಇಂದ್ರನೇ ಮೊದಲಾದ ಪ್ರಬಲ ದೇವತೆಗಳಿಂದ ಸಹ, ಇವರಲ್ಲಿ ಒಬ್ಬನನ್ನಾದರೂ, ಇದುವರೆಗೂ ಕೊಲ್ಲಲಿಕ್ಕಾಗಿರುವುದಿಲ್ಲ. ಅಂಥವರೆಲ್ಲರನ್ನೂ ಈ ಬಾಲಕನು ತನ್ನ ಬಾಲಲೀಲೆಯಿಂದಲೇ ಧ್ವಂಸಮಾಡುತ್ತಲಿರುವನಲ್ಲ ?

ಬ್ರಹ್ಮ :—

ಹೀಗೆ ಹೇಳಿಕೊಳ್ಳುತ್ತ ಗಣಗಳು ದೇವಿಯ ಆಜ್ಞೆಯನ್ನು ತೆಗೆದುಕೊಂಡು ತಮ್ಮ ತಮ್ಮ ಪದಗಳಿಗೆ ಹೊರಟು ಹೋದರು. ||೩೪||

ಬಲಿಷ್ಠರಾದ ಮತ್ತೆ ಕೆಲವು ಗಣಗಳು ತಮಗಾಗಿ ಬಂದೊದಗಿದ್ದ ಶವನಿರ್ವಹಣ ಕಾರ್ಯವನ್ನು ಕೈಗೊಂಡು ದೈತ್ಯನ ದೊಡ್ಡ ದೇಹವನ್ನು ದರ ದರ ಎಳೆಯುತ್ತ

**ತತಶ್ಚತುರ್ಥೇ ಮಾಸೇ ತು ಮುನಿಪತ್ನ್ಯಃ ಸಮಾಗತಾಃ ।**
**ನಾನಾ ಸೌಭಾಗ್ಯದ್ರವ್ಯಾಣಿ ಗೃಹೀ[1]ತ್ವೋತ್ತರಗೇ ರವೌ ॥೩೬॥**

---

ಹೊರಕ್ಕೆ ತಂದು ಬಿಸುಟುಬಿಟ್ಟರು. ಇತ್ತ ಪಾರ್ವತಿಯು ಬಾಲಕನನ್ನು ತನ್ನ ಕೌಂಕುಳಿನಲ್ಲೆತ್ತಿಕೊಂಡು ಸರ ಸರನೆ ತನ್ನ ಅಂತರ್ಮಂದಿರವನ್ನು ಪ್ರವೇಶ ಮಾಡಿದಳು. ॥೩೫॥

ಮಗುವಿಗೆ ನಾಲ್ಕನೆಯ ತಿಂಗಳು ಆರಂಭವಾಯಿತು. ಅಂದು ಮಕರ ರಾಶಿಗೆ ಸೂರ್ಯದೇವನು ಪ್ರವೇಶಿಸಿದ ದಿವಸ. ಅಂದಿನಿಂದ ಉತ್ತರಾಯಣ ಆರಂಭವಾಗುವುದು. ಆ ದಿವಸ ಸುವಾಸಿನಿಯರು ಪರಸ್ಪರರಿಗೆ ಮಂಗಳ ದ್ರವ್ಯಗಳನ್ನಿತ್ತು ಅರ್ಚಿಸುವುದು ಅನಾದಿ ಕಾಲದಿಂದಲೂ ನಡೆದು ಬಂದ ಸತ್ಸಂಪ್ರದಾಯ. ಈ ಬಗೆಯ ಸಂಪ್ರದಾಯ ಪರಿಪಾಲನೆಯಿಂದ ತಮ್ಮ ತಮ್ಮ ಸೌಭಾಗ್ಯವು ವೃದ್ಧಿಯಾಗಲೆಂದು ಆ ಸಾಧ್ವೀಶಿರೋಮಣಿಗಳು ಬಯಸುತ್ತಲಿದ್ದರು (ಈ ಆಚರಣೆಯು ಅದ್ಯಾಪಿ ನಡೆದುಕೊಂಡು ಬರುತ್ತಲಿದ್ದರೂ, ಅದು ದಾಂಭಿಕತನದಲ್ಲಿ ಪರ್ಯವಸಾನಗೊಂಡು, ಹಿನ್ನೆಲೆಯಾದ ಸದ್ಭಾವನೆಗಳು ಲುಪ್ತವಾಗಿ ಹೋಗಿವೆ. ಕಾಲಮಹಿಮೆ. ಮನುಷ್ಯನಲ್ಲಿ ಕಾಮ ಕ್ರೋಧಾದಿಗಳು ಹೆಚ್ಚಿದಂತೆಲ್ಲ ಕರ್ತವ್ಯಗಳಲ್ಲಿ ಅಸಡ್ಡೆಯೂ, 'ಇದನ್ನು ಆಚರಿಸುವುದು ದುಂದುಗಾರಿಕೆ' ಎಂಬ ಕಲ್ಪನೆಯೂ ಹುಟ್ಟಿ, ಕ್ರಮೇಣ ನಾಸ್ತಿಕ್ಯವು ಬೇರೂರಿ ಬಿಡುವುದು. ನೆಗಡಿಯಾದಾಗ ಅದನ್ನು ದುರ್ಲಕ್ಷಿಸಿ ಔಷಧ ಪಥ್ಯಗಳನ್ನು ಸರಿಯಾದ ರೀತಿಯಲ್ಲಿ ಮಾಡದೇ ಇದ್ದರೆ, ಅದರಿಂದ ಕೆಮ್ಮು, ನಿಶ್ಶಕ್ತಿಯೂ, ತನ್ಮೂಲಕ ಜ್ವರವೂ ಉಂಟಾಗಿ, ತನ್ನಿವಾರಣೆಗೆ ವಿಶೇಷರೀತಿಯ ಚಿಕಿತ್ಸೆಯನ್ನೇ ಮಾಡಬೇಕಾಗಿ ಬರುವುದು. ಆಲಸ್ಯದಿಂದಲೋ, ಹುಂಬತನದಿಂದಲೋ ಅವಕ್ಕೂ ಗಮನ ಕೊಡದಿದ್ದರೆ, ಮೊದಲು ಉಂಟಾದ ನೆಗಡಿಯೇ ತನ್ನಿಂದ ಉದ್ಭವಿಸಿದ ಇತರ ವಿಕಾರಗಳೊಂದಿಗೆ ಪ್ರಬಲವಾಗಿ ರೋಗಿಯನ್ನು ಪರಲೋಕ ಪ್ರಯಾಣ ಸನ್ನದ್ಧನನ್ನಾಗಿ ಹೇಗೆ ಮಾಡಿಬಿಡುವುದೋ, ಇದರಂತೆ ಇಂದು ಆಚರಿಸಿರಬಹುದಾದ ಒಂದೆರಡು ಪಾಪ ಕೆಲಸಗಳನ್ನು ಪಶ್ಚಾತ್ತಾಪದಿಂದ ಇಂದೇ ಕ್ಷಾಲನಮಾಡಿಕೊಳ್ಳದೇ 'ಪಾಪವೆಂದರೇನು ? ಕಣ್ಣಿಗೆ ಕಾಣದ ಪಾಪಕ್ಕೆ ಹೆದರಿ ನಡೆದು, ಲಭಿಸಿರುವ ಸುಖೋಪಭೋಗಗಳನ್ನು ತ್ಯಜಿಸುವುದು ಯಾವ ಜಾಣತನ ?' ಇವೇ ಮೊದಲಾದ ದುರ್ವಾದಗಳನ್ನು ಮಾಡುತ್ತ

[1] ವಿವರಣೆಗೆ ಪರಿಶಿಷ್ಟವನ್ನು ನೋಡಿರಿ.

**ಅಬಾಲಾಶ್ಚ ಸಬಾಲಾಶ್ಚ ಪಾರ್ವತ್ಯಾ ಮಂದಿರಂ ಶುಭಮ್ ।**
**ತಾಸಾಮಾಸನಸತ್ಕಾರಾನ್ ದದೌ । ದಾಕ್ಷಾಯಣೀ ತದಾ ॥೩೭॥**

ಲಿದ್ದರೆ, ಒಮ್ಮೆ ಆಚರಿಸಿದ ಪಾಪಕರ್ಮದ ಸಂಸ್ಕಾರವು ಮುಂದಿನ ಪ್ರತಿಯೊಂದು ಪಾಪಕರ್ಮಕ್ಕೂ ಅಡಿಗಲ್ಲಾಗಿ ನಿಂತು ಪರ್ವತದಂತೆ ಬೆಳೆದುಬಿಡುವುದು. ಮೊದಮೊದಲು ಅದು ಗೋಚರವಾಗದಿದ್ದರೂ, ಪರಿಪಾಕಗೊಂಡು ಅನುಭವಕ್ಕೆ ಬಂದಾಗ ಮಾತ್ರ ಯಾರಿಗೂ ದಿಕ್ಕೇ ತೋಚುವುದಿಲ್ಲ. 'ಶಾಸ್ತ್ರಗಳಿರುವುದೇಕೆ ? ' ಅಂತಹ ಸಂದರ್ಭ ಬಂದೊದಗಿದರೆ ಪರಿಹಾರೋಪಾಯಗಳಾದ ಪ್ರಾಯಶ್ಚಿತ್ತಗಳನ್ನು ಬೋಧಿಸಲಿಕ್ಕಷ್ಟೇ ? ಹೇಗೋ, ಅದನ್ನಾಚರಿಸಿದರಾಯಿತು ? ಎಂದೂ ಕೆಲವು ದುರ್ಮತಿಗಳು ವಾದಿಸಬಹುದು. ಚಿಕಿತ್ಸೆಗಿಂತಲೂ ರೋಗವೇ ಪ್ರಬಲವಾಗಿ, ಅದು ಚಿಕಿತ್ಸಕರಿಗೂ ಅರಿವಾಗದೇ ಹೋಗಿ ಬಿಟ್ಟರೆ,ಆ ಪ್ರಯತ್ನದಿಂದ ರೋಗಿಗೆ ಹೇಗೆ ಉಪಯೋಗವಾಗುವುದಿಲ್ಲವೋ, ಮತ್ತು ಚಿಕಿತ್ಸಾಕಾಲದಲ್ಲೂ ಸಹ ಚಿಕಿತ್ಸಾ ನಿಮಿತ್ತ ಯಾತನೆಗಳನ್ನು ಮಿತಿಮೀರಿ ಅನುಭವಿಸಬೇಕಾಗಿ ಬರುವುದೋ, ಅದರಂತೆ ಪ್ರಾಯಶ್ಚಿತ್ತವು ಪಾಪಕ್ಕೆ ಅನನುಗುಣವಾಗಿದ್ದರಾಗಲೀ, ಪ್ರಾಯಶ್ಚಿತ್ತಗಳಿಂದಲೂ ಅಪರಿಹಾರ್ಯ ಪಾಪಸಂಚಯವಿದ್ದರಾಗಲೀ, ಪಾಪವು ಪರಿಹಾರವಾಗುವುದೇ ಇಲ್ಲ. ಪಾಪ-ಪುಣ್ಯಗಳು ಅಂತರ್ವೈಹಿಕ ರೋಗಗಳಂತೆ ಅತೀಂದ್ರಿಯಗಳಾದುದರಿಂದ ಅವುಗಳ ಪರಿಣಾಮಮೂಲಕ ಬಲಾಬಲಗಳನ್ನು ತಿಳಿಯಬೇಕಾಗಿ ಬರುವುದು. ಹಾಗೆ ತಿಳಿದು ತತ್ಪರಿಹಾರಕ್ಕೆ ಪ್ರಯತ್ನಪಟ್ಟರೂ ಸ್ವಲ್ಪಮಟ್ಟಿಗಾದರೂ ಅನುಭವವು ತಪ್ಪಿದುದಲ್ಲ. ಆದುದರಿಂದ ಯಾರೇ ಆಗಲಿ, ಈ ಅನಾಹುತಗಳಿಗೆಲ್ಲ ಮೂಲಕಾರಣವಾದ ಕಾಮ-ಕ್ರೋಧಾದಿ ಅರಿಷಡ್ವರ್ಗಕ್ಕೆ ಅಧೀನರಾಗದೆ, ಜಾಗರೂಕರಾಗಿರತಕ್ಕದ್ದು) ಮುನಿಪತ್ನಿಯರು ಬಗೆಬಗೆಯ ಮಂಗಲ ದ್ರವ್ಯಗಳನ್ನು ತೆಗೆದುಕೊಂಡು ಪರಶಿವೆಯ ಮಂದಿರಕ್ಕೆ ಬಂದರು. ॥೩೬॥

ಬಂದವರ ಪೈಕಿ ಆಗ ತಾನೇ ವೈವಾಹಿಕ ಜೀವನವನ್ನಾರಂಭಿಸಿದವರೂ ಅರ್ಥಾತ್ ಮಕ್ಕಳಾಗಿರದಿದ್ದವರೂ, ಮಕ್ಕಳಾದವರೂ ಇದ್ದರು. ಎಲ್ಲರೂ ಸರ್ವಮಂಗಳೆ, ಪಾರ್ವತಿಯ ಶುಭವಾದ ಮಂದಿರವನ್ನು ಪ್ರವೇಶಮಾಡಿದರು. ಪಾರ್ವತೀ ದೇವಿಯೂ ಸಹ ಆ ಸುವಾಸಿನೀ ತಂಡವನ್ನು ವಿಶ್ವಾಸದಿಂದ ಸ್ವಾಗತಿಸಿ,

---

ವಿವರಣೆಗೆ ಪರಿಶಿಷ್ಟವನ್ನು ನೋಡಿರಿ.

ನಮಸ್ಕರೋತಿ ತಾ ನಾರೀಃ ಕಟೌ ಬಾಲಂ ಪ್ರಗೃಹ್ಯ ಚ ।
ಪರಸ್ಪರಂ ಸಮರ್ಚಂತ್ಯೋ ಹರಿದ್ರಾ-ಕುಂಕುಮಾದಿಭಿಃ ॥೩೮॥

ಭೂಮೌ ಸಂಸ್ಥಾಪ್ಯ ಬಾಲಾಂಶ್ಚ ಗತಿಮಂಶ್ಚಾಗತೀನಪಿ ।
ಪಾರ್ವತೀಯಸ್ತತಸ್ತೇಷು ಕ್ರೀಡತೇ ಸ್ಮಾಪಿ ಬಾಲಕಃ ॥೩೯॥

ತೇನ ಸರ್ವೇ ಶುಶುಭಿರೇ ಶಶಿನೋಡುಗಣೋ ಯಥಾ ।
ದೃಷ್ಟ್ವಾ ತು ಮುನಿಪತ್ನ್ಯಸ್ತ ಮೂಚುರ್ಗಿರಿಸುತಾಮಿತಿ ॥೪೦॥

---

ಕುಳಿತುಕೊಳ್ಳಲು ಆಸನಗಳನ್ನಿತ್ತು ಸತ್ಕರಿಸಿದಳು. ಇವರೆಲ್ಲ ಒಮ್ಮೆಲೆ ತನ್ನ ಮನೆಗೆ ಬಂದುದನ್ನು ಕಂಡು ದಾಕ್ಷಾಯಣಿಯು ಬಹಳ ಹರ್ಷಿಸಿದಳು. ॥೩೭॥

ಆಗ ಪಾರ್ವತಿಯು ಗಣೇಶನನ್ನು ಕೌಂಕುಳಲ್ಲೆತ್ತಿಕೊಂಡು ಅವರಿಗೆಲ್ಲ ನಮಸ್ಕರಿಸಿದಳು. ಅನಂತರ ಋಷಿ ನಾರೀಮಣಿಯರೂ ಸಹ ಪರಸ್ಪರವಾಗಿ ನಮಸ್ಕರಿಸಿದರು. ಪುತ್ರವತಿಯರು ತಮ್ಮ ಮಕ್ಕಳನ್ನು ಕೌಂಕುಳಲ್ಲಿ ಎತ್ತಿಕೊಂಡೇ ನಮಸ್ಕಾರ ಮಾಡಿದರು. ಇದರಂತೆ ಒಬ್ಬರಿಗೊಬ್ಬರು ಹರಿದ್ರಾ-ಕುಂಕುಮ, ಚಂದನ ಮೊದಲಾದ ಸೌಭಾಗ್ಯದಾಯಕ ಮಂಗಲ ದ್ರವ್ಯಗಳನ್ನು ಕೊಟ್ಟು, ಪರಸ್ಪರ ಅರ್ಚಿಸಿದರು. ॥೩೮॥

ಅನಂತರ ತಮ್ಮ ಮಕ್ಕಳನ್ನೆಲ್ಲ ಕೆಳಕ್ಕೆ ಇಳಿಸಿದರು. ಕೆಲವಕ್ಕೆ ನಡಿಗೆ ಬಂದಿದ್ದಿತು. ಮತ್ತೆ ಕೆಲವು ತೆವಳುತ್ತಿದ್ದವು. ಕೆಲವು ಮಕ್ಕಳು ಇನ್ನೂ ಹಸುಗೂಸುಗಳು. ಈ ಮಕ್ಕಳ ಪೈಕಿ ಪಾರ್ವತೀ ದೇವಿಯ ಮಗನಾದ ಗಣೇಶನೂ ಒಬ್ಬನಾಗಿದ್ದನು. ಒಂದರ ಪಕ್ಕದಲ್ಲೊಂದು ಮಕ್ಕಳು ಇದ್ದುದರಿಂದ ಅವು ಪರಸ್ಪರರೊಡನೆ ಕೈಕಾಲುಗಳನ್ನು ಬಡಿಯುತ್ತ ತಮಗೆ ತಿಳಿದಂತೆ ಆಡುತ್ತಲಿದ್ದವು. ಇತರ ಚಿಕ್ಕ ಚಿಕ್ಕ ಮಕ್ಕಳಂತೆ ಗಣಪತಿಯೂ ಸಹ ತನ್ನ ವಯಸ್ಸಿನ ಮಕ್ಕಳೊಂದಿಗೆ ಕಿಲ-ಕಿಲ ನಗುತ್ತ ಆಟವಾಡಲಾರಂಭಿಸಿದನು. ॥೩೯॥

ಆ ಎಲ್ಲ ಮಕ್ಕಳ ಪೈಕಿ ಗಣಪತಿಯೇ ಅತಿ ತೇಜಸ್ವಿಯೂ ಮತ್ತು ಬಹಳ ಹೃಷ್ಟ-ಪುಷ್ಟನೂ ಆಗಿದ್ದನು. ಚಂದ್ರಮನನ್ನು ಸುತ್ತುವರಿದ ನಕ್ಷತ್ರಗಳಂತೆ ಆ ಮಕ್ಕಳು ಶೋಭಿಸಿದರು. ಮುನಿಪತ್ನಿಯರು ತಮ್ಮ ಮಕ್ಕಳು ಪಾರ್ವತಿಯ ಸುಕುಮಾರನೊಡನೆ

**ಮುನಿಪತ್ನ್ಯ ಊಚುಃ :—**

**ಧನ್ಯಾಸಿ, ಗೌರಿ ! ಪುತ್ರೇಣ ಶಿವದತ್ತೇನ ಭಾಸ್ವತಾ ।**
**ತವ ಬಾಲಸ್ಯ ಸಾನ್ನಿಧ್ಯಾದ್ಭಾಸಂತೇ ನೋಽಪಿ ಬಾಲಕಾಃ ॥೪೧॥**

**ನಿಧಿಸಂಗೇನ ಹೇಮತ್ವಂ ಲೋಹೇನಾಪಿ ಸಮಾಪ್ಯತೇ ।**

**ಕ ಉವಾಚ :—**

**ಏವಂ ಕೌತುಕಯುಕ್ತಾಸ್ತಾ ಆನರ್ಚುಶ್ಚ ಪರಸ್ಪರಮ್ ॥೪೨॥**

ಆಟವಾಡುತ್ತಲಿರುವುದನ್ನು ನೋಡಿ ಬಹಳ ಮಟ್ಟಿಗೆ ಸಂತೋಷಿಸಿದರು. ಮತ್ತು ದೇವಿಯನ್ನು ಕುರಿತು ಹೀಗೆಂದು ನುಡಿದರು. ॥೪೦॥

ಮುನಿಪತ್ನಿಯರು ;—

ಗಿರಿಜಾದೇವಿ ! ನೀನೇ ಧನ್ಯತಮಳು. ಪರಮೇಶ್ವರನ ಅನುಗ್ರಹ ವಿಶೇಷ ದಿಂದ ಇಂತಹ ಸು-ಪುತ್ರನನ್ನು ಪಡೆದಿರುವೆ. ನಿನ್ನ ಮಗನು ಎಷ್ಟು ತೇಜೋ ವಂತನಾಗಿ ಕಂಡು ಬರುತ್ತಿರುವನು ? ಒಮ್ಮೆ ಅತ್ತಕಡೆಗೆ ತಿರುಗಿ ನೋಡು. ನಿನ್ನ ಸು-ಕುಮಾರನ ಸನ್ನಿಧಿಯಲ್ಲಿ ಆಟವಾಡುತ್ತಿರುವ ನಮ್ಮಂಥವರ ಈ ಮಕ್ಕಳೂ ಸಹ ಎಷ್ಟು ತೇಜೋವಂತರಾಗಿ ಕಾಣುತ್ತಲಿರುವರು ? ॥೪೧॥

ನಿಧಿಯ ಸಂಪರ್ಕದಿಂದ ಕಬ್ಬಿಣವು ಸಹ ಬಹಳ ಬೆಲೆಯುಳ್ಳದ್ದೆಂದು ಲೋಕ ದಲ್ಲಿ ಅದಕ್ಕೆ ಗಣನೆ ಇದೆ. ಎಂದರೆ ನಿಧಿಯಿಂದ ಪೂರ್ಣವಾದ ಕಬ್ಬಿಣದ ಪೆಟ್ಟಿಗೆ ಯನ್ನೇ ‘ ನಿಧಿ ’ ಎಂದು ತಿಳಿದು ಜನರು ಪೂಜಿಸುತ್ತಾರೆ.

ಬ್ರಹ್ಮ :—

ಈ ರೀತಿ ಮುನಿಪತ್ನಿಯರು ಕೌತುಕಾನ್ವಿತರಾಗಿ ಮಾತನಾಡುತ್ತ ತಾವು ಮಾಡಬೇಕಾಗಿದ್ದ ಪರಸ್ಪರ ಸುವಾಸಿನೀ ಪೂಜೆಯನ್ನು ಮುಂದುವರಿಸಿದರು. ॥೪೨॥

ಹರಿದ್ರಾಭಿಃ ಕುಂಕುಮೈಃ ಕ್ಷೌದ್ರಖಂಡಚಂದನ [1] ಸೃಂಜಕೈಃ ।
ತಿಲೈಗುಡೈಸ್ತಾಲಪತ್ರೈರ್ನಾನಾ ಪರಿಮಳೈರಪಿ ॥೬೩॥

ಕಾಶ್ಚಿದಂಗೇ ಹರಿದ್ರಾಂ ಚ ಮುಖೇಷು ಚ ಲಿಲಿಂಪಿರೇ ।
ತಸ್ಮಿನ್ನಂತರೇ ದೈತ್ಯೋ ನಾಮ್ನಾ 'ಬಾಲಾಸುರೋ' ಮಹಾನ್ ॥೬೪॥

ಬಾಲರೂಪೀ ಸಮಾಯಾತಸ್ತನ್ಮಧ್ಯೇ ಕ್ರೀಡಿತುಂ ಯಯೌ ।
ಚಿಕ್ರೀಡ ಪಾರ್ವತೀಯೋಸ ಯುದ್ಧ್ಯನ್ನಿವ ವಿನೋದತಃ ॥೬೫॥

---

ಅರಿಸಿನ, ಕುಂಕುಮ, ಸಿಂದೂರ, ಕಬ್ಬಿನ ಚೂರು, ಶ್ರೀಚಂದನ, ಕಾಡಿಗೆ ಎಳ್ಳು ಮತ್ತು ಬೆಲ್ಲ, ಬಳೆ-ಬಿಚ್ಚೋಲೆ, (ಕನ್ನಡಿ, ಬಾಚಣಿಗೆ) ಮೊದಲಾದುವನ್ನೂ ಮತ್ತಿತರ ಅನೇಕ ವಿಧ ಪರಿಮಳ ದ್ರವ್ಯಗಳನ್ನೂ ಪರಸ್ಪರರಿಗೆ ಕೊಟ್ಟು, ಭಕ್ತಿ-ವಿಶ್ವಾಸಗಳಿಂದ ಅರ್ಚಿಸಿದರು. ॥೬೩॥

ಕೆಲವರು ಅರಿಸಿನವನ್ನು ತಮ್ಮ ಹಸ್ತಗಳಿಂದ ಸುವಾಸಿನಿಯರ ಪಾದ, ಮುಂಗೈ, ಕೆನ್ನೆಗಳಿಗೆ ಲೇಪಿಸಿದರು. ಈ ರೀತಿ ಸುವಾಸಿನೀ ಪೂಜೆಗಳು ತನ್ಮಯತೆಯಿಂದ ನಡೆಯುತ್ತಿರುವಷ್ಟರಲ್ಲಿ ಅಲ್ಲಿಗೆ ಒಬ್ಬ ದೈತ್ಯನು ಧಾವಿಸಿ ಬಂದನು. ಅವನ ಹೆಸರು 'ಬಾಲಾಸುರ' ಹೆಸರೇನೋ ಬಾಲಾಸುರನೆಂದಿದ್ದರೂ, ಅವನು ಮಟ್ಟಿಗೆ ಬಲಿಷ್ಠರಿಗಿಂಗಿಲೂ ಬಹಳ ಪ್ರಬಲನಾದವನು. ॥೬೪॥

ಇವನು ಇಲ್ಲಿಗೆ ಬರುವಾಗ ಯಾರಿಗೂ 'ಇವನು ರಾಕ್ಷಸ' ಎಂಬುದು ತಿಳಿಯದಿರಲೆಂದು ಸ್ವಾಭಾವಿಕವಾದ ತನ್ನ ಉಗ್ರ ರೂಪವನ್ನು ಮರೆಮಾಚಿ, ಅಲ್ಲಿ ಆಟವಾಡುತ್ತಲಿರುವ ಬಾಲಕರಷ್ಟೇ ವಯಃಪ್ರಮಾಣ, ಶರೀರದ ಕೋಮಲತೆ ಇವು ನೋಡುವವರಿಗೆ ತೋರುವಂತೆ ಮಾರ್ಪಡಿಸಿಕೊಂಡು, ಅವರೊಡನೆ ಆಟವಾಡಲು ಬಂದು ಸೇರಿದನು. ಸಹಸ್ರಾರು ಮಕ್ಕಳ ಸಮುದಾಯದಲ್ಲಿ 'ಇವನು ಇಂಥವನು' ಎಂಬುದು ಯಾರಿಗೆ ಗೊತ್ತಾದೀತು ? ಈ ಬಾಲಾಸುರನು ಇತರ ಮಕ್ಕಳಾರೊಂದಿಗೂ ಆಟಕ್ಕೆ ಹೋಗದೇ, ನೆಟ್ಟಗೆ ಪಾರ್ವತಿಯ ನಂದನನ ಸಂಗಡ

---

[1] ವಿವರಣೆಗೆ ಪರಿಶಿಷ್ಟವನ್ನು ನೋಡಿರಿ.

ಯಥಾ ಸಿಂಹೇನ [1] ಕ್ರೋಷ್ಟಾ ತು ಮಾಹಿಷೋ ವಾ ಗಜೇನ ಚ ।
ಕಂಠೇನ ಕಂಠಂ ಸಂಸ್ಪೃಶ್ಯ ಪೇತತುರ್ಭುವಿ ದಾರುಣೌ ॥೪೬॥

ಮಸ್ತಕೇ ಚರಣಾಭ್ಯಾಂ ಸೋಽಹನದ್ದುಷ್ಟೋ ಗಜಾನನಮ್ ।
ಕೇಚಾನಾದಾಯ ಹಸ್ತಾಭ್ಯಾಂ ವಿಚಕರ್ಷ ಬಲಾದಮುಮ್ ॥೪೭॥

ಸ್ವಯಂ ಚ ಗರ್ಜತೇ ದುಷ್ಟೋ ವೃದ್ಧಃ ಕ್ರೋಷ್ಟಾ ಯಥಾ ನಿಶಿ ।
ದೃಷ್ಟ್ವಾ ತಥಾವಿಧೌ ತೌ ಸಾ ಗಿರಿಜಾ ಪ್ರಾಹ ತಾಸ್ಸ್ತ್ರಿಯಃ ॥೪೮॥

---

ಆಟವಾಡಲು ಜೊತೆಯಾದನು. ವಿನೋದಾರ್ಥವಾಗಿ ಒಬ್ಬರನ್ನೊಬ್ಬರು ತಳ್ಳುವುದು, ಒಬ್ಬರ ಕೈಯಲ್ಲಿದ್ದ ಆಟದ ವಸ್ತುಗಳನ್ನು ಮತ್ತೊಬ್ಬರು ಕಸಿದುಕೊಳ್ಳುವುದು, ಇವೇ ಮೊದಲಾದ ಬಾಲಯುದ್ಧದ ಆಟವು ಆರಂಭವಾಯಿತು. ॥೪೫॥

ಇವರಿಬ್ಬರ ಜೊತೆಯು ಅಸದೃಶವಾಗಿ ಸ್ಪಷ್ಟ ಕಂಡು ಬರುತ್ತಲಿದ್ದಿತು ಸಿಂಹದೊಡನೆ ಗುಳ್ಳೆ ನರಿಯೂ, ಮತ್ತಮಾತಂಗದೊಂದಿಗೆ ಕ್ಷುದ್ರ ಕೋಣವೂ ಹೋರಾಡುತ್ತಿರುವಂತೆ ಕಂಡಿತು. ಇವರಿಬ್ಬರೂ ಒಬ್ಬರ ಕತ್ತನ್ನು ಮತ್ತೊಬ್ಬರು ಉಜ್ಜುತ್ತ, ನೆಲಕ್ಕೆ ಉರುಳಿ ಬಿದ್ದರು. ಇದು ಬಹಳ ದಾರುಣವಾದ ದೃಶ್ಯವಾಗಿದ್ದಿತು. ॥೪೬॥

ಗಜಾನನನ ತಲೆಗೆ ದುಷ್ಟ ಬಾಲಾಸುರನು ತನ್ನ ಎರಡೂ ಕಾಲುಗಳಿಂದ ಒಮ್ಮೆ ಬಲವಾಗಿ ಒದೆದನು. ಮತ್ತು ತನ್ನ ಮುಷ್ಟಿಯಿಂದ ಗಜಾನನನ ಶಿರೋರುಹಗಳನ್ನು ಭದ್ರವಾಗಿ ಹಿಡಿದುಕೊಂಡು, ಅತ್ತಿತ್ತ ಪದೇ ಪದೇ ಜುಂಗಿಸಿದನು. ॥೪೭॥

ಮುದಿಯಾದ ನರಿಯು ರಾತ್ರಿಯ ವೇಳೆ ವಿಕಾರವಾಗಿ ಕಿರುಚುವಂತೆ ಒಮೆ ವಿಕಾರ ಸ್ವರದಿಂದ ಅರಚಿದನು. ಇವರಿಬ್ಬರೂ ಮತ್ಸರದಿಂದ ಹೋರಾಡುತ್ತಿರುವುದನ್ನು ಪಾರ್ವತಿಯು ಲಕ್ಷಿಸಿದಳು. ಮಕ್ಕಳ ಆಟದಂತೆ ಆರಂಭವಾದ ಈ ಹೊಡೆದಾಟ ಈಗ ಪ್ರಮಾದ ಪರಿಸ್ಥಿತಿಗೆ ಬಂದುದರಿಂದ ಬಹಳ ಗಾಬರಿಗೊಂಡು, ಅಲ್ಲಿ

---

[1] ಸಂಖ್ಯಾಚಿನ್ಹಿತಕ್ಕೆ ವಿವರಣೆಯನ್ನು ಪರಿಶಿಷ್ಟದಲ್ಲಿ ನೋಡಿ.

ಪಾರ್ವತ್ಯುವಾಚ :—

ಕಸ್ಯರ್ಷೇರ್ದೃಢಬಾಲೋಽಯಂ ? ತಾಡಯಿತ್ವಾ ಶಿಶುಂ ಮಮ ।
ಕ್ರಂದತೇಽಸೌ ಖರ ಇವ ಪ್ರಹರೇ ಪ್ರಹರೇ ಖಲಃ ॥೪೯॥

ಅರ್ಭಕಾಣಾಂ ಸ್ವಭಾವೋಽಯಂ

ಕ ಉವಾಚ :—

ಇತ್ಯುಪೇಕ್ಷಿತವತ್ಯಸೌ ।
ತೌ ತು ಭೂಮಿಗತೌ ಬಾಲೌ ಲುಂಠತಃ ಸ್ಮಾನುಮತ್ಸರೌ ॥೫೦॥

ಧೃತ್ವಾ ಪರಸ್ಪರಂ ಕೇಶಾನಾಕರ್ಷಂತೌ ಚ ಸರ್ವಶಃ ।

---

ನೆರೆದಿದ್ದ ಸ್ತ್ರೀಯರನ್ನು ಕುರಿತು ಹೀಗೆಂದು ನುಡಿದಳು. ॥೪೮॥

ಪಾರ್ವತೀ :—

ಇವನಾರು ? ಯಾವ ಋಷಿಯ ಮಗ ? ಆಗಿನಿಂದಲೂ ನೋಡುತ್ತಲಿದ್ದೇನೆ- ಏಕಪ್ರಕಾರವಾಗಿ ನನ್ನ ಬಾಲಕನನ್ನು ಹೊಡೆಯುತ್ತಿರುವನಲ್ಲ ? ಮತ್ತು ಒಮ್ಮೊಮ್ಮೆ ಹೊಡೆದಾಗಲೂ ಕತ್ತೆಯಂತೆ ಕರ್ಕಶ ಧ್ವನಿಯಿಂದ ಕಿರಿಚುತ್ತಿರುವನಲ್ಲ ? ಇವನೆಂತಹ ನೀಚನು ? ॥೪೯॥

ಏನೋ, ಮಕ್ಕಳು ಆಟವಾಡುತ್ತಿವೆ. ಒಂದು ಘಳಿಗೆಗೆ ಆಡುವುವು. ಮತ್ತೊಂದು ಘಳಿಗೆಗೆ ಅವರಲ್ಲಿ ಜಗಳವಾರಂಭವಾಗುವುದು. ಇದಕ್ಕೆ ದೊಡ್ಡವರೇಕೆ ಬಾಯಿ ಹಾಕಿಕೊಂಡು ಹೋಗಬೇಕು ?

ಬ್ರಹ್ಮ :—

ಹೀಗೆಂದುಕೊಂಡು ಈ ಬಗ್ಗೆ ಔದಾಸೀನ್ಯವನ್ನು ಹೊಂದಿದಳು. ಇತ್ತ ಕಡೆ ಈ ಬಾಲಕರಿಬ್ಬರೂ ನೆಲದಲ್ಲಿ ಬಿದ್ದು ಒಬ್ಬರನ್ನೊಬ್ಬರು ಕೆಡಹುತ್ತ ಸರ್ವಾತ್ಮನಾ ಮತ್ಸರದಿಂದ ಕಾದಾಡತೊಡಗಿದರು. ಹೀಗೆ ಹೊಡೆದಾಡುವಾಗ ಇಬ್ಬರೂ

ಹಸಂತೌ ಹಾಸಯಂತೌ ಚ ಬಾಲಕಾಂಶ್ಚ ಮುನಿಸ್ತ್ರಿಯಃ ||೫೧||

ಜಾನನ್ನಪಿ ಮಹಾದೈತ್ಯಂ ಖೇಲತಿ ಸ್ಮ ವಿನಾಯಕಃ |
ತತೋ ಬಾಲಾಸುರೋ ದುಷ್ಟೋ ಹಸ್ತಾಭ್ಯಾಂ ಬಲವತ್ತರಮ್ ||೫೨||

ಜೀವಗ್ರಾಹಂ ಕಂಠದೇಶೇ ದಧಾರ ಗಣನಾಯಕಮ್ |
ತಥಾ ತಂ ಸೋಽಪಿ ಜಗ್ರಾಹ ರುದ್ಧಶ್ವಾಸೋಽಸುರೋಽಭವತ್ ||೫೩||

ವಿಹ್ವಲಂ ದೈತ್ಯಪುತ್ರಂ ತಂ ದೃಷ್ಟ್ವಾ ದುಶ್ಚಿತ್ತತಾಂ ಸ್ತ್ರಿಯಃ |

---

ಘಟ್ಟಿಯಾಗಿ ನಗುತ್ತಲಿದ್ದರು. ಮತ್ತು ತಮ್ಮ ಜಾಣತನದ ಗುದ್ದಾಟದಿಂದ ಇತರ ಬಾಲಕರನ್ನೂ, ಮುನಿಪತ್ನಿಯರನ್ನೂ ನಗಿಸುತ್ತಲಿದ್ದರು. ||೫೦-೫೧||

ಆದರೆ ವಿನಾಯಕನಿಗೆ ತನ್ನೊಡನೆ ಹೋರಾಡುತ್ತಿರುವವನು ಸಾಮಾನ್ಯ ಬಾಲಕನಲ್ಲವೆಂಬುದೂ ಮತ್ತು ತನ್ನನ್ನು ಕೊಲ್ಲಲಿಕ್ಕಾಗಿ ಬಂದ ಮಹಾ ದೈತ್ಯನೆಂಬುದೂ ತಿಳಿದಿದ್ದಿತಾದರೂ ' ಕೆಲವು ಕಾಲ ಆಟವಾಡಿಸಿ ನೋಡೋಣ, ಆನಂತರ ಕೊಂದರಾಯಿತು' ಎಂದು ಭಾವಿಸಿ ಆಟವಾಡುತ್ತಲೇ ಇದ್ದನು. ವಿನಾಯಕನು ಮಾಡುತ್ತಲಿದ್ದ ಈ ಕೀಟಲೆಯಿಂದ ಬಾಲಾಸುರನಿಗೆ ವಿಪರೀತ ಹಿಂಸೆಯಾಗಲಾರಂಭಿಸಿತು. ಕೊನೆಕೊನೆಗೆ ಅವನಿಗೆ ಸಹನೆಯೇ ಮೀರಿಹೋಯಿತು. ಆಗ ಆ ದುಷ್ಟ ರಾಕ್ಷಸನು ಒಮ್ಮೆಲೇ ತನ್ನ ಎರಡು ಕೈ ಗಳನ್ನೂ ಚಾಚಿ ||೫೨||

ಗಣಪತಿಯ ಗಂಟಲನ್ನು ಹಿಡಿದು, ಪ್ರಾಣವೇ ಹೋಗಿಬಿಡಬೇಕು, ಅಷ್ಟು ಭದ್ರವಾಗಿ ಹಿಸುಕಿ ಬಿಟ್ಟನು. ಆದರೆ, ಗಣಪತಿಯೂ ಸುಮ್ಮನಿರಲಿಲ್ಲ. ಅವನೂ ಸಹ ಬಾಲಾಸುರನ ಗಂಟಲನ್ನು ಬಲವಾಗಿ ಒತ್ತಿ ಹಿಡಿದನು. ಗಣಪತಿಯು ಹಿಡಿತದಿಂದ ರಾಕ್ಷಸನ ಶ್ವಾಸವೇ ಬಂಧಿಸಿ ಹೋಯಿತು. ಆಗ ರಾಕ್ಷಸನ ಪರಿಸ್ಥಿತಿಯನ್ನು ಏನೆಂದು ಹೇಳಲಿ, ತಟಪಟನೆ ಒದೆದಾಡಿಬಿಟ್ಟನು ||೫೩||

ಅವನ ಕಣ್ಣುಗಳು ನೆಟ್ಟ ನೋಟವಾದವು. ದೈತ್ಯನು ಈ ರೀತಿ ಕಸಿವಿಸಿ ಪಡುವುದನ್ನು ನೋಡಿ ವಸ್ತುತತ್ತ್ವವನ್ನರಿಯದ ಋಷಿರಮಣಿಯರು ಗಣಪತಿಯನ್ನೇ ದುಷ್ಟಚಿತ್ತನೆಂದು ಭಾವಿಸಿದರು. ||೫೩||

ಯಯಯುಶ್ಚ ಚುಕ್ರುಶುಃ

ಸ್ತ್ರಿಯ ಊಚುಃ :—

ಬಾಲೋ ನಿಹತೋಽನೇನ ನಿಶ್ಚಿತಮ್

ಕ ಉವಾಚ :—

ಧಾವಮಾನಾ ಯಯುಃ ಕಾಶ್ಚಿನ್ನಾಶಕನ್ಮೋಚಿತುಂ ಹಿ ತೌ ।
ಸ್ತ್ರಿಯಶ್ಚ ಪುರುಷಾಸ್ಸರ್ವೇ ತತಸ್ತಾಮಂಬಿಕಾಂ ಶುಭಾಮ್
ಊಚುಃ

ಹುಡುಗಾಟವು ಪ್ರಾಣಾಂತಕವಾಗಲಿರುವುದನ್ನು ಕಂಡು ಅವರೆಲ್ಲರೂ ಆರ್ತ ರಾಗಿ ಕೂಗಿಕೊಂಡರು. ಮತ್ತು ಇವರಿಬ್ಬರೂ ಉರುಳಾಡುತ್ತಲಿದ್ದ ಸ್ಥಳಕ್ಕೆ ಓಡೋಡಿ ಬಂದರು.

ಋಷಿಪತ್ನಿಯರು :—

ಓ ! ಈ ಪಾರ್ವತಿಯ ಮಗನಿಂದ ಋಷಿಕುಮಾರನು ಮೃತನೇ ಆಗಿ ಹೋದನು. ಇನ್ನು ಇದಕ್ಕೆ ಸಂಶಯವೇ ಇಲ್ಲ. ||೫೪||

ಬ್ರಹ್ಮಾ :—

ಕೆಲವು ಸ್ತ್ರೀಯರು ಓಡಿ ಬಂದು, ಅವರಿಬ್ಬರ ಈ ಕಡಿದಾಟವನ್ನು ಬಿಡಿಸಲು ಯತ್ನಿಸಿದರು. ಯಾರಿಗೂ ಗಣಪತಿಯು ಕೈ ಬಿಗಿತವನ್ನು ಬಿಡಿಸಲಾಗಲಿಲ್ಲ. ಆಗ ಋಷಿಪತ್ನಿಯರೂ, ಇತರ ಪುರುಷರೂ ಎಲ್ಲರೂ ಒಟ್ಟಿಗೆ ಸೇರಿ ಸರ್ವಮಂಗಳೆ ಯಾದ ಅಂಬಿಕೆಯನ್ನು ಕುರಿತು ||೫೫||

ಹೀಗೆಂದು ನುಡಿದರು.

**ಸ್ತ್ರಿಯ ಊಚುಃ :—**

**ವಿನೋದಯೈನಂ ತ್ವಂ ಮುನಿಪುತ್ರೋ ಮರಿಷ್ಯತಿ ।**

**ಕ ಉವಾಚ :—**

**ತತಸ್ಸಾ ಪಾರ್ವತೀ ಬಾಲಂ ' ಮುಂಚ, ಮುಂಚೇ' ತಿ ಚಾಬ್ರವೀತ್ ||೫೬||**

**ಗೌರ್ಯುವಾಚ :—**

**ಅಸ್ಮಿನ್ಮೃತೇ ಶಪಿಷ್ಯಂತಿ ಮುನಯೋ ನಸ್ತಪೋಽನ್ವಿತಾಃ ।**
**ಜೀವದಾನಾತ್ಪರಂ ಪುಣ್ಯಂ ನಾಸ್ತಿ ಬ್ರಹ್ಮಾಂಡಗೋಲಕೇ ||೫೭||**

---

ಸ್ತ್ರೀ-ಪುರುಷರು :—

ಪಾಪ ! ಈ ಬಡವ, ಮುನಿಪುತ್ರನು ಅನ್ಯಾಯವಾಗಿ ಸಾಯುತ್ತಾನೆ. ನೀನು ಪ್ರಯತ್ನಿಸಿ ನಿನ್ನ ಮಗನ ಹಿಡಿತದಿಂದ ಇವನನ್ನು ಬಿಡಿಸು.

ಬ್ರಹ್ಮಾ :—

ಈ ಮಾತುಗಳನ್ನು ಕೇಳಿದ ಮೇಲೆ ಪಾರ್ವತಿಯು ತನ್ನ ಮಗ ; ಗಣೇಶನನ್ನುದ್ದೇಶಿಸಿ ' ಬಿಡು, ಪಾಪ ! ಬಿಟ್ಟು ಬಿಡು ' ಎಂದು ಕೂಗಿ ಹೇಳಿ, ಮತ್ತೆ ಹೀಗೆ ನುಡಿದಳು. ||೫೬||

ಗೌರೀ :—

ಇವನು ಮುನಿಪುತ್ರ. ಮುನಿಗಳಂತೆ ಮುನಿಪುತ್ರನೂ ನಮಗೆಲ್ಲ ಪರಮ ಪೂಜ್ಯನು. ನೀನು ಹುಡುಗತನದಿಂದ ಇವನನ್ನೇನಾದರೂ ಕೊಂದು, ಋಷಿಗಳಿಗೆ ಅಪಚಾರವನ್ನು ಮಾಡಿದೆಯಾದರೆ, ತಪಸ್ಸಿದ್ಧರಾದ ಅವರು ಕ್ರುದ್ಧರಾಗಿ ಖಂಡಿತವಾಗಿಯೂ ನಮ್ಮೆಲ್ಲರನ್ನೂ ಕ್ರೂರವಾಗಿ ಶಪಿಸಿಬಿಡುವರು. ನೀನು ಈ ಬಾಲಕನ ವಿಷಯದಲ್ಲಿ ದಯೆಯನ್ನು ತೋರಿ, ಜೀವದೊಂದಿಗೆ ಅವನನ್ನು ಬಿಟ್ಟುಬಿಡು. ಜೀವದಾನಕ್ಕಿಂತಲೂ ಹೆಚ್ಚಿನ ಪುಣ್ಯಕಾರ್ಯ ಭೂಗೋಲಕದಲ್ಲೇ ಮತ್ತೊಂದಿರುವುದಿಲ್ಲ. ||೫೭||

ಗಮಿಷ್ಯತಿ ಮಹಾಶಕ್ತಿಸ್ತವ ತೇಷಾಂ ತು ಶಾಪತಃ |

ಕ ಉವಾಚ :—

ಏವಂ ಯಾವತ್ಪ್ರಾರ್ಥಯಂತೇ ಗಿರಿಜಾ ತಾವದೇವ ಹಿ ||೫೮||

ನೇತ್ರದ್ವಾರೇಣ ತ[illegible]ಣಾ ಗತಾ ಬುದ್ಬುದವತ್ಕ್ಷಣಾತ್ |
ದದೃಶುಸ್ತಂ ತತಸ್ಸರ್ವೇ ದಶಯೋಜನಮಾಯತಮ್ ||೫೯||

ಕರಾಲವಕ್ತ್ರಂ ಪತಿತಂ ಚೂರ್ಣಯಿತ್ವಾ ಮಹಾ[illegible]ವರ್ಮ |
ತತಃ ಸ್ತ್ರಿಯೋ ಯಯುರ್ಭೀತಾ ಬಾಲಾನಾದಾಯ ಸತ್ವರಾಃ ||೬೦||

---

ಅವರೇನಾದರೂ ನಿನ್ನನ್ನು ಶಪಿಸಿದರೆಂದರೆ, ಈಗಿರುವ ನಿನ್ನ ಅಸಾಧಾರಣವಾದ ಶಕ್ತಿ-ಮಹಿಮೆಗಳೆಲ್ಲವೂ ಒಮ್ಮೆಲೇ ಉಡುಗಿಹೋಗುವುವು.

ಬ್ರಹ್ಮ:—

ಹೀಗೆ ಪಾರ್ವತಿಯು ಪ್ರಾರ್ಥಿಸಿಕೊಳ್ಳುತ್ತಿರುವಷ್ಟರೊಳಗಾಗಿಯೇ ||೫೮||

ಗಣಪತಿಯು ರಾಕ್ಷಸನ ಗಂಟಲನ್ನು ಇನ್ನೂ ಬಲವಾಗಿಯೇ ಒತ್ತಿಬಿಟ್ಟಿದ್ದನು. ನೀರಿನಿಂದ ಗುಳ್ಳೆಗಳು ಮೇಲೆದ್ದು ಬರುವಂತೆ ಬಾಲಾಸುರನ ಪ್ರಾಣಗಳೂ ಅವನ ನೇತ್ರಗಳ ಮೂಲಕ ಹೊರಕ್ಕೆ ಬಂದುಬಿಟ್ಟವು. ಅನಂತರ ಅವನು ಧರಿಸಿದ್ದ ಬಾಲಕನ ಕೃತ್ರಿಮ ರೂಪವು ಅಳಿಸಿಹೋಗಿ, ಸ್ವಾಭಾವಿಕವಾದ ಬೃಹದಾಕಾರವನ್ನು ತಳೆಯಿತು. ಹತ್ತಾರು ಯೋಜನಗಳಷ್ಟು ವಿಸ್ತೃತ ಭೂ-ಭಾಗವನ್ನು ಅದು ಆವರಿಸುವಷ್ಟಾಯಿತು. ಮಾಯಾಶಕ್ತಿಯ ಪರಿಣಾಮವೇ ಇಷ್ಟು. ಮಾಯಿಯು ಎಲ್ಲಿಯ ವರೆಗೆ ತನ್ನ ಸಿದ್ಧಿಯ ಮಹಿಮೆಯಿಂದ ಅದನ್ನು ತಡೆದು ನಿಲ್ಲಿಸಿರಬಲ್ಲನೋ ಅಲ್ಲಿಯವರೆಗೂ ಅದು ಹಾಗೆಯೇ ಉಳಿದಿರುವುದು. ಮಾಯಿಗೇನಾದರೂ ಅವಸಾನ ಬಂದಿತೆಂದರೆ, ಅವನು ಮೃತಿಯನ್ನೈದುವುದರೊಳಗಾಗಿಯೇ ಆ ಮಾಯೆಯು ಅಳಿಸಿಹೋಗುವುದು. ಜನನ-ಮರಣಾದಿ ವ್ಯಾವಹಾರಿಕ ಧರ್ಮಗಳು, ವ್ಯಾವಹಾರಿಕ ಸತ್ತ್ವವುಳ್ಳ ವಸ್ತುಗಳಿಗೆ 'ಮಾತ್ರ ಸಂಭವಿಸುವುವೇ ಹೊರತು, ಪ್ರತೀತಿಮಾತ್ರಗೋಚರ (ತೋರಿಕೆ ಮಾತ್ರ ಉಳ್ಳ) ವಸ್ತುಗಳಿಗೆ ವ್ಯಾವಹಾರಿಕಧರ್ಮಗಳು ಸಂಭವಿಸುವುದಿಲ್ಲ. ಆದುದರಿಂದ ಬಾಲಾಸುರನು

ವೃಕವೃಂದಂ ಹಿ ದೃಷ್ಟ್ವೈವ ಧೇನವೋಽಜಾ ಯಥಾ ಭಯಾತ್ ।
ಗಿರಿಜಾಪಿ ಸ್ವಕಂ ಗೃಹ್ಯ ಭ್ರಾಮಯಿತ್ವಾ ಸುತಂ ಮೃದಮ್ ॥೬೦॥

ದತ್ವಾ ಸ್ತನಂ ಕಾರಯಿತ್ವಾ ಶಾಂತಿಕಂ ದ್ವಿಜಪುಂಗವೈಃ ।
ದದೌ ದಾನಾನಿ ತೇಭ್ಯಃ ಸಾ ಜಗೃಹೇ ಆಶಿಷೋ ಬಹು ॥೬೨॥

ತನ್ನ ವ್ಯಾವಹಾರಿಕ ಪೂರ್ವರೂಪವಾದ ಕರಾಳ ವಕ್ತ್ರ, ಸ್ಥೂಲದೇಹ, ಕೃಷ್ಣವರ್ಣ ಇವೇ ಮೊದಲಾದುವನ್ನು ತಳೆದು ಭೂಮಿಗೆ ಧೊಪ್ಪನೆ ಬಿದ್ದು ಬಿಟ್ಟನು. ಬೀಳುವಾಗ ಅಲ್ಲಲ್ಲಿದ್ದ ಮಹಾ ಮಹಾ ದ್ರುಮಗಳನ್ನೆಲ್ಲ ಪುಡಿ ಪುಡಿ ಮಾಡಿದನು. ಇದು ವರೆಗೂ ಒಂದು ಬಗೆಯಿಂದ ಅಭಿಪ್ರಾಯವನ್ನು ಕಲ್ಪಿಸಿಕೊಂಡಿದ್ದ ಮುನಿಪತ್ನಿಯರು 'ಸತ್ತು ಬಿದ್ದವನು ಮುನಿಪುತ್ರನಲ್ಲ. ಗಣಪತಿಯನ್ನು ಕೊಲ್ಲಲು ಬಂದಿದ್ದ ದುಷ್ಟನಾದ ಯಾವನೋ ರಾಕ್ಷಸ' ಎಂಬುದು ಅರಿವಾದೊಡನೆಯೇ ಬೆವರಿ ಕಂಗಾಲಾದರು. ಮತ್ತೆ ತಮ್ಮ ತಮ್ಮ ಮಕ್ಕಳನ್ನು ಎತ್ತಿಕೊಂಡು ತಮ್ಮ ತಮ್ಮ ಮನೆಗಳಿಗೆ ಸರಸರ ನಡೆದು ಬಿಟ್ಟರು. ॥೫೯.೬೦॥

ಶ್ವಾಪದಗಳಾದ ತೋಳಗಳ ಹಿಂಡನ್ನು ನೋಡಿದ ಕೂಡಲೇ ನಾಗಾಲೋಟ ದಿಂದ ಓಡಿಹೋಗುವ ಭಯಭ್ರಾಂತ ಗೋಗಳಂತೆಯೂ, ಕುರಿಗಳಂತೆಯೂ ಈ ಸ್ತ್ರೀಯರು ಓಡಿ ಹೋಗುತ್ತಿರುವುದು ಕಂಡುಬಂದಿತು. ಗಿರಿಜೆಯೂ ಸಹ ತನ್ನ ಬಾಲಕನನ್ನು ಎತ್ತಿಕೊಂಡು ಅವನ ಮೈಗೆ ಹತ್ತಿದ್ದ ಮಣ್ಣನ್ನು ಕೊಡವಿದಳು. ॥೬೦॥

ಅನಂತರ ಗಣಪತಿಯನ್ನು ತೊಡೆಯ ಮೇಲೆ ಮಲಗಿಸಿಕೊಂಡು ಸ್ತನವನ್ನು ಪಾನಮಾಡಿಸಿದಳು. ಅನೇಕ ಜನ ದ್ವಿಜವರ್ಯರನ್ನು ಬರಮಾಡಿಕೊಂಡು, ಶಾಂತಿ ಗಾಗಿ ಸೂಕ್ತ ಕರ್ಮಗಳನ್ನು ಮಾಡಿಸಿದಳು. ಅವರಿಗೆಲ್ಲ ಅಪೂರ್ವ ವಸ್ತುಗಳನ್ನು ದಾನವಾಗಿ ಕೊಟ್ಟು, ಅವರನ್ನು ಪ್ರಣಮಿಸಿ, ಅವರಿಂದ ಅನೇಕ ಶುಭಾಶೀರ್ವಾದ ಗಳನ್ನು ಪಡೆದಳು. ॥೬೨॥

**ಗೌರ್ಯುವಾಚ :—**

**ನ ಜಾನೇ ಆಸುರೀಂ ಮಾಯಾಂ ಕಿಯಂತೋ ಯಾಂತಿ ನಾಶಿತುಮ್ ।**

**ತತಸ್ತೇ ವಿಲಯಂ ಯಾಂತಿ ಮಮ ಬಾಲಾನ್ಮಹಾ ಖಲಾಃ ॥೬೩॥**

**ಈಶ್ವರೇ ಸಾನುಕೂಲೇ ಕಃ ಪೀಡಿತುಂ ಕ್ಷಮತೇ ಜನಮ್ ? ॥**

**ಕ ಉವಾಚ :—**

**ಏವಮಾಕರ್ಣ್ಯ ತದ್ವಾಕ್ಯಂ ಮುನಿಪತ್ನ್ಯೋ ಯಯುಶ್ಚ ತೇ ॥೬೪॥**

---

ಗೌರೀ :—

ಆಸುರೀ ಮಾಯೆ ಎಷ್ಟು ಪ್ರಬಲತರವೋ ನನಗಂತೂ ತಿಳಿಯದಾಗಿದೆ. ಎಂತೆಂತಹ ರಾಕ್ಷಸರು ಯಾವ ಯಾವ ರೂಪಗಳಿಂದ ಎಷ್ಟೆಷ್ಟು ಸಲ ಬರಬೇಕಾಗಿದೆಯೋ, ಮತ್ತು ಯಾವ ಯಾವ ರೀತಿಯಿಂದ ನಮ್ಮನ್ನು ವಂಚಿಸಿ ನನ್ನ ಬಾಲಕನನ್ನು ಕೊಲ್ಲಲೆಣಿಸುವರೋ, ಅದೂ ಗೊತ್ತಾಗಲೊಲ್ಲದು. ಬರುವಾಗಲೇನೋ ಅವರು ನನ್ನ ಬಾಲಕನನ್ನು ಕೊಲ್ಲಬೇಕೆಂದೇ ಬರುತ್ತಾರೆ, ಆದರೆ ಪರಿಣಾಮುಮಟ್ಟಿಗೆ ದೈವಾನುಗ್ರಹ, ಗುರು-ಹಿರಿಯರ ಆಶೀರ್ವಾದಗಳಿಂದ ಖಲರಾದ ಆ ಮಹಾ ದೈತ್ಯರು ನಮ್ಮ ಬಾಲಕನಿಂದಲೇ ಮೃತರಾಗಿ ಹೋಗುವರು. ॥೬೩॥

ಜಗದ್ರಕ್ಷಕನಾದ ಪರಮಾತ್ಮನು ಅನುಕೂಲನಾಗಿರುವಾಗ, ಎಂತಹ ಎದುರಾಳಿಯೇ ಆಗಲಿ ಮತ್ತು ಅವನು ಎಷ್ಟೇ ಪ್ರಯತ್ನಿಸಲಿ ? ಅವನು ಏನನ್ನು ತಾನೇ ಮಾಡಿಯಾನು ?

ಬ್ರಹ್ಮಾ :—

ಪಾರ್ವತಿಯು ಹೀಗೆ ನುಡಿದುದನ್ನು ಕೇಳಿ, ಮೊದಲೇ ದಂಗುಬಡಿದು ಹೋಗಿದ್ದ ಮುನಿಪತ್ನಿಯರು ತಮ್ಮ ತಮ್ಮ ಆಶ್ರಮಪದಗಳಿಗೆ ಹಿಂದಿರುಗಿದರು. ॥೬೪॥

ಗಣಾಸ್ತಂ ದೂರತಃ ಕ್ಷಿಪ್ತ್ವಾ ಸ್ನಾತ್ವಾ ಸ್ವಂ ಧಾಮ ಲೇಭಿರೇ ||೬೫||

ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ ' ಬಾಲಾಸುರವಧೋ '
ನಾಮ ಚತುರಶೀತಿತಮೋಽಧ್ಯಾಯಃ ಸಮಾಪ್ತಃ

---

ಸರಿ, ಇನ್ನುಳಿದುದು ಎಂದರೆ ಶವನಿರ್ವಹಣಗೂ. ಆದು ಹೇಗೂ ಗಣಗಳ ಕೆಲಸ, ಅವರೂ ಅಲ್ಲಿಗೆ ಬಂದರು. ರಾಕ್ಷಸನ ಕಳೇಬರವನ್ನು ಕೊಂಡೊಯ್ದು ಬಹು ದೂರ ಎಸೆದರು. ಸ್ನಾನವನ್ನು ಮಾಡಿದನಂತರ, ತಮ್ಮ ತಮ್ಮ ಮನೆಗಳಿಗೆ ತೆರಳಿದರು. ||೬೫||

ಇಲ್ಲಿಗೆ ಶ್ರೀ ಗಣೇಶಪುರಾಣ, ಉತ್ತರಖಂಡದಲ್ಲಿ ' ಬಾಲಾಸುರನ ವಧೆ ' ಎಂಬಲ್ಲಿಗೆ ಎಂಭತ್ತುನಾಲ್ಕನೆಯ ಅಧ್ಯಾಯಾನುವಾದವು ಪೂರ್ಣವಾದುದು.



॥ ಶ್ರೀ ಗಣೇಶಾಯ ನಮಃ ॥

# ಅಥ ಪಂಚಾಶೀತಿತಮೋಽಧ್ಯಾಯಃ

ಕ ಉವಾಚ :—

ಶ್ರುತ್ವಾ ಮುನಿಮುಖಾತ್ಪುತ್ರಂ ಗಿರಿಜಾಯಾ ಮಹಾಬಲಮ್ ।
ಪಂಚಮೇ ಮಾಸಿ ಸಂಪ್ರಾಪ್ತೇ [1] ಮರೀಚಿರ್ವೀಕ್ಷಿತುಂ ಯಯೌ ॥೧॥

ಭೂತ-ಭವ್ಯ-ಭವಿಷ್ಯಜ್ಞಃ ಸಮಲೋಷ್ಟಾಶ್ಮ-ಕಾಂಚನಃ ।
ವೇದ-ಶಾಸ್ತ್ರಾರ್ಥತತ್ತ್ವಜ್ಞೋ ನ್ಯಸ್ತಸ್ವ-ಪರವಿಭ್ರಮಃ ॥೨॥

---

॥ ಶ್ರೀ ಗಣೇಶಾಯ ನಮಃ ॥

## ೮೫ ನೆಯ ಅಧ್ಯಾಯ.

ಬ್ರಹ್ಮ :—

ಗಣೇಶನಿಗೆ ಐದನೆಯ ತಿಂಗಳು ನಡೆಯಲಾರಂಭಿಸಿತು. ಇಷ್ಟರಲ್ಲಿ ಮುನೀಶ್ವರನಾದ ಮರೀಚಿಯು ನಾರದನ ಮೂಲಕ ಗಿರಿಜೆಗೆ ಪುತ್ರನುದಿಸಿದುದನ್ನೂ ಹಾಗೂ ಅವನು ಬಹಳ ಬಲಾಢ್ಯನಾಗಿರುವ ಸಂಗತಿಯನ್ನೂ ಆಮೂಲಾಗ್ರವಾಗಿ ತಿಳಿದು, ಅಂತಹ ವಿಭೂತಿಪುರುಷನಾದ ಬಾಲಕನನ್ನು ಒಮ್ಮೆ ನೋಡಿಕೊಂಡು ಹೋಗೋಣವೆಂದು ಸಂಕಲ್ಪಿಸಿ, ತ್ರಿಸಂಧ್ಯಾಕ್ಷೇತ್ರಕ್ಕೆ ಬಂದರು ॥೧॥

ಮರೀಚಿ ಮಹರ್ಷಿಯು ಸಾಮಾನ್ಯನಾದವನಲ್ಲ. ತಪಸ್ಸಾಧನೆಯಿಂದ ಭೂತ, ಭವ್ಯ, ಭವಿಷ್ಯ ಸಂಗತಿಗಳನ್ನೆಲ್ಲ ಸುಲಭವಾಗಿ ತಿಳಿದುಕೊಳ್ಳುವಷ್ಟು ಶಕ್ತಿಯನ್ನು ಸಂಪಾದಿಸಿದವನು. ವೇದ-ವೇದಾರ್ಥಗಳನ್ನು ತತ್ತ್ವತಃ ತಿಳಿದಿರುವ ಮಹಾತ್ಮನು. ಇದು ತನ್ನದು, ಅದು ಪರಕೀಯ ಎಂಬ ವ್ಯಾಮೋಹ ರಹಿತನಾದವನು. ಅಂತೆಯೇ ಸುವರ್ಣ, ಕಬ್ಬಿಣಗಳೆರಡನ್ನೂ ಒಂದೇ ದೃಷ್ಟಿಯಲ್ಲಿ ನೋಡತಕ್ಕಷ್ಟು ನಿಃಸ್ಪೃಹನಾದವನು. ॥೨॥

---

[1] ವಿವರಣೆಗೆ ಪರಿಶಿಷ್ಟವನ್ನು ನೋಡಿರಿ.

ಸಂಹಾರೇ ರಕ್ಷಣೇ ಸೃಷ್ಟೌ ಮನಸಾ ಜಗತಃ ಕ್ಷಮಃ ।
ತಂ ದೃಷ್ಟ್ವೈವ ಪಾದಯೋಸ್ತಸ್ಯ ಪತಿತಾ ಸಖಿಭಿಃ ಸಹ ॥೩॥

ಉಪವೇಶ್ಯಾಸನೇ ಪಾದೌ ಕ್ಷಾಲಯಾಮಾಸ ಭಕ್ತಿತಃ ।
ತಜ್ಜಲಂ ಪಾವನಂ ಪೀತ್ವಾ ಸಿಷೇಚಾಂತರ್ಗೃಹಂ ಮುದಾ ॥೪॥

ಉಪಚಾರೈಃ ಷೋಡಶಭಿಃ ಪುಪೂಜೇಶ್ವರಭಾವನಾ ।
ಉವಾಚ ಪಾರ್ವತೀ ತುಷ್ಟಾ

---

ಚಿತ್ರ-ವಿಚಿತ್ರವಾದೀ ಜಗತ್ತನ್ನು ಕೇವಲ ಮನಸ್ಸಿನಿಂದಲೇ ಸೃಜಿಸಿ, ಪಾಲಿಸಬಲ್ಲವನು. ಹಾಗೂ ತನಗೆ ಬೇಡವೆಂದು ತೋರಿದಾಗ ಎಲ್ಲವನ್ನೂ ಕ್ಷಣ ಮಾತ್ರದಲ್ಲಿ ನಶಿಸಿಹೋಗುವಂತೆಯೂ ಮಾಡಬಲ್ಲವನು. ಆದರೆ 'ಇಂತಹ ಅದ್ಭುತಶಕ್ತಿ ತನಗೆ ದೊರೆತಿದೆ' ಎಂಬ ಸೊಕ್ಕಿನಿಂದ ಅದನ್ನು ಎಂದೆಂದಿಗೂ ದುರುಪಯೋಗಪಡಿಸಿಕೊಳ್ಳತಕ್ಕವನಲ್ಲ. ಇಂತಹ ಮಹಾ ಮಹಿಮನು ತನ್ನ ಮಂದಿರದ ಒಳಭಾಗಕ್ಕೆ ಬಂದುದನ್ನು ನೋಡಿ, ಪಾರ್ವತಿಯು ಭಕ್ತ್ಯನ್ವಿತಿತ ಳಾದಳು. ಲಗುಬಗೆಯಿಂದ ಅವನ ಸಮೀಪಕ್ಕೆ ಬಂದು ಮೊದಲು ಅವನ ಪಾದಾರವಿಂದಗಳಿಗೆ ನಮಸ್ಕರಿಸಿದಳು. ಅವಳ ಸಖೀಜನರು ಸಹ ಪಾರ್ವತಿಯೊಡನೆ ಮುನಿವರ್ಯನಿಗೆ ವಂದಿಸಿದರು. ॥೩॥

ಪಾರ್ವತಿಯು ಋಷಿಯನ್ನು ಉನ್ನತವಾದ ಸುಖಾಸನದಲ್ಲಿ ಕುಳ್ಳಿರಿಸಿದಳು. ಅವನ ಪಾದಕಮಲಗಳನ್ನು ಸು-ಗಂಧಿ ಜಲದಿಂದ ಕ್ಷಾಲನಮಾಡಿದಳು. ಆಗ ಅವಳ ಹೃದಯದಲ್ಲುದ್ಬುದ್ಧವಾದ ಭಕ್ತಿಭಾವಕ್ಕೆ ಮಿತಿಯೇ ಇರಲಿಲ್ಲ. ಅನಂತರ ಮುನಿಯ ಪವಿತ್ರ ಪಾದೋದಕವನ್ನು ಪ್ರಾಶನಮಾಡಿದಳು. ಮತ್ತು ತನ್ನ ಅಂತರ್ಮಂದಿರದ ಒಳ-ಹೊರಭಾಗಗಳಿಗೆಲ್ಲ ಸಂತೋಷದಿಂದ ಪ್ರೋಕ್ಷಣೆ ಮಾಡಿದಳು. ಆಗ ಅವಳಿಗೊಂದು ಬಗೆಯಿಂದ ಸಮಾಧಾನವೆನಿಸಿದ್ದಿತು. ॥೪॥

ಧ್ಯಾನಾವಾಹನಾದಿ ಷೋಡಶೋಪಚಾರಗಳನ್ನೂ ಅರ್ಪಿಸಿ ಜಾಗರೂಕತೆಯಿಂದ ಅವರನ್ನು ಅರ್ಚಿಸಿದಳು. ಮುನಿಯನ್ನು ಪೂಜಿಸುವಾಗ 'ಇವನೇ ಸಾಕ್ಷಾತ್ಪರಮೇಶ್ವರ' ಎಂಬ ಅತ್ಯುಚ್ಚತಮ ಭಾವನೆಯು ಅವಳಲ್ಲಿ ಬೇರೂರಿದ್ದಿತು.

ಪಾರ್ವತ್ಯುವಾಚ :—

ಅಲಭ್ಯಂ ದೃಷ್ಟಂ ಪದಂ ಹಿ ತೇ ||೫||

ಮುನಿರುವಾಚ :—

ಅಹಮಾತ್ಮಮನಸಾ ದೇವಿ ! ನ ವ್ರಜಾಮಿ ಹಿ ಕುತ್ರಚಿತ್ ।
ಅಕಸ್ಮಾದ್ಧ್ಯಾನವಿಷಯಸ್ತವ ಪುತ್ರೋ ಬಭೂವ ಮೇ ||೬||

ತಸ್ಯ ತೇ ದರ್ಶನಾಕಾಂಕ್ಷೀ ಶಿವಸ್ಯಾಪ್ಯಹಮಾಗತಃ ।

---

ಪೂಜಾಕಾರ್ಯವು ನಿರ್ಬಾಧಕವಾಗಿ ನೆರವೇರಿದ ಬಳಿಕ ಬಹಳ ಸಂತೋಷಿಸಿ, ಮುನಿರಾಜನನ್ನು ಕುರಿತು ಗೌರಿಯು ಹೀಗೆಂದು ನುಡಿದಳು.

ಗೌರೀ :—

ಎಂತಹ ಪುಣ್ಯಶಾಲಿಗಳಿಗೂ ಲಭಿಸದಂತಹ ತಮ್ಮ ಚರಣಕಮಲಗಳ ಸಂದರ್ಶನವು ಇಂದು ನನಗೆ ಲಭಿಸಿತು. ||೫||

ಮರೀಚಿ :—

ಮಹಾದೇವಿ ! ಕೇಳು. ನಾನು ಸರ್ವದಾ ಆತ್ಮಾನುಸಂಧಾನದಿಂದಲೇ ಇರತಕ್ಕವನು. ಅದೇ ನನಗೆ ಪರಮಾನಂದ. ಮತ್ತು ಜೀವಿತದ ಗುರಿ. ಆದುದರಿಂದ ನಾನು ಎಲ್ಲೆಲ್ಲಿಗೂ ಹೋಗತಕ್ಕವನೇ ಅಲ್ಲ. ನಾನು ಒಮ್ಮೆ ಧ್ಯಾನಾಸಕ್ತನಾಗಿ ಕುಳಿತಿದ್ದೆನು. ಈಗ ನಿನಗೆ ಸು-ಪುತ್ರನಾಗಿ ಜನಿಸಿರುವ ಪರವಸ್ತುವಿನ ಸಾಕಾರ ಮೂರ್ತಿಯು ನನಗೆ ಭಾಸವಾಯಿತು. ||೬||

ದೇವರ ದೇವನಾದ ಗಣಪತಿಯ, ಸರ್ವಮಂಗಳೆಯಾದ ನಿನ್ನ ಹಾಗೂ ಸರ್ವಲೋಕೈಕಶರಣನಾದ ಪರಮೇಶ್ವರನನ್ನು ಸಂದರ್ಶಿಸಿ ಹೋಗೋಣವೆಂದು ಅಭಿಲಾಷೆ ಉಂಟಾಯಿತು. ಹಾಗೆಯೇ ಹೊರಟು ಬಂದಿರುವೆನು.

**ಕ ಉವಾಚ :—**

**ಏವಮಾಕರ್ಣ್ಯ ಸಾ ವಾಕ್ಯಂ ತಸ್ಯರ್ಷೇಸ್ತನಯಂ ಸ್ವಕಮ್ ॥೭॥**

**ಅತಿಪ್ರೀತಮನಾ ಗೌರೀ ತಸ್ಯಾಂಕೇ ಸನ್ಯವೇಶಯತ್ ॥**

**ಊಚೇ ಸಾ ತಂ**

**ಗೌರ್ಯುವಾಚ :—**

**ಮಹಾಭಾಗ್ಯಂ ಫಲಿತಂ ದರ್ಶನಾತ್ತವ ॥೮॥**

**ಪುಣ್ಯಂ ಚ ಪರಮಂ ಪ್ರಾಪ್ತಂ ಶುಭಮಗ್ರೇ ಭವಿಷ್ಯತಿ ।**

---

ಬ್ರಹ್ಮ :—

ಮರೀಚಿ ಮಹರ್ಷಿಯು ಆಡಿದ ನಿರಹಂಕಾರದ ಸರಳ ನುಡಿಗಳನ್ನು ಆಲೈಸಿ, ಪಾರ್ವತಿಯು ಒಡನೆಯೇ ತನ್ನ ಅಂತರ್ಗೃಹಕ್ಕೆ ಹೋಗಿ ತನ್ನ ಮಗ; ಗಣಪತಿಯನ್ನು ಕರೆದುಕೊಂಡು ಅಲ್ಲಿಗೆ ಬಂದಳು. ॥೭॥

ಬರುವಾಗ ಮಗುವನ್ನು ಮುದ್ದಾಡುತ್ತಲೇ ಇದ್ದಳು. ಆಗ ಅವಳಿಗುಂಟಾಗಿದ್ದ ಸಂತೋಷವನ್ನು ಬಣ್ಣಿಸಲಾರೆ. ಋಷಿಯು ಸಮೀಪಕ್ಕೆ ಬಂದೊಡನೆಯೇ ತನ್ನ ಬಾಲಕನನ್ನೆತ್ತಿ ಮುನಿರಾಜನ ಅಂಕದಲ್ಲಿ ಪ್ರೀತಿಯಿಂದ ಕುಳ್ಳಿರಿಸಿದಳು. ಮತ್ತು ಮರೀಚಿ ಮಹರ್ಷಿಯನ್ನು ಕುರಿತು ಹೀಗೆಂದು ನುಡಿದಳು.

ಗೌರೀ :—

ಮುನಿರಾಜ ! ನನ್ನ ಭಾಗ್ಯ ಬಹಳ ದೊಡ್ಡದು. ಪೂರ್ವಪುಣ್ಯ ಇಂದಿಗೆ ಫಲಿಸಿತು. ಆದುದರಿಂದಲೇ ನಿನ್ನ ದರ್ಶನ ನನಗೆ ದೊರೆಯಿತು. ॥೮॥

ತಮ್ಮ ಪವಿತ್ರತಮ ಮೂರ್ತಿಯನ್ನು ಸಂದರ್ಶಿಸಿದ್ದರಿಂದ ನನ್ನ ಪುಣ್ಯರಾಶಿಯು ಮತ್ತಷ್ಟು ಅಭಿವೃದ್ಧಿಯನ್ನು ಹೊಂದಿತು. ‘ ಇನ್ನು ಮುಂದೆ ಒಳ್ಳೆಯದಾಗುವುದು ’ ಎಂಬ ಭವ್ಯ ಭವಿಷ್ಯವನ್ನು ಇದು ಸೂಚಿಸುತ್ತದೆ.

ಮುನಿರುವಾಚ :—

ಗೌರಿ ! ತೇಽಯಂ ಸುತೋ ಬ್ರಹ್ಮಸ್ವರೂಪೋ ಭಾಸತೇ ಮಮ ||೯||

[1] ಷಟ್ಚಕ್ರಭೇದನರತಾ ಯೋಗನಿಷ್ಠಾ ಮಹರ್ಷಯಃ ।
ವಾಯುಭಕ್ಷ್ಯಾ ಉಪಾಸಂತೇಽಯಂತೇ ಸೋಽಯಂ ತವಾತ್ಮಜಃ ||೧೦||

ಗುಣತ್ರಯವಿಭೇದೇನ ತ್ರಿ-ತನುಸ್ತ್ರಿಕ್ರಿಯಾಕರಃ ।
ಯತ್ಸತ್ತಯಾಥ ಶೇಷೋಽಪಿ ವಹತೇ ಮಸ್ತಕೇ ಭುವಮ್ ||೧೧||

---

ಮರೀಚಿ :—

ಗೌರಿ ! ನಾನು ಹೆಚ್ಚು ಹೇಳಲಾರೆ. ಈ ನಿನ್ನ ಸು-ಪುತ್ರನು ಪರಬ್ರಹ್ಮನ ಸ್ವರೂಪ ಎಂದು ನನಗಂತೂ ಭಾಸವಾಗುತ್ತಲಿದೆ. ||೯||

ದೇಹಗತ ಮೂಲಾಧಾರಾದಿ ಆರು ಬಗೆಯ ಚಕ್ರಗಳನ್ನೂ ವಿಭೇದಿಸಿ ಅವುಗಳ ಬಂಧನಕ್ಕೆ ಒಲಿ ಬೀಳಬಾರದೆಂದು ಪ್ರಯತ್ನಿಸುವ ಯೋಗನಿಷ್ಠರಾದ ಮಹರ್ಷಿಗಳು ಸರ್ವದಾ ಧ್ಯಾನಿಸುತ್ತಿರುವುದೂ ಇವನನ್ನೇ ಅವರ ಐಕಾಗ್ರ್ಯ ಕಡಿಮೆ ದರ್ಜೆಯದೇನೂ ಅಲ್ಲ. ಧ್ಯೇಯ ವಸ್ತುವನ್ನು ಉಪಾಸಿಸುವಾಗ ಅವರು ತಮ್ಮ ದೇಹಕ್ಕೆ ಪುಷ್ಟಿಕರವಾದ ಆಹಾರವನ್ನೀಯಲು, ಸಹ ಹೋಗುವುದಿಲ್ಲ ಹಾಗೇನಾದರೂ ಕೊಡ ಹೋದರೆ, ಅದನ್ನು ಸಂಪಾದಿಸಿ ತಂದು ಪಕ್ವಗೊಳಿಸಿ, ಭುಜಿಸಲು ಹೆಚ್ಚು ಕಾಲ ವ್ಯರ್ಥವಾಗಿ ಕಳೆದುಹೋಗುವುದೆಂದೂ ಮತ್ತು ದೇಹವು ಪುಷ್ಟಿಗೊಂಡಷ್ಟೂ ನಿದ್ರಾಲಸ್ಯಾದಿ ವಿಕಾರಗಳಿಗೆ ವಶವಾಗಿ, ಧ್ಯಾನಕ್ಕೆ ಧಕ್ಕೆ ಬಂದೀತೆಂದು ಹೆದರಿ, ಪ್ರಾಣಧಾರಣೆಗೆ ಮಾತ್ರ ಸಾಕಾಗುವಂತೆ ವಾಯುವನ್ನೇ ಭಕ್ಷಿಸುತ್ತಲಿರುವವರು. ಅಂಥವರ ಏಕಾಗ್ರ ಧ್ಯಾನಕ್ಕೆ ವಿಷಯನಾದವನು, ನಿನ್ನ ಈ ಮಗ. ||೧೦||

ಇವನು ಈಗ ಬಾಲಕನಂತೆ ಕಂಡು ಬರುತ್ತಿರುವನು. ಇದೇ ಇವನ ತಾತ್ತ್ವಿಕವಾದ ರೂಪವೆಂದು ಮಾತ್ರ ಭಾವಿಸಬೇಡ. ಇದರಂತೆ ಇವನು ಎಷ್ಟೆಷ್ಟೋ

---

[1] ವಿವರಣೆಗೆ ಪರಿಶಿಷ್ಟವನ್ನು ನೋಡಿರಿ.

**ಅಣುರೂಪಃ ಸ್ಥೂಲರೂಪಃ ಸಪ್ತವಿಂಶತಿತತ್ತ್ವಕೃತ್ ।**
**ಚೇತನಾಚೇತನಂ ವಿಶ್ವಂ ಯದ್ರೂಪಂ ಸರ್ವಕರ್ಮಕೃತ್ ॥೧೨॥**

**ಯುಗೇ ದಶಭುಜಃ ಪೂರ್ವೇ ಸಿಂಹಾರೂಢೋ ವಿನಾಯಕಃ ।**

---

ರೂಪಗಳನ್ನು ಹಿಂದೆ ತಳೆದಿದ್ದಾನೆ. ಮುಂದೆಯೂ ಸಹ ಅನೇಕ ಬಗೆಯಿಂದ ಕಂಗೊಳಿಸುವನು, ಕೇಳು. ಸತ್ತ್ವ ರಜಸ್ತಮೋಗುಣಗಳನ್ನು ವಿಂಗಡಿಸಿ ಅವುಗಳಲ್ಲಿ ಒಂದೊಂದನ್ನೇ ಸಾಧನವನ್ನಾಗಿ ಮಾಡಿಕೊಂಡು ಅವುಗಳಲ್ಲಿ ಪ್ರತ್ಯೇಕವಾಗಿ ಪ್ರತಿಬಿಂಬಿಸುತ್ತ 'ತ್ರಿಮೂರ್ತಿ'ಗಳೆನಿಸಿ, ನಮ್ಮೆಲ್ಲರಿಗೂ ತೋರಿಬರುತ್ತಿರುವವನೂ ಈ ಬಾಲಕನೇ. ಮತ್ತು ಆಯಾ ಮೂರ್ತಿಗಳು ಮಾಡುತ್ತಿರುವ ಸೃಷ್ಟಿ, ಸ್ಥಿತಿ ಲಯಗಳೂ ಇವನ ಕಾರ್ಯಗಳೇ ಆಗಿವೆ. ಇದರಲ್ಲಿ ನೀನು ಸರ್ವಥಾ ಸಂದೇಹ ಪಡಬೇಡ. ಇವನು ಅನುಗ್ರಹಿಸಿರುವ ಶಕ್ತಿ, ಸಾಮರ್ಥ್ಯಗಳನ್ನವಲಂಬಿಸಿಯೇ ಸಹಸ್ರ ಫಣನಾದ ಆದಿಶೇಷನು ಸರ್ವಾಧಾರವಾದ ಈ ಭೂಮಿಯನ್ನು ತನ್ನ ತಲೆಯ ಮೇಲೆ ಹೊತ್ತು ನಿಂದಿರುವುದು- ॥೧೧॥

ಇವನು ಸ್ವಭಾವತಃ ಅಶರೀರಿಯಾದುದರಿಂದ ಅಣು (ಕಣ್ಣು ಮೊದಲಾದ ಸಾಧನ ಸಾಮಗ್ರಿಗಳಿಗೆ ಅರಿವಾಗದ್ದು) ವಿಗಿಂತಲೂ ಅಣುತಮವಾಗಿದ್ದಾನೆ. ಪಂಚಭೂತಗಳು, ಇವುಗಳ ಕಾರ್ಯಗಳಾದ ಗುಡ್ಡ, ಕಾಡು, ಬೀಡು, ಸಮುದ್ರ, ಹೆಚ್ಚೇನು? ನಾನು, ನೀನು ಈ ದೃಶ್ಯವೆಲ್ಲ ಇವನೇ ಆಗಿರುವನು. ಇದನ್ನೇ ಪರಮಾತ್ಮನ ಬಾಹ್ಯ ರೂಪವೆಂದು ಕರೆಯುವರು. ಆದುದರಿಂದಲೇ ಉಪನಿಷತ್ತು ಇವನನ್ನು 'ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣಂ' ಎಂದರೆ ಅಲ್ಲಿರುವುದೂ ಇವನಿಂದ ತುಂಬಿದೆ. ಇಲ್ಲಿರುವುದೂ ಇವನಿಂದ ತುಂಬಿ ತುಳುಕುತ್ತಿದೆ. ಇವನು ತುಂಬಬಹುದಾದಂತಹ ಸೂಕ್ಷ್ಮ ವಸ್ತುವನ್ನೂ ತುಂಬುವಷ್ಟು ಸೂಕ್ಷ್ಮತಮನಾಗಿದ್ದಾನೆ, ಎಂದು ಬಾಯಿತುಂಬ ಬಣ್ಣಿಸುತ್ತದೆ. ಇಪ್ಪತ್ತೇಳು ತತ್ತ್ವಗಳನ್ನೂ ಇವನೇ ರಚಿಸಿದವನು. ಚಿಜ್ಜಡ ಉಭಯ ರೂಪಗಳಿಂದಲೂ ತೋರುವ ಈ ವಿಶ್ವ, ಆದರ ಚಲನ-ವಲನಗಳು ಅರ್ಥಾತ್ ಕ್ರಿಯೆ ಎಲ್ಲವೂ ಈ ನಿನ್ನ ಪುಟ್ಟ ಕೂಸಿನದೇ. ತಿಳಿಯಿತೇ? ॥೧೨॥

ದುಷ್ಟನಿಗ್ರಹ, ಶಿಷ್ಟಪರಿಪಾಲನೆ ಇವೇ ಪರಮಾತ್ಮನು ಮಾಡತಕ್ಕ ಕೆಲಸ

---

ವಿವರಣೆಯನ್ನು ಪರಿಶಿಷ್ಟದಲ್ಲಿ ನೋಡಿ.

ದ್ವಿತೀಯೋ ಷಡ್ಭುಜೋ ಬರ್ಹಿವಾಹನಃ ಶಶಿಸನ್ನಿಭಃ ॥೧೩॥

'ಮಯೂರೇಶ' ಇತಿ ಖ್ಯಾತೋ ನಾನಾ ದೈತ್ಯನಿಬರ್ಹಣಃ ।
ತೃತೀಯೋ ತು ಯುಗೇ ದೇವೋ ರಕ್ತವರ್ಣಶ್ಚತುರ್ಭುಜಃ ॥೧೪॥

'ಗಜಾನನ' ಇತಿ ಖ್ಯಾತೋ ಧೂಮ್ರವರ್ಣಃ ಕಲೌ ಯುಗೇ ।
'ಧೂಮಕೇತು'ರಿತಿ ಖ್ಯಾತೋ ದ್ವಿಭುಜಃ ಸರ್ವದೈತ್ಯಹಾ ॥೧೫॥

ಗಳಾಗಿವೆ. ಅಖಂಡ ಚಿನ್ಮಯನಾದ ಇವನು ಅದಕ್ಕಾಗಿಯೇ ಆಕೃತಿಗೊಂಡು ಆಗಾಗ್ಗೆ ಭೂಮಿಯಲ್ಲಿ ಅವತರಿಸುತ್ತಾನೆ. ವಿವರಿಸುವೆನು, ಕೇಳು. ಮೊದಲು ಎಂದರ ಕೃತಯುಗದಲ್ಲಿ ದಶಭುಜಮಂಡಿತನಾಗಿ ಅವತರಿಸಿದ್ದನು. ಆಗ ಇವನ ವಾಹನ ಮೃಗೇಂದ್ರ; ಸಿಂಹ. ಇವನ ಆಗಿನ ಅವತಾರಿಕವಾದ ಹೆಸರು, ವಿನಾಯಕ. ಎರಡನೆಯದಾದ ತ್ರೇತಾಯುಗ ಎಂದರೆ ಪ್ರಕೃತದಲ್ಲಿ ಷಡ್ಭುಜನಾಗಿ, ನವಿಲನು ವಾಹನದಂತೆ ಉಪಯೋಗಿಸುತ್ತ ಅವತರಿಸಿದ್ದಾನೆ. ಇವನ ದೇಹಕಾಂತಿಯನ್ನಾದರೂ ನೋಡು, ಪೂರ್ಣ ಚಂದ್ರನಂತೆ ಹೇಗೆ ಶುಭ್ರವಾಗಿ ಹೊಳೆಯುತ್ತಲಿದೆ? ॥೧೩॥

ಈ ಅವತಾರದಲ್ಲಿ ಇವನು ಅನೇಕ ಮಂದಿ ದೈತ್ಯರನ್ನು ನಿಗ್ರಹಿಸುವನು. ಇವನ ಈಗಿನ ಹೆಸರು 'ಮಯೂರೇಶ' ಇದೇ ಸರ್ವತ್ರ ಪ್ರಸಿದ್ಧಿಗೆ ಬರುತ್ತದೆ. ಮೂರನೆಯದೇ ದ್ವಾಪರಯುಗ- ಆ ಯುಗದಲ್ಲಿ ಈ ದೇವನು ರಕ್ತವರ್ಣನಾಗಿರುವನು. ಆ ಅಂಗರಚನೆಗೆ ನಾಲ್ಕು ಕೈಗಳು ಮಾತ್ರ ಇರುವುವು. ॥೧೪॥

ಆಗ ಇವನು 'ಗಜಾನನ' ಎಂಬ ಹೆಸರಿನಿಂದ ಖ್ಯಾತಿಗೊಳ್ಳುವನು. ಕಲಿಯುಗದಲ್ಲಿ ಹೇಗೆ ಅವತರಿಸುವನು, ಗೊತ್ತೇ ? ಹೇಳುವೆನು, ಕೇಳು. ಹೊಗೆಯಂತಹ ಬಣ್ಣದಿಂದ ಇವನ ದೇಹವು ಹೊಳೆಯುತ್ತಿರುವುದು. ಎರಡೇ ಭುಜಗಳಿರುವುವು. ಆಗ ಪರಮ ಪಾತಕಿಗಳಾದ ಸಕಲ ದೈತ್ಯ ಸ್ವಭಾವದವರನ್ನೂ ಇವನು ನಿರ್ಮೂಲಗೊಳಿಸುವನು. ಕಲಿಯುಗದ ಜನರು ಇವನನ್ನು 'ಧೂಮಕೇತು' ಎಂದು ಕರೆಯುತ್ತಾರೆ. ॥೧೫॥

**ಏತಸ್ಯ ರಕ್ಷಣಂ ಗೌರಿ ! ದೈತ್ಯೇಭ್ಯಃ ಕುರು ಸರ್ವದಾ ।**

**ಗೌರ್ಯುವಾಚ :—**

**ಏಷೋಽತಿಚಪಲೋ ಬಾಲೋ ದೈತ್ಯಾನ್ ಹಂತಿ ಬಹೂನಪಿ ||೧೬||**

**ಅಗ್ರೇ ಕಿಂ ಕರ್ಮ ಕರ್ತೇತಿ ನ ಜಾನೇ ಮುನಿಸತ್ತಮ !**
**ದೈತ್ಯಾ ನಾನಾವಿಧಾ ದುಷ್ಟಾಃ ಸಾಧು-ದೇವದ್ರುಹಃ ಖಲಾಃ ||೧೭||**

---

ಇರಲಿ, ಗೌರಿ ! ದುಷ್ಟರಾದ ದೈತ್ಯರು ತಮ್ಮ ಕುಲಕ್ಕೆ ಕಂಟಕನಾದ ಇವನ ಇರುವಿಕೆಯನ್ನು ಸಹಿಸುವುದಿಲ್ಲ. ಆದುದರಿಂದ ಒಂದಿಲ್ಲೊಂದು ಬಗೆಯ ಮಾಯೆಯನ್ನು ಬೀರಿ, ಬಾಲಕನನ್ನು ಅಪಹರಿಸಲು ಹವಣಿಸುತ್ತಲೇ ಇರುವರು. ಇವನು ಯಾರಿಗೂ ಸಗ್ಗುವವನಲ್ಲವಾದರೂ ನಮ್ಮ ಜಾಗರೂಕತೆಯಲ್ಲಿ ಇರಬೇಕಾದುದು ಆದ್ಯ ಕರ್ತವ್ಯ. ನಮ್ಮ ಕರ್ತವ್ಯದಲ್ಲಿ ಲೋಪ ಬರಬಾರದಲ್ಲವೇ ? ಆದುದರಿಂದ ಗೌರಿ ! ಇವನನ್ನು ನಿನ್ನ ಕಣ್ಣೆಂದು ಭಾವಿಸಿ, ಸಂರಕ್ಷಿಸುತ್ತಲೇ ಇರಬೇಕು.

ಗೌರೀ :—

ಭಗವನ್ ! ನಾನು ಏನೆಂದು ಹೇಳಲಿ, ಇವನೋ ಈ ವಯಸ್ಸಿನಲ್ಲೇ ಬಹಳ ಚಪಲನಾಗಿಬಿಟ್ಟಿದ್ದಾನೆ. ದೈತ್ಯರು ಎಷ್ಟೇ ಮಂದಿ ಬರಲಿ, ಅವರನ್ನೆಲ್ಲ ನಿರ್ಲಕ್ಷ್ಯದಿಂದ ಕೊಂದುಬಿಡುತ್ತಿರುವನು. ||೧೬||

ಮುನಿವರ ! ವಯಸ್ಸಿಗೆ ಬಂದ ಮೇಲೆ ಇವನು ಹೇಗಾಗುವನೋ ? ಯಾವ ಯಾವ ಕಾರ್ಯಗಳನ್ನು ಮಾಡುವನೋ. ನನಗಂತೂ ಒಂದೂ ತಿಳಿಯದಂತಾಗಿದೆ. ದುಷ್ಟರೂ, ಸಾಧು-ದೇವತೆಗಳಿಗೆ ದ್ರೋಹವೆಣಿಸುವವರೂ ಆದ ಖಲ ದೈತ್ಯರು ಎಲ್ಲೆಲ್ಲಿ ನೋಡಿದರೂ ತುಂಬಿ ಹೋಗಿದ್ದಾರೆ. ಅವರೋ ಇವನನ್ನು ಹೊಂಚುಕಾಯುತ್ತಲೇ ಇದ್ದಾರೆ. ಇವನಂತೂ ಸರಿಯೋ ಸರಿ, 'ಬಂದಷ್ಟು ಜನ ಬರಲಿ, ಸದೆ ಬಡಿದು ಬಿಡುವೆನು' ಎಂದು ಸೆಡ್ಡು ಹೊಡೆದು ನಿಂದಿದ್ದಾನೆ. ಏತನ್ಮಧ್ಯೇ ಸಿಕ್ಕಿಕೊಂಡು ನರಳುತ್ತಿರುವ ಅಬಲೆ; ನಾನು ಏನನ್ನು ಮಾಡಬಹುದು ? ಮುನಿವರ ! ತಾವೇ ಆಲೋಚಿಸಿ. ||೧೭||

ಅತೋಽಸ್ಯ ಕಂಠೇ ಕಿಂಚಿತ್ತ್ವಂ ರಕ್ಷಾರ್ಥಂ ಬದ್ಧುಮರ್ಹಸಿ |

ಮುನಿರುವಾಚ :—

ಧ್ಯಾಯೇತ್ಸಿಂಹಗತಂ ವಿನಾಯಕಮಮುಂ ದಿಗ್ಬಾಹುಮಾದ್ಯೇ ಯುಗೇ
ತ್ರೇತಾಯಾಂ ತು ಮಯೂರವಾಹನಮಮುಂ ಷಡ್ಬಾಹುಕಂ
ಸಿದ್ಧಿದಮ್ ||
ದ್ವಾಪಾರೇ ತು ಗಜಾನನಂ ಯುಗಭುಜಂ ರಕ್ತಾಂಗರಾಗಂ ವಿಭುಂ
[1] ತಿಷ್ಯೇ ತು ದ್ವಿಭುಜಂ ಸಿತಾಂಗರುಚಿರಂ ಸರ್ವಾರ್ಥದಂ ಸರ್ವದಾ ||೧೮||

ವಿನಾಯಕಃ ಶಿಖಾಂ ಪಾತು ಪರಮಾತ್ಮಾ ಪರಾತ್ಪರಃ |

---

ನನಗೊಂದು ಯುಕ್ತಿ ಹೊಳೆಯುತ್ತಲಿದೆ, ಮುನಿರಾಜ ! ತಾವು ಮಹಾ ತಪಸ್ವಿದ್ದರು. ಹೇಗೂ ದಯೆಮಾಡಿರುವಿರಿ. ನನ್ನ ಈ ಕೂಸಿಗೆ ಯಾವ ಅನಿಷ್ಟವೂ ತಟ್ಟದಂತೆ ಒಂದು ರಕ್ಷಾಯಂತ್ರವನ್ನು ಇವನ ಕತ್ತಿಗೆ ಕಟ್ಟಬಿಡಿರಿ. ಎಂದರೆ ನಾನು ಸ್ವಲ್ಪ ನೆಮ್ಮದಿಯಿಂದಲಾದರೂ ಇದ್ದೇನು.

ಮರೀಚಿ :—

ಕೃತಯುಗದಲ್ಲಿ ದಶಭುಜಭೂಷಿತನಾದ 'ಸಿಂಹಾರೂಢ' ವಿನಾಯಕನನ್ನು ಧ್ಯಾನಿಸತಕ್ಕದ್ದು. ತ್ರೇತಾಯುಗದಲ್ಲಿ ಷಡ್ಬಾಹುಗಳಿಂದ ಕಂಗೊಳಿಸುವ ಮಯೂರ ವಾಹನ, ಸರ್ವಾರ್ಥದಾತ, ಇವನನ್ನು ಧ್ಯಾನಿಸತಕ್ಕದ್ದು. ದ್ವಾಪರ ಯುಗದಲ್ಲಿ ಚತುರ್ಭುಜಯುತನಾದ ಕೆಂಪು ದೇಹದವಿಭು ; ಗಜಾನನನನ್ನು ಭಜಿಸತಕ್ಕದ್ದು. ಇದರಂತೆ ಕಲಿಯುಗದಲ್ಲಿ ನಮ್ಮ ಹಾಗೆ ಎರಡು ಭುಜಗಳಿಂದ ಮೆರೆವ, ಸಿತಾಂಗನಾಗಿ ಶೋಭಿಸುವ; ಸಕಲ ಸಿದ್ಧಿದಾಯಕನಾದ ಪ್ರಭುವನ್ನು ಸರ್ವದಾ ಧ್ಯಾನಿಸುತ್ತಲೇ ಇರತಕ್ಕದ್ದು. ||೧೮||

ಪರಾತ್ಪರತರನೂ, ಸರ್ವರಿಗೂ ಅಂತರಾತ್ಮನೂ ಆದ ವಿನಾಯಕನು ಇವನ

---

[1] ವಿವರಣೆಗೆ ಪರಿಶಿಷ್ಟವನ್ನು ನೋಡಿರಿ.

ಅತಿ ಸುಂದರಕಾಯಸ್ತು ಮಸ್ತಕಂ ಸು-ಮಹೋತ್ಕಟಃ ||೧೯||

ಲಲಾಟಂ ಕಾಶ್ಯಪಃ ಪಾತು ಭ್ರೂಯುಗಂ ತು ಮಹೋದರಃ |
ನಯನೇ ಭಾಲಚಂದ್ರಸ್ತು ಗಜಾಸ್ಯಶ್ಚೋಷ್ಠಪಲ್ಲವೌ ||೨೦||

ಜಿಹ್ವಾಂ ಪಾತು ಗಣಕ್ರೀಡಃ ಚುಬುಕಂ ಗಿರಿಜಾಸುತಃ |
ವಾಚಂ ವಿನಾಯಕಃ ಪಾತು ದಂತಾನ್ ರಕ್ಷತು ದುರ್ಮುಖಃ ||೨೧||

ಶ್ರವಣೌ ಪಾಶಪಾಣಿಸ್ತು ನಾಸಿಕಾಂ ಚಿಂತಿತಾರ್ಥದಃ |
ಗಣೇಶಸ್ತು ಮುಖಂ ಕಂಠಂ ಪಾತು ದೇವೋ ಗಣಂಜಯಃ ||೨೨||

---

ಶಿಖೆಯನ್ನು ಸಂರಕ್ಷಿಸಲಿ, ನವ ಮನ್ಮಥನಂತೆ ಅತ್ಯಂತ ಸುಂದರತನುವಾದ ಭಗವಾನ್ ಮಹೋತ್ಕಟನು ಇವನ ಶಿರಸ್ಸನ್ನು ಸರ್ವದಾ ಸಂರಕ್ಷಿಸಲಿ. ||೧೯||

ಕಶ್ಯಪ ಬ್ರಹ್ಮನಿಗೆ ಮಗನಾಗಿ ಅವತರಿಸಿದ್ದ ದೇವದೇವನು ಈ ಬಾಲಕನ ಫಾಲ ಪ್ರದೇಶವನ್ನು ಕಾಪಾಡಲಿ. ಚತುರ್ದಶ ಭುವನಗಳನ್ನೇ ತನ್ನ ಉದರದಲ್ಲಿ ಅಡಗಿಸಿ ಕೊಂಡಿರುವ ಮಹೋದರನು ಗೌರೀಸುತನ ಭ್ರೂ-ಯುಗಲವನ್ನು ಕಾಪಿಡಲಿ. ಫಾಲದಲ್ಲಿ ಚಂದ್ರನನ್ನು ಅಲಂಕಾರಾರ್ಥವಾಗಿ ಧರಿಸಿದ ಭಾಲಚಂದ್ರನು ಇವನ ನಯನಗಳನ್ನು ಸಂರಕ್ಷಿಸಲಿ. ಮತ್ತ ಮತಂಗಜದಂತೆ ವದನಾರವಿಂದ ಉಳ್ಳ ದೇವನು ಈ ಶಿಶುವಿನ ತುಟಿಗಳೆರಡನ್ನೂ ಸಂರಕ್ಷಿಸಲಿ.

ತನ್ನ ಗಣಗಳೊಡನೆ ಸರ್ವದಾ ಕ್ರೀಡಿಸುವ ಗಣಪತಿಯು ಇವನ ನಾಲಿಗೆಯನ್ನು ಕಾಪಾಡಲಿ, ಗಿರಿವರನಂದಿನಿಗೆ ಜ್ಯೇಷ್ಠ ಪುತ್ರನಾಗಿ ಜನಿಸಿದ ಭಗವಂತನು ಈ ಬಾಲಕನ (ಹನುಗದ್ದ)ವನ್ನು ಕಾಪಾಡಲಿ, ವಿನಾಯಕನು ಇವನ ವಾಗಿಂದ್ರಿಯವನ್ನು ಕಾಪಾಡಲಿ, ರಾಕ್ಷಸರ ವಿಷಯದಲ್ಲಿ ದುರ್ಮುಖನಾಗಿ ತೋರುವ ಸುಮುಖನು ಈ ಬಾಲಕನ ದಂತಪಙ್ಕ್ತಿಗಳನ್ನು ಸಂರಕ್ಷಿಸಲಿ. ||೨೧||

ಪಾಶವನ್ನೇ ಆಯುಧವನ್ನಾಗಿ ಧರಿಸಿರುವ ಪಾಶಪಾಣಿಯು ಈ ಶಿಶುವಿನ ಶ್ರೋತ್ರಗಳನ್ನು ಬಾಧಿರ್ಯದೋಷದಿಂದ ರಕ್ಷಿಸಲಿ, ಭಕ್ತರು ಬೇಕೆಂದು ಬಯಸುವ ಬೇಡಿಕೆಗಳನ್ನು ಅನುಗ್ರಹಿಸುವ ದೇವನು ಇವನ ಘ್ರಾಣೇಂದ್ರಿಯವನ್ನು ರಕ್ಷಿಸಲಿ.

ಸ್ಕಂಧೌ ಪಾತು ಗಜಸ್ಕಂಧಃ ಸ್ತನೌ ವಿಘ್ನವಿನಾಶನಃ ।
ಹೃದಯಂ ಗಣನಾಥಸ್ತು ಹೇರಂಬೋ ಜಠರಂ ಮಹಾನ್ ॥೨೩॥

ಧರಾಧರಃ ಪಾತು ಪಾರ್ಶ್ವಂ ಪೃಷ್ಠಂ ವಿಘ್ನಹರಃ ಶುಭಃ ।
ಲಿಂಗಂ ಗುಹ್ಯಂ ಸದಾಪಾತು ವಕ್ರತುಂಡೋ ಮಹಾಬಲಃ ॥೨೪॥

ಗಣಕ್ರೀಡೋ ಜಾನು-ಜಂಘೇ ಊರೂ ಮಂಗಲಮೂರ್ತಿಮಾನ್ ।
ಏಕದಂತೋ ಮಹಾಬುದ್ಧಿಃ ಪಾದೌ ಗುಲ್ಫೌ ಸದಾವತು ॥೨೫॥

---

ಗಣಗಳಿಗೆಲ್ಲ ಅಧೀಶ್ವರನಾದವನು ಇವನ ಮುಖವನ್ನು ಕಾಪಾಡಲಿ, ಶತ್ರುಗಣವನ್ನು ಸದೆಬಡಿಯಬಲ್ಲ ದೇವನು ಈ ಶಿಶುವಿನ ಕಂಠಪ್ರದೇಶವನ್ನು ಸಂರಕ್ಷಿಸಲಿ. ॥೨೨॥

ದಿಗ್ಗಜದಂತೆ ವಿಶಾಲವಾದ ಸ್ಕಂಧಗಳುಳ್ಳ ದೇವನು ಇವನ ಭುಜಯುಗಲವನ್ನು ಕಾಪಾಡಲಿ, ಸಕಲ ವಿಧ ವಿಘ್ನಗಳನ್ನೂ ಸುಲಭವಾಗಿ ಪರಿಹರಿಸಬಲ್ಲ ವಿಘ್ನೇಶ್ವರನು ಈ ಬಾಲಕನ ಸ್ತನಪ್ರದೇಶಗಳನ್ನು ಸಂರಕ್ಷಿಸಲಿ, ಗಣನಾಥನು ಇವನ ಹೃದಯವನ್ನೂ, ಮಹಾಮಹಿಮನಾದ ಹೇರಂಬನು ಇವನ ಜಠರವನ್ನೂ ಕಾಪಾಡಲಿ. ॥೨೩॥

ಈ ಧರಾದೇವಿಯ ಇಡೀ ಭಾರವನ್ನೆಲ್ಲ ಹೊತ್ತು ನಿಂದಿರುವ ಆದಿ ವರಾಹಮೂರ್ತಿಯಾದ ಗಣಪತಿಯು ಇವನ ಎರಡು ಪಾರ್ಶ್ವಗಳನ್ನೂ ಸಂರಕ್ಷಿಸಲಿ. ವಿಘ್ನಹರನಾದ ಮಂಗಲಮೂರ್ತಿಯು ಶಿಶುವಿನ ಬೆನ್ನನ್ನು ಕಾಪಾಡಲಿ, ಮಹಾವಿಕ್ರಮಶಾಲಿಯಾದ ವಕ್ರತುಂಡನು ಇವನ ಮಲ-ಮೂತ್ರದ್ವಾರಗಳು ಬಂಧಿಸದಂತೆ ರಕ್ಷಿಸುತ್ತಲಿರಲಿ. ॥೨೪॥

ಪ್ರಮಥಗಣಗಳೊಂದಿಗೆ ಆಟವಾಡುವ ಶೀಲವುಳ್ಳ ಮಹಾಗಣಾಧಿಪತಿಯು ಇವನ ಜಾನು-ಜಂಘೆಗಳನ್ನು ಸಂರಕ್ಷಿಸಲಿ, ಜ್ಯೋತಿರ್ಮಂಡಲವೆನಿಸಿದ ಸೂರ್ಯನಾರಾಯಣನಂತೆ ಮೂರ್ತಿಮತ್ತಾಗಿ ವಿಭಾವಿಸುವ ಗಣಪತಿಯು ಇವನ ತೊಡೆ

ಕ್ಷಿಪ್ರಪ್ರಸಾದನೋ ಬಾಹೂ ಪಾಣೀ ಆಶಾಪ್ರಪೂರಕಃ ।
ಅಂಗುಲೀಶ್ಚ ನಖಾರ್ ಪಾತು ಪದ್ಮಹಸ್ತೋಽರಿನಾಶನಃ ॥೨೬॥

ಸರ್ವಾಂಗಾನಿ ಮಯೂರೇಶೋ ವಿಶ್ವವ್ಯಾಪೀ ಸದಾವತು।
ಅನುಕ್ತಮಪಿ ಯತ್ಸ್ಥಾನಂ ಧೂಮಕೇತುಸ್ಸದಾವತು ॥೨೭॥

ಆಮೋದಸ್ತ್ವಗ್ರತಃ ಪಾತು ಪ್ರಮೋದಃ ಪೃಷ್ಠತೋಽವತು ।
ಪ್ರಾಚ್ಯಾಂ ರಕ್ಷತು ಬುದ್ಧೀಶ ಆಗ್ನೇಯ್ಯಾಂ ಸಿದ್ಧಿದಾಯಕಃ ॥೨೮॥

---

ಗಳನ್ನು ಸಂರಕ್ಷಿಸಲಿ, ಏಕದಂತನು ಇವನ ಪಾದಗಳನ್ನೂ, ಮಹಾಮತಿವಂತನಾದ ದೇವೇಶನು ಇವನ ಗುಲ್ಫಗಳನ್ನೂ ಸರ್ವದಾ ಸಂರಕ್ಷಿಸುತ್ತಲಿರಲಿ. ॥೨೫॥

ಕ್ಷಿಪ್ರಪ್ರಸಾದನನಾದ ವರಸಿದ್ಧಿವಿನಾಯಕನು ಈ ಕೂಸಿನ ಬಾಹುಯುಗಲವನ್ನು ರಕ್ಷಿಸಲಿ. ಭಕ್ತರ ಆಶಾಪ್ರಪೂರಕನಾದ ಭಕ್ತವರದನು ಇವನ ಪಾಣಿತಲವನ್ನು ಸಂರಕ್ಷಿಸುತ್ತಿರಲಿ. ಕಮಲ ಕುಸುಮಪಾಣಿಯಾದ ಶತ್ರುವಿನಾಶಕನು ಇವನ ಬೆರಳುಗಳನ್ನೂ, ಉಗುರುಗಳನ್ನೂ ಕಾಪಾಡಲಿ. ॥೨೬॥

ವಿಶ್ವವ್ಯಾಪಿಯಾದ ಮಯೂರೇಶ್ವರನು ಇವನ ಸಕಲವಿಧ ಅಂಗಗಳನ್ನೂ ಸರ್ವದಾ ರಕ್ಷಿಸುತ್ತಲಿರಲಿ. ನನ್ನ ಪ್ರಾರ್ಥನೆಯಲ್ಲಿ ಅನೇಕ ಅವಯವಗಳನ್ನು ಉಲ್ಲೇಖಿಸಿ, ಸಂರಕ್ಷಿಸೆಂದು ಹೇಳಿಕೊಳ್ಳಲಿಕ್ಕೆ ಮರೆತಿರಬಹುದು. ಅಥವಾ ಆ ಅವಯವಗಳ ಪರಿಚಯವೂ ನನಗಿಲ್ಲದೆ ಇರಬಹುದು, ಅವನ್ನೆಲ್ಲ ಭಗವಾನ್ ಧೂಮಕೇತು ಸರ್ವದಾ ರಕ್ಷಿಸಲಿ. ॥೨೭॥

ಆಮೋದನು ಇವನ ಮುಂಭಾಗವನ್ನು ರಕ್ಷಿಸಲಿ. ಪ್ರಮೋದ ಸ್ವರೂಪಿಯಾದ ಪರಮ ಪುರುಷನು ಇವನ ಹಿಂಭಾಗವನ್ನು ಕಾಪಾಡಲಿ. ಇವನು ಪೂರ್ವದಿಗ್ದಿಶೆಯಲ್ಲಿ ಸಂಚರಿಸುವಾಗ ಬುದ್ಧ್ಯಭಿಮಾನಿ ದೇವತಾಧೀಶ್ವರನು ಸಂರಕ್ಷಿಸಲಿ. ಆಗ್ನೇಯ ದಿಕ್ಕಿನಲ್ಲಿ ಸಂಚರಿಸುವಾಗ ವರಸಿದ್ಧಿಪ್ರದಾಯಕನು ಸಂರಕ್ಷಿಸಲಿ. ॥೨೮॥

**ದಕ್ಷಿಣಸ್ಯಾಮುಮಾಪುತ್ರೋ ನೈಋತ್ಯಾಂ ತು ಗಣೇಶ್ವರಃ |**
**ಪ್ರತೀಚ್ಯಾಂ ವಿಘ್ನಹರ್ತಾವ್ಯಾದ್ವಾಯವ್ಯಾಂ ಗಜಕರ್ಣಕಃ ||೨೯||**

**ಕೌಬೇರ್ಯಾಂ ನಿಧಿಪಃ ಪಾಯಾದೀಶಾನ್ಯಾಮೀಶನಂದನಃ |**
**ದಿವಾವ್ಯಾದೇಕದಂತಸ್ತು ರಾತ್ರೌ, ಸಂಧ್ಯಾಸು ವಿಘ್ನಹೃತ್ ||೩೦||**

**[1]ರಾಕ್ಷಸಾ [2]ಸುರ [3]ವೇತಾಲ [4]ಗ್ರಹ [5]ಭೂತ [6]ಪಿಶಾಚತಃ |**
**ಪಾಶಾಂಕುಶಧರಃ ಪಾತು ರಜಸ್ಸತ್ತ್ವಂ ತಮುಸ್ಸ್ಮೃತೀಃ ||೩೧||**

---

ಉಮಾದೇವಿಯ ಪ್ರಿಯಪುತ್ರನು ದಕ್ಷಿಣದಿಕ್ಕಿನಿಂದ ಇವನಿಗುಂಟಾಗಬಹುದಾದ ವಿಪತ್ತುಗಳನ್ನು ಪರಿಹರಿಸಿ, ಕಾಪಾಡಲಿ, ನಿಋತಿ ದಿಙ್ಮೂಲೆಯಿಂದ ಬರಬಹುದಾದ ಕಷ್ಟ-ನಷ್ಟಗಳನ್ನು ಗಣೇಶ್ವರನು ಪರಿಹರಿಸಿ ಸಂರಕ್ಷಿಸಲಿ. ವಿಘ್ನಹರನು ಪ್ರತೀಚೀ ದಿಙ್ಮುಖದಿಂದ ಬರುವ ಭಯವನ್ನು ಹೋಗಲಾಡಿಸಲಿ. ಗಜಗಳಂತೆ ವಿಶಾಲವಾದ ಕರ್ಣಗಳುಳ್ಳ ದೇವನು ವಾಯುವ್ಯ ದಿಗ್ವಿಪತ್ತಿನಿಂದ ಇವನನ್ನು ಸಂರಕ್ಷಣೆ ಮಾಡಲಿ. ||೨೯||

ಕುಬೇರನ ದಿಕ್ಕಿನಿಂದ ಇವನಿಗೆ ಉಂಟಾಗಬಹುದಾದ ಯಕ್ಷರ ಪೀಡೆಯನ್ನು ನಿಧಿಪತಿಯ ಸ್ವರೂಪನಾದ ಗಣೇಶ್ವರನು ಪರಿಹರಿಸಿ, ರಕ್ಷಿಸಲಿ. ಪರಮೇಶ್ವರನಂದನನಾದ ಗುಹಾಗ್ರಜನು ಈಶಾನ್ಯದಿಕ್ಕಿನ ವಿಪತ್ಪರಂಪರೆಗಳನ್ನು ಪರಿಹರಿಸಿ ಕಾಪಾಡಲಿ. ಹಗಲು ಸಮಯದಲ್ಲಿ ಇವನು ಯಾವ ವಿಪತ್ತಿಗೂ ಗುರಿಯಾಗದಿರುವಂತೆ ಏಕದಂತನು ಇವನನ್ನು ರಕ್ಷಿಸಲಿ. ವಿಘ್ನಹರಣನು ರಾತ್ರಿಯ ಹಾಗೂ ಸಂಧ್ಯಾಕಾಲಗಳ ವಿಪತ್ತಿನಿಂದ ಇವನನ್ನು ಕಾಪಾಡಲಿ. ||೩೦||

ರಾಕ್ಷಸರು, ಅಸುರರು, ಭೇತಾಳಗಳು, ಗ್ರಹಗಳು, ಭೂತಗಳು ಮತ್ತು ಪಿಶಾಚಗಳು ಇವುಗಳಿಂದುಂಟಾಗಬಹುದಾದ ವಿಶಿಷ್ಟರೀತಿಯ ಕಾಟದಿಂದಲೂ ಪಾಶಾಂಕುಶಧಾರಿಯಾದ ಗಣಪತಿಯು ಸಂರಕ್ಷಿಸಲಿ. ಸತ್ತ್ವ ರಜಸ್ತಮೋಗುಣಗಳ ಆಡಳಿತದ ಹಿಡಿತದಿಂದ ಇವನನ್ನು ಉದ್ಧರಿಸಿ, ಕಾಪಾಡುವ ಕೆಲಸವನ್ನು ಅಂಕುಶಧರನು ಮಾಡಲಿ. ಸ್ಮರಣಶಕ್ತಿ ||೩೧||

---

ವಿವರಣೆಗೆ ಪರಿಶಿಷ್ಟವನ್ನು ನೋಡಿರಿ.

ಜ್ಞಾನಂ ಧರ್ಮಂ ಚ ಲಕ್ಷ್ಮೀಂ ಚ ಲಜ್ಜಾಂ ಕೀರ್ತಿಂ ದಯಾಂ ಕುಲಮ್ ।
ವಪುರ್ಧನಂ ಚ ಧಾನ್ಯಂ ಚ ಗೃಹಂ ದಾರಾನ್ ಸುತಾನ್ ಸಖೀನ್ ॥೩೨॥

ಸರ್ವಾಯುಧಧರಃ ಪೌತ್ರಾನ್ ಮಯೂರೇಶೋಽವತಾತ್ಸದಾ ।
ಕಪಿಲೋಽಜಾವಿಕಂ ಪಾತು ಗವಾಶ್ವಂ ವಿಕಟೋಽವತು ॥೩೩॥

[1]ಭೂರ್ಜಪತ್ರೇ ಲಿಖಿತ್ವೇದಂ ಯಃ ಕಂಠೇ ಧಾರಯೇತ್ಸುಧೀಃ ।

ಶುದ್ಧ ಜ್ಞಾನ, ಧರ್ಮಕಾರ್ಯಗಳಲ್ಲಿ ಆಸಕ್ತಿ, ನಿರ್ದಿಷ್ಟ ಲಕ್ಷ್ಮೀಪ್ರಾಪ್ತಿ ಸಮರ್ಥರೂ ಹಿರಿಯರೂ ಆದವರೆದುರಿಗೆ ಸೊಕ್ಕು ಬಡಿಯದಂತೆಯೂ; ವಿನೀತ ಭಾವದಿಂದಿರುವಂತೆಯೂ ಭಗವಂತನು ಇವನನ್ನು ಅನುಗ್ರಹಿಸಲಿ. ಇವನಿಗೆ ಸತ್ಕೀರ್ತಿಯು ದೊರೆಯಲಿ. ದಯಾರಸವು ಇವನ ಹೃದಯ ದಲ್ಲಿ ಸದಾ ತುಂಬಿ ತುಂಬಿ ತುಳುಕಲಿ, ಸಾಧಕರು ಯಾರಿಗೆ ಆಗಲಿ ಕರ್ಮಾಧೀನವಾಗಿ ಜನ್ಮವನ್ನೆತ್ತಬೇಕಾದ ಪ್ರಸಂಗವೇ ಬರುವುದಾದರೆ, ಅವರು ಉಚ್ಚಕುಲದಲ್ಲಿ ಜನ್ಮವೆತ್ತುವಂತಾಗಲಿ, ಯಾರಿಗೂ ಅಸಹ್ಯ ಬಾರದಂತಹ ದೇಹವು ಇದನ್ನು ಪಠಿಸುವವರಿಗೆ ದೊರೆಯಲಿ, ದೈನ್ಯ ವೃತ್ತಿಯನ್ನವಲಂಬಿಸಿ ಜೀವಿಸದಂತೆ ಅವರಿಗೆ ಧನ-ಧಾನ್ಯ ಸಮೃದ್ಧಿಯುಂಟಾಗಲಿ, ವಸತಿಗೆ ತಕ್ಕಂತಹ ಮನೆ, ಧರ್ಮಕಾರ್ಯಗಳಿಗೆ ಅನುಕೂಲೆಯಾದ ಭಾರ್ಯೆ ವಿರೋಧಮಾಡದಂತಹ ಸು-ಪುತ್ರರು, ವಿಪನ್ನಮಯದಲ್ಲಿ ಸಹಾಯವನ್ನು ಮಾಡುವ ಮನೋವೃತ್ತಿಯುಳ್ಳ ಸನ್ಮಿತ್ರರು ಇವನಿಗೆ ಒದಗಲಿ. ॥೩೨॥

ಸಾಧಕರಿಗೆ ಇಷ್ಟೆಲ್ಲ ಸೌಭಾಗ್ಯಗಳನ್ನು ಸರ್ವಾಯುಧಧರನು ಅನುಗ್ರಹಿಸಲಿ ಪೌತ್ರರನ್ನು ನೋಡುವಷ್ಟು ಆಯುಷ್ಯವನ್ನು ಮಯೂರೇಶ್ವರನು ಅನುಗ್ರಹಿಸಿ ಅವರ ಎಲ್ಲ ಪರಿವಾರವನ್ನೂ ಸರ್ವದಾ ಸಂರಕ್ಷಿಸಲಿ. ಅವರ ಆಡಿನ ಮಂದೆಯನು ಕಪಿಲನು ಕಾಪಾಡಲಿ, ಗವಾಶ್ವಗಳನ್ನು ವಿಕಟನು ಕಾಪಾಡಲಿ.

ಈ ಸ್ತೋತ್ರಮಾಲಿಕೆಯನ್ನು ಯಾವ ಪುಣ್ಯಶಾಲಿಯು ಭೂರ್ಜಪತ್ರದಲ್ಲಿ

---

[1] ವಿವರಣೆಯನ್ನು ಪರಿಶಿಷ್ಟದಲ್ಲಿ ನೋಡಿ.

ನ-ಭಯಂ ಜಾಯತೇ ತಸ್ಯ ಯಕ್ಷ-ರಕ್ಷಃ-ಪಿಶಾಚತಃ ||೩೪||

ತ್ರಿ-ಸಂಧ್ಯಂ ಜಪತೇ ಯಸ್ತು ವಜ್ರಸಾರತನುರ್ಭವೇತ್ |
ಯಾತ್ರಾಕಾಲೇ ಪಠೇದ್ಯಸ್ತು ನಿರ್ವಿಘ್ನೇನ ಫಲಂ ಲಭೇತ್ ||೩೫||

ಯುದ್ಧಕಾಲೇ ಪಠೇದ್ಯಸ್ತು ವಿಜಯಂ ಪ್ರಾಪ್ನುಯಾದ್ಧ್ರುವಮ್ |
ಮಾರಣೋಚ್ಚಾಟನಾಕರ್ಷಸ್ತಂಭಮೋಹನಕರ್ಮಣಿ ||೩೬||

ಸಪ್ತವಾರಂ ಪಠೇದ್ಯಸ್ತು ದಿನಾನಾಮೇಕವಿಂಶತಿಮ್ |
ತತ್ತತ್ಫಲಮವಾಪ್ನೋತಿ ಸಾಧಕೋ ನಾತ್ರ ಸಂಶಯಃ ||೩೭||

---

ಬರೆದು ಅದನ್ನು ಭಕ್ತಿಯಿಂದ ಅರ್ಚಿಸಿ, ಯಂತ್ರದಂತೆ ತನ್ನ ಕಂಠದಲ್ಲಿ ಸರ್ವದಾ ಧರಿಸಿರುವನೋ, ಅವನಂತಹ ಬುದ್ಧಿವಂತನು ಬೇರೊಬ್ಬನಿರುವುದಿಲ್ಲ. ಅಂಥವನನ್ನು ಯಕ್ಷರು, ರಾಕ್ಷಸರು ಹಾಗೂ ಅತೃಪ್ತಜೀವಿಗಳಾದ ಪಿಶಾಚಗಳು ಯಾವುವೂ ಕಾಡಿ ಭಯಪಡಿಸುವುದಿಲ್ಲ. ||೩೪||

ಈ ಸ್ತೋತ್ರರತ್ನವನ್ನು ತ್ರಿಸಂಧ್ಯಾಕಾಲಗಳಲ್ಲೂ ಯಾರು ಭಕ್ತಿಯಿಂದ ಜಪಿಸುತ್ತಾರೋ, ಅವರು ವಜ್ರದಂತೆ ಅಭೇದ್ಯದೇಹಿಯಾಗುವರು. ತೀರ್ಥಯಾತ್ರಾ ಪ್ರಸಂಗಗಳಲ್ಲಿ ಈ ಸ್ತೋತ್ರವನ್ನು ಪಠಿಸುತ್ತಲಿದ್ದರೆ, ಆ ಯಾತ್ರೆಯಲ್ಲಿ ಯಾವ ತೊಂದರೆಯೂ ಉಂಟಾಗುವುದೇ ಇಲ್ಲ. ಮತ್ತು ಅವರು ಸರ್ವತ್ರ ವಿಜಯವನ್ನು ಗಳಿಸುವರು. ಇದರಲ್ಲಿ ಸಂಶಯವೇ ಇರುವುದಿಲ್ಲ. ಮಾರಣ ಉಚ್ಚಾಟನ, ಆಕರ್ಷಣ, ಸ್ತಂಭನ, ಮೋಹನ ಮೊದಲಾದ ಯಾವ ಕೃತ್ರಿಮ ಕೃತ್ಯಗಳೂ ಇವರನ್ನು ಬಂಧಿಸಿ ಪೀಡಿಸಲಾರವು. ||೩೬||

ದಿವಸ ಒಂದಕ್ಕೆ ಏಳು ಸಲದಂತೆ ಇಪ್ಪತ್ತೊಂದು ದಿವಸಗಳ ವರೆಗೂ ಯಾರು ಈ ದಿವ್ಯ ಸೋತ್ರವನ್ನು ಪಠಿಸುವರೋ, ಅಂತಹ ಸಾಧಕರು ತಾವು ಬಯಸುವ ಆಯಾ ಫಲಗಳನ್ನೆಲ್ಲ ವಿಲಂಬವಿಲ್ಲದೇ ಪಡೆಯುವರು. ಇದಕ್ಕೆ ಲೇಶವೂ ಸಂದೇಹವಿರುವುದಿಲ್ಲ. ||೩೭||

ಏಕವಿಂಶತಿವಾರಂ ಚ ಪಠೇತ್ತಾವದ್ದಿನಾನಿ ಯಃ ।
ಕಾರಾಗೃಹಗತಂ ಸದ್ಯೋ ರಾಜಾ ವಧ್ಯಂ ಚ ಮೋಚಯೇತ್ ॥೩೮॥

ರಾಜದರ್ಶನವೇಲಾಯಾಂ ಪಠೇದ್ಯಸ್ತು ತ್ರಿ.ವಾರತಃ ।
ಸ ರಾಜಾನಂ ವಶಂ ನೀತ್ವಾ ಪ್ರಕೃತಿಂ ಚ ಸಭಾಂ ಜಯೇತ್ ॥೩೯॥

ಇದಂ 'ಗಣೇಶಕವಚಂ' ಕಶ್ಯಪೇನ ಸವಿರಿತಮ್ ।
ಸರ್ವರಕ್ಷಾಕರಂ ಸರ್ವಕಾಮಿತಾರ್ಥಪ್ರಪೂರಕಮ್ ॥೪೦॥

---

ಇನ್ನೂ ಹೆಚ್ಚಿನ ಚಿತ್ತಸ್ಥೈರ್ಯವುಳ್ಳ ಸಾಧಕನು ದಿವಸ ಒಂದಕ್ಕೆ ಇಪ್ಪತ್ತೊಂದು ಸಲದಂತೆ ಇಪ್ಪತ್ತೊಂದು ದಿವಸಗಳ ವರೆಗೆ ಈ ಸ್ತೋತ್ರವನ್ನು ಪಠಿಸುವನೋ, ಅವನು ಕಾರಾಗೃಹದಲ್ಲಿ ಬಂಧಿತನಾಗಿದ್ದರೂ, ಅದರಿಂದ ಬಿಡುಗಡೆಯನ್ನು ಹೊಂದುವನು. ಅಥವಾ ಕಾರಾಗೃಹವಾಸ ಒದಗುವ ಪ್ರಸಂಗ ವಿದ್ದರೆ ಆ ಸಮಯದಲ್ಲಿ ಅನಿಮಿತ್ತ ಬಂಧುಗಳಾದರೂ ಬಂದು ಒದಗಿ, ಇವ ನಿಗೆ ಬರಲಿರುವ ವಿಪತ್ತು, ಹಾಗೂ ಅಪಮಾನಗಳಿಂದ ಬಿಡುಗಡೆ ಮಾಡು ವನು, ಇನ್ನೂ ಕಠಿಣತರ ಶಿಕ್ಷೆ ಎಂದರೆ 'ಮರಣ ದಂಡನೆ': ಪ್ರಾಪ್ತ ವಾಗಿದ್ದರೂ, ಈ ಸ್ತೋತ್ರದ ಪಾಠ ಮಹಿಮೆಯಿಂದ ರಾಜನ ಮನಸ್ಸೂ ಸಹ ಪರಿ ವರ್ತಿತವಾಗಿ, ಸಾಧಕನು ಕೂಡಲೇ ಬಿಡುಗಡೆಯನ್ನು ಹೊಂದುವನು. ॥೩೮॥

ರಾಜರನ್ನು ಸಂದರ್ಶಿಸುವಾಗ ಈ ಸ್ತೋತ್ರವನ್ನು ವಿಶೇಷತಃ ಮೂರು ಸಲ ಯಾರು ಶ್ರದ್ಧೆಯಿಂದ ಪಠಿಸುವರೋ, ಅವರು ಮಹಾರಾಜನನ್ನೂ, ಮಂತ್ರಿಗಳನ್ನೂ ವಶಪಡಿಸಿಕೊಂಡು, ಇಡೀ ಆ ರಾಜಸಭೆಯನ್ನೇ ಜಯಿಸಿಬಿಡುವರು. ॥೩೯॥

ಇದಕ್ಕೆ 'ಶ್ರೀ ಗಣೇಶ ಕವಚ' ಎಂದು ಹೆಸರು. ಇದನ್ನು ಕಶ್ಯಪ ಮಹರ್ಷಿ ಗಳು ಮೊದಲು ರಚಿಸಿ ಹೇಳಿದವರು. ಇದು ಪಠಿಸುವವರನ್ನು ಸಕಲೋಪದ್ರವ ಗಳಿಂದಲೂ ಸಂರಕ್ಷಿಸುವುದಾದುದರಿಂದ ಇದನ್ನು 'ರಕ್ಷಾಕವಚ' ಎಂದೂ ಕರೆಯುತ್ತಾರೆ. ಮತ್ತು ಸಾಧಕರು ಯಾವ ಯಾವ ಅಭಿಲಾಷೆಗಳನ್ನು ಪಡೆಯು

ಮುದ್ಗಲಾಯ ಚ ತೇನಾಥ [1]ಮಾಂಡವ್ಯಾಯ ಮಹರ್ಷಯೇ ।
ಮಹ್ಯಂ ಸ ಪ್ರಾಹ ಕೃಪಯಾ ಕವಚಂ ಸರ್ವಸಿದ್ಧಿದಮ್ ॥೪೧॥

ನ ದೇಯಂ ಭಕ್ತಿಹೀನಾಯ ದೇಯಂ ಶ್ರದ್ಧಾವತೇ ಶುಭೇ ! ।
ಅನೇನಾಸ್ಯ ಕೃತಾ ರಕ್ಷಾ ನ ಬಾಧಾಸ್ಯ ಭವೇತ್ಕ್ವಚಿತ್ ॥೪೨॥

ರಾಕ್ಷಸಾಸುರವೇತಾಲದೈತ್ಯ-ದಾನವಸಂಭವಾ ॥೪೩॥

---

ಬೇಕೆಂದು ಸಂಕಲ್ಪಿಸಿ ಇದನ್ನು ಪಠಿಸುವರೋ, ಅವನ್ನೆಲ್ಲ ಇದು ಒಡನೆಯೇ ಅವರಿಗೆ ಒದಗಿಸಿಕೊಡುವುದು. ॥೪೦॥

ಇದನ್ನು ಕಶ್ಯಪ ಋಷಿಯು ತನ್ನ ಪರಮ ಪ್ರಿಯಶಿಷ್ಯರಾದ ಮಹರ್ಷಿ, ಮುದ್ಗಲರಿಗೆ ಅವರ ಪ್ರಾರ್ಥನೆಯಂತೆ ಉಪದೇಶಿಸಿದನು. ಅವರು ಮಾಂಡವ್ಯ ಮಹರ್ಷಿಗಳಿಗೆ ಹೇಳಿಕೊಟ್ಟರು. ಮಾಂಡವ್ಯರು ಬಹಳ ಕರುಣಾಶಾಲಿಗಳು. ಆದುದರಿಂದಲೇ ಸರ್ವಾರ್ಥಸಾಧಕವಾದ ಈ ಕವಚವನ್ನು ನನಗೆ ವಿಶ್ವಾಸದಿಂದ ಉಪದೇಶಿಸಿದರು. ॥೪೧॥

ಸರ್ವಮಂಗಳೇ ! ಈ ಕವಚವು ಬಹಳ ರಹಸ್ಯವಾದುದು. ಅಶ್ರದ್ಧಾಳುಗಳಿಗೂ, ದುರುಪಯೋಗ ಪಡಿಸಿಕೊಳ್ಳತಕ್ಕವರಿಗೂ ಇದನ್ನು ಸರ್ವಾತ್ಮನಾ ಉಪದೇಶಿಸಬಾರದು. ಶ್ರದ್ಧಾವಂತರಿಗೆ ಮಾತ್ರ ಇದನ್ನು ಉಪದೇಶಿಸಬಹುದು. ಈ ಕವಚದಿಂದ ನಾನು ಈ ಶಿಶುವಿಗೆ ರಕ್ಷೆಯನ್ನು ಕಟ್ಟಿದ್ದೇನೆ. ಇನ್ನು ಮೇಲೆ ಯಾವ ಬಗೆಯ ಬಾಧೆಯೂ, ಯಾವ ರೀತಿಯಿಂದಲೂ ನಿನ್ನ ಮಗನಿಗೆ ಉಂಟಾಗುವುದಿಲ್ಲ. ಈ ವಿಷಯದಲ್ಲಿ ನೀನು ಕಾಳಜೀ ಮಾಡಬೇಡ. ॥೪೨॥

ರಾಕ್ಷಸರಾಗಲೀ, ಅಸುರರಾಗಲೀ, ಭೇತಾಳಗಳಾಗಲೀ, ದೈತ್ಯ-ದಾನವರಾಗಲೀ ಯಾರೊಬ್ಬರೂ ಇವನ ಸಮೀಪಕ್ಕೆ ಸಹ ಸುಳಿಯುವುದಿಲ್ಲ. ಮದೋನ್ಮತ್ತತೆಯಿಂದ ಒಂದು ವೇಳೆ ಅವರಲ್ಲಿ ಯಾರಾದರೂ ಇವನನ್ನು ಕೆಣಕಿ ಎದುರಿಸಿದರೆ ಅವರು ತಮ್ಮ ಆಯುಷ್ಯದ ಕೊನೆಯ ಹಂತದಲ್ಲಿ ನಿಂತವರೆಂದೇ ತಿಳಿ. ಅಂಥವರಿಂದ ನಿನ್ನ ಈ ಬಾಲಕನಿಗೆ ಈಷದಪಿ ಬಾಧಕ ಉಂಟಾಗುವುದಿಲ್ಲ. ॥೪೩॥

[1] ಇವರ ಪರಿಚಯವನ್ನು ಪರಿಶಿಷ್ಟದಲ್ಲಿ ಕೊಟ್ಟಿದೆ.

ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ ' ಶ್ರೀ ಗಣೇಶಕವಚ ಕಥನಂ ' ನಾಮ ಪಂಚಾಶೀತಿತಮೋಽಧ್ಯಾಯಸ್ಸಮಾಪ್ತಃ

---

ಇಲ್ಲಿಗೆ ಶ್ರೀ ಗಣೇಶಪುರಾಣ ಉತ್ತರಖಂಡದಲ್ಲಿ ' ಶ್ರೀ ಗಣೇಶ ಕವಚ ಕಥನ ' ಎಂಬಲ್ಲಿಗೆ ಎಂಭತ್ತೈದನೆಯ ಅಧ್ಯಾಯಾನುವಾದವು ಮುಗಿದುದು.



|| ಶ್ರೀ ಗಣೇಶಾಯ ನಮಃ ||

# ಅಥ ಷಡಶೀತಿತಮೋಽಧ್ಯಾಯಃ

**ಕ ಉವಾಚ :—**

**ತತೋಽಸ್ಯಾಂಕಾತ್ಸುತಂ ಗೌರೀ ನಮಸ್ಕೃತ್ಯ ಸಮಾದದೇ ।**
**ಆಜ್ಞಾಂ ಗೃಹೀತ್ವಾ ಪ್ರಾಯಾಸ್ವಂ ಮಂದಿರಂ ಭೃಶಹರ್ಷಿತಾ ॥೧॥**

**ಸೋಽಪ್ಯನುಜ್ಞಾಂ ತತೋ ಗೃಹ್ಯ ಶಿವಂ ನತ್ವಾಶ್ರಮಂ ಯಯೌ ।**
**ತತೋ ಗೌರೀ ಚಕಾರಾಸ್ಯ ಸು-ಮುಹೂರ್ತೇ ಶುಭೇ ದಿನೇ ॥೨॥**

|| ಶ್ರೀ ಗಣೇಶಾಯ ನಮಃ ||

## ೮೬ ನೆಯ ಅಧ್ಯಾಯ.

ಬ್ರಹ್ಮ :—

ಆಗ ಗೌರಿಯು ಬಹಳ ಸಂತುಷ್ಟಳಾಗಿ ಮುನಿವರ್ಯ, ಮರೀಚಿಯನ್ನು ವಂದಿಸಿದಳು. ಮತ್ತು ಅವನ ತೊಡೆಯ ಮೇಲೆ ಕುಳ್ಳಿರಿಸಿದ್ದ ತನ್ನ ಮಗನನ್ನು ಎತ್ತಿಕೊಂಡಳು. ಮಗನನ್ನು ಪ್ರೀತಿಯಿಂದ ಮುದ್ದಿಸುತ್ತ ಅಂತರ್ಗೃಹಕ್ಕೆ ಹೋಗಲು ಮುನಿಯ ಅನುಮತಿಯನ್ನು ಪಡೆದು ಒಳಕ್ಕೆ ನಡೆದಳು. ||೧||

ಮರೀಚಿಯೂ ಸಹ ದೇವಿಯ ಅನುಮತಿಯನ್ನು ಪಡೆದು ಪರಮೇಶ್ವರನನ್ನು ಅಭಿವಂದಿಸಲು ಅತ್ತ ಕಡೆ ತೆರಳಿದನು. ಅದಾದ ಬಳಿಕ, ತನ್ನ ಆಶ್ರಮವನ್ನು ಕುರಿತು ಪ್ರಯಾಣ ಬೆಳೆಸಿದನು. ಅನಂತರ ಗೌರಿಯು ಒಂದು ಶುಭವಾದ ದಿವಸ ಸು-ಮುಹೂರ್ತದಲ್ಲಿ ಶಾಂತಿಕರ್ಮಮಹೋತ್ಸವವನ್ನು ನಡೆಸಲು ಅಪೇಕ್ಷೆಪಟ್ಟಳು. ||೨||

ಗೌತಮಾದೀನ್ ಸಮಾಹೂಯ ಬ್ರಾಹ್ಮಣಾನುಪವೇಶ್ಯ ಚ ।
ದ್ವಿಜೇಭ್ಯೋ ನಮಯಾಂಚಕ್ರೇ ಸಾ ಪ್ರಣಮ್ಯ ಸ್ವಯಂ ಚ ತಾನ್ ॥೩॥

ಸರ್ವೇ ದೇವಗಣಾಸ್ತತ್ರ ನಾನೋಪಾಯನಪಾಣಯಃ ।
ಆಯಯುಸ್ತಂ ಗಣಾಶ್ಚಾಪಿ ಗಂಧರ್ವಾಪ್ಸರಸಸ್ತಥಾ ॥೪॥

ಉವಾಚ ಗೌರೀ ತಾನ್ ವಿಪ್ರಾನ್ ಉಪವೇಶ್ಯ ನಮಸ್ಯ ಹ ।
ವಿಚಾರ್ಯ ಸರ್ವಮುನಿಭಿಃ ಕರ್ತುಂ ತು ದ್ವಿಜಪುಂಗವಾಃ ॥೫॥

ತ ಊಚುರ್ಮುನಯಸ್ಸರ್ವೇ

---

ಈ ಕಾರ್ಯನಿರ್ವಾಹಕ್ಕಾಗಿ ಗೌತಮರೇ ಮೊದಲಾದ ಮಹರ್ಷಿಗಳನ್ನೂ, ವೇದವಿದ್ಯಾಪಾರಂಗತರಾದ ಇತರ ಬ್ರಾಹ್ಮಣೋತ್ತಮರನ್ನೂ ತನ್ನ ಮಂದಿರಕ್ಕೆ ಬರಮಾಡಿಕೊಂಡು, ಅವರನ್ನೆಲ್ಲ ಕೂಡಿಸಿ, ಆ ಬ್ರಾಹ್ಮಣರಿಗೆ ಭಕ್ತಿಯಿಂದ ಅಭಿವಂದಿಸಿದಳು. ॥೩॥

ಈ ಮಹೋತ್ಸವವು ಏರ್ಪಾಡಾದ ಸಂಗತಿ ದೇವತಾವರ್ಗಕ್ಕೆ ತಿಳಿಯಲು, ಅವರೆಲ್ಲ ಅತ್ಯಮೌಲ್ಯವಾದ ವಸ್ತುಗಳನ್ನು ಕಾಣಿಕೆಕೊಡಲು ತೆಗೆದುಕೊಂಡು ತ್ರಿಸಂಧ್ಯಾಕ್ಷೇತ್ರಕ್ಕೆ ಹೊರಟುಬಂದರು. ಪ್ರಮಥಗಣದವರೂ, ಗಂಧರ್ವರೂ ಹಾಗೂ ಅಪ್ಸರ ರಮಣಿಯರೂ ಸಹ ಅಲ್ಲಿಗೆ ಬಂದು ಸೇರಿದರು. ॥೪॥

ಗೌರೀದೇವಿಯು ಬಂದವರನ್ನೆಲ್ಲ ಆದರ-ವಿಶ್ವಾಸಗಳಿಂದ ಸ್ವಾಗತಿಸಿದಳು. ಅನಂತರ ಅಲ್ಲಿ ಕುಳಿತಿದ್ದ ವಿಪ್ರವರ್ಯರನ್ನು ಭಕ್ತಿಭಾವದಿಂದ ವಂದಿಸಿದಳು. ಮತ್ತು ಅವರನ್ನು ಕುರಿತು ವಿಶ್ವಾಸದಿಂದ ಮಾತನಾಡಿದಳು. 'ಪಾರ್ವತಿಯು ಆಚರಿಸಬೇಕೆಂದು ಸಂಕಲ್ಪಿಸಿದ್ದ ಈ ಮಹೋತ್ಸವವನ್ನು ನೆರವೇರಿಸಲು ಯಾವುದು ಒಳ್ಳೆಯ ದಿವಸ ? ಎಂಬ ಬಗ್ಗೆ ಮುನಿಗಳೊಡನೆ ವಿಚಾರಮಾಡಿ ಕಾರ್ಯವನ್ನು ಮುಂದುವರಿಸಬೇಕೆಂ'ದು ಬ್ರಾಹ್ಮಣರು ನಿಶ್ಚಯಿಸಿದರು. ॥೫॥

ಬ್ರಾಹ್ಮಣರ ಮೂಲಕ ಪಾರ್ವತೀದೇವಿಯು ಅಭಿವ್ಯಕ್ತಿ ಪಡಿಸಿದ ಅಭಿಪ್ರಾಯ

ಬ್ರಾಹ್ಮಣಾ ಊಚುಃ :—

ಗುರುವಾರಸ್ತ್ರಯೋದಶೀ ।
[1] ಪೌಷ್ಣಂ ನಕ್ಷತ್ರಮದ್ಯಾಸ್ತಿ ತಸ್ಮಾತ್ಕಾರ್ಯೋ ಮಹೋತ್ಸವಃ ॥೬॥

ಕ ಉವಾಚ :—

ತತೋ ಗೃತ್ಸಮದಶ್ಶೀಘ್ರಂ ನಾನಾರತ್ನಚಯಂ ಭುವಿ ।
ಪೀಠಾಯ ಚ ಚಕಾರಾಶು ಚತುಷ್ಕಂ ರತ್ನನಿರ್ಮಿತಮ್ ॥೭॥

ಗಣೇಶಪೂಜನಂ ಕೃತ್ವಾ ಪುಣ್ಯಾಹವಾಚನಂ ತಥಾ।

---

ವನ್ನು ತಿಳಿದ ಮುನಿಗಳು ಹೀಗೆಂದರು.

ಋಷಿಗಳು :—

ಇಂದು ತ್ರಯೋದಶೀ ತಿಥಿ. ಇದನ್ನು 'ಸರ್ವಸಿದ್ಧಾ' ಎಂದು ತಿಳಿದವರು ಕರೆಯುತ್ತಾರೆ. ಮೇಲಾಗಿ ಇದು ಗುರುವಾರದಿಂದಲೂ ಯುಕ್ತವಾಗಿದೆ. ಗ್ರಹ ರಾಜನಾದ ಸೂರ್ಯನಾರಾಯಣನ ನಕ್ಷತ್ರವೂ ಇಂದು ಇರುತ್ತದೆ. ಇಷ್ಟೆಲ್ಲ ರೀತಿ ಯಿಂದ ದಿನಶುದ್ಧಿ ದೊರೆತಿರುವುದು ಅಪೂರ್ವವೇ ಸರಿ. ಮಹೋತ್ಸವವನ್ನು ನಡೆಸ ಲಿಕ್ಕೆ ಇಂದು ಮುಹೂರ್ತವು ಬಹಳ ಪ್ರಶಸ್ತವಾಗಿರುತ್ತದೆ. ॥೬॥

ಬ್ರಹ್ಮಾ :—

ಆಗ ಗೃತ್ಸಮದನು ಶೀಘ್ರವಾಗಿ ಮುಂದೆ ಬಂದು ಬಹಳ ಬೆಲೆಬಾಳುವ ನಾನಾವಿಧ ರತ್ನಗಳನ್ನು ಭೂಮಿಯ ಮೇಲೆ ರಾಶಿಹಾಕಿ, ಅದು ಒಂದು ಪೀಠಾ ಕಾರವಾಗಿ ಕಾಣುವಂತೆ ಚಚ್ಚೌಕವಾಗಿ ಹರಡಿದನು. ಅದು ನೋಡುವವರಿಗೆ ರತ್ನ ಗಳಿಂದ ನಿರ್ಮಿಸಿದ ಉಚ್ಚ ಪೀಠವೋ ಎಂಬಂತೆ ಕಂಡು ಬರುತ್ತಲಿದ್ದಿತು. ಆವನು ಈ ಕಾರ್ಯವನ್ನು ಅತ್ಯಲ್ಪಕಾಲದಲ್ಲೇ ರಚಿಸಿದನು. ॥೭॥

ಮಹೋತ್ಸವವು ಯಶಸ್ವಿಯಾಗಿ ನಡೆಯಬೇಕೆಂದು ಮೊದಲು ಮಹಾ

---

[1] ವಿವರಣೆಗೆ ಪರಿಶಿಷ್ಟವನ್ನು ನೋಡಿರಿ.

ದಿವ್ಯ ವಸ್ತ್ರಾವೃತೇ ತಸ್ಮಿನ್ ಉಪವೇಶ್ಯ ಶಿವಾ ಸುತಮ್ ॥೮॥

ನೀರಾಜಯಾಮಾಸ ಚ ತಂ ಪತಿವತ್ನಿ ಸ್ತ್ರೀಭಿರಾದರಾತ್ ।
ರತ್ನಪ್ರಭಾಜಾಲಗತಂ ನಾನಾಲಂಕಾರದೀಪಿತಮ್ ॥೯॥

ಉಪಾಯನಾನಿ ತೇ ಸರ್ವೇ ಶಿವಾಭ್ಯಾಂ ತತ್ಸುತಾಯ ಚ ।
ವಾದ್ಯತ್ಸು ದಿವ್ಯ ವಾದ್ಯೇಷು ಪ್ರದದುರ್ಭಕ್ತಿತತ್ಪರಾಃ ॥೧೦॥

ಸಾಪೂಜಯತ್ತತೋ ವಿಪ್ರಾನ್ ರತ್ನ-ವಸ್ತ್ರಾದಿಕಾಂಚನೈಃ ।

---

ಗಣಪತಿಯ ಪೂಜೆಯನ್ನು ನಡೆಸಿ, ಸ್ವಸ್ತಿವಾಚಕ ಮಂತ್ರಗಳನ್ನು ದ್ವಿಜವರ್ಯರೊಂದಿಗೆ ತಾನೂ ಪಠಿಸಿದನು. ಅನಂತರ ಪಾರ್ವತೀದೇವಿಯು ತನ್ನ ಶಿಶುವಿಗೆ ಅನೇಕ ಬಗೆಯ ಅಮೌಲ್ಯ ವಸ್ತ್ರಾಭರಣಗಳನ್ನು ಉಡಿಸಿ ತೊಡಿಸಿ, ರತ್ನಮಯವಾದ ದಿವ್ಯ ಪೀಠದಲ್ಲಿ ಅವನನ್ನು ಕುಳ್ಳಿರಿಸಿದಳು. ॥೮॥

ತನ್ನ ಮಿತ್ರೆಯರೂ, ಪರಮ ಪತಿವ್ರತಾಶಿರೋಮಣಿಗಳೂ ಆದ ಸುವಾಸಿನಿಯರೊಂದಿಗೆ ಮಗುವಿಗೆ ಆದರದಿಂದ ಆರತಿಯನ್ನೆತ್ತಿದಳು. ವಿವಿಧ ವರ್ಣರಂಜಿತ ರತ್ನಗಳ ಪ್ರಭಾಮಧ್ಯದಲ್ಲಿ ಬಾಲಕನು ಕುಳಿತಿದ್ದನು. ನಾನಾಲಂಕಾರಗಳನ್ನು ತೊಡಿಸಿದ್ದರಿಂದ ಸ್ವಭಾವಸುಂದರವಾದ ಬಾಲಕನ ದೇಹಕಾಂತಿಯು ಮತ್ತಷ್ಟು ಪ್ರಭಾಯುತವಾಗಿ ತೋರಿ ಬಂದಿತು. ॥೯॥

ಆಗ ಈ ಮಹೋತ್ಸವಕ್ಕಾಗಿ ಬಂದಿದ್ದ ದೇವಾಧಿದೇವತೆಗಳಲ್ಲಿ ಪ್ರತಿಯೊಬ್ಬರೂ ಎದ್ದು ಬಂದು, ತಾವು ತಂದಿದ್ದ ಅನರ್ಘ್ಯ ಉಡುಗರೆಗಳನ್ನು ಪಾರ್ವತೀ-ಪರಮೇಶ್ವರರಿಗೂ ಮತ್ತು ಶಿಶುವಿಗೂ ಪ್ರೀತಿ-ಗೌರವಗಳಿಂದ ಸಮರ್ಪಿಸಿದರು. ಆ ಸಮಯದಲ್ಲಿ ದೇವಲೋಕದ ಮಂಗಲವಾದ್ಯಗಳು ಶ್ರುತಿಮಧುರವಾಗಿ ಮೊಳಗುತ್ತಲಿದ್ದವು. ಬಂದವರೆಲ್ಲಗೂ ಭಕ್ತಿಪರವಶರಾಗಿ ನೋಡುತ್ತ ಕುಳಿತಿದ್ದರು.॥೧೦॥

ಆಗ ಮಹಾದೇವಿಯು ಅಲ್ಲಿ ನೆರೆದಿದ್ದ ವಿಪ್ರವರ್ಯರಿಗೆಲ್ಲ ಸುವರ್ಣ, ರತ್ನ

ಆಶೀರ್ವಾದಾಕ್ಷತಾಂಸ್ತಸ್ಮಿಂಸ್ಚಿಕ್ಷೇಪ ಸಕಲಾರ್ಪಿತಾನ್ ॥೧೧॥

ಭವಾನೀ ಪೂಜಯಾಮಾಸ ಮುನಿಪತ್ನೀಃ ಸಕನ್ಯಕಾಃ ।

ತಾ ಊಚುಃ

ಮುನಿಪತ್ನ್ಯ ಊಚುಃ :—

ಗಿರಿಜೇ ! ಧನ್ಯಾ ತ್ವದನ್ಯಾ ನಾಸ್ತಿ ಕುತ್ರಚಿತ್ ॥೧೨॥

ಏತಾದೃಶಸ್ಸುತೋ ವಾಪಿ ಸರ್ವಲಕ್ಷಣಮಂಡಿತಃ ।

---

ವಸ್ತ್ರಾದಿಗಳನ್ನು ಕೊಟ್ಟು ಭಕ್ತಿಯಿಂದ ಅರ್ಚಿಸಿದಳು. ಅವರು ವೇದಮಂತ್ರಗಳನ್ನುಚ್ಚರಿಸಿ ಮಂತ್ರಪೂತವನ್ನಾಗಿಮಾಡಿದ್ದ ಆಶೀರ್ವಾದದ ಮಂತ್ರಾಕ್ಷತೆಗಳನ್ನು ಬ್ರಾಹ್ಮಣರಿಂದತೆಗೆದುಕೊಂಡು ಮೊದಲು ಅದನ್ನು ತಾನು ಸ್ವೀಕರಿಸಿ, ಅನಂತರ ಮಗುವಿನ ತಲೆಯ ಮೇಲೆ ಎರಚಿದಳು. ಈ ಮಂತ್ರಾಕ್ಷತೆಗಳನ್ನು ಪ್ರತಿಯೊಬ್ಬ ವಿಪ್ರನೂ ಪ್ರತ್ಯೇಕವಾಗಿ ಅಭಿಮಂತ್ರಿಸಿ ಪಾರ್ವತಿಯ ಕರಕಮದಲ್ಲಿ ಸಮರ್ಪಿಸಿದ್ದರು. ॥೧೧॥

ಅನಂತರ ಭವಾನೀದೇವಿಯು ಮುನಿಪತ್ನಿಯರನ್ನೂ, ಕುಮಾರಿಕೆಯರನ್ನೂ ಹರಿದ್ರಾ-ಕುಂಕುಮ, ಗಂಧ-ಮಾಲ್ಯಾದಿಮಂಗಲ ದ್ರವ್ಯಗಳಿಂದ ಪೂಜಿಸಿದಳು. ಇದರಿಂದಲೂ, ಆ ಮಹೋತ್ಸವನ್ನು ಕಣ್ಣು ತುಂಬ ನೋಡಿಯೂ ಹರ್ಷಭರಿತರಾದ ಮುನಿಪತ್ನಿಯರು ದೇವಿಯನ್ನು ಕುರಿತು ಹೀಗೆಂದು ನುಡಿದರು.

ಋಷಿಪತ್ನ್ಯಾದಿಗಳು :—

ದೇವಿ, ಗಿರಿಜೆ ! ನಿನ್ನಂತಹ ಧನ್ಯತಮಳು ಎಲ್ಲೆಲ್ಲೂ ದೊರೆಯುವುದಿಲ್ಲ. ॥೧೨॥

ಮಹಾಪುರುಷರಿಗಿರಬೇಕಾದ ಸಕಲ ಸು-ಲಕ್ಷಣಗಳಿಂದಲೂ ಮಂಡಿತನಾದ ಇಂತಹ ಸು-ಪುತ್ರನು ಪುಣ್ಯಶಾಲಿಯಲ್ಲದವಳಿಗೆ ಎಂದಾದರೂ ಜನಿಸಿಯಾನೇ ?

ಕ ಉವಾಚ :—

ಏವಂ ವದತ್ಸು ಸರ್ವೇಷು ಸ್ತ್ರೀಜನೇಷು ಮಹಾಖಲಃ ||೧೩||

'ವ್ಯೋಮಾಸುರೋ' ವ್ಯೋಮಕರ್ಣೋ ನಾನಾಮಾಯಾವಿಶಾರದಃ |

ನ ಬಲೇ ಸದೃಶಸ್ತಸ್ಯ ಕೋಽಪಿ ತ್ರಿಭುವನೇಽಭವತ್ ||೧೪||

ಸ ತು ದ್ವಾರಿ ಸ್ಥಿತಂ ಚೂತಂ ನಾನಾಶಾಖಾಸಮನ್ವಿತಮ್ |

ಬ್ರಹ್ಮಾ :—

ಹೀಗೆ ಸ್ತ್ರೀ ಜನರೆಲ್ಲರೂ ತಮ್ಮ ಸಂತೋಷಾತಿಶಯವನ್ನು ಅಭಿವ್ಯಕ್ತಿಗೊಳಿಸುತ್ತಿರುವಷ್ಟರಲ್ಲಿ, ನೀಚರಲ್ಲಿ ಪರಮ ನೀಚನೆನಿಸಿದ ರಾಕ್ಷಸನೊಬ್ಬನು ಈ ಬಾಲಕನನ್ನು ಘಾತಿಸಬೇಕೆಂಬ ತನ್ನ ದುರುದ್ದೇಶದೊಂದಿಗೆ ಅಲ್ಲಿಗೆ ಧಾವಿಸಿ ಬಂದನು. ಅವನ ಹೆಸರು 'ವ್ಯೋಮಾಸುರ' ಹೆಸರಿಗೆ ತಕ್ಕಂತೆ ಅವನು ಬಹಳ ಸೂಕ್ಷ್ಮರೂಪಿಯಾಗಬಲ್ಲವನು. ಅವನಿಗೆ ಆಕಾಶದಷ್ಟೇ ವಿಸ್ತೃತವಾದ ಕಿವಿಗಳಿದ್ದವು. ಎಂದರೆ ಪ್ರಪಂಚದ ಯಾವ ಪ್ರದೇಶದಲ್ಲಿ, ಯಾವ ಕಾಲದಲ್ಲಿ ಏನನ್ನೇ ಮಾತನಾಡಲಿ, ಅದೆಲ್ಲವೂ ಅವನಿಗೆ ಸ್ಪಷ್ಟವಾಗಿ ಕೇಳಿಸುತ್ತಲಿದ್ದಿತು. ಅವನು ನಾನಾ ಬಗೆಯ ರಾಕ್ಷಸೀ ಮಾಯೆಗಳನ್ನು ಅರಿತು, ಅದರಲ್ಲಿ ನಿಷ್ಣಾತನಾಗಿದ್ದನು. ಅವನಂತಿರುವ ಬಲಶಾಲಿಯು ತ್ರಿಭುವನದಲ್ಲಿ ಯಾರೂ ಇರಲಿಲ್ಲ. ||೧೩-೧೪||

ಮರೀಚಿ ಮಹರ್ಷಿಯು ಮಹಾಮಂತ್ರಗಳಿಂದ ಬಾಲಕನಿಗೆ ರಕ್ಷೆಯನ್ನು ಕಟ್ಟಿದ್ದನಷ್ಟೆ ? ಅದರ ಪ್ರಭಾವದಿಂದ ದುಸ್ಸ್ವಭಾವದ ಯಾರೊಬ್ಬರೂ ಪ್ರತ್ಯಕ್ಷವಾಗಿ ಇವನೆದುರಿಗೆ ಬಂದು ನಿಲ್ಲಲು ಸಾಧ್ಯವಾಗುತ್ತಿರಲಿಲ್ಲ. ಯಾವ ವಿಧದಿಂದಲಾದರೂ ಪ್ರತಿಭಟನೆಯನ್ನು ತೋರಿಸಬೇಕಿದ್ದರೆ, ಅದನ್ನು ಅದೃಶ್ಯರಾಗಿದ್ದೇ ತೋರಿಸಬೇಕಿದ್ದಿತು. ಆದುದರಿಂದ ವ್ಯೋಮಾಸುರನು ಪಾರ್ವತಿಯ ಮನೆಯ ಬಾಗಿಲಿಗೆ ಬಂದೊಡನೆಯೇ ಹಾಗೆಯೇ ಒಮ್ಮೆ ಸುತ್ತಲೂ ದೃಷ್ಟಿಯನ್ನು ಬೀರಿ, ನೋಡಿದನು. ಪರಮೇಶ್ವರನ ಪರ್ಣಕುಟೀರಕ್ಕೆ ಎದುರಿಗೆ ಒಂದು ದೊಡ್ಡ ಮಾವಿನ ಮರವಿರು

ಅಭೇದ್ಯಂ ವಾರಣಶತೈಃ ಕಲ್ಪಾಂತಮಾರುತೈರಪಿ ||೧೫||

ಪ್ರವಿವೇಶ ತದಾ ವ್ಯೋಮೋ ಮಾಯಯಾ ಸ ತದಂತರಮ್ |
ಯಥಾ [1] ದೃಷ್ಟಿವಶಾದ್ಭೂತಂ ವಿಶತೇ ದುಷ್ಟಚೇಷ್ಟಿತೇ ||೧೬||

ದೋಲಯಾಮಾಸ ತಂ ವೃಕ್ಷಂ ಕಲ್ಪಾಂತೇ ಮಾರುತೋ ಯಥಾ |
ದ್ರುವಃಷಾತಭಯಾತ್ಸರ್ವೇ ಮುನಯಶ್ಚ ಸಮಾಗತಾಃ ||೧೭||

---

ಪ್ರಮ ವೃಗ್ಗೋಚರವಾಯಿತು. ಅದು ಬಹಳ ದೊಡ್ಡ ಮರ. ಅದರ ಕೊಂಬೆಗಳು ಸಿಕ್ಕಾಪಟ್ಟೆ ಬೆಳೆದು ಆ ಪ್ರದೇಶವನ್ನೆಲ್ಲ ವ್ಯಾಪಿಸಿದ್ದವು. ನೂರಾರು ಬಲಿಷ್ಠ ಆನೆಗಳು ಬಂದು ಒಮ್ಮೆಲೇ ಪ್ರಯತ್ನಿಸಿದರಾಗಲೀ ಅಥವಾ ಪ್ರಳಯಕಾಲದಲ್ಲಿ ಉಧ್ಭವಿಸುವಂತಹ ಬಿರುಗಾಳಿಯು ರಭಸದಿಂದ ಬೀಸಿದರಾಗಲೀ ಆ ವೃಕ್ಷವನ್ನು ಅಲುಗಾಡಿಸಲಿಕ್ಕೆ ಸಹ ಸಾಧ್ಯವಾಗುತ್ತಲಿರಲಿಲ್ಲ. ||೧೫||

'ಇದರಲ್ಲಿ ಪ್ರವೇಶಿಸಿ ನಮ್ಮ ಶತ್ರುವಿಗೆ ತಕ್ಕ ಪ್ರತೀಕಾರವನ್ನು ಮಾಡುವೆನು' ಎಂದು ಆಸುರನು ನಿಶ್ಚಯಿಸಿದನು. ಆಚಾರ-ವ್ಯವಹಾರಗಳ ವಿಷಯದಲ್ಲಿ ಅಸಡ್ಡೆಯಿಂದ ಇರತಕ್ಕ ಕುಲೀನ ಮನೆ ಸವವರ ದೇಹಗಳನ್ನು ವಾಯವೀಯ ಶರೀರಿಗಳಾದ ಭೂತ-ಪ್ರೇತಗಳು ಕೇವಲ ದೃಷ್ಟಿಕ್ಷೇಪದಿಂದಲೇ ಹೇಗೆ ಪ್ರವೇಶಿಸುವುವೋ. ಅದರಂತೆ ವ್ಯೋಮಾಸುರನೂ ಸಹ ತನ್ನ ಮಾಯಾಬಲದಿಂದ ಅತಿ ಸೂಕ್ಷ್ಮನಾಗಿ ಮಾರ್ಪಟ್ಟು ಆ ಸ್ಥಾವರ ದೇಹವನ್ನು ಪ್ರವೇಶಿಸಿದನು. ||೧೬||

ಸ್ವಭಾವತಃ ಚಪಲಗಳಾದ ಕಪಿಗಳು ಗಿಡಗಳನ್ನೇರಿದರೆ ಸುಮ್ಮನಿರುವುವೇ ? ಅದರಂತೆ ಈ ರಾಕ್ಷಸನು. ಕೇಳು, ತನ್ನ ಬಲವನ್ನೆಲ್ಲ ಆ ಮಹಾವೃಕ್ಷದ ಮೇಲೆ ಪ್ರಯೋಗಿಸಿ, ಆ ವೃಕ್ಷವು ಬೇರು ಸಹಿತ ಮುರಿದು ಬಿದ್ದುಬಿಡುವಷ್ಟು ರಭಸದಿಂದ ಅದನ್ನು ಅಲುಗಾಡಿಸಿದನು. ಇದನ್ನು ನೋಡಿದರೆ ಪ್ರಳಯಕಾಲದ ಮಹಾವಾತವೇ ಎದ್ದಿದೆಯೋ ಎಂಬಂತೆ ತೋರುತ್ತಲಿದ್ದಿತು. ಮರವು ಇದ್ದಕ್ಕಿದ್ದಂತೆಯೇ ಈ ರೀತಿಯಾಗಿ ಹೊಯ್ದಾಡುತ್ತಿರುವುದನ್ನು ನೋಡಿ, ದೇವಿಯ ಮನೆಗೆ ಬಂದಿದ್ದ ಮುನಿಗಳೂ, ತತ್ಪತ್ನಿಯರೂ ಹೆಚ್ಚೇಕೆ ! ಎಲ್ಲರೂ ಭಯಾರ್ದಿತರಾಗಿ ಹೊರಕ್ಕೆ ಓಡಿ ಬಂದುಬಿಟ್ಟರು. ||೧೭||

---

[1] ವಿವರಣೆಗೆ ಪರಿಶಿಷ್ಟವನ್ನು ನೋಡತಕ್ಕದ್ದು.

ಭೀತಾಃ ಪ್ರೋಚುರ್ವಿನಾ ವಾಯುಂ ಕಂಪತೇ ಕಿಂ ಮಹಾದ್ರುಮಃ ? ।
ತಾವತ್ಕಟಕಟಾಶಬ್ದಂ ಶುಶ್ರುವುರ್ವೃಕ್ಷಸಂಭವಮ್ ॥೧೮॥

ಸ್ತ್ರಿಯೋ ಗಣಾಶ್ಚ ಸರ್ವೇ ತೇ ಚಕ್ರಿರೇ ತು ಪಲಾಯನಮ್ ।
ವಿಸ್ಮೃತ್ಯ ಬಾಲಕಂ ಭ್ರಾಂತಾ ಗಿರಿಜಾಪಿ ಪಲಾಯಿತಾ ॥೧೯॥

ಏತಸ್ಮಿನ್ನಂತರೇ ವೃಕ್ಷೋ ನಿಪಪಾತಾರ್ಭಕೇ ತದಾ ।
ಹಸ್ತಾಭ್ಯಾಂ ನಿಪತಸ್ತೇನ ಶತಚೂರ್ಣೋsಪತದ್ದ್ರುಃ ॥೨೦॥

---

' ಇದೇನೀ ಅದ್ಭುತ ? ಸ್ವಲ್ಪವೂ ಗಾಳಿಯೇ ಇರ ವುದಿಲ್ಲ ? ಹೀಗಿದ್ದರೂ ಎಂದೂ ಚಲಿಸದಿದ್ದ ಈ ವೃಕ್ಷವೇಕೆ ಇಂದು ಹೀಗೆ ಅಲ ...ತ್ತದೆ ? ' ಎಂದು ಆಶ್ಚರ್ಯದಿಂದ ಪರಸ್ಪರ ಮಾತನಾಡಿದರು. ಅಷ್ಟರೊಳಗಾಗಿಯೇ ಆ ಮಹಾ ವೃಕ್ಷದಿಂದ ' ಕಟ, ಕಟ, ಚಟ, ಚಟ ' ಎಂಬ ಭಯಂಕರ ಶಬ್ದವು ಕೇಳಿ ಬರ ಲಾರಂಭಿಸಿತು. ವೃಕ್ಷವು ಕೂಡಲೇ ನೆಲಕ್ಕುರುಳುವುದಕ್ಕೆ ಇದು ಸೂಚನೆ ಎಂಬುದು ಎಲ್ಲರಿಗೂ ಹೊಳೆದು ಹೋಯಿತು.

ಸ್ತ್ರೀಯರು, ಪ್ರಮಥಗಣಗಳು, ಎಲ್ಲರೂ ಹೇಳದೇ ಕೇಳದೇ, ಯಾರ ಹಂಗನ್ನೂ ಇಡದೇ ಜೀವಭಯದಿಂದ ದಾರಿ ಸಿಕ್ಕಿದತ್ತ ಓಡಿ ಹೋದರು. ದೈವಲೀಲೆ, ಮಹಾಮಾಯೆ, ಗಿರಿಜೆಗೆ ಸಹ ಭಯ ಉಂಟಾಗೋಣವೇ? ಓಡಿಹೋಗುವಾಗ ಗಿರಿಜೆಯು ತನ್ನ ಬಾಲಕನನ್ನು ಎತ್ತಿಕೊಂಡೇ ಓಡಬಾರದಿದ್ದಿತೇ? ಆದರೆ, ಆವಳು ಹಾಗೆ ಮಾಡಲಿಲ್ಲ. ಅವನನ್ನು ಮರೆತು ಅಲ್ಲಿಯೇ ಬಿಟ್ಟು ತಾನೂ ಓಡಿ ನಡೆದಳು. ॥೧೯॥

ಇಷ್ಟಾಗುವುದರೊಳಗಾಗಿ ಆ ಮಹಾ ವೃಕ್ಷವು ಸಂಪೂರ್ಣವಾಗಿ ಮುರಿದು, ಇನ್ನೂ ಅರ್ಭಕಾವಸ್ಥೆಯಲ್ಲಿದ್ದ ಮಹಾ ಗಣಪತಿಯ. ಮೇಲೆಯೇ ಧೊಪ್ಪನೆ ಬಿದ್ದು ಬಿಟ್ಟಿತು. ಆಗಿನ ಚಮತ್ಕಾರವನ್ನು ವ್ಯಾಸ ! ಹೇಳುವೆನು ಕೇಳು. ಆ ಶಿಶು ತನ್ನ ಮೇಲೆ ಬೀಳುತ್ತಿರುವ ಆ ಮಹಾವೃಕ್ಷವನ್ನು ತಡೆಯಲು ತನ್ನ ಪುಟ್ಟಪುಟ್ಟ ಕೈಗಳನ್ನು ಚಾಚಿ, ಅತ್ತ ಕಡೆ ಆ ರಾಕ್ಷಸನನ್ನು ತಳ್ಳಿಬಿಟ್ಟನು. ಕಲ್ಲಿನ ಮೇಲೆ ಗಾಜಿನ ಬುರುಡೆ

ಯಥಾ ಘನನಿಪಾತೇನ [1]ಕ್ರಮುಕಂ ದೃಷದಿ ಸ್ಥಿತಮ್ ।
ಭ್ರಮಂತಿ ಸ್ಮ ತದಾ ವ್ಯೋಮ್ನಿ ತಚ್ಛಾಖಾಃ ಪಲ್ಲವಾನ್ವಿತಾಃ ॥೨೧॥

ಋಷೀಣಾಮಾಶ್ರಮಾಃ ಕೇಚಿದ್ಭಗ್ನಾಃ ಶಾಖಾನಿಪಾತತಃ ।
ಪಲಾಯಿತೇ ಜನೇ ಪೇತುಃ ಕಾಶ್ಚಿಚ್ಛಾಖಾಃ ಸಪಲ್ಲವಾಃ ॥೨೨॥

ತತೋ ವ್ಯೋಮಾಸುರೋ ದುಷ್ಟೋ ಗತಾಸುರ್ನಿಪಪಾತ ಹ ।
ವ್ಯಾದಾಯಾಸ್ಯಂ ವಮನ್ ರಕ್ತಂ ಶತಧಾ ತೇನ ಸೋಽಭವತ್ ॥೨೩॥

---

ಬಿದ್ದಂತಾಯಿತು, ಆ ಮರದ ಪರಿಸ್ಥಿತಿ. ಮರವು ನೂರಾರು ಚೂರಾಗಿ ನೆಲಕ್ಕೆ ಉರುಳಿ ಬಿದ್ದಿತು. ॥೨೦॥

ಕಲ್ಲಿನ ಮೇಲಿಟ್ಟಿದ್ದ ಒಂದು ಅಡಿಕೆಯ ಮೇಲೆ ದೊಡ್ಡದೊಂದು ಬಂಡೆಯು ಬಿದ್ದುಬಿಟ್ಟರೆ ಅಡಿಕೆಯ ಅವಸ್ಥೆ ಹೇಗಾಗಬಹುದೋ, ವೃಕ್ಷವನ್ನು ಪ್ರವೇಶಿಸಿದ್ದ ವ್ಯೋಮಾಸುರನ ಪರಿಸ್ಥಿತಿಯೂ ಹಾಗಾಯಿತು. ಆ ವೃಕ್ಷದ ಕೊಂಬೆಗಳು ತಮ್ಮ ಕಿಸಲಯಗಳೊಂದಿಗೆ ಅಂತರಿಕ್ಷಕ್ಕೆ ಹಾರಿ ಹೋಗಿ, ಅಲ್ಲೆಲ್ಲ ಹಾರಾಡತೊಡಗಿದವು ॥೨೧॥

ಮೇಲೆ ಹಾರಿಹೋಗಿದ್ದ ಮಾವಿನ ಮರದ ಕೊಂಬೆಗಳು ಪುನಃ ಭೂಮಿಗೆ ಬೀಳುವಾಗ ಅನೇಕ ಮಂದಿ ಋಷಿಗಳ ಪರ್ಣಕುಟೀರಗಳನ್ನು ಮುರಿದುಬಿಟ್ಟವು. ಆದರೆ ಒಂದು ವಿಶೇಷ. ಯಾರೊಬ್ಬರಿಗೂ ಪ್ರಾಣಾಪತ್ತು ಉಂಟಾಗಲಿಲ್ಲ. ಎಲ್ಲರೂ ದೂರ ಓಡಿ ಹೋದ ಮೇಲೆಯೇ ಆ ಕೊಂಬೆಗಳು ಬಿದ್ದವು. ॥೨೨॥

ಗೋಡೆಯು ಉರುಳಿಬಿದ್ದ ಬಳಿಕ, ಅದನ್ನಾಶ್ರಯಿಸಿಕೊಂಡಿದ್ದ ಚಿತ್ರಗಳು ಉಳಿದಾವೇನು ? ಅದರಂತೆ ಮಾವಿನ ಮರವನ್ನು ಸರ್ವಾತ್ಮನಾ ಆಶ್ರಯಿಸಿದ್ದ ಮಹಾದುಷ್ಟ; ವ್ಯೋಮಾಸುರನು ಪ್ರಾಣಗಳನ್ನು ಕಳೆದುಕೊಂಡು ಧೊಪ್ಪನೆ ನೆಲಕ್ಕೆ ಬಿದ್ದುಬಿಟ್ಟನು. ಅವನ ಬಾಯಿ ತೆರೆದುಹೋಯಿತು. ಏಕಪ್ರಕಾರವಾಗಿ

---

[1] ವಿವರಣೆಗೆ ಪರಿಶಿಷ್ಟವನ್ನು ನೋಡಿರಿ.

ಆಯಯುಸ್ತೇ ತತಃ ಸರ್ವೇ ಸ್ತ್ರಿಯಶ್ಚ ಬಾಲಕಂ ತದಾ |
ದದೃಶುಸ್ತೇ ಯಥಾಪೂರ್ವಮುಪವಿಷ್ಟಂ ನಿರಾಕುಲಮ್ ||೨೪||
ಸುಮೇರುನಿಶ್ಚಲಂ ಸ್ವಸ್ಥಂ ತತಸ್ಸರ್ವೇ ವಿಸಿಸ್ಮಿರೇ |
ಸರ್ವ ಊಚುಃ :—
ಪಂಚಮಾಸೇನ ಬಾಲೇನ ಮಹಾ ಬಲ-ಪರಾಕ್ರಮಃ ||೨೫||
ಲೀಲಯಾ ಹಸ್ತತೋ ದೈತ್ಯಃ ಸ ವೃಕ್ಷಃ ಶತಧಾಕೃತಃ |

---

ರಕ್ತವನ್ನು ಕಾರಿದನು. ಮರದೊಂದಿಗೆ ನೆಲಕ್ಕೆ ಬಿದ್ದ ಹೊಡೆತಕ್ಕೆ ರಾಕ್ಷಸನ ಶರೀರವು ನೂರಾರು ತುಂಡುಗಳಾಗಿದ್ದಿತು. ||೨೩||

ಆಗ ಜನರಿಗೆ ಸ್ವಲ್ಪ ಸ್ವಲ್ಪವಾಗಿ ಉಸಿರು ಕೂಡಿಬಂದಂತೆ ಆಯಿತು. ಎಲ್ಲರಿಗೂ 'ಪಾರ್ವತೀ' ನಂದನನೊಬ್ಬನೇ ಅಕ್ಷಿ ಉಳಿದಿದ್ದನಲ್ಲ ಎಂಬುದುಆಗ ಸ್ಮರಣಕ್ಕೆ ಬಂದಿತು. ಸ್ತ್ರೀ-ಪುರುಷರೆಲ್ಲರೂ ಎಡವಿ ಬೀಳುವುದನ್ನು ಸಹ ಗಮನಿಸದೇ ಮಗು ಕುಳಿತಿದ್ದ ಕಡೆಗೆ ಓಡಿ ಬಂದರು. ಇತ್ತ ಬಾಲಕನು ಯಾವ ವಿಧವಾದ ಅಸಘಾತಕ್ಕೂ ಒಳಗಾಗದೇ, ಸ್ವಲ್ಪವೂ ಆತಂಕಪಡದೇ ಮೊದಲು ಹೇಗೆ ಕುಳಿತಿದ್ದನೋ, ಹಾಗೆಯೇ ಕುಳಿತುಬಿಟ್ಟಿದ್ದನು. ಇದನ್ನು ಎಲ್ಲರೂ ನೋಡಿದರು. ||೨೪||

ಸುಮೇರು ಪರ್ವತದಂತೆ ಅತ್ತಿತ್ತ ಚಲಿಸದೇ ಬಹಳ ಸ್ಥೈರ್ಯದಿಂದ ಬಾಲಕನು ಕುಳಿತಿದ್ದುದನ್ನು ನೋಡಿ ಎಲ್ಲರಿಗೂ ಪರಮಾಶ್ಚರ್ಯ ಉಂಟಾಯಿತು. ಆಗ ಎಲ್ಲರೂ ಹೀಗೆ ಮಾತನಾಡಿಕೊಂಡರು.

ಜನರು :—

ಐದೇ ತಿಂಗಳ ವಯಸ್ಸಿನ ಈ ಬಾಲಕನಿಗೆ ಎಷ್ಟರಮಟ್ಟಿಗೆ ಬಲ-ಪರಾಕ್ರಮಗಳಿವೆ ? ಎಷ್ಟು ಧೈರ್ಯಶಾಲಿ ? ನೋಡಿದಿರಾ ? ||೨೫||

ಕೇವಲ ಬಾಲಲೀಲೆಯಿಂದಲೇ ತನ್ನ ಪುಟ್ಟ ಕೈಗಳನ್ನಲ್ಲಾಡಿಸಿ, ಆ ಮಹಾ ವೃಕ್ಷದೊಂದಿಗೆ ಈ ದೈತ್ಯಾಧಮನನ್ನೂ ಉರುಳಿಸಿ ನೂರಾರು ಚೂರು ಮಾಡಿ ಬಿಸುಟನಲ್ಲವೇ ?

ಶ ಉವಾಚ :—

ಹಾಹಾಕಾರಗವಾ ಗೌರೀ ಧಾವತಿ ಸ್ಮ ನಿಜಂ ಸುತಮ್ ||೨೬||

ಮುನಯಸ್ತಾಮಥೋಚುಸ್ತೇ ' ಹತದೈತ್ಯಸ್ಸುತಸ್ತವ ' |
ಸಾ ದದರ್ಶ ತತಃ ಬಾಲಂ ಹಿಮವತ್ಪರ್ವತೋಪಮಮ್ ||೨೭||

ಉತ್ಥಾಯ ಕಟಿದೇಶೇ ತಂ ಧೃತ್ವಾ ಸ್ತನ್ಯಂ ಪದೌ ಮುದಾ |
ಮರೀಚಿವಾಕ್ಯಂ ಸಸ್ಮಾರ ಪ್ರಶಶಂಸ ಮಹೇಶ್ವರಮ್ ||೨೮||

---

ಬ್ರಹ್ಮ :—

ಇಷ್ಟೆಲ್ಲ ನಡೆಯುತ್ತಿರುವಷ್ಟರಲ್ಲಿ ದೂರ ಓಡಿ ಹೋಗಿ ನಿಂತಿದ್ದ ಗೌರೀದೇವಿಗೆ ತನ್ನ ಮಗನ ಗತಿ ಏನಾಗಿದೆಯೋ ಎಂಬ ನೆನಪು ಬಂದಿತು. ಅವನ ಕಲ್ಪನೆಯುಂಟಾದೊಡನೆ ಹಾಹಾಕಾರ ಮಾಡುತ್ತ ತನ್ನ ಮಗನಿದ್ದ ಸ್ಥಳಕ್ಕೆ ಧಾವಿಸಿ ಬಂದಳು. ||೨೬||

ಘಾಬರಿಗೊಂಡ ಗೌರೀದೇವಿಯನ್ನು ನೋಡಿ ಮುನಿಗಳು ಹರ್ಷಿಸುತ್ತ ' ನೋಡಿದೆಯ, ನಿನ್ನ ಮಗನ ವೀರ್ಯವನ್ನು? ದುಷ್ಟ ದೈತ್ಯವೀರನನ್ನು ಸಾಯಿಸಿ, ನೋಡು, ಧೀರನಾಗಿ ಹೇಗೆ ಕುಳಿತಿದ್ದಾನೆ?' ಎಂದು ನುಡಿದು ಅಭಿನಂದಿಸಿದರು. ಪಾರ್ವತಿಗೆ ಇವರ ಅಭಿನಂದನಾ ವಾಕ್ಯಗಳಿಗಿಂತಲೂ ' ಮಗನು ಬದುಕಿದ್ದಾನೆ ' ಎಂಬ ವಾಕ್ಯಗಳು ಹೆಚ್ಚು ಪ್ರಿಯಕರವಾಗಿದ್ದವು. ತಾಯಿಯ ಹೃದಯ. ಒಡನೆಯೇ ಎಲ್ಲರನ್ನೂ ತಳ್ಳುತ್ತ ಮುನ್ನುಗ್ಗಿ ಮಗನನ್ನು ನೋಡಿದಳು. ಹಿಮವತ್ಪರ್ವತದಂತೆ ಅಚಲವಾಗಿ ತನ್ನ ಮಗನು ಕುಳಿತಿರುವುದನ್ನು ಗಿರಿಜೆಯು ಕಂಡಳು. ||೨೭||

ಅವನನ್ನು ಕೂಡಲೇ ಎತ್ತಿಕೊಂಡು ಕಟಿಪ್ರದೇಶದಲ್ಲಿ ಕುಳ್ಳಿರಿಸಿಕೊಂಡಳು. ಅವಳಿಗೆ ಹೋದ ಜೀವ ಪುನಃ ಬಂದಂತಾಗಿದ್ದಿತು. ಸಂತೋಷದಿಂದ ಆನಂದಾಶ್ರುಗಳನ್ನು ಸುರಿಸುತ್ತ ಸ್ತನ್ಯವನ್ನು ಪಾನಮಾಡಿಸಿದಳು. ಮರೀಚಿ ಮಹರ್ಷಿಯು ನುಡಿದಿದ್ದ ಭವಿಷ್ಯವಾಣಿಯನ್ನು ನೆನಪುಮಾಡಿಕೊಂಡಳು. ಅವಳಿಗೆ ಬಹಳ

ಗೌರ್ಯುವಾಚ :–

ಯುವಿಾಶ್ವರೋಽವತಿ ಸದಾ ತಂ ಹಂತುಂ ಯಸ್ಸಮಿಾಹತೇ ? ।
ಸ ಏವ ವಿಲಯಂ ಯಾತಿ ಪತಂಗ ಇವ ದೀಪಗಃ ॥೨೯॥

ಕ ಉವಾಚ :—

ಮುನಯೋ ಯೋಷಿತಸ್ಸರ್ವಾ ಯಯುಸ್ಸ್ವಂ ಸ್ವಂ ನಿವೇಶನಮ್ ।
ತತೋ ಗಣಾ ಯಯುಃ ಕೇಽಪಿದಕ್ಷತಂ ಪೀಕ್ಷ್ಯ ತತ್ಸುತಮ್ ॥೩೦॥

ಊಚುಃ

ಸೋಜಿಗ ಉಂಟಾಯಿತು. ಬಾಲಕನನ್ನು ಬದುಕಿಸಿಕೊಟ್ಟದಕ್ಕೆ ಭಗವಂತನನ್ನು ಮನಃಪೂರ್ವಕವಾಗಿ ಹೀಗೆಂದು ಕೊಂಡಾಡಿದಳು- ॥೨೮॥

ಗೌರೀ :—

ನನ್ನ ಬಾಲಕನನ್ನು ಜಗದೀಶ್ವರನೇ ಸರ್ವದಾ ಸಂರಕ್ಷಿಸುತ್ತಲಿರುವಾಗ ಅಂತಹ ನನ್ನ ಮಗನನ್ನು ಜಾಣರಾದವರು ಯಾರಾದರೂ ಕೊಲ್ಲಲು ಪ್ರಯತ್ನಿಸಿಯಾರೇ ? ಒಂದು ವೇಳೆ ಯಾರಾದರೂ ಈ ದುಷ್ಕಾರ್ಯಕ್ಕೆ ಪ್ರಯತ್ನಿಸಿದರೆ ಅವರು ಬುದ್ಧಿವಿಹೀನರೇ ಸರಿ. ದೀಪವನ್ನು ನೊಂದಿಸಲು ಹವಣಿಸುವ ಪತಂಗದಂತೆ ಅವರ ಗತಿ ಆಗುವುದರಲ್ಲಿ ಸಂಶಯವಿರುವುದಿಲ್ಲ. ಅವರೇ ಲಯವನ್ನು ಹೊಂದುತ್ತಾರೆ. ಇದಕ್ಕೆ ಇದುವರೆಗೆ ನಡೆದ ಘಟನೆಗಳೇ ಸಾಕ್ಷಿ. ॥೨೯॥

ಬ್ರಹ್ಮಾ :—

ಮುನಿಗಳು, ಋಷಿಪತ್ನಿಯರು, ಮತ್ತಿತರರು ಎಲ್ಲರೂ ತಮ್ಮ ತಮ್ಮ ಆವಾಸಗಳಿಗೆ ಹಿಂದಿರುಗಿ ಹೋದರು. ಅನಂತರ ಪ್ರಮಥಗಣಗಳು ಬಾಲಕನ ಸಮಿಾಪಕ್ಕೆ ಬಂದು, ಅವನ ಮೈ-ಕೈಗಳಿಗೆ ಯಾವ ಬಗೆಯ ಗಾಯಗಳೂ ಆಗದಿದ್ದುದನ್ನು ನೋಡಿ, ಸಂತೋಷಾಶ್ಚರ್ಯಯುಕ್ತರಾಗಿ ಹಿಂದೆರಳಿದರು. ॥೩೦॥

ಮತ್ತು ಹೀಗೆ ನುಡಿದರು.

**ಗಣಾ ಊಚುಃ :—**

ಧನ್ಯತರಾ ಮಾತಾ ರಕ್ಷಿತಸ್ತತ್ಸುತೋಽಸುರಾತ್ ।
ದುಷ್ಟಾ ಏವ ಲಯಂ ಯಾಂತಿ ಸಾಧುರ್ನ ಕ್ವಾಪಿ ಸೀದತಿ ॥೩೧॥

**ಕ ಉವಾಚ :—**

ತತಸ್ತಾ ಶರ್ಕರಾಂ ತೇಭ್ಯೋ ದತ್ವಾಜ್ಞಾಂ ಪ್ರದದೌ ಶಿವಾ ।
ಸರ್ವಾಭ್ಯಶ್ಚ ತತೋ ಯಾತಾ ಹೃಷ್ಟಾ ತೇನ ನಿಜಂ ಗೃಹಮ್ ॥೩೨॥

ಯ ಇದಂ ಶೃಣುಯಾತ್ಪುಣ್ಯಮಾಖ್ಯಾನಂ ಭಕ್ತಿಮಾನ್ನರಃ ।
ಸ ಸ ಬಾಧಾಂ ಲಭೇತ್ಕ್ವಾಪಿ ಸರ್ವತ್ರ ನಿರ್ಭಯೋ ಭವೇತ್ ॥೩೩॥

---

ಗಣಗಳು :—

ಈ ಬಾಲಕನ ಜನನಿಯಾದ ಗಿರಿಜೆಯು ಬಹಳ ಧನ್ಯಳು. ಈಕೆಯ ಹೊಟ್ಟೆಯ ಪುಣ್ಯವೇ ಮೃತ್ಯುಸ್ವರೂಪನಾದ ಈ ರಾಕ್ಷಸನ ದವಡೆಯಿಂದ ಈ ಬಾಲಕನನ್ನು ಸ್ಕಾಯುವಷ್ಟೆ ? ದುಷ್ಟರೇ ಹಾಳಾಗತಕ್ಕವರು. ಸಾಧುಗಳಿಗೆ ಯಾವ ಯಾವ ರೀತಿಯಿಂದಲೂ ಧಕ್ಕೆಯುಂಟಾಗುವುದಿಲ್ಲ. ॥೩೧॥

ಬ್ರಹ್ಮ :—

ಗಣಗಳಾಡಿದ ಈ ಸರಳ ನುಡಿಗಳನ್ನು ಕೇಳಿ ದೇವಿಯು ಹರ್ಷದಿಂದ್ಯಮುತ್ತಷ್ಟು ಉಬ್ಬಿ ಹೋದಳು, ಹೀಗೆ ನುಡಿದವರ ಬಾಯಿ ತುಂಬುವಷ್ಟು ಸಕ್ಕರೆಯನ್ನು ತುಂಬಿ ಅವನ್ನು ಮಧುರಗೊಳಿಸಿದಳು. ಅವರಿಗೆಲ್ಲ ತಮ್ಮ ಮನೆಗಳಿಗೆ ತೆರಳಲು ಅನುಮತಿ ಯನ್ನಿತ್ತಳು. ಅನಂತರ ಅಲ್ಲಿದ್ದ ಇತರ ಸ್ತ್ರೀ–ಪುರುಷರಿಗೆಲ್ಲ ಸಕ್ಕರೆಯನ್ನು ಹಂಚಿ ಸಂತೋಷದಿಂದ ಮಗನನ್ನೆತ್ತಿಕೊಂಡು ತನ್ನ ಅಂತರ್ಗೃಹವನ್ನು ಪ್ರವೇಶ ಮಾಡಿದಳು. ॥೩೨॥

ಇದು ಅತ್ಯದ್ಭುತ ಹಾಗೂ ಪರಮ ಪವಿತ್ರವಾದ ಆಖ್ಯಾನ. ಇದನ್ನು ಯಾವ ಭಾಗ್ಯಶಾಲಿಯು ಭಕ್ತಿ-ಶ್ರದ್ಧಾನ್ವಿತನಾಗಿ ಕೇಳುವನೋ, ಅವನಿಗೆ

ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ 'ವ್ಯೋಮಾಸುರವಧ ವರ್ಣನಂ' ನಾಮ ಷಡಶೀತಿತಮೋಽಧ್ಯಾಯಃ ಸಮಾಪ್ತಃ

---

ಯಾವ ಬಗೆಯ ಬಾಧೆಯೂ ಉಂಟಾಗುವುದಿಲ್ಲ. ಅವನು ಸರ್ವತ್ರ ನಿರ್ಭೀತಿಯಿಂದ ಸಂಚರಿಸಬಲ್ಲವನಾಗುವನು. ||೩೩||

ಇಲ್ಲಿಗೆ ಶ್ರೀ ಗಣೇಶಪುರಾಣ, ಉತ್ತರಖಂಡದಲ್ಲಿ 'ವ್ಯೋಮಾಸುರ ವಧವರ್ಣನೆ' ಎಂಬಲ್ಲಿಗೆ ಎಂಭತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀ ಗಣೇಶಾಯ ನಮಃ ॥

## ಅಥ ಸಪ್ತಾಶೀತಿತಮೋಽಧ್ಯಾಯಃ

**ಕ ಉವಾಚ :—**

**ವ್ಯೋಮಾಸುರಸ್ಯ ಭಗಿನೀ ತಸ್ಯ ದುಃಖೇನ ದುಃಖಿತಾ ।**
**ನಿಶಾಮುಖೇ [2]ದರ್ಶದಿನೇ ಸಮುತ್ಪನ್ನಾ ಕ್ಷುಧಾತುರಾ ॥೧॥**

**ಭಕ್ಷಯಾಮಾಸ ಮಹಿಷಾನ್ ಶತಸಂಖ್ಯಾನ್ ಮಹಾಬಲಾನ್ ।**
**ಕರಾಲಕೇಶೀ ಲಂಬೋಷ್ಠೀ ತಾಲನಾಸಾ ದರೀಮುಖಾ ॥೨॥**

---

॥ ಶ್ರೀ ಗಣೇಶಾಯ ನಮಃ ॥

### ೮೭ ನೇಯ ಅಧ್ಯಾಯ

ಬ್ರಹ್ಮಾ :—

ವ್ಯೋಮಾಸುರನು ಮೃತಿಯನ್ನೈದಿದ ವಿಷಾದಕರ ಸಂಗತಿಯು ಅವನ ಸೋದರಿಯಾದವಳಿಗೆ ತಿಳಿಯಿತು. ಇದರಿಂದ ಅವಳು ಬಹಳವಾಗಿ ದುಃಖಿಸಿದಳು. ಅವಳ ಜನ್ಮದ ವೃತ್ತಾಂತವನ್ನು ಸ್ವಲ್ಪ ಮಟ್ಟಿಗೆ ಹೇಳುವೆನು, ಕೇಳು. ಅಮಾವಾಸ್ಯಾ ತಿಥಿಯ ದಿವಸ ಮುಸ್ಸಂಜೆಯಲ್ಲಿ ಇವಳು ಜನಿಸಿದವಳು. ಎಂದಮೇಲೆ ಅವಳ ದೇಹದ ಬಣ್ಣವು ಎಷ್ಟರಮಟ್ಟಿಗೆ ಶುಭ್ರವಾಗಿದ್ದಿತೆಂದು ನಾನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲವಷ್ಟೇ ? ಅವಳು ಹುಟ್ಟುವಾಗ ಹೊಟ್ಟೆಯನ್ನು ಮುಂದಿಟ್ಟುಕೊಂಡೇ ಜನಿಸಿದ್ದಳೆಂದು ತೋರುತ್ತದೆ. ಹುಟ್ಟಿದೊಡನೆಯೇ ಅವಳ ಹೊಟ್ಟೆಯಲ್ಲಿ ಹಸಿವು ತಾಂಡವವಾಡುತ್ತಲಿದ್ದಿತು. ॥೧॥

ಅವಳ ತಂದೆ-ತಾಯಿಯರು ಒದಗಿಸಿದ ಅಮಿತ ಆಹಾರವು ಅವಳ ಅಂಗಳವನ್ನು ತಣಿಸಲಿಲ್ಲ. ಆ ಕೂಡಲೇ ಅವಳೆದ್ದು ಓಡುತ್ತ ಹೋಗಿ, ನೂರಾರು ಬಲಿಷ್ಠ

---

ವಿವರಣೆಯನ್ನು ಪರಿಶಿಷ್ಟದಲ್ಲಿ ನೋಡಿ.

ಹಲದಂತಾ ಕೂಪನೇತ್ರಾ ಶ್ರೋತ್ರಾವರಣಸಂಯುತಾ ।
ದೀರ್ಘಸ್ತನೀ ಮಹಾಘೋರಾ ಭೂವಿಸ್ಪೃಕ್ಕಚಕಾ ಖಲಾ ॥೩॥

ದೀರ್ಘಬಾಹುರ್ನಿಮ್ನನಾಭಿ [1] ಗೋರ್ಧೇವ ಕರ್ಕಶಾ ತ್ವಚಿ ।
ನಾಮ: ಚಕ್ರುಸ್ತದಾ ಲೋಕಾಃ ಶತಮಾಹಿಷಭಕ್ಷಣಾತ್ ॥೪॥

ಅನ್ವರ್ಥಂ ಭಾವದುಷ್ಟಾಯಾಃ ಸ್ಫುಟಂ ತು 'ಶತಮಾಹಿಷಾ' ।

---

ಕೋಣಗಳನ್ನು ಹುಡುಕಿ ತಂದು ಒಂದೊಂದು ತುತ್ತಿಗೆ ಎರಡು, ಮೂರರಂತೆ ಎಲ್ಲವನ್ನೂ ತಿಂದು ಕುಳಿತಳು. ಅವಳ ತಲೆಗೂದಲು ಮುಳ್ಳು ಹಂದಿಯ ಮೈ ಮೇಲಿದ್ದ ಮೊನೂಚಾದ ಮುಳ್ಳುಗಳಂತಿದ್ದವು. ಅವಳ ತುಟಿಗಳು ನೆಲದ ವರೆಗೂ ಜೋಲಾಡುತ್ತಿದ್ದವು. ತಾಳೆಯ ಮರದಷ್ಟು ಅವಳ ಮೂಗು ಉದ್ದವಾಗಿದ್ದಿತು. ಅವಳ ಬಾಯಿಯನ್ನುನೋಡಿದರೆ, 'ಒಂದು ದೊಡ್ಡ ಗುಹೆಯೋ' ಎಂಬಂತೆ ಕಂಡುಬರುತ್ತಿದ್ದಿತು. ॥೨॥

ಅವಳ ಒಂದೊಂದು ಹಲ್ಲೂ ದೊಡ್ಡ ನೇಗಿಲಿನಂತೆ ಇದ್ದಿತು. ಹಾಳು ಭಾವಿಯಷ್ಟು ಆಳವಾಗಿದ್ದ ಗುಳಿ ಕಣ್ಣುಗಳುಳ್ಳವಳು. ಅವಳ ಕಿವಿಗಳರಡು ದೊಡ್ಡ ದೊಡ್ಡ ಗಾಲಿಗಳಂತಿದ್ದವು. ಉದ್ದವಾದ ಸ್ತನಪ್ರದೇಶಗಳುಳ್ಳವಳು. ಮುಳ್ಳಿನಂತಿದ್ದ ಅವಳ ತಲೆಗೂದಲು ಆಲದ ಬಿಳಿನ ಹಾಗೆ ನೆಲದ ಮೇಲೆಲ್ಲ ಓಡಿಯಾಡುತ್ತಿದ್ದವು. ಇಷ್ಟೆಲ್ಲ ವರ್ಣಿಸಿದ ಬಳಿಕ ಅವಳು ಎಷ್ಟರ ಮಟ್ಟಿಗೆ ಘೋರರೂಪಿಯಾಗಿದ್ದಳು ಎಂಬುದನ್ನು ವ್ಯಾಸ ! ಪ್ರತ್ಯೇಕವಾಗಿ ವರ್ಣಿಸಬೇಕೇನು?॥೩॥

ಸಮಗ್ರವಾಗಿ ಅವಳನ್ನಿನ್ನೂ ವರ್ಣಿಸಿಲ್ಲ. ಅವಳ ಬಾಹುಗಳು ಯೋಜನಗಳಷ್ಟು ದೀರ್ಘವಾಗಿದ್ದವು. ಅವಳ ನಾಭೀ ಕುಹರವು ಬಹಳ ಗಭೀರವಾಗಿದ್ದಿತು. ಹೆಂಟೆಯ ಗೊಡ್ಡು, ಮೊಸಳೆ ಮೊದಲಾದ ಒರಟು ಪ್ರಾಣಿಗಳ ದೇಹದಷ್ಟು ತರತರಿಯಾಗಿದ್ದಿತು, ಅವಳ ಚರ್ಮದ ಮಾರ್ದವ. ಇವಳ ರೂಪ-ಲಾವಣ್ಯ, ಹೊಟ್ಟೆಬಾಕತನ, ವಿಷಮಯವಾದ ಹೃದಯ, ಇವನ್ನೆಲ್ಲ ವಿಮರ್ಶಿಸಿ ಇವಳ ಹಿರಿಯರು ಮತ್ತು ಲೋಕದ ಜನರು ಎಲ್ಲರೂ ಸೇರಿ 'ಶತಮಾಹಿಷಾ' ಎಂಬ ಅನ್ವರ್ಥವಾದ

ಸಾ ಯಯೌ ಬಂಧುಹಂತಾರಂ ಹಂತುಂ ಬಂಧುಪ್ರಿಯಂಕರೀ ॥೫॥

ಕಮನೀಯತರಾ ಭೂತ್ವಾ ಸರ್ವಾವಯವಸುಂದರಾ ।
ನಾನಾಲಂಕಾರಸಂಯುಕ್ತಾ ಗೌರಾ ಷೋಡಶವಾರ್ಷಿಕೀ ॥೬॥

ಕೃತ್ವಾ ¹ಷೋಡಶ ಶೃಂಗಾರಾನ್ ಮೋಹಯಂತೀ ಕಟಾಕ್ಷತಃ ।
ಸಾ ಯಯೌ ದುಷ್ಟಭಾವೇನ ಗಿರಿಜಾಲಯಮುತ್ತಮಮ್ ॥೭॥

ಹೆಸರನ್ನು ಇಟ್ಟು ಕರೆದರು. ಆ ಹೆಸರು ಆಬಾಲ-ಗೋಪಾಲರಿಗೂ ಸ್ಪಷ್ಟವಾಗಿ ಗೊತ್ತಾಗಿದ್ದಿತು. ಇಂತಹ ಅಸುರ ಸುಂದರಿಯು ತನ್ನ ಸೋದರನನ್ನು ಕೊಂದ ಗಣಪತಿಯನ್ನು ಧ್ವಂಸಮಾಡಿ ಮೃತನಾದ ತನ್ನ ಅಣ್ಣನ ಆತ್ಮಕ್ಕೆ ಚಿರಶಾಂತಿಯನ್ನು ಕೋರುವುದಕ್ಕಾಗಿ ಸಂಕಲ್ಪಿಸಿ, ತ್ರಿಸಂಧ್ಯಾಕ್ಷೇತ್ರಕ್ಕೆ ಓಡೋಡಿ ಬಂದು ಸೇರಿದಳು. ॥೪-೫॥

ಆದರೆ, ತನಗೆ ದೈವವು ಕೊಟ್ಟ ಸ್ವಾಭಾವಿಕ ವಿಕಾರರೂಪದಿಂದಲೇ ತಾನು ಮಗುವನ್ನು ಕೊಲ್ಲಲು ಪ್ರಯತ್ನಿಸುವುದು, ಅವಳಿಗೆ ಸಮಂಜಸವೆನಿಸಲಿಲ್ಲ. ಹಾಗೇನಾದರೂ, ಮಾಡಿದ್ದರೆ, ಪ್ರಮಥಗಣಗಳ ಹಿಡಿತಕ್ಕೆ ಸಿಲುಕಿ, ಅವಳು ತನ್ನ ಅಣ್ಣನಂತೆ ಪರಲೋಕಕ್ಕೇ ಪ್ರಯಾಣಮಾಡಬೇಕಾದೀತೆಂಬ ಆಂತರಿಕ ಹೆದರಿಕೆಯು ಅವಳನ್ನು ಅಳುಕಿಸಿತಾದುದರಿಂದ ಒಡನೆಯೇ ತನ್ನ ಮಾಯಾವಿದ್ಯೆಯ ಪ್ರಭಾವವನ್ನು ಬೀರಿ ಸ್ಫುರದ್ರೂಪವತಿಯಾಗಿ ಮಾರ್ಪಟ್ಟಳು. ಅವಳು ಆಗ ಮಾರ್ಪಡಿಸಿದಂತಹ ರೂಪವತಿಯನ್ನು ಸೃಜಿಸಲಿಕ್ಕೆ ನಾನೂ ಸಹ ಸ್ವಲ್ಪ ಯೋಚಿಸಲೇ ಬೇಕಾದೀತು? ಹಾಗಿದ್ದಿತು, ಅವಳ ರೂಪ ವೈಖರಿ. ಯಾವುದೊಂದು ಅವಯವದಲ್ಲೂ ಮುಕ್ಕಿರಲಿಲ್ಲ. ಅವಳು ಸರ್ವಾವಯವ ಸುಂದರಿಯಾಗಿಯೂ, ಶುಭ್ರವರ್ಣ ಉಳ್ಳವಳಾಗಿಯೂ ಮತ್ತು ಹದಿನಾರು ವರ್ಷದ ಪ್ರಾಯ ಉಕ್ಕುತ್ತಿರುವಳಂತೆಯೂ ತೋರಿಬಂದಳು. ॥೬॥

ಹದಿನಾರು ಬಗೆಗಳಿಂದಲೂ ತನ್ನನ್ನು ಸಿಂಗರಿಸಿಕೊಂಡಳು. ತನ್ನ ಕಡೆಗಣ್ಣಿನ ಕುಡಿ ನೋಟದಿಂದ ಎಂತಹ ಯೋಗಿವರ್ಯನನ್ನಾದರೂ ಮೋಹಪಾಶಕ್ಕೆ ಸಿಲು

¹ ವಿವರಣೆಗೆ ಪರಿಶಿಷ್ಟವನ್ನು ನೋಡಿರಿ.

**ಪ್ರಣನಾಮ ಶಿವಾಂ ಚಾದೌ ಪ್ರೋವಾಚ ಪರಮಾದರಾತ್ ।**

**ರಾಕ್ಷಸ್ಯುವಾಚ :—**

**ಧನ್ಯಾಹಂ ಕೃತಕೃತ್ಯಾಹಂ ಪ್ರಾಪ್ತಾಹಮೀಪ್ಸಿತಂ ಫಲಮ್ ॥೮॥**

**ಯತಸ್ತ್ವಂ ಸರ್ವಜನನೀ ಸರ್ವದೇವಮಯೀ ಶುಭಾ ।**
**ಸರ್ವಧ್ಯೇಯಾ ಸರ್ವಸಿದ್ಧಿಃ ಸರ್ವಕಾರಣಕಾರಣಮ್ ॥೯॥**

ಕಿಸಿ ಬಿಡುತ್ತಿದ್ದಳು. ಆಗ ಅವಳು ದೇವೇಂದ್ರನ ರಾಣಿಯಾದ ಶಚೀದೇವಿಯಂತೆ ರೂಪ, ವಿಲಾಸ, ವಿಭ್ರಮಗಳಿಂದ ಕಂಗೊಳಿಸಿದಳು. ಇಷ್ಟೆಲ್ಲ ಸಿದ್ಧತೆಯಾದ ಬಳಿಕ ಗಿರಿಜಾದೇವಿಯ ಉತ್ತಮೋತ್ತಮವಾದ ಆಲಯವನ್ನು ಪ್ರವೇಶಿಸಿದಳು. ಅವಳ ಬಾಹ್ಯರೂಪವು ಅಷ್ಟು ಸುಂದರವಾಗಿ ಕಾ..ತ್ತಲಿದ್ದರೂ, ಅಂತರಂಗವು ಮಟ್ಟಿಗೆ ವಿಷಜ್ವಾಲೆಯಿಂದ ಕುದಿಯುತ್ತಲಿದ್ದಿತು. ॥೭॥

ಒಳಕ್ಕೆ ಬಂದೊಡನೆಯೇ ಪಾರ್ವತೀದೇವಿಯ ಪಾದಕಮಲಗಳಿಗೆ ಮೊದಲು ನಮಸ್ಕರಿಸಿದಳು. ಆ ಸಮಯದಲ್ಲಿ ಅವಳು ತೋರಿಸಿದ ಆದರ-ವಿಶ್ವಾಸ-ವಿನಯ ಗಳ ಎಂತಹ ಏಕಾಗ್ರ ಭಕ್ತರನ್ನೂ ನಾಚಿಸುತ್ತಲಿದ್ದಿತು. ಅನಂತರ ದೇವಿಯನ್ನು ಕುರಿತು ರಾಕ್ಷಸಿಯು ಹೀಗೆಂದು ನುಡಿದಳು.

ರಾಕ್ಷಸೀ :—

ಇಂದಿಗೆ ನಾನೇ ಧನ್ಯಳು. ನನ್ನ ಪೂರ್ವಾರ್ಜಿತ ಪುಣ್ಯಕರ್ಮಗಳು ಈಗ ಫಲಿಸಿದವು. ಬಹು ದಿವಸಗಳಿಂದಲೂ ಯಾವ ದಿವ್ಯ ಮೂರ್ತಿಯ ಸಂದರ್ಶನ ವನ್ನು ಪಡೆಯಬೇಕೆಂದು ನಾನು ಬಯಸುತ್ತಲಿದ್ದೆನೋ, ಅದು ಇಂದು ದೊರೆತಿದೆ. ॥೮॥

ನೀನು ಸಕಲ ಲೋಕಗಳಿಗೂ ಜನನಿಯಾದವಳು. ಸಕಲ ದೇವತಾಸ್ವರೂ ಪಳು. 'ಸರ್ವಮಂಗಳೆ' ಎಂದು ಕರೆಯಲ್ಪಡತಕ್ಕವಳು. ಎಲ್ಲ ಸಾಧಕರ ಏಕಾಗ್ರ ಧ್ಯಾನಕ್ಕೂ ವಿಷಯಳಾದವಳು. ಜನರು ಸಕಲ ಸಿದ್ಧಿಗಳನ್ನೂ ನಿನ್ನ

ಜಗನ್ಮೋಹನದಕ್ಷಾ ತ್ವಂ ಪುಣ್ಯೇನ ದೃಷ್ಟಿಮಾಗತಾ ।

ಕ ಉವಾಚ :—

ಶ್ರುತ್ವಾ ವಾಚಂ ತದೀಯಾಂ ಸಾ ಪ್ರೋವಾಚ ಗಿರಿಜಾ ತು ತಾಮ್ ॥೧೦॥

ಗೌರ್ಯುವಾಚ :—

ಉತ್ತಿಷ್ಠೋತ್ತಿಷ್ಠ ಭದ್ರಂ ತೇ ಸಂತುಷ್ಟಾಹಂ ತವೇಕ್ಷಣಾತ್ ।
ಕಸ್ಯಾಸಿ ? ಕುತ ಆಯಾಸಿ ? ಕಿಮರ್ಥಂ ಚ ವರಾಂಗನೇ ! ॥೧೧॥

ಪರಮಾನುಗ್ರಹದಿಂದಲೇ ಪಡೆಯುವರು. ಸಕಲ ಕಾರಣ ವಸ್ತುಗಳಿಗೂ ನೀನು ಮೂಲಕಾರಣಳಾದವಳು. ॥೯॥

ನಿನ್ನ ಪ್ರಭಾವವು ಅತ್ಯದ್ಭುತವಾದುದು. ಅದನ್ನು ಬೀರಿ ಜಗವನ್ನೆಲ್ಲ ಸಮ್ಮೋಹನಗೊಳಿಸಲು ನೀನು ಸಮರ್ಥಳಾಗಿರುವೆ. ನನ್ನ ಪುಣ್ಯವಿಶೇಷದಿಂದಲೇ ಈಗ ನನಗೆ ದೃಗ್ಗೋಚರಗಳಾಗಿರುವೆ.

ಬ್ರಹ್ಮ :—

ಹೊಸಬಳು ಆಡಿದ ಈ ಸ್ತುತಿವಾಕ್ಯಗಳನ್ನು ಕೇಳಿ, ಅವಳನ್ನು ಕುರಿತು ದೇವಿಯು ಪ್ರಶ್ನಿಸುತ್ತ, ಹೀಗೆಂದು ಮಾತನಾಡಿದಳು. ॥೧೦॥

ಗಿರಿಜೆ :—

ಏಳಮ್ಮ ! ಮೇಲಕ್ಕೆ ಏಳು. ವರಾಂಗನೆ ! ನಿನಗೆ ಒಳ್ಳೆಯದಾಗಲೀ. ನಿನ್ನ ನಯ-ವಿನಯ, ನಡೆ-ನುಡಿಗಳಿಗೆ ನಾನುಬಹಳ ಸಂತುಷ್ಟಳಾಗಿರುವೆನು. ನೀನು ಯಾರಿಗೆ ಸಂಬಂಧಪಟ್ಟವಳು ? ಈಗ ಎಲ್ಲಿಂದ ಬಂದಿರುವೆ? ಮತ್ತು ಏತಕ್ಕಾಗಿ ಬಂದಿರುವೆ ? ನಿನ್ನನ್ನು ನೋಡುವುದರಿಂದಲೇ ನನಗೆ ಒಂದು ಬಗೆಯಿಂದ ಸಂತೋಷವೆನಿಸಿದೆ, ನನ್ನ ಪ್ರಶ್ನೆಗಳಿಗೆ ಉತ್ತರವನ್ನು ಹೇಳು. ॥೧೧॥

**ಕಾಮಂ ತೇ ಪೂರಯಿಷ್ಯಾಮಿ ವದ ಸತ್ಯಂ ಮಮಾಗ್ರತಃ ।**

**ರಾಕ್ಷಸ್ಯುವಾಚ :—**

**ಅಹಂ ಚಿರಂ ವಿಯೋಗಾರ್ತಾ ಶರಣಂ ತ್ವಾಮುಪಾಗತಾ ॥೧೨॥**

**ಶ್ರುತಂ ಸ್ಯಾದಮರಾವತ್ಯಾ ನಾಯಕೋಽಸುರನಿರ್ಜಿತಃ**
**ಸ ಲೀನಃ ಕ್ವಾಪಿ ಗಿರಿಜೇ ! ಸರ್ವೇ ದೇವಗಣಾ ಅಪಿ ॥೧೩॥**

**ತ್ವಂ ತು ಭಾಗ್ಯವತೀ ದೇವಿ ! ನ ವಿಯೋಗೋ ಹರಸ್ಯ ತೇ ।**

---

ನಿನ್ನ ಅಭಿಲಾಷೆ ಯಾವುದು ? ನೀನು ತಿಳಿಸಿವೆಯಾದರೆ, ಅದನ್ನು ನಾನ ಖಂಡಿತವಾಗಿಯೂ ಪೂರ್ಣಗೊಳಿಸಿ ಕೊಡುವೆನು. ನನ್ನೆದುರು ಯಾವ ವಿಷಯ ವನ್ನೂ ಮರೆಮಾಚಬೇಡ. ಸತ್ಯಾಂಶವನ್ನು ನುಡಿದುಬಿಡು.

ರಾಕ್ಷಸೀ :—

ಜಗನ್ಮಾತೆ! ಸ್ತ್ರೀಯರಿಗೆ ಅತ್ಯಸಹ್ಯವೆನಿಸಿದ ಪ್ರಿಯವಿಪ್ರಯೋಗದುಃಖದಿಂದ ನಾನು ನರಳುತ್ತಿರುವೆನು. ಅದನ್ನು ಪರಿಹರಿಸಿಕೊಳ್ಳಲಿಕ್ಕೆ ಯಾವ ಸದುಪಾಯವೂ ನನಗೆ ಹೊಳೆಯಲಿಲ್ಲ. ಆದುದರಿಂದಲೇ ನಿನ್ನ ಪಾದಮೂಲಗಳಲ್ಲಿ ನಾನು ಶರಣು ಬಂದಿದ್ದೇನೆ. ॥೧೨॥

ತಾಯಿ, ಗಿರಿಜಾದೇವಿ ! ಅಮರಾವತೀನಗರಕ್ಕೆ ನಾಯಕನಾದ ಮಹೇಂದ್ರನು ಆಸುರರೊಡನೆ ಸಮಬಲದಿಂದ ಹೋರಾಡಿದರೂ ಕೊನೆಗೂ ಸೋತುಹೋದ ಅಂಶವನ್ನು ನೀನು ಕೇಳಿರಬಹುದು. ಈ ದುಷ್ಟ ಅಸುರರಿಗೆ ಹೆದರಿದ ಇತರ ದೇವತೆಗಳಂತೆ ದೇವೇಂದ್ರನೂ ಸಹ ಎಲ್ಲಿಯೋ ಹೋಗಿ ಅಡಗಿ ಕುಳಿತುಬಿಟ್ಟಿದ್ದಾನೆ. ಅವನು ಅಡಗಿರುವ ಪ್ರದೇಶವು ನನಗಾಗಲೀ, ಇತರ ದೇವತೆಗಳ ಪತ್ನಿಯರಿಗಾಗಲೀ ಗೊತ್ತಿರುವುದಿಲ್ಲ. ॥೧೩॥

ಮದೋನ್ಮತ್ತರಾದ ರಾಕ್ಷಸರ ಈ ಧಾಳಿಯು ಎಲ್ಲ ದೇವತೆಗಳ ಮೇಲೆ ಬಂದಂತೆ ಕೈಲಾಸ.ವೈಕುಂಠ.ಸತ್ಯಗಳ ಮೇಲೂ ತನ್ನಪ್ರಭಾವವನ್ನುಬೀರಿತ್ತು. ಆದ

ಸಹ್ಯಂ ಭವೇತ್ಸರ್ವದುಃಖಮಸಹ್ಯಂ ತು ವಿಯೋಗಜಮ್ ||೧೪||

ಪಾರ್ವತ್ಯುವಾಚ :—

ಬಾಲೋಽಯಂ ಮಮ ಸುಭಗೇ ! ಹನಿಷ್ಯತಿ ಖಲಾನ್ ಬಲಾತ್ |
ಮೋಚಯಿಷ್ಯತಿ ದೇವಾನ್ ಸ ಕಾಲಃ ಕಶ್ಚಿತ್ಪ್ರತೀಕ್ಷ್ಯತಾಮ್ ||೧೫||

ಏತದರ್ಥಂ ಗಣೇಶೇನ ಧೃತೋ ದೇಹೋ ಮಮಾಲಯೇ |
ಭೂ-ಭಾರೋತ್ತಾರಣಾರ್ಥಾಯ ಮುನೀನಾಂ ಪಾಲನಾಯ ||೧೬||

ರೇನು ? ನೀನು ಪರಮ ಭಾಗ್ಯಶಾಲಿಯಾದವಳು. ಆದುದರಿಂದಲೇ ನಿನ್ನ ಪ್ರಿಯ ರಮಣನಾದ ಸದಾಶಿವನು ಸದಾ ನಿನ್ನೊಡನೆಯೇ ಇದ್ದಾನೆ. ನಾವು ಈಗ ಅನುಭವಿಸುತ್ತಿರುವಂತಹ ಪತಿವಿಪ್ರಯೋಗ ದುಃಖವನ್ನು ನೀನು ಅನುಭವಿಸ ಬೇಕಾಗಿ ಬಂದಿರುವುದಿಲ್ಲ. ಲೋಕದಲ್ಲಿ ಜೀವಿಗಳಿಗೆ ಬರಬಹುದಾದ ಯಾವ ಬಗೆಯ ದುಃಖವನ್ನು ಬೇಕಾದರೂ ಸಹಿಸಬಹುದು. ಆದರೆ, ಪತಿವಿಯೋಗ ದುಃಖವನ್ನು ಅನುಭವಿಸುವುದು ಬಹಳ ಕಷ್ಟ. ||೧೪||

ಪಾರ್ವತೀ :—

ಸುಭಗೇ ! ನೀನು ಚಿಂತಿಸಬೇಕಾಗಿಲ್ಲ. ನನ್ನ ಬಾಲಕ ; ಗಣೇಶನು ಖಲ ಮತಿಗಳಾದ ಈ ಬಲಿಷ್ಠ ದೈತ್ಯರನ್ನೆಲ್ಲ ಬಲಾತ್ಕಾರದಿಂದ ಹಿಡಿದು ಹಿಡಿದು ಧ್ವಂಸ ಗೊಳಿಸುವನು. ದೇವತೆಗಳ ಕಷ್ಟವನ್ನೆಲ್ಲ ಕಳೆದು ಅವರನ್ನು ಬಿಡುಗಡೆಮಾಡಿ ಅವರವರ, ಸ್ಥಾನ-ಮಾನಗಳನ್ನು ಅವರವರಿಗೆ ಹಿಂದಿರುಗಿ ಕೊಟ್ಟು ಅನುಗ್ರಹಿಸು ವನು. ಯಾವುದಕ್ಕೂ ಕಾಲ ಬರಬೇಕು. ಆ ಕಾಲವನ್ನು ನೀನು ನಿರೀಕ್ಷಿಸು .||೧೫||

ಗಣೇಶನು ಸ್ವಯಂ ನಿರಾಕಾರನಾಗಿದ್ದರೂ ಈ ಕಾರ್ಯಗಳನ್ನು ಸಾಧಿಸಲಿಕ್ಕಾ ಗಿಯೇ ನಮ್ಮಂತೆ ದೇಹಧಾರಿಯಾಗಿ ಕಂಗೊಳಿಸುತ್ತಲಿದ್ದಾನೆ. ಇದೋ, ನೋಡು, ನನ್ನ ಮನೆಯಲ್ಲಿ ಮಗುವಾಗಿ ಮಲಗಿದ್ದಾನೆ. ದುಷ್ಟರಾದ ದೈತ್ಯರನ್ನು ನಿಗ್ರಹಿಸಿ, ಭೂ-ದೇವಿಗೆ ಅವರಿಂದ ಉಂಟಾಗಿರುವ ಈ ಹೊರೆಯನ್ನು ತಪ್ಪಿಸುವುದು, ಲೋಕ

ಕ ಉವಾಚ :—

**ಇತ್ಯುಕ್ತ್ವಾ ಪೂಜಯಾಮಾಸ ಪಾದಕ್ಷಾಲನಪೂರ್ವಕಮ್ ।**
**ಸಖೀಭಿಃ ಕುಂಕುಮಾದ್ಯೈಶ್ಚ ಭೋಜಯಾಮಾಸ ಸಾದರಮ್ ॥೧೭॥**

**ಸಾಪಿ ಭುಕ್ತ್ವಾ ಶಿವಾತಲ್ಪೇ ಸುಷ್ವಾಪೋವಾಚ ತತ್ಸಖೀಃ ।**

---

ಹಿತೈಷಿಗಳಾದ ತಪಸ್ವೀಜನರು, ಗೋ-ಬ್ರಾಹ್ಮಣರು ಮೊದಲಾದವರನ್ನು ಸಂರಕ್ಷಿಸುವುದು ಇವೇ ದೇವೇಶನ ಅವತಾರಿಕ ಕರ್ತವ್ಯಗಳಾಗಿವೆ. ॥೧೬॥

ಬ್ರಹ್ಮಾ :—

ದೇವಿಯು ತನ್ನ ಮೃದು.ಮಧುರ ಮಾತುಗಳಿಂದ ಬಂದವಳನ್ನು ಹೀಗೆಂದು ಸಮಾಧಾನಪಡಿಸಿದಳು. ಮತ್ತು ಮನೆಗೆ ಸುವಾಸಿನಿಯರು ಬಂದರೆ, ಅವರಿಗೆ ತೋರಿಸಬೇಕಾದ ಆದರ-ಸತ್ಕಾರಗಳನ್ನು ಸಂತೋಷದಿಂದ ಸಲ್ಲಿಸಿದಳು. ಮೊದಲು ಸುಗಂಧಿ ಜಲವನ್ನು ತಂದು ಅವಳ ಪಾದಗಳನ್ನು ತೊಳೆದಳು. ತನ್ನ ಸಖೀಜನರೊಡಗೂಡಿ, ಅರಿಸಿನ-ಕುಂಕುಮ, ಚಂದನ-ಪುಷ್ಪ ಮೊದಲಾದ ಮಂಗಲ ದಿವ್ಯವಸ್ತುಗಳನ್ನಿತ್ತು ಪೂಜಿಸಿದಳು. ಅನಂತರ ಷಡ್ರಸೋಪೇತವಾದ ಭೋಜನವನ್ನು ಮಾಡಿಸಿದಳು. (ಪ್ರಾಯಃ ಈ ದಿವ್ಯ ಭೋಜನವು ತುರಿಯುವ ಮಣೆಯಂತಹ ರಾಕ್ಷಸಿಯ ರಸನೆಗೆ ಸವಿ ಹತ್ತಿರಲಿಕ್ಕಿಲ್ಲ ) ॥೧೭॥

ರಾಕ್ಷಸಿಯು ಅದೆಲ್ಲವನ್ನೂ ಗಡದ್ದಾಗಿ ಭುಜಿಸಿದಳು. ಪರಶಿವೆಯ ಹಂಸ ತೂಲಿಕಾ ತಲ್ಪದ ಮೇಲೆಯೇ ತನ್ನ ಹುರುಬುರುಕು ದೇಹವನ್ನು ಚೆಲ್ಲಿದಳು. ದೇವಿಯ ಸಖಿಯರು ಉಭಯ ಪಾರ್ಶ್ವಗಳಿಂದಲೂ ಗಾಳಿಯನ್ನು ಹಾಕುತ್ತಲಿದ್ದರು. ಅವಳಿಗೆ ಇದೊಂದು ಅಂತಿಮ ಯೋಗ. '............॥ಪ್ರಾಸಾದಶಿಖರಸ್ಥೋಽಪಿ ಕಾಕಃ ಕಿಂ ಗರುಡಾಯತೇ ?' ಎಂಬಂತೆ ಮಹಾ ನೀಚಸ್ವಭಾವದವಳಾದ ಶತಮಾಹಿಷಿಯು ಇದುವರೆಗಿನ ಇಷ್ಟೆಲ್ಲ ಉಪಚಾರಗಳನ್ನೂ, ದೇವಿಯ ಸರಳ ಹೃದಯದ ನಡವಳಿಕೆಯನ್ನೂ ಮರೆತುಬಿಟ್ಟು ತನ್ನ ಗೂಢಾಭಿಸಂಧಿಯನ್ನು ಸಾಧಿಸಿಕೊಳ್ಳಲಿಕ್ಕೆ ಸಮಯವನ್ನು ಹುಡುಕುತ್ತಲೇ ಇದ್ದಳು. ಆದರೆ, ತನ್ನ ದುರ್ಭಾವವು ಮತ್ತಾರಿಗೂ ತಿಳಿಯಬಾರದಾಗಿದ್ದಿತು, ಆದುದರಿಂದ ವಿಷಮಿಶ್ರಿತ

ರಾಕ್ಷಸ್ಯುವಾಚ :—

ಗಿರಿಜಾಬಾಲಕಂ ಸಖ್ಯ ಆನಯಂತು ಮಮಾಂತಿಕಮ್ ॥೧೮॥

ಕ ಉವಾಚ :—

ವಿಶ್ವಸ್ತಾಸ್ಸರ್ವಸಖ್ಯಸ್ತಾ ದುದುಬಾರ್ಲಂ ತು ತತ್ಕರೇ ।

---

ಮಂಘುವಿನಂತೆ ಸಖಿಯರೊಡನೆ ಮೃದು-ಮಧುರವಾಗಿ ಮಾತನಾಡುತ್ತ ತನ್ನ ದುರಾ ಶಯವನ್ನು ಲೋಕಾಭಿರಾಮವಾಗಿರುವಂತೆ ವ್ಯಕ್ತಪಡಿಸಿದಳು.

ರಾಕ್ಷಸೀ :—

ಪ್ರಿಯಸಖಿಯರೇ ! ನನ್ನೆಲ್ಲರ ಕಷ್ಟಗಳನ್ನೂ ಪರಿಹರಿಸಲಿಕ್ಕಾಗಿ ಅವತರಿಸಿರುವ ಪ್ರಭು; ಗಿರಿಜಾಸುತನನ್ನು ನಾನು ಇಲ್ಲಿಗೆ ಬಂದು ಇಷ್ಟು ವೇಳೆ ಕಳೆದರೂ ನೋಡಲೇ ಇಲ್ಲವಲ್ಲ ? ಅವನನ್ನೊಮ್ಮೆ ಕರೆದುತನ್ನಿ- ॥೧೮॥

ಬ್ರಹ್ಮಾ :—

ಬಂದವಳ ಮಾತು, ದೇವಿಯಂತಹ ರೂಪಾದಿ ವೈಖರಿ, ಇದುವರೆಗೂ ತಮ್ಮೊಡನೆ ಅವಳು ನಡೆದುಕೊಂಡ ರೀತಿ, ಹಾಗೂ ಲೋಕದ ಸ್ತ್ರೀಯರಂತೆ ಕೂಸನ್ನು ನೋಡಬೇಕೆಂಬ ಅವಳ ಕಕ್ಕುಲತೆ ಇತ್ಯಾದಿಗಳಿಂದ ಸಖೀಜನರು ಇವಳನ್ನು ' ರಾಕ್ಷಸಿ ' ಎಂದು ತಿಳಿಯಲಾರದೇ ಹೋದರು. ಸ್ವತಃ ವೈಷ್ಣವೀ ಮಾಯಾ ಮೂರ್ತಿಯೇ ಆದ ಪಾರ್ವತಿಯೂ ಸಹ ಇವಳನ್ನು ಗುರುತಿಸಲಿಲ್ಲವೆಂದ ಬಳಿಕ, ಈ ಕ್ಷುದ್ರ ಸಖಿಯರ ಪಾಡೇನು? ಇರಲಿ, ಈಗ ಭಾರೀ ಸಮಸ್ಯೆಯೊಂದು ನಿನ್ನ ಮೆದುಳಿನಲ್ಲಿ ಉದ್ಭವಿಸಿ, ದೊಡ್ಡ ಗೊಂದಲವನ್ನೆಬ್ಬಿಸಿರಬಹುದಲ್ಲವೇ? ವ್ಯಾಸ! 'ಇದೇನು? ಗಿರಿಜೆಯು ಸಾಮಾನ್ಯಳೇ ಸ್ವಯಂ ವೈಷ್ಣವಿ ಎಂದು ನೀನೇ ಹೇಳಿದೆ. ಹೀಗಿದ್ದರೂ ಕ್ಷುದ್ರತಮಳಾದ ರಾಕ್ಷಸಿಯೊಬ್ಬಳು ಮಾಯಾರೂಪವನ್ನು ಧರಿಸಿಕೊಂಡು ಬಂದುದ್ದು ಅವಳಿಗೆ ಗೊತ್ತಾಗಲಿಲ್ಲವೆಂದೂ, ಅವಳನ್ನು 'ದೇವತಾಸ್ತ್ರೀ' ಎಂದೇ ಭಾವಿಸಿ ಪೂಜಿಸಿ

ಲಾಲಯಾಮಾಸ ಸಾ ಸ್ನೇಹಾನ್ಮುಖಚುಂಬನ-ವಲ್ಗನೈಃ ॥೧೯॥

ತಜ್ಜಿಘಾಂಸಾಂ ಸ ವಿಜ್ಞಾಯ ಸರ್ವಜ್ಞಃ ಸ ಶಿವಾತ್ಮಜಃ ।
'ರಾಕ್ಷಸೀಯಮಿ ತಿ ನಿಶ್ಚಿತ್ಯ ಹಸ್ತಾಭ್ಯಾಂ ಶ್ರೋತ್ರಯೋರಧಾತ್ ॥೨೦॥

---

ದಳೆಂದೂ ಈಗ ಹೇಳುವೆ. 'ಏನೋ, ಶ್ರದ್ಧೆಯಿಂದ ಕೇಳುತ್ತಿದ್ದಾನೆ. ಹೇಗೂ ಹೇಳ ಬಹುದು'ಎಂದು ಪರಸ್ಪರ ವಿರುದ್ಧಾರ್ಥ ಬರುವಂತೆ ಹೇಳಲಾರಂಭಿಸಿದರೆ, ನಂಬು ವುದಾದರೂ ಹೇಗೆ ?' ಎಂದಲ್ಲವೇ, ನಿನ್ನ ಸಂಶಯು. ಕೇಳು. ಸತ್ತ್ವಮಯರಾದವ ರಿಗೆ ಕಾಣುವ ವಸ್ತುವೆಲ್ಲವೂ ಸತ್ತ್ವಶಾಲಿಯಾಗಿಯೇ ಕಂಡುಬರುವುದು. ನೋಡು, ಲೋಕದಲ್ಲಿ ಇದೇ ರೂಢಿಯಲ್ಲೂ ಇವೆ. ತಾನು ಕಳ್ಳನಾಗಿದ್ದರೆ, ಇತರರನ್ನೂ ಕಳ್ಳ ರೆಂದೇ ಗ್ರಹಿಸುತ್ತಾನೆಯಲ್ಲವೇ? ಎಂದ ಮೇಲೆ ಪರಮ ಸತ್ತ್ವಮೂರ್ತಿಯಾದ ಶಿವೆಯು ಕಾರಣವಿಲ್ಲದೇ ಕಂಡು-ಕಂಡವರನ್ನೆಲ್ಲ ಕ್ರವ್ಯಾದರೆಂದು ಹೇಗೆ ಭಾವಿಸಿ ಯಾಳು ? ಮತ್ತು ಸಾಮಾನ್ಯವಾಗಿಯೇ ಗೋಚರಿಸಬಹುದಾದ ವಸ್ತುವನ್ನು ವಿಶೇಷಸಾಧನ ಸಾಮಗ್ರಿ ಅರ್ಥಾತ್ ದಿವ್ಯ ಜ್ಞಾನದಿಂದ ನೋಡಲೇಕೆ ಯತ್ನಿಸ ಬೇಕು? ಉಗುರಿನಿಂದ ಸಾಧಿಸುವ ಕೆಲಸಕ್ಕೆ ಅಂತಹ ಅನಿವಾರ್ಯ ಪ್ರಸಂಗ ಬಾರದ ಹೊರತು, ಮತಿವಂತರು ಕೊಡಲಿಯನ್ನು ಉಪಯೋಗಿಸುವುದಿಲ್ಲ. ವರದೃಪ್ತರಾದ ವರ ಶಕ್ತಿಯೇ ಬಹು ಅದ್ಭುತವಾದುದು. ಅವರಿಗೆ ಅಂತ್ಯಕಾಲ ಸಮೀಪಿಸುವವ ರೆಗೂ ಮಾರಕನೊಬ್ಬನಿಗಲ್ಲದೇ ಬೇರೆ ಯಾರಿಗೂ ಅವರ ಸ್ವರೂಪ ತಿಳಿಯುವುದೇ ಇಲ್ಲ. ಇದೇ 'ದೈವ ಸಂಕಲ್ಪ' ತಿಳಿಯಿತೇ ? ಇರಲಿ, ಶತಮಹಿಷಿಯ ಮಾತಿಗೆ ಸಖಿಯರು ಮರುಳಾಗಿ ಅದನ್ನು ಸಂಪೂರ್ಣವಾಗಿ ನಂಬಿದರು. ಮತ್ತು ಆ ಬಾಲ ಸ್ವರೂಪಿ, ಗಣನಾಯಕನನ್ನು ಆ ರಾಕ್ಷಸಿಯ ಕೈಗೆ ತಂದುಕೊಟ್ಟು ಬಿಟ್ಟರು. ಹಸಿದವಳಿಗೆ ಹದವಾದ ಹಲಸಿನ ಹಣ್ಣು ಸಿಕ್ಕಿದಂತಾಯಿತು,ರಾಕ್ಷಸಿಗೆ. ಆದರೂ, ಬಹಳ ಜಾಣೆ ಅವಳು. ಮೊದಮೊದಲು ಮಗುವನ್ನು ಪ್ರೀತಿಯಿಂದ ಆಟವಾಡಿ ಸುವವಳಂತೆ ಆಂದೋಳನಮಾಡಿದಳು. ಅತಿ ಪ್ರೇಮಮಯಿಯಂತೆ ಎದೆಗವಚಿ ಕೊಂಡಳು. ಮಗುವಿಗೆ ಉಸಿರು ಕಟ್ಟುವ ವರೆಗೆ ಚುಂಬಿಸಿದಳು, ಅದರ ಮೃದು ಕೆನ್ನೆಗಳನ್ನು ಕಚ್ಚತೊಡಗಿದಳು. ॥೧೯॥

ಯಾರನ್ನು ಮೋಸಗೊಳಿಸಿದರೂ, ಸರ್ವೇಶ್ವರನನ್ನು ಮೋಸಗೊಳಿಸಲಾ ದೀತೇ ? ಇವಳ ದುಷ್ಟಭಾವವು ದೇವನಿಗೆ ಸ್ಪಷ್ಟವಾಗಿ ಹೊಳೆದುಹೋಯಿತು. ಪರಶಿವಪುತ್ರನಾದ ಗಣೇಶನು ಸರ್ವಜ್ಞನಲ್ಲವೇ ? 'ಇವಳು ರಾಕ್ಷಸಿ' ಎಂಬು ದನ್ನು ಕೂಡಲೇ ನಿಶ್ಚಯಿಸಿ, ತನ್ನ ಕೈಗಳಿಂದ ಅವಳ ಕಿವಿಗಳನ್ನು ಭದ್ರವಾಗಿ ಹಿಡಿದುಬಿಟ್ಟನು. ॥೨೦॥

ನಾಸಿಕಾಂ ಚ ತತೋ ಭಾರಂ ಮಹಾ ಪರ್ವತಸನ್ನಿಭಮ್ ।
ತದಂಗೇ ಪಾತಯಾಮಾಸ ಸಾ ಚ ಶ್ವಾಸನಿರೋಧತಃ ॥೨೧॥

ವಿಹ್ವಲಾ ಪರಿಚಿಕ್ಷೇಪ ಪಾದಾಘಾತಾಚ್ಛಿಶೌ ಭೃಶಮ್ ।
'ಮುಂಚ, ಮುಂಚೇ'ತಿ ಭಾಷಂತೀ

ರಾಕ್ಷಸ್ಯುವಾಚ :—

ಕೌತುಕಂ ದ್ರಷ್ಟುಮಾಗತಾಮ್ ॥೨೨॥

ಕಥಂ ಹಂಸಿ ಸ್ತ್ರಿಯಂ ದುಷ್ಟ ! ತ್ವನಾಗಸ್ಕಾಂ ಶಿವಾಸಮಾಮ್ ।

---

ಮತ್ತೊಂದು ಕೈಯಿಂದ ಅವಳ ಮೂಗನ್ನು ಹಿಡಿದು ಜೋಲುಬಿದ್ದು ತನ್ನ ಪುಟ್ಟ ದೇಹದಲ್ಲಿ ವಿಶ್ವದ ಸಮಸ್ತ ಭಾರವನ್ನೂ ಒಮ್ಮೆಲೇ ತುಂಬಿಬಿಟ್ಟನು. ಕೋಟ್ಯ ಪಧಿ ಬ್ರಹ್ಮಾಂಡಗಳನ್ನು ತನ್ನ ಉದರದಲ್ಲಿ ಅಡಗಿಸಿರುವ ವಿಶ್ವಂಭರಮೂರ್ತಿಯ ಒಟ್ಟು ಭಾರವು ಎಷ್ಟಾಗಿರಬಹುದು? ವ್ಯಾಸ! ನೀನೇ ವಿಚಾರಮಾಡು. ಅಸಂಖ್ಯಾತ ಮಹಾ ಮಹಾ ಪರ್ವತಗಳೇ ಜೋಲುಬಿದ್ದಂತಾಯಿತು. ದೇವನು ಆಗ ಆ ಭಾರ ದೊಂದಿಗೆ ಅವಳ ಮೈ ಮೇಲೆ ಬಿದ್ದು ಬಿಟ್ಟನು. ಶತಮಾಹಿಷಿಯಾದರೇನು ? ಕೋಟಿಮಾಹಿಷಿಯಾದರೇನು? ಈ ಭಾರವನ್ನು ತಡೆದುಕೊಂಡಾಳೆಯೇ? ಜಜ್ಜಿಯೇ ಹೋದಳು. ಅವಳ ಶ್ವಾಸೋಚ್ಛ್ವಾಸಗಳ ಗತಿಯು ಸ್ತಬ್ಧವಾಗಿ ಹೋಯಿತು. ಬಹಳ ಕಸಿವಿಸಿಪಡುತ್ತ ತನ್ನ ಕಾಲುಗಳಿಂದ ಶಿಶುವನ್ನು ಬಿರುಸಾಗಿ ಒದೆಯ ಲಾರಂಭಿಸಿದಳು. ಹೊಸಬಳು ತನ್ನ ಶಿಶುವನ್ನು ಎತ್ತಿಕೊಂಡ ಸಂಗತಿ ಪಾರ್ವತಿಗೆ ಸಖೀಜನರಿಂದ ತಿಳಿಯಲು, ಆ ವಿನೋದವನ್ನು ನೋಡೋಣವೆಂದು ದೇವಿಯೂ ಅಲ್ಲಿಗೆ ಬಂದಳು. ಅಷ್ಟರಲ್ಲಿ ಈ ಅನಾಹುತವಾರಂಭವಾಗಿದ್ದಿತು. ಘಾಬರಿಗೊಂಡ ಪಾರ್ವತಿಯು ಹೌಹಾರಿ ನೋಡುತ್ತ ಒಂದು ಕಡೆ ನಿಂತಳು. ಆಗ ರಾಕ್ಷಸಿಯು ಒದೆದಾಡುತ್ತ 'ಬಿಡೋ, ನನ್ನನ್ನು ಬಿಟ್ಟುಬಿಡೋ,' ಎಂದು ಹೇಳಿ ಪುನಃ ಹೀಗೆ ಕಪಟ ವಚನಗಳನ್ನು ಆರಂಭಿಸಿದಳು.

ರಾಕ್ಷಸೀ:—

ಏ, ದುಷ್ಟ! ನಾನು ನಿನಗೆ ಯಾವ ಅಪರಾಧವನ್ನು ಎಸಗಿದ್ದೇನೋ? ಹೀಗಿದ್ದರೂ ನಿನ್ನ ತಾಯಿಯಂತಿರುವ ಸ್ತ್ರೀಯಾದ ನನ್ನನ್ನು ಕೊಲ್ಲುವೆಯಲ್ಲವೇ ?

ಕ ಉವಾಚ :—

ತದಾಕ್ರಂದನಮಾಕರ್ಣ್ಯ ಸಖೀಭಿಸ್ಸಹ ಪಾರ್ವತೀ ॥೨೩।

ಆಗತಾ ಮೋಚಿತುಂ ಪುತ್ರಂ ನಾಶಕತ್ತತ-ಉವಾಚ ಸಾ ।

ಪಾರ್ವತ್ಯುವಾಚ :—

ನ ಮಾರಯಾಶು ಮುಂಚೈನಾಂ ಶಕ್ರಸ್ಯ ಮಹಿಷೀಂ ಪ್ರಿಯಾಮ್ ॥೨೪॥

ಕ ಉವಾಚ :—

ಶ್ರುತ್ವಾ ಮಾತೃವಚೋ ಬಾಲೋ ದೂರೇ ಚಿಕ್ಷೇಪ ತಾಂ ತದಾ ।

---

ಬ್ರಹ್ಮ :—

ಎಂದು ಮೂಗು ಕಟ್ಟಿದ ಧ್ವನಿಯಿಂದಲೇ ಗೋಯ್ಗುಟ್ಟುತ್ತ ಆಕ್ರೋಶಿಸಿದಳು. ಇವಳ ಸಂಕಟ, ಅಳು ಇವನ್ನುಕೇಳಿ, ದೇವಿಯು ತನ್ನ ಸಖಿಯರೊಂದಿಗೆ ಆ ಸ್ಥಳಕ್ಕೆ ಧಾವಿಸಿ ಬಂದಳು. ॥೨೧.೨೨-೨೩॥

ಮಗುವಿನ ಹಿಡಿತವನ್ನು ಬಿಡಿಸಲು ಬಹಳ ಪ್ರಯತ್ನಿಸಿದಳು. ಸಾಧ್ಯವಾಗ ಲಿಲ್ಲ. ಆಗ ಮಗುವನ್ನು ಸಂಬೋಧಿಸಿ ಹೀಗೆಂದು ನುಡಿದಳು.

ಪಾರ್ವತೀ :—

ಇವಳು ಮಹೇಂದ್ರನ ರಾಣಿಯೋ, ಇವಳನ್ನು ಕೊಲ್ಲಬಾರದಪ್ಪ ! ಜಾಣ, ಬಿಟ್ಟು ಬಿಡು ॥೨೪॥

ಬ್ರಹ್ಮಾ :—

ತಾಯಿಯು ಆಡಿದ ನುಡಿಯನ್ನು ಕೇಳಿದ ಮೇಲೆ ಬಾಲಕನು ಆ ರಾಕ್ಷಸಿಯ ದೇಹವನ್ನು ಬಹು ದೂರ ಬೀಳುವಂತೆ ಎಸೆದು ಬಿಟ್ಟನು. ನಿಮಿತ್ತಮಾತ್ರಕ್ಕೆ

ಪಪಾತೋಪರಿ ವ್ಯಾಜೇನ ಕ್ಷಣಾತ್ಸೋಽಭ್ಯುದತಿಷ್ಠತ ॥೨೫॥

ತತ್ಕರ್ಣನಾಸಿಕಾಹಸ್ತೋ ದೃಷ್ಟಃ ಸಾಸೃಕ್ಸ್ರವೋಽಪಿ ಚ ।
ತದಂಘ್ರಿಘಾತತಸ್ಸಾಪ್ರಾಣಾಂಸ್ತತ್ಯಾಜ ಕ್ಷಣಮಾತ್ರತಃ ॥೨೬॥

ಗತಾಸುಂ ತಾಂ ಶುಶೋಚಾಥ ಪಾರ್ವತೀ ಸ್ನೇಹಸಿರ್ಭರಾ ।

ಉವಾಚ

ಪಾರ್ವತ್ಯುವಾಚ :—

ಚಪಲೋ ಬಾಲೋ ದುರ್ಯಶೋಽಚಿತವಾನಯಮ್ ॥೨೭॥

---

ಅವಳೊಡನೆ ತಾನೂ ಬಿದ್ದಂತೆ ನಟಿಸಿದನು. ಆದರೆ, ಒಂದು ಕ್ಷಣದಲ್ಲಿಯೇ ಎದ್ದು, ಅವಳ ಎದೆಯ ಮೇಲೆ ಕುಳಿತನು. ॥೨೫॥

ರಾಕ್ಷಸಿಯ ಕಿವಿ, ಮೂಗು ಇವನ್ನು ಹಿಡಿದುದು ಇದ್ದ ಹಾಗೆಯೇ ಇದ್ದವು, ಬಾಲಕನ ಹಿಡಿತ ಬಹಳ ಬಿಗಿಯಾಗುತ್ತಲಿದ್ದುದರಿಂದ ರಕ್ತವು ರಾಕ್ಷಸಿಯ ಆಯಾ ಅವಯವಗಳಿಂದ ಏಕಪ್ರಕಾರವಾಗಿ ಹರಿಯುತ್ತಲಿದ್ದಿತು. ಆಗ ಬಾಲಕನು ಕಾಲುಗಳಿಂದ ಅವಳನ್ನು ಪದೇ ಪದೇ ಅಘಾತಿಸತೊಡಗಿದನು. ಕೃತ್ರಿಮ ಶಚೀದೇವಿಯು ಯಮ ಈ ಯಾತನೆಯನ್ನು ಸಹಿಸಲಾರದೇ ತನ್ನ ಪ್ರಾಣಗಳನ್ನು ಒಂದು ಕ್ಷಣಮಾತ್ರದೊಳಗಾಗಿಯೇ, ವಿಧಿ ಇಲ್ಲದೇ ವಿಸರ್ಜಿಸಿ ಬಿಟ್ಟಳು. ॥೨೬॥

ಇವಳು ಪ್ರಾಣಗಳನ್ನು ತ್ಯಜಿಸಿದುದು ತಿಳಿದ ಬಳಿಕ ಪಾರ್ವತಿದೇವಿಗೆ ಬಹಳ ವ್ಯಥೆ-ಘಾಬರಿಗಳುಂಟಾದವು. ಆ ಕ್ಷಣದ ವರೆಗೂ ಮೃತಳನ್ನು 'ಶಚೀದೇವಿ' ಎಂದೇ ಗಿರಿಜೆಯು ನಂಬಿದ್ದಳು. 'ದೇವೇಂದ್ರನ ಪತ್ನಿ' ಎಂದ ಮೇಲೆ ಅವಳ ಬಗ್ಗೆ ದೇವಿಗೆ ಅತಿಯಾಗಿ ಸ್ನೇಹಭಾವವು ಉಂಟಾಗಿದ್ದಿತು. ಅನಂತರ ಮಗನನ್ನು ಒಂದು ಬಗೆಯಿಂದ ಗದುರಿಸಿ ಮಾತನಾಡುತ್ತ ಹೀಗೆಂದು ನುಡಿದಳು.

ಪಾರ್ವತೀ :—

ನೀನು ಎಂತಹ ಚಪಲ ಬಾಲಕನೋ? ನಿನ್ನನ್ನು ಕಟ್ಟಿಕೊಂಡು ನಾನು ಅಪ

ಶ್ರುತ್ವಾ ಶಚೀಂ ಹತಾಮಿಂದ್ರಃ ಕಿಂ ವಾಗತ್ಯ ಕರಿಷ್ಯತಿ? ।

ಕ ಉವಾಚ :—

ದದರ್ಶ ಪುರತೋ ಗತ್ವಾ ರಾಕ್ಷಸೀಂ ತಾಂ ಶಿವಾಶಿವಾಮ್ ॥೨೮॥

ದಶಯೋಜನವಿಸ್ತೀರ್ಣಾಂ ಕ್ಷತಭೂ-ಭೂರುಹಾಂ ತದಾ ।

ತತ್ಯಾಜ ಶೋಕಂ ಜಹೃಷೇ ಪ್ರಶಶಂಸ ನಿಜಂ ಸುತಮ್ ॥೨೯॥

ಕೀರ್ತಿಗೆ ಭಾಗಿಯಾಗಬೇಕು. ಅಲ್ಲವೇ ? ॥೨೭॥

ತನ್ನ ರಾಣಿಯಾದ ಶಚೀದೇವಿಯು ನಿನ್ನಿಂದ ನಿಷ್ಕಾರಣವಾಗಿ ಮೃತಳಾದ ಸಂಗತಿಯನ್ನು ತಿಳಿದು ದೇವೇಂದ್ರನು ಇಲ್ಲಿಗೆ ಬಂದು ಇನ್ನೇನು ಅನಾಹುತವನ್ನು ಮಾಡುವನೋ ಏನೋ, ನನಗಂತೂ ಯಾವುದೊಂದೂ ಗೊತ್ತಾಗುವುದಿಲ್ಲವಪ್ಪ, ನೀನೋ, ನಿನ್ನ ಚೇಷ್ಟೆಯೋ, ಏನೆಂದು ಹೇಳಲಿ ?

ಬ್ರಹ್ಮಾ :—

ಇಷ್ಟು ಮಾತುಗಳನ್ನು ಬಹಳ ಬೇಸರದಿಂದ ಆಡಿ, ಮೃತಳಾದ ಶಚೀರೂಪದ ದೇಹದ ಬಳಿಗೆ ಬಂದು ನೋಡಿದಳು. ಆವಳಿಗೆ ಕಂಡುಬಂದುದು, ಶಚೀದೇವಿಯ ದೇಹವಲ್ಲ, ಅಮಂಗಳಕರವಾದ ರಾಕ್ಷಸಿಯ ವಿಕಾರವಾದ ಶರೀರ. ದೇವಿಯು ತನ್ನ ಕಣ್ಣುಗಳನ್ನು ತಾನೇ ನಂಬಲಾರದಷ್ಟು ಮುಗ್ಧಳಾದಳು. ॥೨೮॥

ರಾಕ್ಷಸಿಯ ಕಳೇಬರವೋ, ಹತ್ತಾರು ಯೋಜನಗಳಷ್ಟು ವಿಸ್ತೃತವಾಗಿದ್ದಿತು. ಅವಳ ದೇಹ ನೆಲಕ್ಕೆ ಬಿದ್ದ ಹೊಡೆತಕ್ಕೆ ನೆಲವೆಲ್ಲ ಅಗಿದಂತಾಗಿ ಹೋಗಿದ್ದಿತು. ಗಿಡ-ಮರಗಳ ಅವಸ್ಥೆಯನ್ನಂತೂ ಹೇಳಲಿಕ್ಕೇ ಬರುವಂತಿರಲಿಲ್ಲ. ಇದನ್ನು ನೋಡಿದ ಬಳಿಕ, ವಸ್ತುಸ್ಥಿತಿಯು ಶಿವೆಗೆ ತಿಳಿದು ಬರಲು, ಅವಳ ಕಣ್ಣುಗಳು ಒಮ್ಮೆಲೇ ತೆರೆದು ನಿಚ್ಚಳವಾದವು. ಅದುವರೆಗೂ ಆವಳಿಗಿದ್ದ 'ಶಚೀದೇವಿ' ಎಂಬ ಕಲ್ಪನೆಯೂ, ತನ್ಮರಣನಿಮಿತ್ತವಾದ ದುಃಖವೂ ಕೂಡಲೇ ಮಾಯವಾದವು.

ಆದಾಯ ಸುತಮವ್ಯಂಗಂ ಪಾರ್ವತೀ ಮಂದಿರಂ ಯಯೌ ।
ವಿಸ್ಮಾಪಯಂತ್ಯಸೌ ಬಾಲೋ ಶಂಕಿತಾ ಬಾಲಪೌರುಷಮ್ ॥೩೦॥
ವಿಸ್ಮಯಂ ಪೌರುಷೇ ತಸ್ಯ ಸಮಪದ್ಯತ ಪಾರ್ವತೀ ।
ತತ್ಸಖ್ಯಶ್ಛಿನ್ನಕರ್ಣಾಂ ತಾಂ ಛಿನ್ನನಾಸಾಂ ವ್ಯಲೋಕಯನ್ ॥೩೧॥
ಸಖ್ಯ ಊಚುಃ :—
ಕಥಮಸ್ಯಾಲಾಘವಂ ಚ ಕಥಮಸ್ಯ ಬಲಂ ಶಿಶೋಃ ? ।

---

ಪ್ರತ್ಯುತ ಹರ್ಷವು ತಾನೇ ತಾನಾಗಿ ಉಕ್ಕಿತು. ತನ್ನ ಬಾಲಕನನ್ನು ಬಹಳ ಮಟ್ಟಿಗೆ ಬಣ್ಣಿಸಿದಳು. ॥೨೯॥

ಕೂಸಿಗೆ ಸ್ವಲ್ಪವೂ ಗಾಯವಾಗಿರಲಿಲ್ಲ. ಒಡನೆಯೇ ಅವನನ್ನೆತ್ತಿಕೊಂಡು ಮುದ್ದಾಡುತ್ತ ಪಾರ್ವತಿಯು ಮಂದಿರದ ಒಳಭಾಗಕ್ಕೆ ಹೊರಟು ನಡೆದಳು. ಬಾಲಕ ನಾದರೂ ಅಬಾಲಚೇಷ್ಟೆಯನ್ನು ಆರಂಭಿಸಿದ್ದನು. 'ಇದು ಸಾಧ್ಯವೇ ?' ಎಂಬ ಶಂಕೆಯು ಪಾರ್ವತಿಯನ್ನು ಸರ್ವದಾ ಬಾಧಿಸುತ್ತಲಿದ್ದಿತು. ಆದರೂ ನಡೆದುದ ನ್ನೆಲ್ಲ ಪ್ರತ್ಯಕ್ಷವಾಗಿಯೇ ಕಂಡಿದ್ದಾಳೆ. ಏನು ಮಾಡಿಯಾಳು? ವಿಧಿ ಇಲ್ಲದೇ ನಂಬ ಬೇಕಾಗಿದೆ. ಅವಳ ಭಾಗಕ್ಕೆ ಬಾಲಕನು ಬಗೆ ಹರಿಯಲಾರದ ಒಂದು ಸಮಸ್ಯೆ ಯಾಗಿ ಪರಿಣಮಿಸಿದನು. ॥೩೦॥

ಬಾಲಕನ ಅತ್ಯದ್ಭುತ ಪೌರುಷವನ್ನು ಗಮನಿಸಿ ಪಾರ್ವತೀದೇವಿಯು ಬಹಳ ಆಶ್ಚರ್ಯವನ್ನು ಹೊಂದಿದಳು. ಪಾರ್ವತೀ ದೇವಿಯ ಸ್ನೇಹಿತೆಯರು ಕಿವಿ-ಮೂಗುಗಳನ್ನು ಹರಿಸಿಕೊಂಡು ವಿಕಾರವದನಳಾಗಿ ಪರ್ವತದಂತೆ ಬಿದ್ದಿದ್ದ ಶತ ಮಾಹಿಷಿಯನ್ನು ನೋಡಿ ದಂಗುಬಡೆದು ನಿಂತರು. ಮತ್ತು ಹೀಗೆ ನುಡಿದು ಕೊಂಡರು. ॥೩೧॥

ಸಖಿಯರು :—

ಏನಿವಳ ಒರಟುತನ, ಶಕ್ತಿ–ಸಾಮರ್ಥ್ಯಗಳು? ಇಂಥವಳನ್ನು ನಿಮಿಷ

ಕ ಉವಾಚ :—

ಅಹರ್ಷ ಪ್ರಾವದನ್ನಿತ್ಥಂ ದತ್ವಾ ತಾಲಿಂ ಪರಸ್ಪರಮ್ ||೩೨||

ತತಸ್ತಾಂ ರಾಕ್ಷಸೀಂ ದೂರಾಚ್ಚಿಕ್ಷಿಪುಃ ಪ್ರಮಥಾಸ್ತದಾ ।

ಅರಿಷ್ಟೇ ನಿಹತೇ ಗೌರೀ ದದೌ ದಾನಾನಿ ಭಕ್ತಿತಃ ||೩೩||

ತತಸ್ತು ಸಪ್ತಮೇ ಮಾಸೇ ಪ್ರವೃತ್ತೇ ನಿದ್ರಿತೇ ಜನೇ ।

ತಮಸಾ ಸರ್ವತೋ ವ್ಯಾಪ್ತೇ ದಶದಿಙ್ಮಂಡಲೇಽಖಿಲೇ ||೩೪||

---

ಮಾತ್ರದಲ್ಲಿ ಸಂಹರಿಸಿ ಅವಳನ್ನು ಸಂಯಮನೀ ಪಟ್ಟಣಕ್ಕೆ ಕಳುಹಿಸಿದ ನಮ್ಮ ಬಾಲಕ ಗಣೇಶನ ಬಲ ಎಂತಹದಿರಬಹುದು ? ಆಶ್ಚರ್ಯವಾಗುವುದಲ್ಲ ?

ಬ್ರಹ್ಮ :—

ಹೀಗೆ ಅಂದುಕೊಂಡು, ರಾಕ್ಷಸಿಯು ಈ ಮೊದಲು ಸ್ಪುರದ್ರೂಪಿಣಿಯಂತೆ ಕೃತ್ರಿಮವಾಗಿ ತೋರಿಬಂದುದು, ಅನಂತರ ಶಿಶುವಿನಿಂದ ಮೃತಿಯನ್ನೈದಿದುದು, ಅವಳ ದುರಭಿಸಂಧಿ ಇವನ್ನೆಲ್ಲ ನೆನೆಸಿಕೊಂಡು ಕೈಗಳೆರಡರಿಂದಲೂ ಚಪ್ಪಾಳೆಯನ್ನು ತಟ್ಟುತ್ತ, ಕುಣಿದಾಡಿ ಇಬ್ಬರೂ ಮನಸ್ವಿಯಾಗಿ ನಕ್ಕರು. ||೩೨||

ಅನಂತರ ಪ್ರಮಥಗಣದವರು ಆ ಸ್ಥಳಕ್ಕೆ ಬಂದು ರಾಕ್ಷಸಿಯ ಮೃತ ಕಳೇಬರವನ್ನು ದರ ದರ ಎಳೆದೊಯ್ದು ಬಹು ದೂರ ಬಿಸುಟು ಬಂದರು. ಮಹಾ ಅರಿಷ್ಟ ಬಂದು ಕಳೆದುಹೋದುದಕ್ಕಾಗಿ ಗೌರೀದೇವಿಯು ಹರ್ಷಿಸಿ, ಬ್ರಾಹ್ಮಣರಿಗೆ ಅನೇಕ ದೇಯ ವಸ್ತುಗಳನ್ನು ಭಕ್ತಿಯಿಂದ ಸಮರ್ಪಿಸಿದಳು. ||೩೩||

ಶಿಶುವಿಗೆ ಏಳನೆಯ ತಿಂಗಳು ನಡೆಯಲಾರಂಭವಾಯಿತು. ಒಂದು ದಿನ ರಾತ್ರಿಯ ವೇಳೆ. ಜನರೆಲ್ಲರೂ ಮಲಗಿ ನಿದ್ರಿಸುತ್ತಿದ್ದರು. ಮೈ-ಕೈಗಳಿಗೆ ಹತ್ತುವಷ್ಟು ತಮಸ್ಸು ಹೆಪ್ಪುಗಟ್ಟಿ ವ್ಯಾಪಿಸಿಬಿಟ್ಟಿದ್ದಿತು. ಹತ್ತು ದಿಙ್ಮಂಡಲವೆಲ್ಲ ಕರಿ ಬಣ್ಣದ ಬಟ್ಟೆಯಿಂದ ಮುಸುಕು ಹಾಕಿಕೊಂಡಂತೆ ಕಾಣತೊಡಗಿತು. ||೩೪||

**ನಿಶೀಥೇ ರಣ್ಯಪಶುಷು ರುದತ್ಸು ದರ್ದುರೇಷು ಚ ।**
**ಪರ್ಯಂಕೇ ಪರಿಸುಪ್ತಾಯಾಂ ಪಾರ್ವತ್ಯಾಂ ದಿವ್ಯ ಸಂಸ್ತರೇ ||೩೮||**

**ಸಖೀಜನೇ ನಿದ್ರಿತೇ ಚ ಸೇವಕಾನಾಂ ಗಣೇ ತಥಾ ।**
**ಏತಸ್ಮಿನ್ನಂತರೇ ದುಷ್ಟೋ ನಾಮ್ನಾ ಯಃ 'ಕಮಠಾಸುರಃ' ||೩೯||**

**ಆಚ್ಛಾದಯತ್ಸ್ವ-ದೇಹೇನ ಶಿವಾಪ್ರಾಂಗಣಮುದ್ಭುತಮ್ ।**
**ಯಸ್ಯ ಸ್ಪರ್ಶೇನ ಸಹಸಾ ಶೀರ್ಯತೇ ವಜ್ರಸಂಹತಿಃ ||೪೦||**

ನಡು ರಾತ್ರಿಯ ಸಮಯ. ಅರಣ್ಯದಲ್ಲಿ ಶ್ವಾಪದಗಳು ಏಕಪ್ರಕಾರವಾಗಿ ಅರಚುತ್ತಿದ್ದವು. ಇದರಂತೆ ಗ್ರಾಮಸಿಂಹಗಳೂ ಬೊಗಳಲಾರಂಭಿಸಿದವು. ಆ ಸಮಯದಲ್ಲಿ ಪಾರ್ವತೀ ದೇವಿಯು ದಿವ್ಯವಾದ ತನ್ನ ಹಂಸತೂಲಿಕಾತಲ್ಪದಲ್ಲಿ ಸುಖಶಯನವನ್ನು ಮಾಡಿದ್ದಳು. ಅವಳು ಮಲಗಿದ್ದ ಮಂಚವು ಬಹು ರಮಣೀಯ ವಸ್ತುಗಳಿಂದ ಅಲಂಕೃತವಾಗಿದ್ದಿತು. ||೩೮||

ಅದುವರೆಗೂ ದೇವಿಯ ಸೇವಾಕಾರ್ಯದಲ್ಲಿ ಆಸಕ್ತರಾಗಿದ್ದ ಸೇವಕಿಯರೂ, ಸಖಿಯರೂ ತಮ್ಮ ರಾಣಿಯು ಮಲಗಿ ನಿದ್ರಿಸಲಾರಂಭಿಸಲು, ತಾವೂ ಸಹ ತಮ್ಮ ತಮ್ಮ ಶಯನೀಯಗಳಲ್ಲಿ ಮಲಗಿ ನಿದ್ರಿಸಿದರು- ಪ್ರಮಥಗಣಗಳಿಗೂ ನಿದ್ರೆ ಹತ್ತಿ ಹೋಯಿತು. 'ಇಂತಹ ಸು-ಸಮಯ ದೊರೆತೀತೇ ?' ಎಂದು ಕಾದು ಕುಳಿತಿದ್ದ ದುಷ್ಟ ರಾಕ್ಷಸನೊಬ್ಬನು ಮೆಲ್ಲ-ಮೆಲ್ಲಗೆ ಆ ಸ್ಥಳಕ್ಕೆ ಬಂದನು. ಅವನ ಹೆಸರು 'ಕಮಠಾಸುರ.' ||೩೯||

ಅವನ ದೇಹವು ಬೃಹದಾಕಾರ ಉಳ್ಳದ್ದು. ಕಮಠನು ಬಂದಕೂಡಲೇ ಮೊದಲು ತನ್ನ ದೇಹದ ಸುತ್ತಳತೆಯನ್ನು ಇನ್ನಿಷ್ಟು ಅಭಿವೃದ್ಧಿಗೊಳಿಸಿ, ಪಾರ್ವತಿಯ ಮನೆಯ ಅಂಗಳವನ್ನೆಲ್ಲ ಮುಚ್ಚಿ ಹಾಕಿ ನಿಂತನು. ಅವನ ದೇಹವು ಬಹಳ ಶೀತಳವಾಗಿದ್ದಿತು. ಅದಕ್ಕೆ ವಜ್ರವು ತಗುಲಿದರೂ ಸಾಕು, ಅಥವಾ ಸಿಡಿಲಿನ ಸಮುದಾಯವೇ ಬಂದು ತಗುಲಿದರೂ ಸರಿ. ಅದೆಲ್ಲ ತಣ್ಣಗೆ ಕೊರೆಯುವಂತಾಗುತ್ತಲಿದ್ದಿತು. ||೪೦||

ಅತಿಶೀತಲಗಾತ್ರಸ್ಯ [1] ಪಾರ್ವಣಶ್ಚಂದ್ರಮಾ ಇವ ।
ಉದಿತೇ ತು ದಿವಾನಾಥೇ ತತ್ಪೃಷ್ಠೇ ವಿಚರನ್ ಜನಾಃ ॥೩೮॥

ಕೇಚಿತ್ಸ್ನಾತ್ವಾ ಸ್ಥಿತಾ ಜಪ್ತುಂ ಕೇಚಿನ್ನಿದ್ರಾಂ ಪ್ರಚಕ್ರಿರೇ ।
ಸ್ಖಲಿತ್ವಾ ಪತಿತಾಃ ಕೇಚಿದತಿಕೋಮಲದೇಹತಃ ॥೩೯॥

ಸಿಷಿಚುರ್ಬಾಲಿಕಾ ವಾರಿ ಗೋಮಯೈ ರಂಗಮಾಲಿಕಾಃ ।
ಚಕ್ರುಸ್ತತೋ ಬಹಿರ್ಯಾತಾ ಸಬಾಲಾ ಗಿರಿಜಾ ತದಾ ॥೪೦॥

ಚಂದ್ರಗ್ರಹಣ ಸಮಯದಲ್ಲಿ ಅಮೃತರಶ್ಮಿಯ ಕರಗಳು ಹೇಗೆ ಶೀತಳತಮವಾಗಿರುವುವೋ, ಇವನ ದೇಹವೂ ಅಷ್ಟೇ ತಣ್ಣಗಿದ್ದಿತು. ರಾತ್ರಿಯೂ ಕಳೆಯಿತು. ಪೂರ್ವ ದಿಙ್ಮಂಡಲದಲ್ಲಿ ದಿನನಾಥನಾದ ಸಹಸ್ರಭಾನು ಉದಿಸಿದನು. ಕಮಠನು ತನ್ನ ದೇಹದಿಂದ ನೆಲವನ್ನೆಲ್ಲ ಮುಚ್ಚಿಹಾಕಿದ್ದನಾದುದರಿಂದ ಜನರು ಓಡಿಯಾಡುವಾಗ ಅವನ ದೇಹದ ಬೆಂಭಾಗದ ಮೇಲೆಯೇ ಚರಿಸಬೇಕಾಗಿದ್ದಿತು. ॥೩೮॥

ಕೆಲವರು ತಮ್ಮ ಪ್ರಾತರ್ವಿಧಿಗಳನ್ನು ಮುಗಿಸಿ ಸ್ನಾನಾನಂತರ ಜಪಿಸುತ್ತ ನಿಂತರು. ಕೆಲವು ಆಲಸಿಗಳು 'ಇಷ್ಟು ಬೇಗನೆ ಏಕೆ ಏಳುವುದು' ಎಂದು ಮುಸುಗಿನಲ್ಲೇ ಗೊಣಗುಟ್ಟಿ ಹೊದ್ದಿಕೆಯನ್ನು ಭದ್ರವಾಗಿ ಹೊತ್ತುಕೊಂಡು ಮಲಗಿಯೇ ಬಿಟ್ಟರು. ಹುರು-ಬುರುಕಾದ ಕಮಠನ ದೇಹದ ಮೇಲೆ ನಡೆಯುವಾಗ ಕೆಲವು ಜನ ಕೋಮಲ ದೇಹಿಗಳು ಎಡವಿ ಬಿದ್ದರು. ॥೩೯॥

ಹೆಣ್ಣು ಮಕ್ಕಳು ತಮ್ಮ ತಮ್ಮ ಮನೆಯ ಮುಂಭಾಗಗಳನ್ನು ಗುಡಿಸಿ ಗೋಮಯದಿಂದ ಸಾರಿಸಿ, ರಂಗವಲ್ಲಿಗಳಿಂದ ಅಲಂಕರಿಸಿದರು. ಇವರು ಸಾರಿಸಿ ಗುಡಿಸಿದ ನಡೆಯುತ್ತಿದ್ದ ಪ್ರದೇಶವೆಲ್ಲ ಭೂ-ಭಾಗವಾಗಿರದೆ, ಅದು ಕಮಠಾಸುರನ ಬೆಂಭಾಗವಾಗಿದ್ದಿತು. ಆದರೆ, ಯಾರಿಗೂ ಆ ವಿಷಯ ತಿಳಿಯದು. ಮಲಗಿ ಏಳುವುದರೊಳಗಾಗಿ ಭೂಮಿಯೇ ಬದಲಾಯಿಸಿ ಹೋಯಿತೆಂದರೆ ಯಾರಿಗೆ ತಾನೆ ವಿಶ್ವಾಸ ಉಂಟಾದೀತು ? ಅಥವಾ ಈ ವಿಧವಾದ ಕಲ್ಪನೆಯೇ ಇಲ್ಲದಿರುವಾಗ ಜನರಿಗೆ ಈ

ಆಸ್ಥಾಪಯತ್ಸುತಂ ಗೌರೀ ಮಹಾರ್ಹಾಸ್ತರಣೇಽತ್ರ ಸಾ ।
ಸಖೀಸ್ತತ್ರ ಚ ಸಂಸ್ಥಾಪ್ಯ ಯಯೌ ಸಾ ಸೇವಿತುಂ ಶಿವಮ್ ॥೪೧॥

ಏವಂ ಜ್ಞಾತ್ವಾಸೌ ಕಮಠಃ ಸ್ವಸ್ಯ ಪೃಷ್ಠಮಚಾಲಯತ್ ।

ಜನಾ ಊಚುಃ—

ಭೂಮಿಕಂಪಃ ಕಥಮಿಹ ಕಿಂ ವಾರಿಷ್ಟಂ ಭವಿಷ್ಯತಿ ? ॥೪೨॥

---

ಒದಲಾವಣೆ ತಿಳಿಯುವ ಬಗೆಯಾದರೂ ಹೇಗೆ? ಅತ್ತ ಗೌರೀದೇವಿಯೂ ಎದ್ದೊಡನೆ ತನ್ನ ಪ್ರಾತಃಕೃತ್ಯಗಳನ್ನು ಮುಗಿಸಿಕೊಂಡು ಶಿಶುವನ್ನು ಎತ್ತಿಕೊಂಡು ಅಂಗಣಕ್ಕೆ ಬಂದಳು. ॥೪೦॥

ಬಾಲಕನಿಗೆ ಸ್ತನ್ಯವನ್ನು ಕೊಟ್ಟು ಒಳಿಕ ದಿವ್ಯವಾದ ಸ್ಥಳದಲ್ಲಿ ಅವನನ್ನು ಮಲಗಿಸಿದಳು. ಆ ಪ್ರದೇಶದಲ್ಲಿ ಬಹಳ ಬೆಲೆಬಾಳುವ ವಸ್ತ್ರಾದಿ ನಿರ್ಮಿತ ಪುಟ್ಟ ಹಾಸಿಗೆಯನ್ನೂ, ಅದರಡಿಗೆ ರತ್ನಕಂಬಳಿಯನ್ನೂ ಹಾಸಿ ಸೇವಿಕೆಯರು ಸಿದ್ಧಗೊಳಿಸಿದ್ದರು ಸಖಿಯರನ್ನೂ, ಪರಿಚಾರಿಕೆಯರನ್ನೂ ಮಗುವಿನೊಂದಿಗೆ ಇರಲು ನಿಯಮಿಸಿ, ತಾನು ಪರಮೇಶ್ವರನನ್ನು ಸೇವಿಸಲು ದೇವಿಯು ತಪೋಭೂಮಿಗೆ ನಡೆದಳು. ॥೪೧॥

ಶಿಶು ತನ್ನ ಬೆನ್ನಿನ ಮೇಲೆ ಮಲಗುವವರೆಗೂ ಅತ್ತಿತ್ತ ಚಲಿಸದೆ ಚಾಪೆಯಂತೆ ಮಲಗಿದ್ದ ಕಮಠಾಸುರನು ಪಾರ್ವತೀದೇವಿಯು ಅತ್ತ ಕಡೆಗೆ ಹೋದೊಡನೆಯೇ ಮೆಲ್ಲಗೆ ಒಮ್ಮೆ ತನ್ನ ಬೆನ್ನನ್ನು ಅಲುಗಾಡಿಸಿ ಕೊಡವಿಕೊಂಡನು. ಇದನ್ನು ಗಮನಿಸಿದ ಸಖೀಜನರು, ಮಿತ್ತಿತರು ಇವರಿಗೆಲ್ಲ ಭೂಮಿಯೇ ಕಂಪಿಸಲಾರಂಭಿಸಿದಂತೆ ಭಾಸವಾಯಿತು. ಅವರು ಹೆದರಿ ನಡುಗುತ್ತ ತಮ್ಮ ತಮ್ಮೊಳಗೆ ಹೀಗೆಂದು ಮಾತನಾಡಿಕೊಂಡರು.

ಜನರು :—

ಇದೇನು, ಭೂಮಿಯು ಚಲಿಸುತ್ತಿದೆ? ಮತ್ತಾವ ಅರಿಷ್ಟವು ಕಾದು

**ಕ ಉವಾಚ :—**

ಇತ್ಯಬ್ರುವಂಸ್ಥಿತಾಸ್ತತ್ರ ಗಣಾಶ್ಚಕಿತಮಾನಸಾಃ |
ನಿದ್ರಿತಾಃ ಪ್ರತಿಬುದ್ಧಾಸ್ತೇ 'ಕಿಂ ಜಾತಮಿ'ತಿ ಚಾಬ್ರುವನ್ ||೪೩||

ತದೈವ ತೇನ ಬಾಲೇನ ಸರ್ವಜ್ಞೇನ ವಿವರ್ತಿತಾ |
ಉದರಂ ತಸ್ಯ ಪ್ರಷ್ಠೇ ತು ನ್ಯಧಾಯಿ ಧರ್ಷತಾ ಭೃಶಮ್ ||೪೪||

ಚತುರ್ದಶಭುವನಜಂ ಭಾರಂ ನಿದಧತಾತ್ರ ಚ |
ನಿರುದ್ಧಶ್ವಾಸವಾಯುಸ್ಸೋಽಂಗಾನಿ ಸ್ವಾನಿ ವ್ಯಚಾಲಯತ್ ||೪೫||

ಅಸ್ರವದ್ರಕ್ತಮತುಲಮಸ್ಯ ದೇಹಾತ್ತಥಾವಿಧಾತ್ |

---

ಕುಳಿತಿದೆಯೋ, ಕಾಣೆವಲ್ಲ? ||೪೨||

ಬ್ರಹ್ಮ :—

ಹೀಗೆಲ್ಲ ಮಾತನಾಡಿಕೊಂಡರು. ಪ್ರಮಥಗಣದವರು ಬಹಳ ಘಾಬರಿಗೊಂಡರು. ಅವರ ಮನಸ್ಸು ಸಂಪೂರ್ಣವಾಗಿ ಕಲಕಿಹೋಯಿತು. ಗಾಢ ನಿದ್ರಾಸಕ್ತರಾದವರೆಲ್ಲ ಬೆಚ್ಚಿಬಿದ್ದು ಎದ್ದು ಕುಳಿತರು. ಯಾರ ಬಾಯಲ್ಲೂ ಇದೇ ಮಾತು. 'ಇದೇನು ವಿಪತ್ತು?' ಎಂದು ಜನರೆಲ್ಲ ಬೊಬ್ಬೆ ಇಟ್ಟರು. ||೪೩||

ಸರ್ವಜ್ಞನಾದ ಬಾಲಕನಿಗೆ ಇಷ್ಟರಲ್ಲಿ ನಡೆದ ವಿಷಯವೆಲ್ಲ ಅವಗತವಾಗಿ ಹೋಯಿತು. ಆಗ ಅವನು ಸ್ವಲ್ಪವೂ ವಿಲಂಬಿಸದೇ, ತನ್ನ ದೇಹದಲ್ಲಿ ಹೆಚ್ಚಾದ ಭಾರವನ್ನು ಸಂಕ್ರಾಂತಗೊಳಿಸಿ, ರಾಕ್ಷಸನ ಹೊಟ್ಟೆ, ಬೆನ್ನು ಇವುಗಳ ಮೇಲೆಲ್ಲ ಪದೇ ಪದೇ ಕುಪ್ಪಳಿಸಲಾರಂಭಿಸಿದನು. ||೪೪||

ತನ್ನ ಗರ್ಭದಲ್ಲಿ ಅಡಗಿದ್ದ ಹದಿನಾಲ್ಕು ಭುವನಗಳ ವಿಶಿಷ್ಟ ಭಾರವನ್ನೂ ದೇವನು ಕೇಂದ್ರೀಕರಿಸಿ, ಕಮಠನಿಗೆ ಮೇಲೆ ಹೇರಿದನು. ಕಮಠನ ಶ್ವಾಸವು ಕಟ್ಟಿ ಹೋಯಿತು. ಕೈ-ಕಾಲುಗಳನ್ನು ಪಟ ಪಟ ಬಡಿಯಲಾರಂಭಿಸಿದನು. ||೪೫||

ಕೈ-ಕಾಲು, ಹೊಟ್ಟೆ, ಮುಖ ಎಲ್ಲ ಬಿರಿತು ಹೋದವು. ಆಯಾ ಭಾಗಗಳಿಂದೆಲ್ಲ

ಉದ್ಗೀರಣಂ ಕರ್ತುಮಪಿ ದೇಹೇ ನಾಶಕತ್ತ್ವಮತಸ್ತತಃ ||೪೬||

ತತೋ ಗಣಾ ಸಂಯಯುಸ್ಸರ್ವೇ ಯೇ ತತ್ರಾಸನ್ ಸುಖೋಷಿತಾಃ |
'ಕಿಮರಿಷ್ಟಂ ಸಮುತ್ಪನ್ನಂ? ಮುಹುರ್ಭೂಶ್ಚಲತೇ ನು ಕಿಮ್?' ||೪೭||

ಸಖ್ಯಶ್ಚ ಬಾಲಿಕಾಸ್ಸರ್ವಾಃ ಪಾರ್ವತೀಂ ಸೇವಿತುಂ ಯಯುಃ

**ಸ್ತ್ರೀಜನಾ ಊಚುಃ :—**

ಉತ್ತಿಷ್ಠ, ಮಾತರ್ಬಾಲಸ್ತೇ ನೀತಸ್ಸ್ಯಾದ್ವಾ ಮೃತೋಽಪಿ ವಾ ||೪೮||

---

ರಕ್ತವು ಮಿತಿಮೀರಿ ಸ್ರವಿಸಿತ. ಮೇಲಕ್ಕೆ ಹಾರಿಬಿಡೋಣವೆಂದು ಅಸುರನು ಬಹಳ ಸಾಹಸಮಾಡಿದನು. ವಿಶೇಷವಾಗಿ ರಕ್ತಸ್ರಾವವಾದುದರಿಂದಲೂ, ಮೈ ಮೇಲೆ ಬಹಳ ಭಾರ ಬಿದ್ದುದರಿಂದಲೂ ಮಿಸುಕಲು ಸಹ ಅವನಿಗೆ ತ್ರಾಣ ಉಳಿಯಲಿಲ್ಲ. ||೪೬||

ಇದುವರೆಗೂ ತಮ್ಮ ತಮ್ಮ ಮನೆಗಳಲ್ಲಿ ಸುಖ-ಸಂತೋಷಗಳಿಂದ ಇದ್ದ ಪ್ರಮಥಗಣಗಳೆಲ್ಲ ಭೂಕಂಪನದಂತಹ ಈ ದುರ್ಧರ ಘಟನೆಯನ್ನು ನೋಡಿ ಓಡೋಡುತ್ತ ಆ ಸ್ಥಳಕ್ಕೆ ಬಂದರು, 'ಇದೆಲ್ಲಿಯ ಅರಿಷ್ಟವಪ್ಪ ! ಒಂದು ಕ್ಷಣ ಸಹ ನಾವು ನೆಮ್ಮದಿಯಿಂದಿರುವಂತಿಲ್ಲ, ಮತ್ತೆ ಭೂಮಿ ನಡುಗಲಾರಂಭಿಸಿತಲ್ಲ ! ಯಾವ ವಿಪತ್ತು ಕಾದು ಕುಳಿತಿದೆಯೋ ಗೊತ್ತಾಗಲೊಲ್ಲದು.' ಎಂದು ನುಡಿಯುತ್ತಲೇ ಅಲ್ಲಿಗೆ ಬಂದರು. ||೪೭||

ದೇವಿಯ ಸಖಿಯರು, ಆಶ್ರಮವಾಸಿಗಳಾದ ಇತರ ಬಾಲಿಕೆಯರು ಎಲ್ಲರೂ ಸೇರಿ ಪಾರ್ವತಿಯನ್ನು ಸೇವಿಸಲು ಅವಳಿದ್ದಲ್ಲಿಗೆ ಓಡಿ ಹೋದರು.

ಹೆಂಗಸರು :—

ತಾಯೇ ! ನೀನು ತ್ವರೆಮಾಡು. ನಿನ್ನ ಮಗನನ್ನು ಯಾರೋ ಎತ್ತಿಕೊಂಡು ಹೋಗುತ್ತಲಿದ್ದಾರೆ. ಅವನನ್ನು ಎತ್ತಿಕೊಂಡೇ ಹೋದರೋ, ಅಥವಾ ಅವನನ್ನು ಕೊಂದೇಬಿಟ್ಟರೋ, ಯಾವುದೂ ಗೊತ್ತಿಲ್ಲ. ಅಲ್ಲಿ ವಿಶೇಷ ಗದ್ದಲ ನಡೆದಿದೆ. ||೪೮||

ಕ ಉವಾಚ :—

ತ್ವರಯಾ ಪಾರ್ವತೀ ಯಾತಾ ಧಾವಮಾನಾ ಬಹಿಸ್ಸ್ರುತಮ್ ।
ದದರ್ಶ ನಿಶ್ಚಲಂ ಗಾನೀ ಸೋತ್ಥಾಪಯಂತುಮುದ್ಯತಾ ॥೪೯॥

ಭೂ-ಗೋಲಭಾರಸದೃಶಂ ಮತ್ವಾ ತಸ್ಥೌ ವಿ-ಮಾನಸಾ ।
ತತೋ ಮಮರ್ದ ಸಹಸಾ ಬಾಲಸ್ತಂ ಸ ಮಮಾರ ಚ ॥೫೦॥

ತತಸ್ಸಾ ದದೃಶೇ ದೈತ್ಯಂ ದಶಯೋಜನಮಾಯತಮ್ ।
ಪ್ರಸಾರಿತಮುಖಂ ಕೂರ್ಮಂ ವಮಂತಂ ರುಧಿರಂ ಬಹು ॥೫೧॥

ಬ್ರಹ್ಮ :—

ಪುತ್ರಪ್ರಾಣಳಾದ ಪರ್ವತನಂದಿನಿಯು ಇವರ ಮಾತು ಮುಗಿಯುವಷ್ಟ ರಲ್ಲೇ ಅಲ್ಲಿಂದ ಓಡುತ್ತ ತಾನು ಮಗುವನ್ನು ಮಲಗಿಸಿದ್ದ ಸ್ಥಳಕ್ಕೆ ಬಂದುಬಿಟ್ಟಳು ನೆಲವನ್ನೆಲ್ಲ ಆವರಿಸಿ ಬಿದ್ದಿದ್ದ ರಾಕ್ಷಸನನ್ನೂ, ಅವನ ಅಂಗಾಂಗಗಳಿಂದ ಹೊರ ಹೊರಟ ರಕ್ತಧಾರೆಯನ್ನೂ, ಮತ್ತು ಅವನ ಮೇಲೆ ಅಚಲದಂತೆ ಸ್ವಸ್ಥಮಾನಸದಿಂದ ಕುಳಿತ ಬಾಲಕನನ್ನೂ ನೋಡಿದಳು. ಅವಳಿಗೆ ತಡೆಯಲಾಗಲಿಲ್ಲ. ಎತ್ತಿಕೊಳ್ಳೋಣ ವೆಂದು ಯತ್ನಿಸಿದಳು ॥೪೯॥

ಬಾಲಕನ ಭಾರವು ಭೂ-ಗೋಲಕ್ಕೆ ಸದೃಶವಾಗಿದ್ದುದು ಅರಿವಾಗಲು, ಯಾವ ಕೆಲಸಕ್ಕೂ ಬುದ್ಧಿ ಹೊಳೆಯದೆ, ವಿಮನಸ್ಕಳಾಗಿ ಸುಮ್ಮನೆ ಒಂದೆಡೆ ನಿಂತು ಬಿಟ್ಟಳು. ಅನಂತರ ಬಾಲಕನು ತನ್ನ ಅಡಿಗೆ ಸಿಕ್ಕಿದ್ದ ಕಮಠಾಸುರನನ್ನು ಚೆನ್ನಾಗಿ ಮರ್ದಿಸಿ ಬಿಟ್ಟನು. ಆಗ ರಾಕ್ಷಸನು ಸದ್ದಿಲ್ಲದೇ ಸತ್ತುಬಿದ್ದನು. ॥೫೦॥

ರಾಕ್ಷಸನ ದೇಹವು ಹತ್ತಾರು ಯೋಜನಗಳನ್ನೂ ವ್ಯಾಪಿಸುವಂತಿದ್ದುದನ್ನು ಗಿರಿಜೆಯು ನೋಡಿದಳು. ಮೈ ನಡುಗಿ ಹೋಯಿತು. ಆ ರಾಕ್ಷಸನು ಸ್ವಭಾವತಃ ಕೂರ್ಮದೇಹಿಯಾದವನು. ಗಣಪತಿಯ ಭಾರದ ಒತ್ತಡದಿಂದ ತನ್ನ ದೇಹದ ಒಳ ಭಾಗಕ್ಕೆ ಅಡಗಿಸಿದ್ದ ಕೈ ಕಾಲುಗಳನ್ನೂ, ಮೂತಿಯನ್ನೂ ಕಚೆಗೆ ಒದರಿ

ಚೂರ್ಣಯಾಮಾಸ ಸಹಸಾಶ್ರುಮಾನ್ನಾನಾವಿಧಾನ್ ದ್ರುಮಾನ್ ।
ತತಸ್ಸ್ಕಂದಮಾದಾಯ ಸ್ತನಪಾನಂ ದದೌ ಮುದಾ ॥೩೨॥

ಗೌರ್ಯುವಾಚ :—

ನ ಜ್ಞಾಯತೇಽಸುರಾಣಾಂ ಹಿ ನಾನಾ ಮಾಯಾಂ ಪ್ರಕುರ್ವತಾಮ್ ।
ತ್ರಿಲೋಚನಪ್ರಸಾದೇನ ಪುನರ್ಲಬ್ಧಸ್ಸುತೋ ಮಯಾ ॥೩೩॥

ಯತಃ ಕೃತಾಂತಾತ್ಪ್ರಬಲೋ ನಿಹತಃ ಕಮಠಾಸುರಃ ।

ಬಿಟ್ಟಿದ್ದನು. ಎಲ್ಲ ಭಾಗಗಳಿಂದಲೂ ರಕ್ತವು ಹರಿಯುತ್ತಲಿದ್ದಿತು. ॥೩೧॥

ಕಮಠನ ಮೃತ ಕಳೇಬರವು ನೆಲಕ್ಕೆ ಉರುಳುವಾಗ ಅನೇಕ ಆಶ್ರಮಗಳನ್ನೂ ಮಹಾ ಮಹಾ ವೃಕ್ಷಗಳನ್ನೂ ಚೂರ್ಣವಾಗೊಳಿಸಿತು. ಕಮಠನ ಕಥೆಯು ಕೊನೆಗೊಂಡ ಬಳಿಕ ಕಾತ್ಯಾಯನಿಯು ತನ್ನ ಕುಮಾರನಾದ ಕುಮಾರಾಗ್ರಜನನ್ನು ಎತ್ತಿಕೊಂಡು ಸಂತೋಷದಿಂದ ಸ್ತನ್ಯಪಾನ ಮಾಡಿಸಿದಳು, ಮತ್ತು ತನ್ನಷ್ಟಕ್ಕೆ ತಾನೇ ಹೀಗೆಂದು ಮಾತನಾಡಿಕೊಂಡಳು. ॥೩೨॥

ಗೌರೀ :—

ಈ ಆಸುರೀಮಾಯೆಯನ್ನು ತಿಳಿಯುವುದು ಬಹಳ ಕಷ್ಟ. ದೈತ್ಯರು ಎಷ್ಟು ಬಗೆಯಿಂದ ಮಾಯೆನ್ನು ಪ್ರಯೋಗಿಸಿ ನಮ್ಮನ್ನೂ ಮೋಸಗೊಳಿಸುತ್ತಲಿರುವರು ? ಈ ದಿನದ ದುರ್ಘಟನೆಯಲ್ಲಿ ನನ್ನ ಮಗನು ಬದುಕಿದುದು ಆತ್ಯಾಶ್ಚರ್ಯ ಪ್ರಸಂಗವೇ ಸರಿ. ಇದು ನನ್ನ ಪ್ರಾಣನಾಥ; ತ್ರಿಲೋಚನನ ಅನುಗ್ರಹವಿಶೇಷವಲ್ಲದೆ, ಬೇರೊಂದಲ್ಲ. ॥೩೩॥

ಕಮಠಾಸುರನೆಂದರೇನು, ಸಾಮಾನ್ಯನೇ ? ಯಮನಿಗಿಂತಲೂ ಪ್ರಬಲನು ಬಲಿಷ್ಠನು. ಇಂಥವನಿಂದ ಮಗು ಪಾರಾಗಿ ಬಂದುದೂ ಅಲ್ಲದೇ, ಆವನನ್ನು

ಸಖ್ಯಶ್ಚ ತದ್ಗಣಾಃ ಪ್ರಾಪುಃ ಪಪ್ರಚ್ಛುಃ ಕ್ಷೇಮಮರ್ಭಕೇ ॥೩೪॥

'ಕ್ಷೇಮಮಿ'ತ್ಯೇವ ತಾಃ ಗೌರೀ ನಿಜಗಾದ ಮುದಾನ್ವಿತಾ ।
ತತೋ ಗಣಾಃ ಖಂಡಶಸ್ತಂ ಕೃತ್ವಾ ದೂರತರಂ ಜಹುಃ ॥೩೫॥

ವವರ್ಷುಃ ಪುಷ್ಪವರ್ಷಾಣಿ ತಸ್ಮಿನ್ ದೇವಗಣಾಸ್ತದಾ ।
ಯ ಇದಂ ಪರಮಾಖ್ಯಾನಂ ಶ್ರುಣುಯಾಚ್ಛ್ರಾವಯೇತ್ತದಾ ॥೩೬॥

ಸರ್ವಾರಿಷ್ಟವಿನಿರ್ಮುಕ್ತಃ ಸರ್ವಾನ್ ಕಾಮಾನವಾಪ್ನುಯಾತ್ ॥೩೭॥

---

ನುಚ್ಚು ನುಗ್ಗಾಗಿ ಮಾಡಿಬಿಟ್ಟನಲ್ಲ! ದೈವಾನುಗ್ರಹವಿಲ್ಲದಿದ್ದರೆ ಇದು ಹೇಗೆ ಸಾಧ್ಯವಾಗುತ್ತಲಿದ್ದಿತು ?

ಬ್ರಹ್ಮಾ :—

ಅಷ್ಟರಲ್ಲಿ ದೇವಿಯ ಸಖಿಯರೂ, ಪ್ರಮಥಗಣಗಳೂ ಪಾರ್ವತಿ ಇದ್ದ ಎಡೆಗೆ ಓಡಿ ಬಂದು ಬಾಲಕನ ಕ್ಷೇಮದ ಬಗ್ಗೆ ಕುತೂಹಲದಿಂದ ವಿಚಾರಿಸಿದರು. ॥೩೪॥

ಗೌರಿಯು ಬಹಳ ಸಂತೋಷದಿಂದ 'ಕ್ಷೇಮವಾಗಿದ್ದಾನೆ. ಯಾವ ಅಪಾಯವೂ ಉಂಟಾಗಿಲ್ಲ' ಎಂದು ಅವರಿಗೆಲ್ಲ ಉತ್ತರವನ್ನಿತ್ತಳು. ಸರಿ, ಅನಂತರ ಗಣಗಳು ಬಂದರು. ರಾಕ್ಷಸನ ದೇಹವನ್ನು ತುಂಡು-ತುಂಡಾಗಿ ಕತ್ತರಿಸಿದರು. ಅವನ್ನೂ ಸಹ ಹೊರಲಾರದೆ, ಮುಕ್ಕರಿಯುತ್ತ ಹೊತ್ತೊಯ್ದು ಬಹುದೂರ ಬಿಸುಟಿ ಬಂದರು. ॥೩೫॥

ಕಮಲಾಸುರನ ವಧೆಯಾದುದನ್ನು ನೋಡಿ ದೇವತಾಗಣದವರು ಹರ್ಷಾತಿರೇಕದಿಂದ ಬಾಲಕನ ಮೇಲೆ ಹೂಮಳೆ ಕರೆದರು. ಪರಮ ಪವಿತ್ರವಾದ ಈ ಆಖ್ಯಾಯಿಕೆಯನ್ನು ಯಾರು ಶ್ರದ್ಧಾ-ಭಕ್ತಿಗಳಿಂದ ಪಠಿಸುವರೋ ಅಥವಾ ಶ್ರವಣಮಾಡಿಸುವರೋ, ॥೩೬॥

ಅವರು ಸಕಲಾರಿಷ್ಟಗಳಿಂದಲೂ ಬಿಡುಗಡೆಯನ್ನು ಹೊಂದುವರು. ಅವರಿಗೆ

**ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ 'ಕಮಠಾಸುರ ವಧೋ' ನಾಮ ಸಪ್ತಾಶೀತಿತಮೋಽಧ್ಯಾಯಸ್ಸಮಾಪ್ತಃ**

---

ಕಾಮಿತಗಳೆಲ್ಲ ಕೈವಶವಾಗುವುವು. ||೫೭||

ಇಲ್ಲಿಗೆ ಶ್ರೀ ಗಣೇಶಪುರಾಣದ ಉತ್ತರಖಂಡದಲ್ಲಿ 'ಕಮಠಾಸುರನ ವಧೆ' ಎಂಬಲ್ಲಿಗೆ ಎಂಭತ್ತೇಳನೆಯ ಅಧ್ಯಾಯಾನುವಾದವು ಮುಗಿದುದು.



|| ಶ್ರೀ ಗಣೇಶಾಯ ನಮಃ ||

## ಅಥಾಷ್ಟಾಶೀತಿತಮೋಽಧ್ಯಾಯಃ

**ವ್ಯಾಸ ಉವಾಚ :—**

**ಅದ್ಭುತಾನಿ ಚರಿತ್ರಾಣಿ ಶ್ರುತಾನಿ ತ್ವನ್ಮುಖಾಂಬುಜಾತ್ ।**
**ಬ್ರಹ್ಮನ್ನಘೌಘಹಾರೀಣಿ ಗುಣೇಶೇನ ಕೃತಾನಿ ವೈ** ||೧||

**ತಥಾಪಿ ಶ್ರೋತುಮಿಚ್ಛಾ ನೋ ನಾಪ್ಯೈತಿ ಸರ್ವವಿತ್ತಮ ! ।**
**ಅತೋ ಬಾಲಸ್ಯ ಚರಿತಂ ಪುನರ್ಮೇ ಬ್ರೂಹಿ ಸಾದರಮ್** ||೨||

---

|| ಶ್ರೀ ಗಣೇಶಾಯ ನಮಃ ||

## ೮೮ ನೆಯ ಅಧ್ಯಾಯ.

ವ್ಯಾಸ :—

ಭಗವನ್, ಬ್ರಹ್ಮದೇವ ! ನಿಮ್ಮ ವದನಾರವಿಂದದಿಂದ ದೇವದೇವನ ಅನೇಕ ಅದ್ಭುತ ದಿವ್ಯ ಚರಿತ್ರೆಗಳನ್ನು ಕೇಳಿ ರೋಮಹರ್ಷಿತನಾಗಿದ್ದೇನೆ. ಆದಿದೇವ ನಾದ ಗುಣೇಶನು ನಡೆಸಿದ ಲೋಕಾನುಗ್ರಹ ಕಾರ್ಯಗಳು ಸಾಮಾನ್ಯವಾದುವೇ ? ಇವನ್ನು ಭಕ್ತಿ-ಶ್ರದ್ಧೆಗಳಿಂದ ಕೇಳುವವರ ಸಮಸ್ತ ಪಾತಕಗಳನ್ನೂ ಭಸ್ಮಸಾತ್ ಮಾಡಬಲ್ಲವು. ||೧||

ವಾಣೀವಿಲಾಸ ! ನೀವು ಸಕಲವನ್ನೂ ತಿಳಿದವರು. ನಿಮ್ಮೆದುರು ನನ್ನ ಆಶಯಗಳನ್ನು ಬಚ್ಚಿಡಲಾರೆ. ನನಗೆ ದೇವನ ಚರಿತ್ರೆಯನ್ನು ಮತ್ತಷ್ಟು ವಿವರ ವಾಗಿ ಕೇಳಬೇಕೆಂಬ ಹಂಬಲ ಆದ್ಯಾಪಿ ಕಡಿಮೆಯಾಗಿಲ್ಲ. ಕಥೆಗಳನ್ನು ಕೇಳಿ ದಂತೆಲ್ಲ ಉತ್ಸಾಹವು ಹೆಚ್ಚುತ್ತಲೇ ಇದೆ. ಆದುದರಿಂದ ದೇವನ ಬಾಲಲೀಲಾ ವಿನೋದಗರ್ಭಿತವಾದ ಮುಂದಿನ ಚರಿತ್ರೆಯನ್ನು ವಿಸ್ತಾರವಾಗಿ ವರ್ಣಿಸಿ ಹೇಳ

ಬ್ರಹ್ಮೋವಾಚ :—

ಶೃಣುಷ್ವಾವಹಿತೋ ಬ್ರಹ್ಮನ್ ! ಗುಣೇಶಸ್ಯ ಕಥಾಂ ಪುನಃ ।
ಶ್ರುತಿರಮ್ಯಾ ಚ ಪಾಪಾನಾಂ ಸಂಹರ್ತ್ರೀಂ ಧರ್ಮ-ಮೋಕ್ಷದಾಮ್
॥೩॥

ಅಷ್ಟಮೇ ಮಾಸಿ ಮಧ್ಯಾಹ್ನೇ ಗ್ರೀಷ್ಮರ್ತೌ ಗಿರಿಜಾ ಕಿಲ ।
ಊಷ್ಮಣಾ ಪೀಡಿತಾ ಗೇಹೇ ಸಾ ಯಯೌ ಪುಷ್ಪವಾಟಿಕಾಮ್ ॥೪॥

ಬೇಕೆಂದು ಆದರ-ವಿಶ್ವಾಸಗಳಿಂದ ಪ್ರಾರ್ಥಿಸುವೆನು. ದಯೆ ಇಟ್ಟು ನನ್ನ ಇಷ್ಟಾರ್ಥವನ್ನು ನೆರವೇರಿಸಿಕೊಡಿ. ॥೨॥

ಬ್ರಹ್ಮ:—

ಬ್ರಹ್ಮರ್ಷೇ ! ಸಾವಧಾನದಿಂದ ಕೇಳು. ಶ್ರೀ ಗುಣೇಶನ ಪರಮ ಪವಿತ್ರವಾದ ಚರಿತ್ರೆಯನ್ನು ನಿನ್ನಂತಹ ಶ್ರದ್ಧಾಳುವಿಗಲ್ಲದೆ ಮತ್ತೆ ಯಾರಿಗೆ ಹೇಳಬೇಕಾಗಿದೆ ? ಗುಣೇಶನ ಗುಣಗಾನವು ಶ್ರವಣಮಧುರವಾದುದು. ಸಕಲ ವಿಧ ಪಾತಕರಾಶಿಯನ್ನೂ ವಿಧ್ವಂಸಗೊಳಿಸತಕ್ಕದು. ಧರ್ಮಾದಿ ಚತುರ್ವಿಧ ಪುರುಷಾರ್ಥಗಳನ್ನೂ ಕೊಡತಕ್ಕಂತಹದು. ॥೩॥

ಮುಂದಿನ ಕಥೆಯನ್ನು ಹೇಳುವೆನು, ಕೇಳು. ಗಣಪತಿಗೆ ಎಂಟನೆಯ ತಿಂಗಳು ಆರಂಭವಾಯಿತು. ಆಗ ಗ್ರೀಷ್ಮರ್ತುಕಾಲ. ಮಧ್ಯಾಹ್ನದ ಸಮಯ, ಕೇಳಬೇಕೇ? ಬಿಸಿಲಿನ ಬೇಗೆ ಬಿಸಿಲನ್ನೇ ಹೆದರಿಸುವಂತಿದ್ದಿತು. ಆವರಿವರ ವಿಚಾರವಂತೂ ಹಾಗಿರಲಿ, ಹಿಮವಂತನ ಪುತ್ರಿಯೂ, ರಜತಾದ್ರಿ ವಿಹಾರನ ಸಹಧರ್ಮಿಣಿಯೂ ಆದ ಗಿರಿಜೆಗೆ ಸಹ ಉಷ್ಣದ ವೇಗವನ್ನು ತಡೆದುಕೊಳ್ಳುವುದು ಕೃತ್ಯಸಾಧ್ಯವೆನಿಸಿತು. ಬಾಕಿಯವರ ಪಾಡೇನಾಗಿರಬಹುದು ? ಹವೆಯ ಉಪದ್ರವಕ್ಕೊಳಗಾಗದ (Air-conditioned) ಗೃಹದಲ್ಲಿ ಸಹ ನೆಮ್ಮದಿಯಿಂದಿರಲು ಅವಳಿಗೆ ಸಾಧ್ಯವಾಗಲಿಲ್ಲ. ಆಗ ಉದ್ಯಾನವನಕ್ಕೆ ಹೊರಟು ಹೋದಳು. ॥೪॥

[1] ಅಶೋಕಾಶ್ಚಂದನಾ ಯತ್ರ ಪನಸ ಮ್ರಬಿಭೀತಕಾಃ |
ಮಾಲತೀ ಚಂಪಕಾ ಜಾತೀ ಚಿಂಚಿಣೀ ಪಿಚುಮಂದಕಾಃ ||೫||

ಪಾರಿಜಾತಕವೃಕ್ಷಾಶ್ಚ ಘನಚ್ಛಾಯಾಸಮನ್ವಿತಾಃ |
ರಮ್ಯಂ ಶೀತಜಲಂ ಚಾರುಸರಃಕಮಲಮಂಡಿತಮ್ ||೬||

ತತ್ರ ಮಂಚಕವರ್ಯೇ ಸಾ ಸಖ್ಯಾನೀತೇ ಶುಭಾಸ್ತರೇ |
ಸುಷ್ವಾಪ ಗಿರಿಜಾ ಬಾಲಯುಕ್ತಾ ನಿಃಶಂಕಚೇತಸಾ ||೭||

---

ದೇವಿಯು ವಿಹರಿಸುವ ಉದ್ಯಾನವೆಂದ ಮೇಲೆ ಹೇಗಿರಬಹುದು ? ನೀನೇ ವಿಚಾರಮಾಡು. ಅಶೋಕ, ಚಂದನ, ಹಲಸು, ಮಾವು ಮೊದಲಾದ ನಾನಾ ವೃಕ್ಷಗಳು ಒತ್ತಾಗಿ ಬೆಳೆದು ನಿಂತು, ತಮ್ಮ ರೆಂಬೆ, ಎಲೆ ಇವುಗಳಿಂದ ಸೂರ್ಯ ರಶ್ಮಿಯು ಒಳಕ್ಕೆ ಪ್ರವೇಶಿಸದಂತೆ ತಡೆಗಟ್ಟಿದ್ದವು. ಮಾಲತಿ , ಸಂಪಿಗೆ, ಜಾಜಿ, ಚಿಂಚಿಣಿ, ಪಿಚುಮಂದ, ಪಾರಿಜಾತ ಮೊದಲಾದ ಸುಗಂಧಿ ಸುಮಪ್ರದ-ಗಿಡ-ಮರ-ಲತೆಗಳು ಸಮೃದ್ಧಿಯಾಗಿ ಬೆಳೆದು ನಿಂತಿದ್ದವು. ||೫||

ಇವುಗಳ ಸಾಂದ್ರತೆಯಿಂದ ರವಿಯ ಪ್ರಖರ ಕಿರಣಗಳೂ ಸಹ ಚಂದ್ರರಶ್ಮಿಯಂತೆ ಶೀತಲವಾಗಿದ್ದವು. ಆ ಉದ್ಯಾನವನದ ನಡುವೆ ಸುಂದರವಾದ ಒಂದು ಪುಷ್ಕರಿಣಿ ಇದ್ದಿತು. ಅದರ ತುಂಬ ಕಮಲಪುಷ್ಪಗಳು ಅರಳಿ ತಾವೇ ತಾವಾಗಿ ವಿಹರಿಸುತ್ತಲಿದ್ದವು. ||೬||

ಇಂತಹ ಸ್ವಚ್ಛಾಯಶೀತಳ ವಾತಾವರಣವುಳ್ಳ ಉದ್ಯಾನದಲ್ಲಿ ಅಲ್ಲಲ್ಲಿ ಸ್ಫಟಿಕ ಶಿಲಾನಿರ್ಮಿತ ಸುಖಾಸನಗಳು ಇದ್ದವು. ದೇವಿಯು ವಿಹಾರಾರ್ಥವಾಗಿ ಅಲ್ಲಿಗೆ ಬಂದೊಡನೆಯೇ ಸೇವಿಕೆಯರು ಅತ್ಯುತ್ತಮವಾದ ಒಂದು ಮಂಚವನ್ನೇ ತಂದಿರಿಸಿ ವಿಶ್ರಾಂತಿಗೆ ಸಿದ್ಧಪಡಿಸಿದರು. ಅದರ ಮೇಲೆ ಹಾಸಿದ್ದ ಹಾಸಿಗೆ ಅತ್ಯಮೂಲ್ಯವೂ, ಮೃದುಲವೂ ಆಗಿದ್ದಿತು. ಅದರ ಮೇಲೆ ದೇವಿಯು ತನ್ನ ಮಗನನ್ನು ಮಲಗಿಸಿಕೊಂಡು, ತಾನೂ ಸುಖವಾಗಿ ಮಲಗಿದಳು. ಆಗ ಆವಳಿಗೆ ಆತಪ ಬಾಧೆಯೂ ಇರಲಿಲ್ಲ, ಉದ್ಯಾನ ರಕ್ಷಿಗಳು ಜಾಗರೂಕರಾಗಿದ್ದುದರಿಂದ ಮತ್ತಾವ ಆತಂಕವೂ

---

[1] ವಿವರಣೆಗೆ ಪರಿಶಿಷ್ಟವನ್ನು ನೋಡಿರಿ.

ಸಖೀಭ್ಯಾಂ ವೀಜಿತಾ ವಾಲವ್ಯಜನೇನಾತ್ಮಮುಖ್ಯಸಾ ।
ಸುಷುಪ್ತಿಮಗಮದ್ಯಾವತ್ತಾವದ್ದೈತ್ಯೋ ಮಹಾಬಲಃ ॥೮॥

'ತಲ್ಪಾಸುರ' ಇತಿ ಖ್ಯಾತೋ ವಾಯುರೂಪೋಽವಿಶತ್ತತಃ ।
ಮಂಚಕಾಂತರ್ಗತಃ ಸೋಽಥ ತೇನ ಸಾಕಂ ಯಯೌ ದಿವಮ್ ॥೯॥

ತಸ್ಯ ಶಬ್ದೇನ ಸಂತ್ರಸ್ತೇ ತೇ ಸಖ್ಯೌ ಪತಿತೇ ಭುವಿ ।
ಆಕ್ರಂದಂ ಪರಮಂ ಚಕ್ರೇ ಪರ್ಯಂಕಸ್ಥಾ ತದಾ ಶಿವಾ ॥೧೦॥

---

ಇರಲಿಲ್ಲ. ಶಾಂತಚಿತ್ತಳಾಗಿ ಮಲಗಿ ನಿದ್ರಿಸಿದಳು. ॥೭॥

ಸಖಿಯರಿಬ್ಬರು ದೇವಿಯ ಅಕ್ಕ-ಪಕ್ಕಗಳಲ್ಲಿ ನಿಂದು ಬಾಳದ ಬೇರಿನ ಬೀಸಣಿಗೆ ಹಾಗೂ ಚಮರಮೃಗದ ಬಾಲದಿಂದ ನಿರ್ಮಿತವಾದ ಚಾಮರಗಳಿಂದ ಮೃದುವಾಗಿ ಬೀಸುತ್ತಿದ್ದರು. ಅವುಗಳ ಹಿಡಿಗಳು ರತ್ನಖಚಿತವಾದುವು. ಬಿಸಿಲಿನಿಂದ ಬಳಲಿದ್ದ ಭವಾನಿಯು ಹಾಗೆಯೇ ಗಾಢ ನಿದ್ರೆಗೆ ವಶಳಾದಳು. ಆದರೂ ಸಖಿಯರು ಬೀಸುತ್ತಲೇ ಇದ್ದರು. ಇಷ್ಟರಲ್ಲಿ ಅಸುರನೊಬ್ಬನು ಸದ್ದಿಲ್ಲದೆ ಆ ಸ್ಥಳಕ್ಕೆ ಬಂದನು. ಅವನು ಮಹಾ ಬಲಶಾಲಿಯಾದವನು. ॥೮॥

ಅವನ ಹೆಸರು 'ತಲ್ಪಾಸುರ.' ಮಹಾ ದುಷ್ಟನೆಂದು ಅವನು ಸರ್ವತ್ರ ಖ್ಯಾತಿಯನ್ನು ಪಡೆದಿದ್ದನು. ಅವನು ವಾಯುವಿನಂತಿದ್ದನಾದುದರಿಂದ ಯಾರ ಕಣ್ಣುಗಳಿಗೂ ಗೋಚರನಾಗುತ್ತಲಿರಲಿಲ್ಲ. ಇಂಥವನು ಮಂಚದ ಸಮೀಪಕ್ಕೆ ಬಂದೊಡನೆಯೇ ತನ್ನ ರೂಪವನ್ನು ಮತ್ತಷ್ಟು ಸೂಕ್ಷ್ಮಗೊಳಿಸಿ ಮಂಚದಲ್ಲಿ ಪ್ರವೇಶಿಸಿ, ಮಂಚವೇ ಆಗಿ ಮಾರ್ಪಟ್ಟನು. ಅನಂತರ ಒಮ್ಮೆಲೇ ಅಂತರಿಕ್ಷಕ್ಕೆ ನೆಗೆದುಬಿಟ್ಟನು. ॥೯॥

ರಾಕ್ಷಸನು ಹಾರುವಾಗ ಭಯಂಕರವಾಗಿ ಶಬ್ದ ಉಂಟಾಯಿತು. ಇದರಿಂದ ಗಡಗಡ ನಡುಗಿದ ಸಖಿಯರಿಬ್ಬರೂ ನಿಂದಿರಲಾರದೇ ಧೊಪ್ಪನೆ ಭೂಮಿಗೆ ಬಿದ್ದುಬಿಟ್ಟರು. ಮಂಚದ ಚಲನೆ, ರಾಕ್ಷಸನ ಗುಡುಗಿನಂತಹ ಶಬ್ದ, ಮತ್ತು ಸಖಿಯರು ಅರಚಾಟ ಇವುಗಳಿಂದಾಗಿ ದೇವಿಯು ಎಚ್ಚೆತ್ತು ಥಿಗ್ಗನೆ ಎದ್ದು ಕುಳಿತು ವಿಷಯವೇನೆಂಬುದನ್ನು ತಿಳಿದಳು. ಬರಸಿಡಿಲುಗಳು ಅಸಂಖ್ಯಾತವಾಗಿ ಒಮ್ಮೆಲೇ ಅವಳ

ವ್ಯೋಮಸ್ಥಾ ಪರ್ಯದೇವತ್ಸಾ 'ಧಾವ, ಧಾವೇ'ತಿ ಶಂಕರವ್ ।

ಗೌರ್ಯುವಾಚ :—

ಕಿಂ ಮಯಾ ವಿಕೃತಂ ದೇವ! ಕಿಮರ್ಥಂ ಮಾಮುಪೇಕ್ಷಸೇ ॥೧೧॥

ಅಯಂ ದೈತ್ಯೋಽತಿಬಲವಾನ್ ವ್ಯೋಮಾಕ್ರಮ್ಯ ಪ್ರಧಾವತಿ ।
ಪರಹಸ್ತಗತಾಂ ಕಾಂತಾಂ ಶಕ್ತಃ ಕಥಮುಪೇಕ್ಷಸೇ ? ॥೧೨॥

ಅಸ್ಯ ಪುತ್ರಸ್ಯ ಯೋಗೇನ ನಾನಾ ದುಃಖಮಭೂನ್ಮಮ ।

ಮೇಲೆ ಬಿದ್ದಂತಾಯಿತು. ಪಾಪ, ಏನನ್ನು ತಾನೆ ಮಾಡಿಯಾಳು ? ತಾನೋ ಶಿಶುವಿನೊಂದಿಗೆ ಮಂಚದ ಮೇಲೆ ಕುಳಿತಿದ್ದಾಳೆ. ಮಂಚವು ಬಹಳ ಮೇಲ್ಮಟ್ಟಕ್ಕೆ ಹೊರಟುಹೋಗಿದೆ. ಅಲ್ಲಿಂದೇನಾದರೂ ಮಗುವಿನೊಂದಿಗೆ ತಾನು ಕೆಳಕ್ಕೆ ಬಿದ್ದರೆ, ಅವಸ್ಥೆಯೇ ಮುಗಿದು ಹೋಗುವುದು ಎಂಬ ಭೀತಿಯು ಅವಳಲ್ಲಿ ಬೇರೂರಿದ್ದರಿಂದ ಅವಳಿಗೆ ಅಳುವಿನ ಹೊರತು ಮತ್ತಾವ ಪರಿಹಾರೋಪಾಯವೂ ಹೊಳೆಯಲಿಲ್ಲ. ಕೇಳುವವರ ಕರುಳುಗಳು ಕಿತ್ತುಬರುವಂತಹ ಆರ್ತನಾದದಿಂದ ದೇವಿಯು ಹೀಗೆಂದು ಅಳಲಾರಂಭಿಸಿದಳು. ॥೧೦॥

ದೇವಿ :—

ಓಡಿ ಬಾ. ವಿಲಂಬಿಸಬೇಡ. ಶಂಕರ! ನಾನು ನಿನ್ನ ವಿಷಯದಲ್ಲಿ ಯಾವ ಅಪರಾಧವನ್ನೂ ಆಚರಿಸಿರುವುದಿಲ್ಲ. ಹೀಗಿದ್ದರೂ ದೇವರ ದೇವ! ನನ್ನನ್ನೇಕೆ ಈ ರೀತಿ ಉಪೇಕ್ಷಿಸುತ್ತಲಿರುವೆ ? ॥೧೧॥

ಈ ದೈತ್ಯನಾದರೋ, ಮಹಾ ಬಲಶಾಲಿಯಾಗಿದ್ದಾನೆ. ನಕ್ಷತ್ರಮಂಡಲವನ್ನೇ ಭೇದಿಸಿಕೊಂಡು ಓಡಿಹೋಗುತ್ತಲಿದ್ದಾನೆ ನೀನೋ, ಸರ್ವೇಶ್ವರನಾಗಿರುವೆ. ಕರ್ತುಮಕರ್ತುಮನ್ಯಥಾ ವಾ ಕರ್ತುಂ ಶಕ್ತನಾದವನು. ಇಷ್ಟೆಲ್ಲ ಶಕ್ತಿ-ಸಾಮರ್ಥ್ಯವಿರತಕ್ಕವರು ತನ್ನ ಹೆಂಡತಿಯನ್ನು ಪರಕೀಯರು ಸೆಳೆದೊಯ್ಯುತ್ತಿರುವಾಗ ವಿಷಯವನ್ನು ತಿಳಿದೂ ಸಹ ಯಾರಾದರೂ ಉಪೇಕ್ಷಿಸುತ್ತಾರೆಯೇ ? ॥೧೨॥

ಈ ಮಗನನ್ನು ಯಾವ ಮುಹೂರ್ತದಲ್ಲಿ ಪಡೆದೆನೋ, ಕಾಣೆ ? ಅದು

ತಸ್ಮಾದ್ದೈತ್ಯಾತ್ಕೃತಿರ್ನೋ ಕಿಂ ಸಪುತ್ರಾಯಾ ವಿನಿರ್ಮಿತಾ ||೧೩||

ಅಯಂ ಸೋಽಪಿ ನ ಜಾತಶ್ಚೇತ್ಕಥಂ ಬಂಧನಮಾಪ್ನುಯಾಮ್ ? |

ಕ ಉವಾಚ :—

ಜನನ್ಯಾ ಕ್ರಂದನಂ ಶ್ರುತ್ವಾ ಉಮಾಬಾಲೋ ಮಹಾಮನಾಃ ||೧೪||

ತದಾ ಮಂಜುರ್ಜಗರ್ಜಾಸೌ ಘನವದ್ಗರ್ಜಯನ್ ದಿಶಃ |

ಚಕಂಪೇ ಧರಣೀ ತೇನ ಸ-ಸಮುದ್ರವನಾಕರಾ ||೧೫||

---

... ಳಿಗೆ ಯಾವರಿಗೂ ಬಂದಿಲ್ಲೊಂದು ಮಹದ್ವಿಪತ್ತು ಪರಂಪರೆ ... ಇದೆಯಲ್ಲಿ ? ನಾನು ಅನುಭವಿಸಿದ ದುಃಖವನ್ನು ಇಷ್ಟೆಂದು ... ನಗಂತೂ ಸಾಧ್ಯವೇ ಇಲ್ಲ. ಅಥವಾ ಈ ದುಷ್ಟನಾದ ದೈತ್ಯ ನಿಂದಲೇ ನನಗೂ, ನನ್ನ ಈ ಪುತ್ರನಿಗೂ ಮರಣ ಸಂಭವಿಸಲೆಂದು ನಮ್ಮ ಹಣೆ ಯಲ್ಲಿ ಬರೆದಿದೆಯೋ, ಏನೋ ? ದೈವಸಂಕಲ್ಪವನ್ನು ಬಲ್ಲವರಾರು ? ||೧೩||

ಈ ಬಾಲಕನು ನನಗೆ ಮಗನಾಗಿಯೇ ಜನಿಸದೇ ಇದ್ದಿದ್ದರೆ, ಈ ಬಂಧನ ಹಾಗೂ ವಿಪತ್ಪರಂಪರೆ ನನಗೆ ಉಂಟಾಗುತ್ತಲಿರಲಿಲ್ಲವೋ ಏನೋ?

ಬ್ರಹ್ಮ :—

ಲೋಕಜನನಿಯಾದ ಗಿರಿಜಾಮಾತೆಯ ಆರ್ತನಾದವನ್ನು ಗಣಪತಿಯು ಕೇಳಿದನು. ಪರಮೋದಾರಿಯೂ, ಆರ್ತತ್ರಾಣಪರಾಯಣನೂ ಆದ ಮಹಾ ಗಣಪತಿಯು ||೧೪||

ವರ್ಷಾಕಾಲದ ಮಹಾಮೇಘಗಳು ಗುಡುಗಿದ ಹಾಗೆ ಪದೇ ಪದೇ ಗರ್ಜನೆ ಮಾಡಲಾರಂಭಿಸಿದನು. ಶಬ್ದಬ್ರಹ್ಮನಾದ ಗಣನಾಯಕನ ಗರ್ಜನೆಯು ದಿಙ್ಮಾಲೆ ಗಳಲ್ಲೆಲ್ಲ ಪ್ರತಿಧ್ವನಿಯನ್ನುಂಟುಮಾಡಿತು. ಈ ಭಯಂಕರ ಧ್ವನಿಯನ್ನು ಕೇಳಿ ಭೂಮಿಯು ನಡುಗಿತು, ಸಮುದ್ರಗಳು ಪ್ರಕ್ಷೋಭಗೊಂಡು ಎಲ್ಲೆಮೀರಿ ಬರ

ತಾಂನಾದೃಷ್ಟ್ವಾ ತು ಶೋಚತ್ಸು ಗಣೇಷು ಪ್ರಮಥಾದಿಷು ।
ಪಾದಾಘಾತೇನ ಬಾಲೋಽಥ ಮಂಚಕಂ ಸಮತಾಡಯತ್ ॥೧೬॥

ಬಿಭ್ಯುರ್ಭೂತಾನಿ ಸಹಸಾ ಶತಧೇವಾಭವನ್ನಭಃ ।
ಮಂಚಕಃ ಖಂಡಶಸ್ತೇನ ಭೂತ್ವಾ ನಿಪತಿತೋ ಭುವಿ ॥೧೭॥

ತತಸ್ತಲ್ಪಾಸುರೋಽದೃಶ್ಯೋ ಜಾತೋ ಬಾಲೋ ದಧಾರ ತಮ್ ।
ಹಸ್ತೇನೈಕೇನ ಜನನೀಂ ದಧಾರಾಸೌ ಸ್ವ-ಲೀಲಯಾ ॥೧೮॥

---

ತೊಡಗಿದವು. ಅರಣ್ಯ-ವನಗಳಲ್ಲಿ ಬೆಳೆದಿದ್ದ ಮಹಾ ಮಹಾ ವೃಕ್ಷಗಳು ಒಂದ ನ್ನೊಂದು ಬಲವಾಗಿ ಉಜ್ಜಿದ್ದರಿಂದ ದಾವಾನಲ ಉಂಟಾಗಿ ಉರಿಯಲಾರಂಭಿಸಿದವು. ॥೧೫॥

ಇತ್ತ, ಪ್ರಮಥಗಣಗಳು ಪಾರ್ವತಿಯು ಶಿಶುವಿನೊಡನೆ ಕಾಣದಂತಾದು ದನ್ನೂ, ಈ ಎಲ್ಲ ಬಗೆಯ ಉತ್ಪಾತಗಳನ್ನೂ ಕಣ್ಣಾರ ಕಂಡ, ಎಳೆಯ ಮಕ್ಕಳಂತೆ ದೊಡ್ಡ ಧ್ವನಿಯಿಂದ ಮನಸ್ವಿಯಾಗಿ ಅಳಲಾರಂಭಿಸಿದವು. ಇಷ್ಟರಲ್ಲಿ ಬಾಲಕನು ಮಂಚದಲ್ಲಿ ಹೊಕ್ಕು ಹಾವಳಿಯನ್ನೆಬ್ಬಿಸಿದ್ದ ರಾಕ್ಷಸನನ್ನು ತನ್ನ ಎರಡೂ ಕಾಲುಗಳಿಂದ ಅತಿಯಾಗಿ ಒದೆಯಲಾರಂಭಿಸಿದನು. ಒಂದೊಂದು ಒದೆತವೂ ಬರಸಿಡಿಲಿಗೆ ಸದೃಶವಾಗಿದ್ದಿತು. ॥೧೬॥

ಪಂಚ ಮಹಾಭೂತಗಳೂ ಈ ಆಘಾತದಿಂದ ಹೆದರಿದವು. ತತ್ತದಭಿಮಾನಿ ದೇವತೆಗಳು ತಲ್ಲಣಿಸಿಹೋದರು. ಅಂತರಿಕ್ಷಮಂಡಲವು ನೂರಾರು ಹೋಳುಗಳಾಗಿ ಹೋದಂತಾಯಿತು. ಎಂದ ಮೇಲೆ ಇನ್ನು ಮಂಚ ಮುರಿಯದೇ ಉಳಿದೀತೇ? ತುಂಡು ತುಂಡಾಗಿ ಹೋಗಿ ಧೊಪ್ಪನೆ ನೆಲಕ್ಕೆ ಬಿದ್ದಿತು. ॥೧೭॥

ಆಕಸ್ಮಿಕ ಈ ಘಟನೆಯನ್ನು ಕಂಡು ತಲ್ಪಾಸುರನು ಆ ಮಂಚದಿಂದ ತಾನು ಹೊರಕ್ಕೆ ಬಂದು ಒಮ್ಮೆಲೆ ಅದೃಶ್ಯನಾಗಲು ಹವಣಿಸಿದನು. ಅತ್ಯಂತ ಚಾಣಾಕ್ಷನಾದ ಬಾಲಕ; ಗಣಪತಿಯು ರಾಕ್ಷಸನ ಹೃದಯವನ್ನರಿತು ತಟಕ್ಕನೆ ಒಂದು ಕೈಯಿಂದ ಅವನ ಜುಟ್ಟನ್ನು ಭದ್ರವಾಗಿ ಹಿಡಿದುಬಿಟ್ಟನು. ರಾಕ್ಷಸನಿಗೆ ಈ ಹಿಡಿತದಿಂದ ತಪ್ಪಿಸಿ

ಘನಮುಕ್ತಂ ತೋಯಬಿಂದುಂ ಚಂಚ್ವೇವ ಚಾತಕಃ ಕ್ಷಣಾತ್ ।
ಸ್ಕಂಧಾರೂಢಾಂ ತು ತಾಂ ಕೃತ್ವಾ ಶಿಖಾಂ ವಾಮೇನ ತಸ್ಯ ಚ ॥೧೯॥

ತತಸ್ತತ್ಯಾಜ ಭೂದೇಶೇ ತಂ ಬಾಲಃ ಸಹಸಾ ಬಲಾತ್ ।
ಪದ್ಮಾಸನಂ ದೈತ್ಯದೇಹೇ ಕೃತ್ವಾ ಯೋಗೀವ ತಸ್ಥಿವಾನ್ ॥೨೦॥

ಸ ಭೂಮೌ ಪತಿತೋ ದೂರಾತ್ ಮರ್ದಿತೋ ಬಲವತ್ತರಮ್ ।

ಕೊಂಡು ಓಡಿಹೋಗಲು ಸಾಧ್ಯವಿಲ್ಲದೇ ಹೋಯಿತು. ಆಗ ಆವನು ನಿರುಪಾಯ ನಾಗಿ ದೇವನ ಕೈಗೆ ಸಿಕ್ಕಿಬಿದ್ದನು. ಗಣ [illegible] ತನ್ನ ಮತ್ತೊಂದು ಕೈಯಿಂದ ಬಿರುಗಾಳಿಗೆ ಸಿಕ್ಕಿದ ಎಲೆಯ ಬಾಳೆಯು ಎಲೆಯಂತೆ ನಡುಗುತ್ತಲಿದ್ದ ತನ್ನ ತಾಯಿ ಯನ್ನು ಬೀಳದಂತೆ ಹಿಡಿದುಕೊಂಡನು. ನಮ್ಮ ದೃಷ್ಟಿಯಲ್ಲಿ ಇದು ಅತ್ಯದ್ಭುತವಾಗಿ ಕಂಡರೂ ದೇವನ ಹಾಗೂ ಆ[illegible]ನ ಮಹಿಮಾತಿಶಯವನ್ನು ತತ್ತ್ವತಃ ಅರಿತವರ ದೃಷ್ಟಿಗೆ ಇದೊಂದು ಲೀಲೆಯೇ ಹೊರತು, ಸಾಹಸದ ಕಾರ್ಯವೇನೂ ಅಲ್ಲವೇ ಅಲ್ಲ. ॥೧೮॥

ಮಳೆಯ ನೀರನ್ನೇ ಕುಡಿಯಬೇಕೆಂಬ ನಿಶ್ಚಯದಿಂದ ಕಾದು ಕುಳಿತಿರುವ ಚಾತಕ ಪಕ್ಷಿಯು ಘನವೃಷ್ಟಿಯ ಬಿಂದುಗಳನ್ನು ಭೂಮಿಗೆ ಬೀಳಗೊಡದೇ ಅಲ್ಲಿಯೇ ತನ್ನ ಕೊಕ್ಕನ್ನು ಚಾಚಿ ಆ ನೀರನ್ನು ಹೇಗೆ ಕುಡಿಯುತ್ತದೆಯೋ, ಅದ ರಂತೆ ಈ ಬಾಲಕನು ತಾಯಿಯನ್ನು ಭೂಮಿಗೆ ಬೀಳಗೊಡದೆ, ತನ್ನ ಹೆಗಲ ಮೇಲೆ ಭದ್ರವಾಗಿ ಕೂರಿಸಿಕೊಂಡನು. ಎಡದ ಕೈಯಿಂದ ತಲ್ಪಾಸುರನ ಶಿಖೆಯನ್ನು ಬಲ ವಾಗಿ ಬಿಡಿದು ಒರಟೊರಟಾಗಿ ತೂಗಾಡಿಸಿ, ಒಮ್ಮೆಲೇ ನೆಲಕ್ಕೆ ಕೆಡಹಿಬಿಟ್ಟನು. ಮತ್ತು ಅವನ ದೇಹವು ನೆಲಕ್ಕೆ ಬೀಳುವುದರ ಒಳಗಾಗಿಯೇ, ಹರಿಯುವ ಹಾವನ್ನು ನೋಡಿ ಹಾರಿ ಬಂದು ಹಿಡಿವ ಗರುಡ ಪಕ್ಷಿಯಂತೆ ಪಾರ್ವತಿಯೊಡನೆ ಕೆಳಕ್ಕೆ ಹಾರಿ ತಲ್ಪಾಸುರನ ದೇಹದ ಮೇಲೆ ಪದ್ಮಾಸನದಿಂದ ಕುಳಿತುಬಿಟ್ಟನು. ಇದನ್ನು ನೋಡಿದರೆ, ಯೋಗೀಶ್ವರನೊಬ್ಬನು ತಪೋನಿರತನಾಗಿ ಪೀಠದ ಮೇಲೆ ಕುಳಿತು ತಪಿಸುತ್ತಿರುವಂತೆ ಕಂಡುಬಂದಿತು. ॥೧೯-೨೦॥

ತಲ್ಪಾಸುರನು ಬಹಳ ಮೇಲ್ಭಾಗದಿಂದ ಕೆಳಕ್ಕೆ ಕೆಡವಲ್ಪಟ್ಟವನಷ್ಟೇ? ಬಿದ

ಪ್ರಾಣಾಂಸ್ತತ್ಯಾಜ ದೈತ್ಯೋಽಥ ಪಪಾತಾಸ್ಯಾದಸೃಙ್ಮುಹುಃ ॥೨೧॥

ಸ ತು ದೃಷ್ಟೋ ಜನೈರ್ದೈತ್ಯ ಏಕವಿಂಶತಿಯೋಜನಃ ।
ಚೂರ್ಣಯನ್ವೃಕ್ಷ-ಪಾಷಾಣಾನಾಶ್ರಮಾನ್ ಶರಣಾನ್ಯಪಿ ॥೨೨॥

ತತೋ ದೃಷ್ಟೋ ಬಾಲಕೋಽಸೌ ಗಣ್ಯೈಸ್ತೈಃ ಜನೈರಪಿ ।

ಊಚುಸ್ತೇ

ಜನಾಃ ಊಚುಃ :—

ಗೌರಿ! ಬಾಲೋಽಯಂ ರಮತೇ ಕಾಲೀ ಬಲೀ ॥೨೩॥

---

ರಭಸಕ್ಕೆ ಅವನ ಶರೀರದ ಪ್ರತಿಯೊಂದು ಭಾಗವೂ ಪ್ರಬಲತರವಾದ ಆಘಾತಕ್ಕೆ ಒಳಗಾಗಿ ಸಂಪೂರ್ಣ ಜಜ್ಜಿಹೋಯಿತು. ಅವನ ಬಾಯಿಂದ ಹೊಲಸು ರಕ್ತವು ನೊರೆನೊರೆಯಾಗಿ ವಮನದ ರೂಪದಿಂದ ಹೊರಕ್ಕೆ ಬಿದ್ದಿತು. ಪ್ರಾಣಗಳಿಗೆ ರಾಕ್ಷಸನ ಆ ದೇಹದಲ್ಲಿ ನಿಂತಿರಲು ಅವಕಾಶವೇ ಲಭಿಸಲಿಲ್ಲವಾದ್ದರಿಂದ ಅವು ಹೇಳದೇ ಕೇಳದೇ ಅವನ ದೇಹವನ್ನು ತ್ಯಜಿಸಿ ಹೊರಟು ಹೋದವು, ರಾಕ್ಷಸನು ಸತ್ತು ನಿಶ್ಚೇಷ್ಟನಾಗಿ ನೆಲದಲ್ಲಿ ಬಿದ್ದನು. ॥೨೧॥

ತಲ್ಪಾಸುರನ ದೇಹವು ಅಷ್ಟೇನೂ ದೊಡ್ಡದಾಗಿರಲಿಲ್ಲ. ಕೇವಲ ಇಪ್ಪತ್ತೊಂದು ಯೋಜನಗಳಷ್ಟು ಮಾತ್ರ ಸುತ್ತಳತೆವುಳ್ಳದ್ದು. ದೈತ್ಯನ ದೇಹವು ನೆಲಕ್ಕೆ ಬೀಳುವಾಗ ಆ ಪ್ರದೇಶದ ಸುತ್ತಮುತ್ತಲೂ ಇದ್ದ ಆಶ್ರಮಗಳು, ಗಿಡಮರ ಪರ್ವತಗಳು, ಕಲ್ಲುಬಂಡೆಗಳು ಎಲ್ಲವನ್ನೂ ಧ್ವಂಸಮಾಡಿದ್ದಿತು. ಇಷ್ಟೇ ಹೊರತು, ಹೆಚ್ಚಿನ ಅನಾಹುತವನ್ನೇನೂ ಮಾಡಲಿಲ್ಲ. ॥೨೨॥

ಆಗ ಜನರು ದೇವಿಯನ್ನು ಅಭಿನಂದಿಸುತ್ತ ಈ ರೀತಿ ನುಡಿದರು. ಇಷ್ಟೆಲ್ಲ ಅನಾಹುತ ನಡೆದಿದ್ದರೂ ಗಣಪತಿಯು ಮಟ್ಟಿಗೆ ಯಾವುದನ್ನೂ ತಿಳಿಯದವನಂತೆ ರಾಕ್ಷಸನ ದೇಹದ ಮೇಲೆ ಸ್ವಸ್ಥವಾಗಿ ಕುಳಿತಿದ್ದನು. ಇದನ್ನು ಸಖಿಯರೂ, ಪ್ರಮುಖರೂ ಎಲ್ಲರೂ ಸ್ಪಷ್ಟವಾಗಿ ಕಂಡರು.

ಜನರು :—

ದೇವಿ, ಗೌರಿ! ಇತ್ತ ಹೊರಳಿ ನೋಡು, ನಿನ್ನ ಮಗನು ಕ್ಷೇಮವಾಗಿ ಇಲ್ಲಿ

ಕ ಉವಾಚ :—

ಸಾ ತು ಭ್ರಾಂತ್ಯೈವ ನಾಜಾನಾತ್ ಗಗನಂ ಧರಣೀಂ ಶಿಶುಮ್ ।
ಮಾನಸಯಂ ಸಾತ್ರಾವಂಥೋ ಚುಸ್ತೇ

ಋಷಯ ಊಚುಃ :—

ಸಾವಧಾನಮನಾ ಸತಿ ! ॥೨೪॥

ಭವ ದೈತ್ಯೋ ಹತಸ್ತೇನ ಧೃತ್ವಾ ರೂಪಂ ಮಹತ್ತರಮ್ ।
ಉನ್ಮೀಲ್ಯ ನಯನೇ ಪಶ್ಯ ಪುನರ್ಬಾಲಂ ಶಿವಂ ಶುಭಮ್ ॥೨೫॥

---

ಆಟವಾಡುತ್ತ ಕುಳಿತಿರುವನು. ॥೨೩॥

ಬ್ರಹ್ಮ :—

ಆದರೆ ಘಾಬರಿಗೊಂಡಿದ್ದ ಗಿರಿಜಾದೇವಿಗೆ ಇದಾವುದೂ ಕೇಳಿಸಲೇ ಇಲ್ಲ. ಅಲ್ಲದೇ, ಆಕಾಶವಾವುದು ? ಭೂಮಿ ಯಾವುದು ? ನಾನಾರು ? ನನ್ನ ಮಗು ಯಾರು ? ಈಗ ನಾನು ಎಲ್ಲಿದ್ದೇನೆ, ನನ್ನ ಮಗು ಎಲ್ಲಿದೆ ? ಎಂಬುದು ಸಹ ತಿಳಿಯುವಂತಿರಲಿಲ್ಲ ಹೆದರಿಕೆಯಿಂದ ಅವಳ ಮೆದುಳು ಕಲಕಿ ಹೋಗಿದ್ದಿತು. ಆಗ ಮುನಿಗಳು ಮುಂದೆ ಬಂದರು. ದೇವಿಯ ಈ ಸ್ಥಿತಿಯನ್ನು ನೋಡಿ ಬಹಳ ಮರುಗಿದರು. ಮತ್ತು ಅವಳಿಗೆ ಎಚ್ಚರ ಉಂಟಾಗುವಂತೆ ಮಾಡಲು ಹೀಗೆಂದು ನುಡಿದರು.

ಮುನಿಗಳು :—

ಸತೀದೇವಿ ! ಸಾವಧಾನಮನಸ್ಕಳಾಗು. ಗಾಬರಿಗೊಳ್ಳಬೇಡ. ॥೨೪॥

ರಾಕ್ಷಸನು ಸತ್ತು ಬಿದ್ದಿದ್ದಾನೆ. ಇನ್ನು ಅವನ ಅಂಜಿಕೆ ಇಲ್ಲ. ದೈತ್ಯನನ್ನು ಕೊಂದವನು ನಿನ್ನ ಬಾಲಕ. ಇತ್ತ ತಿರುಗಿ ನೋಡು, ರಾಕ್ಷಸನು ಎಂತಹ ಘೋರವಾದ ವಿಶಾಲರೂಪವನ್ನು ಧರಿಸಿ ಬಿದ್ದಿದ್ದಾನೆ ? ನೀನು ಕಣ್ಣುಗಳನ್ನೇ ತೆರೆ

ಕ ಉವಾಚ :—

ತದ್ವಾಕ್ಯಾತ್ಪ್ರತಿಬುದ್ಧಾ ಸಾಪಶ್ಯದ್ದೈತ್ಯಂ ಚ ಬಾಲಕಮ್ ।

ಗೌರ್ಯುವಾಚ :—

ವಿಪರೀತಂ ಮಯಾ ದೃಷ್ಟಂ, ಗೂಢೋ ಬಾಲೇನ ವಾ ಕಥಮ್ ? ॥೨೬॥

ಹತೋಽನೇನ ಮಹಾದೈತ್ಯ ಏಕವಿಂಶತಿಯೋಜನಃ ? ।
ಮಾತ್ಸ್ಯಾಣಾಪ್ನುಣಮುತ್ತೀರ್ಣೋ ಬಾಲೋ ಮೇ ಜೀವಿತಪ್ರದಃ ॥೨೭॥

ಯದಿದ್ದರೆ ವಿಷಯವು ತಿಳಿಯುವ ಬಗೆಯಾದರೂ ಹೇಗೆ ? ಧೈರ್ಯವಾಗಿ ಕಣ್ಣು ಗಳನ್ನು ತೆರೆ. ನಿನ್ನ ಮುದ್ದು ಮಂಗಲಮೂರ್ತಿ ; ಗಣಪತಿಯು ಕುಳಿತಿರುವುದು ಕಂಡು ಬರುತ್ತದೆ. ಪರಶಿವನೂ ಇಲ್ಲಿಯೇ ನಿಂದಿದ್ದಾನೆ. ॥೨೫॥

ಬ್ರಹ್ಮ :—

ಮುನಿಗಳ ಮಾತುಗಳು ಕಿವಿಗೆ ಬಿದ್ದ ಬಳಿಕ ಮಹಾದೇವಿಯ ಮನಸ್ಸು ತಿಳಿಯಾಗುತ್ತ ಬಂದಿತು. ಮೆಲ್ಲನೆ ಕಣ್ಣುಗಳನ್ನು ತೆರೆದಳು. ಒಮ್ಮೆ ಸುತ್ತಲೂ ನೋಡಿದಳು. ದೈತ್ಯನು ಸತ್ತುಬಿದ್ದುದೂ, ತನ್ನ ಮಗನು ಸುಖವಾಗಿ ಆಟ ವಾಡುತ್ತ ಕುಳಿತಿರುವುದೂ ಕಂಡುಬಂದಿತು. ಆಗ ತನ್ನಷ್ಟಕ್ಕೆ ತಾನೇ ಹೀಗೆ ನುಡಿಯಲಾರಂಭಿಸಿದಳು.

ಗೌರೀ :—

ಇದೇನು ? ಎಲ್ಲವೂ ವ್ಯತ್ಯಾಸವಾಗಿ ಹೋಗಿದೆಯಲ್ಲ ? ನಾನು ಕಂಡುದೇ ಬೇರೆ. ಈಗ ಕಾಣುತ್ತಿರುವುದೇ ಬೇರೆ. ಅದಿರಲಿ, ಈ ರಾಕ್ಷಸನು ಕಣ್ಣಿಗೆ ಸಹ ಕಾಣದಷ್ಟು ಸೂಕ್ಷ್ಮನಾಗಿದ್ದನಲ್ಲವೇ ? ಇಂಥವನನ್ನು ಈ ಪುಟ್ಟ ಬಾಲಕನು ಕಂಡು ಹಿಡಿದು, ಹೇಗೆ ಕೊಂದಿರಬಹುದು ? ಇದು ಬಹಳ ಆಶ್ಚರ್ಯದ ವಿಷ ಯವೇ ಸರಿ, ॥೨೬॥

ರಾಕ್ಷಸನೇನು ಸಾಮಾನ್ಯನಾಗಿದ್ದವನೇ ? ಮಹಾಬಲಶಾಲಿ, ಇಪ್ಪ

ಕ ಉವಾಚ :—

ಇತ್ಯುಕ್ತ್ವಾ ಬಾಲಮಾದಾಯ ಕಾರಯಾಮಾಸ ಶಾಂತಿಕಮ್ ।
ದತ್ವಾ ದಾನಾನಿ ಚ ದದೌ ಸ್ತನಪಾನಂ ಶಿಶೋರಪಿ ॥೨೮॥

ದೃಷ್ಟ್ವಾ ತೇ ಕೌತುಕಂ ತಸ್ಯ ಪ್ರಶಶಂಸುರ್ಮುದಾನ್ವಿತಾಃ ।
ಏತಸ್ಮಿನ್ನಂತರೇ ಘೋರಂ ಶಬ್ದಂ ಚಕ್ರೇ ಮಹಾಸುರಃ ॥೨೯॥

ದುಂದುಭೇಃ ಸದೃಶಂ ಸೋಽಪಿ ಖ್ಯಾತೋ 'ದುಂದುಭಿ'ನಾಮತಃ ।
ಯಸ್ಯ ಪಾಣಿತಲಾಘಾತಾದ್ಧರಾ ಚೂರ್ಣತ್ವಮಾಗತಾ ॥೩೦॥

---

ತ್ತೊಂದು ಯೋಜನಗಳಷ್ಟು ಸುತ್ತಳತೆಯುಳ್ಳವನು. ಲೋಕದಲ್ಲಿ ಯಾರ ಋಣ ವನ್ನಾದರೂ ಪರಿಹರಿಸಬಹುದು, ತಾಯಿಯ ಋಣವನ್ನು ತೀರಿಸುವುದು ಸಾಧ್ಯ ವಿಲ್ಲವೆಂದು ಜನರು ಹೇಳುತ್ತಾರೆ. ಆದರೆ, ಈ ಬಾಲಕನು ನನ್ನ ಜೀವಿತವನ್ನು ಉಳಿಸಿ ಮಾತೃ ಋಣವನ್ನು ಸಂಪೂರ್ಣವಾಗಿ ತೀರಿಸಿದ್ದಾನೆ. ॥೨೭॥

ಬ್ರಹ್ಮಾ :—

ಹೀಗೆ ನುಡಿದು ಬಾಲಕನನ್ನೆತ್ತಿಕೊಂಡು ಮುದ್ದಾಡಿದಳು. ಅನಿಷ್ಟ ಪರಿ ಹಾರವಾಗುವುದಕ್ಕೆ ಪ್ರಬಲವಾದ ಶಾಂತಿಕರ್ಮವನ್ನು ಮಾಡಿಸಿದಳು. ಅನೇಕ ಬಗೆಯ ದಾನಗಳನ್ನು ವಿಪ್ರರಿಗೆ ಕೊಟ್ಟಳು. ಅನಂತರ ಕೂಸಿಗೆ ಸ್ತನ್ಯವನ್ನು ಕುಡಿಸಿದಳು. ॥೨೮॥

ಕೌತುಕದ ಈ ಘಟನೆಯನ್ನು ಕಂಡು ಅಲ್ಲಿ ನೆರೆದಿದ್ದವರೆಲ್ಲರಿಗೂ ಆಶ್ಚರ್ಯ-ಸಂತೋಷಗಳುಂಟಾದವು. ಮನಃಪೂರ್ತಿಯಾಗಿ ದೇವನನ್ನು ಎಲ್ಲರೂ ಹೊಗಳಿ ದರು. ಇಷ್ಟರಲ್ಲಿಯೇ ಮಹಾ ಅಸುರನೊಬ್ಬನು ಆ ಸ್ಥಳಕ್ಕೆ ಬಂದನು. ಘಟ್ಟಿ ಯಾಗಿ ಗರ್ಜಿಸಲಾರಂಭಿಸಿದನು. ॥೨೯॥

ದೇವದುಂದುಭಿಯ ಶಬ್ದದಂತಿದ್ದಿತು, ಅವನ ಕಂಠದಿಂದ ಹೊರಹೊಮ್ಮಿದ ಘೋರ ಶಬ್ದ. ಆದುದರಿಂದಲೇ ಅವನ ಹಿರಿಯರೂ, ಇತರರೂ ಅವನಿಗೆ

ಆಚ್ಛಾದಿತೋ ದಿನಮಣಿರ್ದೇಹೇನ ಗಗನಸ್ಪೃಶಾ ।
ಗಣಬಾಲಸ್ವರೂಪೇಣ ಗೌರೀಬಾಲಂ ಜುಹಾವ ಸಃ ॥೩೧॥

ರಾಕ್ಷಸ ಉವಾಚ :—

ಇತ ಏಹಿ ರಮಾವೋಽದ್ಯ

ಕ ಉವಾಚ :—

ಸೋಽಪಿ ಯಾತಸ್ತದ್ವೈವ ತಮ್ ।

---

'ದುಂದುಭಿ' ಎಂದೇ ಹೆಸರನ್ನಿಟ್ಟಿದ್ದರು. ಅವನ ಶಕ್ತಿಯನ್ನು ಹೇಳುವೆನು ಕೇಳು. ಅವನು ಒಮ್ಮೆ ಚಪ್ಪಾಳೆಯನ್ನು ತಟ್ಟಿದನೆಂದರೆ, ಅದರ ಶಬ್ದಕ್ಕೆ ಇಡೀ ಭೂಮಿಯೇ ನಡುಗುತ್ತಲಿದ್ದಿತು. ಮತ್ತು ಪುಡಿ-ಪುಡಿಯಾಗುತ್ತಲಿದ್ದಿತು. ॥೩೦॥

ಅವನು ಸೂರ್ಯನಿಗೇನಾದರೂ ಎದುರು ನಿಂತರೆ, ಅಖಂಡ ಭೂ-ಮಂಡಲವನ್ನೆಲ್ಲ ಬೆಳಗುವ ದಿನಮಣಿಯು ಸಹ ಸಂಪೂರ್ಣವಾಗಿ ಮುಚ್ಚಿಹೋಗುತ್ತಲಿದ್ದನು. ಅವನ ದೇಹವು ಗಗನ ಸ್ಪರ್ಶಿಯಾಗಿದ್ದುದು ಮಾತ್ರವಲ್ಲದೇ ಅಷ್ಟೇ ದಪ್ಪವಾಗಿಯೂ ಇದ್ದಿತು. ಅವನು ಇಲ್ಲಿಗೆ ಬರುವಾಗ ಪ್ರಮಥಗಣಗಳ ಬಾಲಕರ ಪೈಕಿ ಒಬ್ಬನಂತೆ ತನ್ನ ವೇಷವನ್ನು ಮಾರ್ಪಡಿಸಿಕೊಂಡು ಬಂದಿದ್ದನು. ಮತ್ತು ಗಿರಿಜಾ ಬಾಲಕ ಗಣೇಶನನ್ನೇ ತನ್ನ ಸಂಗಡಿಗನನ್ನಾಗಿ ಚುನಾಯಿಸಿಕೊಂಡವನಂತೆ ಅವನನ್ನು ಆಟವಾಡುವುದಕ್ಕೇ ಈ ರೀತಿಯಾಗಿ ಆಹ್ವಾನಿಸಿದನು. ॥೩೧॥

ರಾಕ್ಷಸ :—

ಬಾಲಕ, ಗೌರೀತನಯ ! ಇತ್ತ ಬಾ. ಇಂದು ಇಬ್ಬರೂ ಸೇರಿ ಆನಂದದಿಂದ ಆಟವಾಡೋಣ.

ಬ್ರಹ್ಮಾ :—

ಈ ಮಾತುಗಳನ್ನು ಕೇಳಿದೊಡನೆಯೇ ಬಾಲಕನು ಹೊಸಬನ ಸಂಗಡ

ಸ್ವಾಂತೇ ಕೃತ್ವಾ ತು ಬಾಲಂ ತಂ ಹಾಲ ಹಲಫಲಂ ದದೌ ||೩೨||

ರಾಕ್ಷಸ ಉವಾಚ :—

ಅದ್ಧ್ಯದ್ಧೀತಿ ಫಲಂ ಬಾಲಂ ಶೀಘ್ರಮಿತ್ಯಬ್ರವೀಚ್ಚ ಸಃ |
ದೂರದೇಶಾತ್ಸಮಾನೀತಂ ಜನ್ಮ-ಮೃತ್ಯು ಜರಾಪಹಮ್ ||೩೩||

ಕ ಉವಾಚ :—

ಸ ತು ಜಾನನ್ ದುಷ್ಟಭಾವಂ ಫಲಂ ತಜ್ಜಗೃಹೇ ತತಃ |
ಅಭಕ್ಷಯದಯಾಚತ್ಸ ಫಲಾಂತರಮಭೀಃ ಪುನಃ ||೩೪||

---

ಆಟವಾಡಲು ಆ ಕೂಡಲೇ ಸಿದ್ಧನಾಗಿ ಹೊರಟು ಹೋದನು. ' ತನ್ನ ಕೃತ್ರಿಮವು ಫಲಿಸಿತು, ಈ ಬಾಲಕನು ಸಂಪೂರ್ಣವಾಗಿ ನನ್ನ ಬಲೆಗೆ ಬಿದ್ದನು' ಎಂದು ನಿಶ್ಚಯಿಸಿ, ಮನಸ್ಸಿನಲ್ಲೇ ಮಂಡಿಗೆಯನ್ನು ತಿನ್ನುತ್ತ ರಾಕ್ಷಸನು ಬಾಲಕನನ್ನು ಎತ್ತಿಕೊಂಡು ತೊಡೆಯ ಮೇಲೆ ಕುಳ್ಳಿರಿಸಿಕೊಂಡನು ಮತ್ತು ಅತ್ಯುಗ್ರ ವಿಷಮಿಶ್ರಿತವಾದ ಒಂದು ತನ್ನ ಫಲವನ್ನು ಭಕ್ಷಿಸಲು ಅವನಿಗೆ ಕೊಟ್ಟನು. ||೩೨||

ರಾಕ್ಷಸ :—

ತಿನ್ನಪ್ಪ, ಜಾಣ ! ಈ ಹಣ್ಣು ಅತ್ಯಪೂರ್ವವಾದುದು. ಸಮೀಪದಲ್ಲೆಲ್ಲೂ ಸಿಕ್ಕುವುದಿಲ್ಲ ದೂರ ದೇಶದಿಂದ ಬಹು ಕಷ್ಟಪಟ್ಟು ಸಂಗ್ರಹಿಸಿ ಇದನ್ನು ನಿನಗಾಗಿ ತಂದಿದ್ದೇನೆ. ಇದರ ಗುಣವೇನು ಗೊತ್ತೇ? ಇದನ್ನು ತಿಂದವನಿಗೆ ಮುಪ್ಪು-ಮರಣ ಗಳ ಭೀತಿಯೇ ಇರುವುದಿಲ್ಲ, ಅಂತಹ ಉತ್ಕೃಷ್ಟವಾದುದು, ಈ ಫಲ. ||೩೩||

ಬ್ರಹ್ಮಾ :—

ಎಂದು ಮೃದುವಾಗಿ ನುಡಿದನು. ಯಾವ ಭಗವಂತನ ಇಚ್ಛಾಪ್ರಭಾವ ದಿಂದ ವಿಷವು ಅಮೃತವಾಗಿಯೂ ಮತ್ತು ಅಮೃತವು ವಿಷವಾಗಿಯೂ ಮಾರ್ಪಡು ವುದೋ, ಅಂತಹ ಸರ್ವಾಂತರ್ಯಾಮಿಗೆ ಮೂರ್ಖನಾದ ಈ ರಾಕ್ಷಸನು ವಿಷವನ್ನು ಮೋಸದಿಂದ ತಿನ್ನಿಸಿ ಸಾಯಿಸಬೇಕೆಂದು ಪ್ರಯತ್ನಿಸಿದರೆ, ಅದು ಸಾಧಿಸೀತೇ?

**ಅಮೃತಂ ವಿಷತಾಂ ಯಾತಿ ವಿಷಂ ತತ್ತಾಂ ಶಿವೇಚ್ಛಯಾ ।**
**ಧೃತ್ವಾ ವಕ್ಷಃ ಸ್ಥಲಂ ತಸ್ಯ ತತ್ಕ್ಷಣಾದುಪತಿಷ್ಠತ ॥೩೫॥**

**ತಜ್ಜಾನುನೋರ್ನ್ಯಸ್ಯ ಪಾದೌ ಕರಾಭ್ಯಾಂ ಜಗೃಹೇ ಶಿಖಾಃ ।**
**ಪರಾಭ್ಯಾಂ ಶ್ಮಶ್ರುಣೀ ಗೃಹ್ಯ ದೋಲಯಾಮಾಸ ಲೀಲಯಾ ॥೩೬॥**

**ನನರ್ತ ಜಾನುಭಾಗೇ ಸ ಭೂ-ಮಂಡಲಭರಾನ್ವಿತಃ ।**

ದೇವನಿಗೆ ಇವನ ಸ್ವರೂಪವು ಅರಿವಾಗಿ ಹೋಯಿತು. ಆದರೂ, ಇವನ್ನು 'ವ್ಯಕ್ತ ಗೊಳಿಸದೇ ಆ ಫಲವನ್ನು ಸಂತಸದಿಂದ ಕೈಗೆ ತೆಗೆದುಕೊಂಡು ನಿಶ್ಶಂಕವಾಗಿ ಅವನ್ನು ಅಗಿದು ತಿಂದುಬಿಟ್ಟನು. ಮತ್ತು ಇನ್ನಷ್ಟು ಹಣ್ಣುಗಳನ್ನು ಕೊಡೆಂದು ರಾಕ್ಷಸನನ್ನು ಒತ್ತಾಯ ಪಡಿಸಲಾರಂಭಿಸಿದನು. ॥೩೪॥

ಪರಮೇಶ್ವರನು ತನ್ನ ಸಂಕಲ್ಪದಿಂದ ಇತರರು ತಿಂದ ವಿಷವನ್ನೂ ಅಮೃತ ವನ್ನಾಗಿ ಮಾಡಬಲ್ಲವನೆಂದ ಮೇಲೆ ಸ್ವಯಂ ಸೇವಿಸಿದ ವಿಷವನ್ನು ಅಮೃತವನ್ನಾಗಿ ಮಾಡಿದುದರಲ್ಲಿ ವ್ಯಾಸ ! ಆಶ್ಚರ್ಯವೆಲ್ಲಿಯದು ? ಬಹಳ ಹಿಂದೆ, ಎಂದರೆ ಸಮುದ್ರಮಥನ ಕಾಲದಲ್ಲಿ ಉದ್ಭವಿಸಿದಂತಹ ಹಾಲಾಹಲವನ್ನೇ ಶಿವನ ರೂಪ ದಿಂದ ಪಾನಮಾಡಿ 'ನೀಲಕಂಠ'ನೆನಿಸಿದವನು ಈ ಬಾಲಕ. ಇಂಥವನ ದೃಷ್ಟಿಯಲ್ಲಿ ರಾಕ್ಷಸನಿತ್ತುದು ಎಂತು ವಿಷವಾದೀತು ? ಅಲ್ಲದೇ, ಪಾರ್ಥಿವ ವಿಷವು ಪಾರ್ಥಿವ ಶರೀರವನ್ನು ನಾಶಗೊಳಿಸಬಲ್ಲದೇ ಹೊರತು, ದೇವನ ಅಪ್ರಾಕೃತ ಮೂರ್ತಿಯನ್ನು ಹಿಂಸಿಸಬಲ್ಲದೇ ? ತತ್ಕ್ಷಣವೇ ಬಾಲಕನು ತನ್ನ ಎರಡೂ ಕಾಲುಗಳನ್ನು ಅವನ ಜಾನುಗಳ ಮೇಲೆ ಊರಿ ನಿಂತನು. ಹಿಂದಿನ ಸಂದರ್ಭಗಳಲ್ಲಿ ಭಾರವನ್ನು ಸಂಕ್ರಾಂತಗೊಳಿಸಿದಂತೆ ಈಗಲೂ ಸಹ ವಿಶ್ವದ ಭಾರವನ್ನು ಕೇಂದ್ರೀಕರಿಸಿವನು. ಅನಂತರ ಅವನ ಎದೆಗೆ ಕೈಹಾಕಿ ಭದ್ರವಾಗಿ ಹಿಡಿದೆತ್ತಿದನು. ಒಂದು ಕೈಯಿಂದ ಅವನ ಶಿಖೆಯನ್ನೂ ಮತ್ತೊಂದರಿಂದ ಕಸಪೊರಕೆಯಂತಿದ್ದ ರಾಕ್ಷಸನ ಮೀಸೆ ಗಳನ್ನೂ ಹಿಡಿದೆಳದಾಡಿದನು. ॥೩೫-೩೬॥

ಹೀಗೆ ಬಲವಾಗಿ ಎಳೆದಾಡಿ ಅವನ ಜಾನುಭಾಗದ ಮೇಲೆ ಮನಸ್ವಿಯಾಗಿ

ಸ ಪೀಡಿತ ಉವಾಚಾಥ

ರಾಕ್ಷಸ ಉವಾಚ :—

ಜಾನುಭಾಗಾದವಾತರ ||೩೭||

ತವ ಭಾರೇಣ ನೃತ್ಯೇನ ಮಮ ದೇಹೋಽತಿಪೀಡಿತಃ ।
ಮುಂಚ ಮುಂಚ ಗಮಿಷ್ಯಾಮಿ ಸ್ವಾಲಯಂ ಗಿರಿಜಾಸುತ ! ||೩೮

---

ಕುಣಿಯಲಾರಂಭಿಸಿದನು. ಇಡೀ ಭೂ-ಮಂಡಲದ ಭಾರದೊಂದಿಗೆ ಭಗವಂತನು ಕುಣಿಯಲಾರಂಭಿಸಿದರೆ ಪಾಪ ! ರಾಕ್ಷಸನ ಪ್ರಾಕೃತ ಶರೀರ ಹೇಗೆ ಉಳಿದೀತು ? ಆತ್ತ ರಾಕ್ಷಸನಿಗೆ ಉಸಿರುಕಟ್ಟಿದಂತಾಗತೊಡಗಿತು. ಒಂದು ಕಡೆ ಬಾಲಕನ ಭಾರಯುತ ಕುಣಿತ, ಮತ್ತೊಂದೆಡೆ ಜುಟ್ಟು-ಮೀಸೆಗಳ ಕಿತ್ತಾಟ, ಹೇಗಾಗಿರಬಹುದು, ಅವನ ಪರಿಸ್ಥಿತಿ? ಒಟ್ಟಿನ ಮೇಲೆ ಹೇಳುವುದಾದರೆ, ಅವನಿಗೆ ಇದನ್ನು ಸಹಿಸಲಿಕ್ಕೇ ಸಾಧ್ಯವಾಗಲಿಲ್ಲ. ಆದರೂ, ರಾಕ್ಷಸನು ಮಹಾ ಕೆಚ್ಚೆದೆಯವನು. ಆದುದರಿಂದಲೇ ತನ್ನ ಕೃತ್ರಿಮ ರೂಪವನ್ನು ಬಹಿರಂಗಪಡಿಸದೇ, ಸಾಮಾನ್ಯ ಮಾನವನಂತೆ ನಟಿಸುತ್ತ ಹೀಗೆಂದು ನುಡಿದನು.

ರಾಕ್ಷಸ :—

ಅಯ್ಯೋ, ಕೆಳಕ್ಕಿಳಿ, ಮಹಾರಾಯ ! ನನ್ನ ಜಾನುಪ್ರದೇಶವು ನಿನ್ನ ಕುಣಿತದಿಂದ ಶಿಥಿಲವಾಗಿ ಹೋಯಿತು. ||೩೭||

ನೀನು ಎಂಟು ತಿಂಗಳ ಕೂಸು ಎಂದು ನಾನೇನೋ ಪ್ರೀತಿಯಿಂದ ಎತ್ತಿಕೊಂಡರೆ, ಮಹಾ ಮೇರು ಪರ್ವತವನ್ನೇ ಎತ್ತಿಕೊಂಡಂತಾಗಿದೆಯಲ್ಲ ? ಕೆಳಕ್ಕಿಳಿದು ಬಿಡು. ಗಿರಿಜಾನಂದನ ! ನಿನಗೆ ನನ್ನೊಡನೆ ಆಟವಾಡಲು ಇಷ್ಟವಿಲ್ಲದಿದ್ದರೆ ಬೇಡ, ಬಿಟ್ಟುಬಿಡು. ನಾನು ನನ್ನ ಪಾಡಿಗೆ ಮನೆಗಾದರೂ ಹೋಗಿ ಸುರಕ್ಷಿತವಾಗಿ ಇರುವೆನು. ನಿನ್ನ ಈ ಹುಡುಗಾಟ ನನಗೆ ಪ್ರಾಣಸಂಕಟವಾಗಿದೆ. ಈ ಯಾವ್ಯ ಯಾತನೆಯನ್ನು ಯಾರು ತಡೆದುಕೊಂಡಾರು ?

ಕ ಉವಾಚ :—

ಏವಂ ಸಂಪ್ರಾರ್ಥಿತಸ್ತೇನ ನ ಮೋಚಯತಿ ಬಾಲಕಃ ।
ಉದತಿಷ್ಠದ್ಬಲಾದ್ದೈತ್ಯೋ ಭಗ್ನದೇಹಸ್ತು ಪ್ರಾರ್ವತಃ ॥೩೯॥

ಬಲಾಚ್ಚಕರ್ಷ ಬಾಲೋಽಪಿ ಮೂರ್ಧಾನಮಸ್ಯ ತತ್ಕ್ಷಣಾತ್ ।
ಕಂಠನಾಲಾತ್ತಚ್ಛಿರೋಽಪಿ ಬಾಲಹಸ್ತಗತಂ ಬಭೌ ॥೪೦॥

ರುಧಿರಾಕ್ತಾ ಮಹೀ ಸರ್ವಾ ತತ್ಕ್ಷಣಂ ಸಮಪದ್ಯತ ।
ಶಿರಃಕಮಲಹಸ್ತೋಽಸೌ ಶೋಭತೇ ಗಿರಿಜಾಸುತಃ ॥೪೧॥

---

ಬ್ರಹ್ಮ :—

ರಾಕ್ಷಸನು ಹೀಗೆಲ್ಲ ಪ್ರಾರ್ಥಿಸಿಕೊಂಡು ಮುಖವಾದ್ಯವನ್ನು ಬಾರಿಸಿದರೂ ಗಣಪತಿಯು ಬಿಟ್ಟರೆ ತಾನೇ ? ಮತ್ತಷ್ಟು ಉತ್ಸಾಹದಿಂದ ಕುಣಿಯಲಾರಂಭಿಸಿದನು. ಆಗ ರಾಕ್ಷಸನಿಗೆ ಮಿತಿಮೀರಿ ಅಸಹನೆಯುಂಟಾಯಿತು. ಇನ್ನೊಂದರೆ ಕ್ಷಣ ತಾನೇನಾದರೂ ವಿಲಂಬಿಸಿದರೆ, ಈ ಲೋಕದ ವಾಸನೆಯನ್ನೇ ಬಿಡಬೇಕಾಗಿ ಬರುವುದೆಂಬುದನ್ನು ದೃಢವಾಗಿ ಅರಿತು, ಹೇಗಾದರೂ ಜೀವದೊಂದಿಗೆ ಪಾರಾಗಬೇಕೆಂದೆಣಿಸಿ, ಅಲ್ಲಿಂದ ಓಡಿಹೋಗಲು ಬುದ್ಧಿಹೀನನಾದ ಆ ರಾಕ್ಷಸನು ಬಾಲಕನನ್ನು ದೂಡುತ್ತ ಥಟ್ಟಕ್ಕನೆ ಎದ್ದನು. ಇದರಿಂದ ಆದ ಪರಿಣಾಮವಿಷ್ಟೇ, ಕಬ್ಬಿಣದಂತೆ ಕಠಿಣತಮವಾದ ಅವನ ದೇಹವು ಫಟ್ಟನೆ ಈ ರಭಸಕ್ಕೆ ಮುರಿದುಹೋಯಿತು. ಆಗ ಅವನು ಹಿಂದಕ್ಕೆ ಧೊಪ್ಪನೆ ಬಿದ್ದುಬಿಟ್ಟನು. ಇತ್ತ ಭಾಲಚಂದ್ರನು ತಾನು ಹಿಡಿದಿದ್ದ ರಾಕ್ಷಸನ ಜುಟ್ಟು, ಗಡ್ಡಮೀಸೆಗಳ ಹಿಡಿತವನ್ನು ಮತ್ತಷ್ಟು ಬಿಗಿ ಮಾಡಿದನು. ಈ ಎಳೆದಾಟದಲ್ಲಿ ರಾಕ್ಷಸನ ಕತ್ತಿನ ಮೇಲಿದ್ದ ಶಿರಸ್ಸು ಕತ್ತರಿಸಿ ಒಮ್ಮೆಲೇ ದೇವನ ಕೈಗೆ ಕಾಣಿಕೆಯಂತೆ ಬಂದುಬಿಟ್ಟಿತು, ದೇವನ ಕರಾರವಿಂದಕ್ಕೆ ಬಂದೊಡನೆಯೇ ಆ ಶಿರಸ್ಸು ಒಂದು ಬಗೆಯಿಂದ ಶೋಭಿಸಿತು. ಎಂದರೆ ಯಾವ ವಸ್ತು ಎಲ್ಲಿರಬೇಕಾದುದೋ, ಅದರಂತೆ ಇದ್ದಂತಾಯಿತು. ॥೩೯-೪೧॥

ಪರಿಪುಷ್ಟವಾದ ರಾಕ್ಷಸನ ದೇಹದಿಂದ ರಕ್ತವು ಪ್ರವಾಹರೂಪವಾಗಿ ಹರಿ

ಶೋಣಿತೇನ ವಿಲಿಪ್ತಾಂಗೋ ಗಣಾ ಮಾತ್ರೇ ನ್ಯವೇದಯನ್ ।
ಸಾ ಗತ್ವಾ ಪಶ್ಯತಿ ಸ್ಮಾಥ ಪುತ್ರಂ ದೃಷ್ಟ್ವಾ ತಥಾವಿಧಮ್ ॥೪೨॥

ತಚ್ಛಿರೋ ದೂರತಃ ಕ್ಷಿಪ್ತ್ವಾ ವಸ್ತ್ರೇಣ ಚ ಮಮಾರ್ಜ ತಮ್ ।
ಸ್ನಾಪಯಿತ್ವಾ ಸ್ವಯಂ ಸ್ನಾತ್ವಾ ದದೌ ಸ್ತನ್ಯಂ ತದಾ ಮುದಾ ॥೪೩॥

ಯಿತು. ಇದರಿಂದ ಭೂಮಿ ಎಲ್ಲ ನೆನೆದು ಕೆಸರಿನಂತೆ ಆಯಿತು. ಇಷ್ಟಾದರೂ ಗಿರಿಜಾನಂದನನು ಮಾತ್ರ ಅಸುರನ ಶಿರಃಕಮಲವನ್ನು ತನ್ನ ಕೈಯ್ಯಲ್ಲಿ ಹಿಡಿದು ಕೊಂಡು ಮೊದಲಿನಂತೆ ಕುಣಿದಾಡುತ್ತಲೇ ಇದ್ದನು. ॥೪೧॥

ನೆತ್ತರದಿಂದ ನೆನೆದು ಹೋದ ದೇಹ ಉಳ್ಳ ದೇವರದೇವನು ಹೀಗೆ ಕುಣಿದಾಡುತ್ತಿದ್ದುದನ್ನು ಕಂಡು ಎಲ್ಲರೂ ಗಡ ಗಡ ನಡುಗಿಹೋದರು. ಮುಂದೆ ಏನನ್ನು ಮಾಡಬೇಕೆಂಬುದು ಯಾರಿಗೂ ತೋರಲಿಲ್ಲ. ಗಣಗಳೂ ಗಾಬರಿಗೊಂಡು ಓಡೋಡಿ ಹೋಗಿ ಜಗನ್ಮಾತೆಗೆ ದೂರು ಹೇಳಿದರು. ಅವಳೂ ಸಂಭ್ರಾಂತಳಾಗಿ ಆ ಸ್ಥಳಕ್ಕೆ ಓಡಿಬಂದು ನೋಡಿದಳು. ತನ್ನ ಎಂಟು ತಿಂಗಳ ಕೂಸು ರಾಕ್ಷಸನ ರಕ್ತದಿಂದ ಅಭಿಷಿಕ್ತನಾಗಿ ಕಾಲ ಕಾಲ; ಪ್ರಳಯಕಾಲದ ರುದ್ರಮೂರ್ತಿಯಂತೆ ಕುಣಿಯುತ್ತಲಿದ್ದನು. ॥೪೨॥

ದೇವಿಗೆ ಈ ದೃಶ್ಯವನ್ನು ನೋಡುತ್ತ ಹೆಚ್ಚು ವೇಳೆ ನಿಂದಿರಲಾಗಲಿಲ್ಲ. ಒಡನೆಯೇ ಶಿಶುವನ್ನು ಎತ್ತಿಕೊಂಡಳು. ಮತ್ತು ಅವನ ಕೈಯ್ಯಲ್ಲಿದ್ದ ರಾಕ್ಷಸನ ಶಿರಸ್ಸನ್ನು ಕಸಿದು ಬಹಳ ದೂರ ಬೀಳುವಂತೆ ಚೆಲ್ಲಿಬಿಟ್ಟಳು. ತನ್ನ ಪೀತಾಂಬರದ ಸೆರಗಿನಿಂದ ಅವನ ಮೈ, ಮುಖಗಳನ್ನೆಲ್ಲ ಒರೆಸಿದಳು- ಸ್ನಾನಮಾಡಿಸಿದಳು. ತಾನೂ ಸ್ನಾನ ಮಾಡಿ ಬಂದಳು. ಕೂಸಿಗೆ ಯಥೇಷ್ಟವಾಗಿ ಸ್ತನ್ಯವನ್ನು ಪಾನ ಮಾಡಿಸಿದಳು. ॥೪೩॥

ತತಃ ಸಖ್ಯೋ ಗಣಾಶ್ಚಾಪುಃ ಪಪ್ರಚ್ಛುಃ ಕ್ಷೇಮಮರ್ಭಕಮ್ ।

ಸೋವಾಚ

ಗೌರ್ಯುವಾಚಃ :—

ಪರಮಂ ಕ್ಷೇಮಂ ಬಾಲಕೇ ಶಿವಭಕ್ತಿತಃ ॥೪೪॥

ಮರೀಚಿರಕ್ಷಣಾಚ್ಚಾಪಿ ಕುಶಲಂ ಮಮ ಬಾಲಕೇ ।

ಕ ಉವಾಚ :—

ತತಸ್ತೇ ತಂ ನಿರಾಸುರ್ವೈ ದೂರತೋ ದುಷ್ಟದಾನವಮ್ ॥೪೫॥

ತತೋ ಹರ್ಷಯುತಾ ಜಗ್ಮುರ್ಗಣಾಸ್ಸಖ್ಯೋ ನಿಜಂ ಗೃಹಮ್ ।

---

ಅಷ್ಟರೊಳಗೆ ಸಖಿಯರು, ಪ್ರಮಥ ಗಣಗಳು ಎಲ್ಲರೂ ಆ ಸ್ಥಳಕ್ಕೆ ಬಂದರು. ' ಮಗುವಿಗಾವ ಅಪಾಯವೂ ಆಗಿಲ್ಲವಷ್ಟೇ ' ಎಂದು ದೇವಿಯನ್ನು ಪ್ರಶ್ನಿಸಿದರು. ಇದನ್ನುಕೇಳಿ ದೇವಿಯು

ದೇವೀ :—

' ಪರಶಿವನ ಭಕ್ತನಾದುದರಿಂದ ನನ್ನ ಶಿಶು ಸರ್ವಾತ್ಮನಾ ಕ್ಷೇಮದಿಂದಿದ್ದಾನೆ ' ॥೪೪

ಮತ್ತು ನೀವು ನೋಡಿದಂತೆ ಹಿಂದೆ ಬಂದಿದ್ದ ಮರೀಚಿ ಮಹರ್ಷಿಗಳು ರಕ್ಷೆಯನ್ನು ಕಟ್ಟಿಲ್ಲವೇ ? ಎಂದ ಮೇಲೆ ಯಾವ ಅಪಾಯ ತಾನೇ ಸಂಭವಿಸೀತು? ಇದೋ ನೋಡಿ, ಬಾಲಕನು ಕುಶಲಿಯಾಗಿದ್ದಾನೆ '

ಬ್ರಹ್ಮಾ:—

ಎಂದು ಸಂತೋಷದಿಂದ ನುಡಿದಳು. ಅನಂತರ ಗಣಗಳು ಮುಂದೆ ಬಂದು ಸತ್ತು ಬಿದ್ದಿದ್ದ ದುಷ್ಟ ದಾನವನ ದೇಹವನ್ನು ಎಳೆದೊಯ್ದು ಬಹು ದೂರ ಬಿಸುಟರು. ॥೪೫॥

ಆ ಮೇಲೆ ಸಖಿಯರು ಮತ್ತು ಪ್ರಮಥ ಗಣಗಳು ಎಲ್ಲರೂ ಪರಮ ಹರ್ಷ

ಪಾರ್ವತೀ ಹರ್ಷಸಂಯುಕ್ತಾ ಸಬಾಲಾ ಪ್ರಾಪಿಶದ್ಗೃಹಮ್ ॥೪೬॥

ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ 'ಮಂಚಕಾದ್ಯಸುರವಧ
ವರ್ಣನಂ' ನಾಮಾಷ್ಟಾಶೀತಿತಮೋಽಧ್ಯಾಯಸ್ಸಮಾಪ್ತಃ

ಗೊಂಡು ತಮ್ಮ ತಮ್ಮ ಆಲಯಗಳಿಗೆ ತೆರಳಿದರು. ಪಾರ್ವತಿಯೂ ಸಹ ಸಂತುಷ್ಟಳಾಗಿ ತನ್ನ ಮಗನೊಂದಿಗೆ ಅಂತರ್ಗೃಹವನ್ನು ಪ್ರವೇಶಿಸಿದಳು. ॥೪೬॥

ಇಲ್ಲಿಗೆ ಶ್ರೀ ಗಣೇಶಪುರಾಣದ ಉತ್ತರಖಂಡದಲ್ಲಿ 'ಮಂಚಕ ಮೊದಲಾದ
ಅಸುರರ ವಧೆಯ ವರ್ಣನೆ' ಎಂಬಲ್ಲಿಗೆ ಎಂಭತ್ತೆಂಟನೆಯ
ಅಧ್ಯಾಯಾನುವಾದವು ಮುಗಿದುದು.



॥ ಶ್ರೀ ಗಣೇಶಾಯ ನಮಃ ॥

# ಅಥೈಕೋನ ನವತಿತಮೋಽಧ್ಯಾಯಃ

**ಕ ಉವಾಚ :—**

**ತತಸ್ತು ದಶಮೇ ಮಾಸೇ ತ್ರಿ.ಮುಹೂರ್ತಗತೇ ರವೌ ।**
**ಕಿಂಚಿಜ್ಜೀರಂಗಮಾಣೋಽಸೌ ರಮತೇ ಚ ಶಿವಾಸುತಃ ॥೧॥**

**ಪಾದಾಭ್ಯಾಂ ಚಾಲಯನ್ ಕ್ವಾಪಿ ಗೂಢಂ ಗೂಢಂ ಚ ಭಾಷತೇ ।**
**ಲುಂಠತೇ ನರ್ತತೇ ಚಾಪಿ ರೋದನಂ ಕುರುತೇ ಚ ತಾನ್ ॥೨॥**

॥ ಶ್ರೀ ಗಣೇಶಾಯ ನಮಃ ।

## ೮೯ ನೆಯ ಅಧ್ಯಾಯ.

ಬ್ರಹ್ಮಾ :—

ವತ್ಸ, ವ್ಯಾಸ ! ಗಣಪತಿಗೆ ಹತ್ತನೆಯ ತಿಂಗಳು ಆರಂಭವಾಯಿತು. ಒಂದು ದಿನ ಬೆಳಗಿನ ಸಮಯ. ಸೂರ್ಯನು ಉದಯಿಸಿ ಮೂರು ಮುಹೂರ್ತಗಳು ಕಳೆದಿವೆ. ಆ ವೇಳೆಗೆ ಬಾಲಕ ಗಣೇಶನು ಹೆಚ್ಚುಹೆಚ್ಚಾಗಿಯೇ ಚೇಷ್ಟೆಗಳಿಗೆ ಆರಂಭ ಮಾಡಿದ್ದನು. ತನಗೆ ಸಮವಯಸ್ಕರಾದ ಋಷಿಕುಮಾರರು, ಪ್ರಮಥಗಣದವರ ಮಕ್ಕಳು ಇವರೊಂದಿಗೆ ಆಟವಾಡಲು ಉಪಕ್ರಮಿಸಿದ್ದನು ॥೧॥

ಈಚೆಗಂತೂ ನಡೆಯಲು ಬಂದುಬಿಟ್ಟಿದ್ದರಿಂದ ಪುಟು ಪುಟು ಹೆಜ್ಜೆಗಳನ್ನಿಕ್ಕುತ್ತ ಓಡುವನು. ಮಾತುಗಳು ಚನ್ನಾಗಿ ಇನ್ನೂ ಬಂದಿರಲಿಲ್ಲವಾದರೂ ತೊದಲು ತೊದಲಾಗಿ ಏನೇನನ್ನೋ ಅಂತೂ ಮಾತನಾಡುತ್ತಲೇ ಇರುವನು ಮನಸ್ವಿಯಾಗಿ ಕುಣಿದಾಡುವನು. ಹಠಹಿಡಿದು ಅಳುವನು. ಇವನ ಹಠವನ್ನು ಸಮಾಧಾನ ಪಡಿಸಲು ಸಾಧ್ಯವಾಗದೇ ಗಿರಿಜೆಯು ಒಮ್ಮೊಮ್ಮೆ

ದೃಷ್ಟ್ವಾ ಶಿವಾಂ ಚ ಸಹಸಾ ಸ್ತನ್ಯಲಗ್ನೋ ವ್ರಜತ್ಯಪಿ ।
ದೃಷ್ಟ್ವಾ ತಥಾವಿಧಂ ಬಾಲಂ ಜಹೃಷೇ ಪಾರ್ವತೀ ತದಾ ॥೩॥

ಏತಸ್ಮಿನ್ನಂತರೇ ದೃಷ್ಟೋ ದೈತ್ಯ 'ಆಜಗರಾ'ಭಿಧಃ ।
ವನುನ್ನಗ್ನಿಕಣಾ ದೃಷ್ಟ್ವಾ ವಜ್ರಸಾರತನುರ್ದೃಢಃ ॥೪॥

---

ಜೇಸತ್ತ ಹೊರಟು ಹೋದಳೆಂದರೆ, ಆವಳನ್ನು ಬೆನ್ನಟ್ಟಿ ಹೋಗುತ್ತ 'ಅಮ್ಮ' ಎಂದು ಘಟ್ಟಿಯಾಗಿ ಕೂಗಿ ಆಳಲಾರಂಭಿಸುವನು ॥೨॥

ಪತಿ, ಅತಿಥಿ ಮೊದಲಾದವರ ಸೇವೆಯನ್ನು ಬಿಟ್ಟು ಸರ್ವದಾ ಈ ಮಗುವಿನೊಂದಿಗೆ ಇರಲು ದೇವಿಗೆ ಸಾಧ್ಯವೇ! ಇವನನ್ನು ಸಖಿಯರ ಬಳಿ ಬಿಟ್ಟು ತನ್ನ ಪಾಡಿಗೆ ತಾನು ಕಾರ್ಯಾಸಕ್ತಳಾಗಿ ಹೋಗಿ ಬಿಡುವಳು. ಅಕಸ್ಮಾತ್ ಆವಳೇನಾದರೂ ಇವನಿಗೆ ದೃಗ್ಗೋಚರಳಾದರೆ, ಸಖಿಯರ ಕೈಗಳಿಂದ ಕೊಸರಿಕೊಂಡು ತಾಯಿಯ ಸೀರೆಯನ್ನು ಹಿಡಿದು ಎಳೆಯುತ್ತ ಹಿಂಬಾಲಿಸಿ ನಡೆದು ಬಿಡುವನು. ಪಾರ್ವತಿಯು ಮೊದಲೇ ಕರುಣಾಮಯಿ. ಅಲ್ಲದೇ ಅನೇಕ ವರ್ಷಗಳ ಕಾಲ ಕಠಿಣವಾಗಿ ತಪಸ್ಸನ್ನು ಮಾಡಿ ಈ ಮಗನನ್ನು ಪಡೆದಿದ್ದಾಳೆ. ಎಂದ ಮೇಲೆ ಇವನ ಚೇಷ್ಟೆಗಳಿಗಾಗಲೀ ಹಠಮಾರಿತನಕ್ಕಾಗಲೀ, ಸಿಟ್ಟಾದಾಳೆಯೇ? ಇವನು ಚೇಷ್ಟೆಮಾಡಿದಷ್ಟೂ ಆವಳಿಗೆ ಹರ್ಷವು ಉಕ್ಕಿ ಬರುವುದು. ತನ್ನ ಕೆಲಸಗಳನ್ನೆಲ್ಲ ಹಾಗೆಯೇ ಬಿಸುಟು ಬಿಟ್ಟು, ಶಿಶುವನ್ನು ಎತ್ತಿಕೊಂಡು ಮುದ್ದಾಡುತ್ತ ಕುಳಿತು ಬಿಡುವಳು. ವ್ಯಾಮೋಹವೇ ಅಷ್ಟು ಪ್ರಬಲವಾದುದು, ವ್ಯಾಸ! ॥೩॥

ಇನ್ನೊಂದು ವಿಷಯ ವ್ಯಾಸ! 'ಅಸಹನೆ' ಎಂಬುದು ಪ್ರಾಣಿ ಸಾಮಾನ್ಯಕ್ಕೆ ಬಂದ ಸ್ವಾಭಾವಿಕ ಗುಣ ಎಂದು ಕಾಣುತ್ತದೆ. ಏತಕ್ಕೆಂದರೆ ತನಗೆ ಸೌಖ್ಯವಿಲ್ಲದಿದ್ದರೆ ಆಗುವ ದುಃಖಕ್ಕಿಂತಲೂ ಮತ್ತೊಬ್ಬರು ಆ ಸುಖವನ್ನನುಭವಿಸುತ್ತಿದ್ದರೆ ಅದನ್ನು ನೋಡಿದರೆ, ಉಂಟಾಗುವ ದುಃಖ ಹೆಚ್ಚಿನದು. ಒಂದು ವೇಳೆ ಶ್ರೀಮಂತರು ಅನುಭವಿಸುತ್ತಿರುವ ಸುಖ ಸಾಧನೆಗಳು ಅಸಹನೆ ತುಂಬಿದ ಈ ವ್ಯಕ್ತಿಗೆ ದೊರೆತರೆ, ಇವನಿಗೆ ಸುಖಕರವಾದಾವೋ, ಇಲ್ಲವೋ ಹೇಳಲಿಕ್ಕೆ ಬರುವುದಿಲ್ಲ. ಈ ಅಂಶವನ್ನು ಸಹ ಪ್ರಾಣಿಯು ಗಮನಿಸುವುದಿಲ್ಲ. ಅಂತೂ ತನಗೆ ದೊರೆಯದ ವಸ್ತುಗಳನ್ನು ಮತ್ತೊಬ್ಬರು ಹೊಂದಿರಬಾರದು ಎಂದೇ ಪ್ರತಿಯೊಂದು ಪ್ರಾಣಿಯೂ ಬಯಸು

ಲಲಜ್ಜಿಹ್ವೋ ದೀರ್ಘದೇಹೋ ಗ್ರಸನ್ನಿವ ಮಹಾಗಿರೀನ್ ।
ಉಪವಿಷ್ಟೋ ದ್ರುಮತಲೇ ದ್ವೇ ಜಿಹ್ವೇ ಲಾಲಯನ್ ಮುಹುಃ ॥೫॥

---

ತ್ತದೆ. ಇದು ಸಾಮಾನ್ಯ ಪ್ರಾಣಿಯಲ್ಲಿ ಮಾತ್ರ ಇರುವ ದುರ್ಗುಣವೆಂದು ಭಾವಿಸಬೇಡ. ಜೀವಿಯು ಎಲ್ಲಿಯ ವರೆಗೆ ಅರಿಷಡ್ವರ್ಗಗಳ ಆಡಳಿತಕ್ಕೆ ಅಧೀನನಾಗಿರುವನೋ ಅಲ್ಲಿಯುವರೆಗೂ ಈ ದುರ್ಭಾವ ಇದ್ದೇ ಇರುವುದು ಇದನ್ನು ' ಅಕಾರಣ ದ್ವೇಷಾಸೂಯ ಭಾವ' ಎನ್ನುವರು. ಇದು ಮಿಶ್ರಸ್ವಭಾವದ ಸಾಮಾನ್ಯ ಮಾನವರ ಮಾತು, ಇನ್ನು ಕೇವಲ ತಾಮಸವೃತ್ತಿಯುವರೂ, ದೈವ, ಬ್ರಾಹ್ಮಣ, ಧರ್ಮ ಇವನ್ನು ಜಾತ್ಯಾ ವಿದ್ವೇಷಿಸುವವರೂ ಆದ ರಾಕ್ಷಸರು, ತಮ್ಮ ನಾಶಕ್ಕಾಗಿಯೇ ಅವತರಿಸಿ, ಇದುವರೆಗೂ ಎಷ್ಟೋ ಮಂದಿ ದೈತ್ಯವೀರರನ್ನು ಕೊಂದ ಗಣಪತಿಯ ಬಗ್ಗೆ, ಹಾಗೂ ಅವನ ಉಚ್ಛ್ರಾಯ ಸ್ಥಿತಿಯ ಬಗ್ಗೆ ಹೇಗೆ ಸಹನೆಯಿಂದ ಇದ್ದಾರು ? ಯಾವುದಾದರೂ ಒಂದು ರೀತಿಯಿಂದ ತಮ್ಮ ಹಗೆಯನ್ನು ನಾಶಪಡಿಸಬೇಕೆಂದೇ ರಾಕ್ಷಸರು ಬಗೆಬಗೆಯಾಗಿ ಹವಣಿಸುತ್ತಿದ್ದರು. ಮತ್ತು ಗಣಪತಿಯಿಂದ ಗತಜೀವರಾಗಿ ಗಗನವನ್ನೇರಿಯೂ ಹೋಗುತ್ತಿದ್ದರು. ಇರಲಿ, ಇತ್ತ ದೈತ್ಯರ ಪೈಕಿ ವೀರಾಗ್ರಣಿಯಾದವನೊಬ್ಬನು ದೇವನಿದ್ದೆಡೆಗೆ ಬಂದನು. ಅವನ ಹೆಸರು ' ಅಜಗರಾಸುರ 'ಅವನು ಸರ್ಪಾಕಾರದವನು. ಲೋಕಭಯಂಕರವಾದ ಅವನ ರೂಪವನ್ನು ಏನೆಂದು ವರ್ಣಿಸಲಿ ? ಅವನು ಕಣ್ಣುಗಳಿಂದ ಬೆಂಕಿಯ ಕಣಗಳನ್ನೇ ಉಗುಳುವನು. ಕಬ್ಬಿಣದಂತೆ ಅತ್ಯಂತ ಕಠಿಣವಾದುದು, ಅವನ ದೃಢ ಶರೀರ. ॥೪॥

ಸರ್ಪದ ಜಾತಿಯವನೆಂದ ಮೇಲೆ ಅದರಂತೆಯೇ ತನ್ನ ತೀಕ್ಷ್ಣವಾದ ನಾಲಿಗೆಯನ್ನು ಸರ್ವದಾ ಚಾಲಿಸುತ್ತಲೇ ಇರುವನು. ಅವನ ದೇಹವು ಬಹಳ ದೀರ್ಘಾಕಾರವಾಗಿದ್ದಿತು. ಅವನು ಒಮ್ಮೆ ಬಾಯಿ ತೆರೆದನೆಂದರೆ, ದೊಡ್ಡ ದೊಡ್ಡ ಪರ್ವತಗಳನ್ನೇ ಸಹಜವಾಗಿ ನುಂಗಿಬಿಡುತ್ತಲಿದ್ದನು. ಇಂತಹ ರಾಕ್ಷಸನು ಬಂದು ಒಂದು'ಗಿಡದ ಕೆಳಗೆ ಸದ್ದಿಲ್ಲದೆ ಕುಳಿತನು. ತನ್ನ ಎರಡು ನಾಲಿಗೆಗಳನ್ನೂ ಈಚೆಗೆ ಚಾಚಿ ಪದೇ ಪದೇ ಚಾಲನ ಮಾಡುತ್ತ ' ಗಣಪತಿಯು ಬಂದಾನೆಯೇ ? ನುಂಗಿಬಿಟ್ಟೇನೆಯೇ ' ಎಂದು ಚಿಂತಿಸುತ್ತ ಸಿದ್ಧನಾಗಿಯೇ ಇದ್ದನು. ॥೫॥

ತು ಬಾಲೋ ಜ ಲಭಾವೇನ ಲಿಂಗಿತ್ವಾ ಪಿದಗ್ರ ರ ಹ ।
ಸ ನಿನಾಯ ಚ ತಂ ಶೀಘ್ರಮುಸ್ಯಾಂತಃ ಸಹ ತೇನ ಚ ॥೬॥

ಅಂತಃ ಪ್ರವಿಷ್ಟೇ ಓಷ್ಠೌ ಸ ಸ್ವೀಯಾಲಯತ ವಾಯುಭುಕ್ ।
ನಾಪಶ್ಯದಂಗಣೇ ಬಾಲಂ ಗೌರೀ ವಿಹ್ವಲಮಾನಸಾ ॥೭॥

ಗೌರ್ಯನುತಾಪಃ :—

ಅತ್ರ ಕ್ರೀಡನ್ ಸ್ಥಿತೋ ಬಾಲಃ ಕೇನ ನೀತೋ, ಹತೋ, ನು ವಾ ?

'ಮಗು, ತನ್ನ ಪಾಡಿಗೆ ಆಟವಾಡುತ್ತಿದೆಯಲ್ಲ ? ' ಎಂದು ಪಾರ್ವತಿಯು ಅತ್ತಕಡೆ ತಿರುಗಿ ಮಾತನಾಡುತ್ತಿದ್ದಳು. ಇತ್ತ ಬಾಲಕನಿಗೆ ಗಿಡದ ಸಮೀಪದಲ್ಲಿ ಸರ್ಪವು ಸುಳಿತಿರುವ ದೃಶ್ಯವು ಕಂಡಿತು, ಹುಡುಗಾಟಿಕೆಯಾಡುವವನಂತೆ ನಟಿಸುತ ಅದರ ಬಳಿಗೆ ಹೋಗಿ ಅದನ್ನು ತಿರುಗಿಸಿ ಹಿಡಿದುಬಿಟ್ಟನು. ಈ ಸನ್ನಿವೇಶವನ್ನೇ ಕಾಯುತ್ತ ಕುಳಿತಿದ್ದ ರಕ್ಕಸನು ಬಾಲಕನು ಬಾಯಿಯೊಳಗೆ ಹೋಗುವಂತೆ ಉಸಿರನ್ನು ಒಮ್ಮೆಲೇ ಸೆಳೆದುಕೊಂಡು ಅವನೊಡನೆ ಸರಸರ ಸರಿದುಹೋದನು. ॥೬॥

ಬಾಲಕನು ಸಂಪೂರ್ಣವಾಗಿ ಬಾಯಿಯೊಳಗೆ ಪ್ರವೇಶಿಸಿದ ಕೂಡಲೇ ತನ್ನ ಎರಡೂ ತುಟಿಗಳನ್ನು ಮುಚ್ಚಿಬಿಟ್ಟನು. ಅಷ್ಟರಲ್ಲಿ ಬಾಲಕನ ಕಡೆ ಗೌರಿಗೆ ಗಮನ ಹುಟ್ಟಿತು. ಹೊರಳಿ ನೋಡಿದಳು, ಅಲ್ಲಿ ಕಾಣದಿರಲು ಕಣ್ಣುಗಳನ್ನರಳಿಸಿ ನೋಡಿದಳು. ಅಂಗಳವನ್ನೆಲ್ಲ ಸುತ್ತಿ ಹುಡುಕಿಬಂದಳು. ಬಾಲಕನು ಎಲ್ಲೂ ಕಾಣಲಿಲ್ಲ. ಈ ಚಮತ್ಕಾರವನ್ನು ನೋಡಿ ದೇವಿಯು ಬಹಳ ವ್ಯಾಕುಲವನ್ನು ಹೊಂದಿದಳು. ॥೭॥

ಗೌರೀ :—

ಅಯ್ಯೋ ! ಇದುವರೆಗೂ ಇಲ್ಲಿಯೇ ಆಟವಾಡುತ್ತಲಿದ್ದನಲ್ಲ ? ಇಷ್ಟರಲ್ಲೇ ನನ್ನ ಕಣ್ಣುಗಳನ್ನು ವಂಚಿಸಿ ಎಲ್ಲಿಗೆ ಓಡಿ ಹೋಗಿರಬಹುದು ? ಯಾವನಾದರೂ ದುಷ್ಟಾತ್ಮನು ನನ್ನ ಶಿಶುವನ್ನು ಕೊಂಡೊಯ್ದಿರಬಹುದೇ ? ಅಥವಾ ಬಾಲಕನು ಮೃತನಾಗಿಯೇ ಹೋದನೇ ? ಮುಂದೇನು ಗತಿ ?

ಕ ಉವಾಚ :—

ಶುಶೋಚ ಪರಮಾರ್ತಾಸೌ ತತಾಡ ಮಸ್ತಕಂ ನಿಜಮ್ ||೮||

ತಾವದ್ಗಣೈರ್ನಿಷಿದ್ಧಾ ಸಾ

ಗಣಾ ಊಚುಃ :—

ಮಾ ಮಾತರ್ವಿಮನಾ ಭವ ।

ಬಾಲಪ್ರಭಾವೋ ನಿಜ್ಞಾತಃ ಶತಶೋ ಬಲವತ್ತರಃ ||೯||

ಕ ಉವಾಚ :—

ಬಾಲಸ್ತದುದರಗತೋ ವವೃಧೇ ಚ ನಿರುದ್ಧ್ಯ ಚ

---

ಬ್ರಹ್ಮ :—

ಈ ಕಲ್ಪನೆಯು ಅವಳ ಮೆದುಳಿನಲ್ಲಿ ಸುಳಿದೊಡನೆಯೇ ಪಾರ್ವತಿಯು ಪರಮಾರ್ತಳಾಗಿ ಘಟ್ಟಿ ಧ್ವನಿಯಿಂದ ಅಳಲಾರಂಭಿಸಿದಳು. ಮತ್ತು ತನ್ನ ಕೈಗಳಿಂದ ತಲೆಯನ್ನು ಘಟ್ಟಿಸಿಕೊಳ್ಳಲಾರಂಭಿಸಿದಳು. ಇವಳ ಅಳು ಕಲ್ಲನ್ನೂ ಕರಗಿಸುವಂತಿದ್ದಿತು. ||೮||

ಅದನ್ನು ಕಂಡ ಪ್ರಮಥಗಣಗಳು ಓಡೋಡುತ್ತ ಬಂದು 'ಹಾಗೆ ತಲೆಯನ್ನು ಘಟ್ಟಿಸಿಕೊಳ್ಳಬೇಡ'ವೆಂದು ಅಂಗಲಾಚಿ ತಡೆದು ಹೀಗೆ ನುಡಿದರು.

ಗಣಗಳು :—

ತಾಯೇ ! ಎಲ್ಲವನ್ನೂ ತಿಳಿದ ನೀನೇ ಹೀಗೆ ಮಾಡಲಾರಂಭಿಸಿದರೆ, ನಮ್ಮ ಗತಿ ಏನಾಗಬೇಕು ? ನೀನು ಹೆದರಬೇಕಾಗಿರುವುದಿಲ್ಲ. ನಿನಗೆ ನಿನ್ನ ಬಾಲಕನ ಶಕ್ತಿ ಪ್ರಭಾವಗಳು ಗೊತ್ತಿಲ್ಲವೇ ? ಬಲಿಷ್ಠರಾದ ನೂರಾರು ಮಂದಿ ರಕ್ಕಸರನ್ನು ಆವನು ಲೀಲೆಯಿಂದಲೇ ಕೊಂದು ಬಿಸುಟಿಲ್ಲವೇ ? ಹೀಗಿದ್ದರೂ ನೀನೇಕೆ ವ್ಯಥಿಸುವೆ ? ||೯||

ಬ್ರಹ್ಮ :—

ಇತ್ತ ಹೆಬ್ಬಾವಿನ ಹೊಟ್ಟೆಯೊಳಗೆ ಹೊಕ್ಕ ಹೇರಂಬನು ಒಮ್ಮೆಲೇ ತನ್ನ

ಶ್ವಾಸಂ ತಸ್ಯ ತು ದೈತ್ಯಸ್ಯ ಪುಚ್ಛಾಂತಂ ಸೋಽಪ್ಯಚಾಲಯತ್ ||೧೦||

ಪ್ರಾಣವಾಯುಸ್ತು ನೇತ್ರಾಭ್ಯಾಂ ರುಧಿರೇಣ ವಿನಿರ್ಯಯೌ
ವಿದಾರ್ಯ ದೇಹಮುತ್ತಸ್ಥೌ ಬಹಿರ್ಯಾತೋಽಂಬಿಕಾಸುತಃ ||೧೧||

ಚಿಕ್ರೀಡ ರುಧಿರಾದ್ರಾಂಗಃ ಕಿಂ ನು ಪುಷ್ಪಿತಕಿಂಶುಕಃ ? |
ತತೋ ಗಣಾಸ್ತಂ ನಿರೀಕ್ಷ್ಯ ಲಿಹಂತಂ ಸ್ವಾಂಗುಲಿಂ ಶಿಶುಮ್ ||೧೨||

ಊಚುಃ ಶ್ಚೈರ್ಗಿರಿಸುತಾಂ

ದೇಹವನ್ನು ಬೆಳೆಸಿದನು. ಇದರಿಂದ ಸರ್ಪವು ಸ್ವೀಕರಿಸಿದ ಶ್ವಾಸವಾಯು ಹೊರಕ್ಕೆ ಹೋಗದಂತಾಗಿ ಅವರ ಕೊಳವೆಯಂತಹ ದೇಹವು ಬಾಲದ ತುದಿಯವರೆಗೂ ಒಮ್ಮೆಲೇ ಬಾತು ನಿಂತಿತು. ಉಸಿರು ಕಟ್ಟಿ ಹೋದ ಕೂಡಲೇ ರಾಕ್ಷಸನು ಸಹಿಸಲಾರದೆ ಬಾಲದ ತುದಿಯನ್ನು ಪಟ ಪಟ ಬಡಿಯಲಾರಂಭಿಸಿದನು. ||೧೦||

ನೆತ್ತರದ ಒತ್ತಡ ಬಲವಾಗಲು, ಅಜಗರಾಸುರನ ಕಣ್ಣುಗಳು ಬಾತು ಒಮ್ಮೆಲೆ ಪಟ್ಟೆಂದು ಒಡೆದವು. ರಕ್ತದೊಂದಿಗೆ ಅವನ ಪಂಚ ಪ್ರಾಣಗಳೂ ಒಳಕ್ಕೆ ನಿಲ್ಲಲಾರದೇ ಹೊರಕ್ಕೆ ಬಂದುಬಿಟ್ಟವು. ಅನಂತರ ಅಂಬಿಕಾಸುತನು ಅಜಗರದ ದೇಹವನ್ನು ಬಗೆದುಕೊಂಡು ಹೊರಹೊರಟು ಬಂದನು. ||೧೧||

ದೇವನ ದೇಹವೆಲ್ಲ ರುಧಿರದಿಂದ ಮುಳುಗಿಹೋಗಿದೆ. ನೋಡಿದರೆ ಅರಳಿದ ಕೆಂಪು ಪುಷ್ಪಗಳಿಂದ ಶೋಭಿಸುವ ವೃಕ್ಷವೋ ಎಂಬಂತೆ ಲಂಬೋದರನು ತೋರುತ್ತಿದ್ದಾನೆ. ಬಾಯಿಯಲ್ಲಿ ತನ್ನ ಪುಟ್ಟ ಬೆರಳನ್ನಿಟ್ಟುಕೊಂಡು ಅದರ ಸವಿಯನ್ನು ಸವಿಯುತ್ತ ಬಹಳ ಮುದ್ದಾಗಿ ನಿಂತಿದ್ದಾನೆ. ಶಿಶುವಿನ ಠೀವಿಯ ಈ ನಿಲುವನ್ನು ನೋಡಿ ಪ್ರಮಥರು ಪರವಶರಾಗಿ ಹೋದರು. ||೧೨||

ಪ್ರಮಥರು ಆಗ ಹುರುಪುಗೊಂಡು ಗಿರಿರಾಜಸುತೆಯನ್ನು ಸಂಬೋಧಿಸಿ ಹೀಗೆಂದು ಘಟ್ಟಿಯಾಗಿ ಕೂಗಿ ಹೇಳಿದರು.

ಗಣಾ ಊಚುಃ :—

ಅಯಂ ಬಾಲೋ ವಿನಿರ್ಗತಃ ।
ಅಸ್ಮಾಸ್ವಾಸ್ವಾರಯಿತ್ವಾ ತಂ ದೈತ್ಯಮಾಜಗರಂ ಬಲವಾನ್ ॥೧೩॥

ಕ ಉವಾಚ :—

ತದ್ವಧಾನಂತರಂ ಬಾಲಮಾದಾಯ ಸತ್ವರಂ ಶಿವಾ ।
ಸ್ನಾಪಯಾಮಾಸ ಸಹಸಾ ಲಾಲಯಿತ್ವಾ ಸ್ತನಂ ದದೌ ॥೧೪॥

ಪಾರ್ವತ್ಯುವಾಚ :—

ಕ್ವ ಗತೋಽಸಿ ? ಕ್ಷಣೋ ಬಾಲ ! ತ್ವಾಂ ಪಿನಾಬ್ಧ ತ್ವಮಾಗತಃ ।

---

ಗಣಗಳು :—

ದೇವಿ ! ನಾವು ಮೊದಲೇ ಹೇಳಲಿಲ್ಲವೇ ? ಇದೋ ನೋಡು, ನಿನ್ನ ಮಗ ಅಜಗರದ ಬಾಯಿಯಿಂದ ಹೊರಕ್ಕೆ ಬಂದನು. ಅಬ್ಬ! ಖಲಸ್ವಭಾವದ ಅಜಗರವನ್ನು ಕೊಂದೇ ಬಿಟ್ಟಿದ್ದಾನೆ. ಇದು ನಿಜವಾದ ಸರ್ಪವಲ್ಲ, ದೇವಿ ! ಇವನೊಬ್ಬ ಬಲಿಷ್ಠ ರಾಕ್ಷಸನೇ ಸರಿ. ॥೧೩॥

ಬ್ರಹ್ಮ :—

ಅಜಗರಾಸುರನ ವಧೆಯಾದನಂತರ ಭವಾನೀದೇವಿಯು ಬಾಲಕನನ್ನು ಬೇಗನೆ ಎತ್ತಿಕೊಂಡಳು. ರಕ್ತಲಿಪ್ತವಾದ ಅವನ ದೇಹವನ್ನು ನೀರೆರೆದು ಸ್ವಚ್ಛವಾಗಿ ತೊಳೆದಳು. ಆಟವಾಡಿಸಿದಳು. ತೊಡೆಯ ಮೇಲೆ ಮಲಗಿಸಿಕೊಂಡು ಆನಂದದಿಂದ ಸ್ತನ್ಯವನ್ನು ಪಾನಮಾಡಿಸುತ್ತ ಮಗುವನ್ನು ಹೀಗೆ ಮಾತನಾಡಿಸತೊಡಗಿದಳು. ॥೧೪॥

ಪಾರ್ವತೀ :—

ಏನಪ್ಪ, ನೀನು ಒಂದು ಕ್ಷಣದಲ್ಲೇ ಏನೇನನ್ನೋ ಮಾಡಿಬಿಡುವೆಯಲ್ಲ ?

ಕ ಉವಾಚ .—

ತತೋ ದದರ್ಶಾಜಗರಂ ವಿಸ್ತೀರ್ಣಂ ಶತಯೋಜನಮ್ । ॥೧೫॥

ಭಯಾನಕಮುಖಂ ದುಷ್ಟಂ ವಮಂತಂ ರುಧಿರಂ ಬಹು ।
ಪತಿತಂ ವೃಕ್ಷಜಾಲಾನಿ ಪಾತಯಿತ್ವಾ ಗೃಹಾಣಿ ಚ ॥೧೬॥

ಗೌರ್ಯುವಾಚ :—

ಅಸ್ಮಿನ್ ಸ್ಥಲೇ ಕಿಯಂತೋऽನು ಭವೇಯುರ್ದೈತ್ಯ-ರಾಕ್ಷಸಾಃ ? ।

---

ಇದುವರೆಗೂ ಎಲ್ಲಿಗೆ ಹೋಗಿದ್ದೆ ? ಒಂದು ಕ್ಷಣಕಾಲ ನಿನ್ನನ್ನು ಬಿಟ್ಟಿದ್ದುದು ನನಗೆ ಒಂದು ವರ್ಷದಷ್ಟು ದೀರ್ಘಕಾಲವೆನಿಸಿಬಿಟ್ಟಿತಲ್ಲ ? ಹೀಗೇಕೆ ಪದೇ ಪದೇ ನನ್ನನ್ನಗಲಿ ದೂರ ಪೀಡಿಸುವೆ ?

ಬ್ರಹ್ಮ :—

ಅನಂತರ ಅಜಗರನ ಕಡೆಗೆ ದೃಷ್ಟಿಯನ್ನು ಬೀರಿದಳು. ಅದು ನೂರಾರು ಯೋಜನಗಳಷ್ಟು ಸ್ಥಳವನ್ನು ಆಕ್ರಮಿಸಿಕೊಂಡು ಬಿದ್ದುದು ಕಂಡಿತು. ॥೧೫॥

ಅದರ ಭಯಾನಕ ಮುಖ, ಅದರ ದೌಷ್ಟ್ಯ, ಅದು ಬಾಯಿಯಿಂದ ಉಗುಳುತ್ತಿದ್ದ ರಕ್ತಪ್ರವಾಹ ಇವೆಲ್ಲ ಮೈಮೇಲೆ ಮುಳ್ಳು ಬರಿಸುವಂತಿದ್ದವು. ಅದು ಪೃಥ್ವಿಯನ್ನೈದಿ ನೆಲಕ್ಕೆ ಬೀಳುವಾಗ ಅನೇಕ ಮನೆಗಳನ್ನೂ, ಅಸಂಖ್ಯಾತ ವೃಕ್ಷ ಸಮುದಾಯವನ್ನೂ ಬುಡ ಸಹಿತ ಉರುಳಿಸಿದ್ದಿತು. ಇದನ್ನು ಕಂಡ ಗೌರಿಯು ತನ್ನಷ್ಟಕ್ಕೆ ತಾನೇ ಹೀಗೆಂದುಕೊಂಡಳು. ॥೧೬॥

ಗೌರೀ :—

ಇನ್ನೇನು ಗತಿ ? ಈ ಪ್ರದೇಶದಲ್ಲಿ ಎಷ್ಟು ಮಂದಿ, ಎಂತೆಂತಹ ರಾಕ್ಷಸರಿರುವರೋ, ದೈತ್ಯರಿರುವರೋ ತಿಳಿಯದಲ್ಲ ? ಈ ಬಾಲಕನ ವಿಕ್ರಮಕ್ಕೆ ಬಲಿ

ಕಿಯಂತೋ ನಿಧನಂ ಪ್ರಾಪ್ತಾ ಅಸ್ಯ ಬಾಲಸ್ಯ ವಿಕ್ರಮಾತ್ ॥೧೭॥

ಕ ಉವಾಚ :—

ತತಸ್ತಂ ಚಿಕ್ಷಿಪುಸ್ಸರ್ವೇ ಗಣಾ ದೂರೇ ಮಹಾಸುರಮ್ ।
ತತಸ್ತ್ವೇಕಾದಶೇ ಮಾಸೇ ದ್ವಾರದೇಶೇ ಶಿವಾ ಯಯೌ ॥೧೮॥

ಸಖೀಭಿಃ ಪಶ್ಯತೀ ಬಾಲಕೌತುಕಾನಿ ಬಹೂನ್ಯಪಿ ।
ಕಸ್ಯಚಿದ್ವದನಂ ಬಾಲಶ್ಚುಂಬತೇ ಚುಂಬಯತ್ಯಪಿ ॥೧ ।

---

ಯಾಗಿ ಎಷ್ಟು ಜನರು ಸತ್ತು ಹೋದರೋ. ಮತ್ತು ಎಷ್ಟು ಮಂದಿ ಸಾಯಲಿರು ವರೋ ಯಾವುದನ್ನೂ ಹೇಳಲು ಬರುವಂತಿಲ್ಲವಲ್ಲ ? ॥೧೭॥

ಬ್ರಹ್ಮ :—

ಕರ್ತವ್ಯಪರರಾದ ಪ್ರಮಥರು ಸಿದ್ಧರಾಗಿಯೇ ಇದ್ದರು. ಈ ಸುದ್ದಿಯನ್ನು ಕೇಳಿ ಅಲ್ಲಿಗೆ ಬಂದರು. ನೆಗೆದುಬಿದ್ದ ಆ ಅಜಗರಾಸುರನ ಕಳೇಬರವನ್ನು ಹೊತ್ತೊಯ್ದು ದೂರ ಬಿಸುಟೆದರು. ಮುಂದೆ ಕೆಲಕಾಲದಲ್ಲಿ ಬಾಲಕ, ಗಣನಾಯಕನಿಗೆ ಹತ್ತು ತಿಂಗಳೂ ತುಂಬಿ ಹನ್ನೊಂದನೆಯ ತಿಂಗಳು ನಡೆಯಲಾರಂಭವಾಯಿತು. ಒಂದು ದಿವಸ ಪಾರ್ವತಿಯು ಶಿಶುವನ್ನು ಕೌಂಕುಳಲ್ಲಿರಿಸಿಕೊಂಡು ಮನೆಯ ಮುಂಭಾಗದ ಬಾಗಿಲ ಬಳಿಗೆ ಬಂದು ನಿಂತಳು ॥೧೮॥

ಅಲ್ಲಿ ಚಿಕ್ಕ ಚಿಕ್ಕ ಮಕ್ಕಳೆಲ್ಲ ಸೇರಿ ಅಂಗಳದಲ್ಲಿ ಆಟವಾಡುತ್ತಿದ್ದವು. ಗಣಪತಿಯು ತಾನೂ ಅವರೊಡನೆ ಆಡಬೇಕೆಂದು ದುಂಬಾಲು ಬೀಳಲು ವಿಧಿ ಇಲ್ಲದೇ ದೇವಿಯು ಅವರೊಡನೆ ಆಟವಾಡಲು ತನ್ನ ಮಗನನ್ನೂ ಕಳಿಸಿದಳು. ಹುಡುಗರ ಲೀಲಾ-ವಿನೋದಗಳನ್ನು ನೋಡುತ್ತ ಸಖಿಯರೊಂದಿಗೆ ಆನಂದದಿಂದ ತಾನೂ ನಿಂತಳು. ಹುಡುಗರ ಪೈಕಿ ಗಣಪತಿಯ ಆಟವೇ ಬಹಳ ಚಮತ್ಕಾರವಾಗಿದ್ದಿತು. ಎಲ್ಲರೂ ನನ್ನೇ ನೋಡುತ್ತ ಕೌತುಕಪಡಲಾರಂಭಿಸಿದರು. ಗಣಪತಿಯು ಓಡುತ್ತ ಹೋಗಿ ಸಂಗಡಿಗನೊಬ್ಬನ ಕೆನ್ನೆಗೆ ಮುತ್ತನ್ನಿಡುವನು ಮತ್ತೊಬ್ಬನನ್ನು ಕಂಡು

ಆಚ್ಛಾದತೇ ಚಕ್ಷೂಂಷಿ ಚ ತಸ್ಯಚಿತ್ಪೃಷ್ಠಗಃ ಸ್ವಯಮ್ ।
ಪಿಬತೇ ಮಾತುರನ್ಯಸ್ಯಾಃ ಸ್ತನ್ಯಂ ಗತ್ವಾ ಬಲಾದಸೌ ॥೨೦

ಮುಖಮಾಚ್ಛಾದ್ಯ ವಸ್ತ್ರೇಣ ಬಿಭೀಷಯತಿ ಚಾಪರಾನ್ ।
ಮುಖಂ ಕೇಶಾನ್ನಾಸಿಕಾಂ ಚ ಕರ್ಷತೇ ಭೂಷಣಾನ್ಯಪಿ ॥೨೧॥

ವದತೇ ಸ್ಖಲಿತಾಂ ವಾಣೀಂ ಪರಂ ದೃಷ್ಟ್ವಾ ಪ್ರಕಾಶ್ಯಪಿ ।
ಏತಸ್ಮಿನ್ನಂತರೇ ದುಷ್ಟೋ ದಾನವಃ 'ಶಲಭಾಸುರಃ' ॥೨೨॥

ತನಗೂ ಮುತ್ತನ್ನಿಡುವಂತೆ ಸಂಜ್ಞೆಮಾಡಿ ತನ್ನ ಗಲ್ಲವನ್ನು ಅವನ ಮುಖದ ಹತ್ತಿರ ಇಡುವನು. ॥೧೯॥

ಹುಡುಗರನ್ನು ಅಟ್ಟಿಸಿಕೊಂಡು ಹೋಗುವನು. ಹುಡುಗರ ಹಿಂಭಾಗದಲ್ಲಿ ಹೋಗಿ ನಿಂತು ಸದ್ದಿಲ್ಲದಂತೆ ಅವರ ಕಣ್ಣುಗಳನ್ನು ತನ್ನ ಪುಟ್ಟ ಪುಟ್ಟ ಕೈಗಳಿಂದ ಮುಚ್ಚುವನು. ತಾನು ಮುಚ್ಚಿರುವೆನೆಂಬುದನ್ನು ಹೇಳಬೇಡಿರೆಂದು ಇತರ ಬಾಲಕರಿಗೆ ತಲೆಯನ್ನು ಕುಲುಕಿ ಸಂಜ್ಞೆ ಮಾಡುವನು. ಮತ್ತೊಬ್ಬನ ತಾಯಿಯ ಬಳಿಗೆ ಹೋಗಿ ಬಲಾತ್ಕಾರದಿಂದ ಅವಳ ಸ್ತನ್ಯವನ್ನು ಪಾನಮಾಡಬಯಸುವನು ॥೨೦॥

ಅವರ ಸೆರಗಿನಿಂದ ತನ್ನ ಮುಖವನ್ನು ಮುಚ್ಚಿಕೊಂಡು 'ಗುಮ್ಮ ಬಂದ' ಎಂದು ಅವರನ್ನೇ ಹೆದರಿಸುವನು. ಇತರರ ಮುಖ, ತಲೆಗೂದಲು, ಮೂಗು ಇವನ್ನೆಲ್ಲ ಹಿಡಿದೆಳೆಯುವನು. ಅವರು ಈ ಯಾತನೆಯನ್ನು ಸಹಿಸಲಾರದೇ ತಮ್ಮ ಮುಖಗಳನ್ನು ವಿಕಾರಗೊಳಿಸಿದರೆ, ಅವರನ್ನು ನೋಡಿ ತಾನು ನಗುವನು. ಅವರು ಧರಿಸಿರುವ ಆಭರಣಗಳನ್ನೆಲ್ಲ ಕಿತ್ತೆಸೆಯುವನು. ॥೨೧॥

ತನ್ನವರು, ಇತರರು ಯಾರನ್ನೇ ನೋಡಲಿ ಎಲ್ಲರ ಮುಖಗಳೆದುರೂ ಹೋಗಿ ನಿಂತು ಅರ್ಧರ್ಧ, ತಪ್ಪು ತಪ್ಪಾಗಿ ಮಾತನಾಡುವನು. ಇವನ ಈ ಬಗೆಯ ನಡೆ-ನುಡಿಗಳು ಜನರ ಮನಸ್ಸನ್ನು ಸೂರೆಗೊಳ್ಳುವುವು ಹೀಗೆಲ್ಲ ಸ್ವೇಚ್ಛೆಯಾಗಿ ಆಟವಾಡುತ್ತಲಿದ್ದ ತನ್ನ ಮಗನನ್ನು ನೋಡುತ್ತ ಪಾರ್ವತಿಯು ಪರವಶಳಾಗಿ ಹೋದಳು. ಇಷ್ಟರಲ್ಲಿಯೇ ಅಲ್ಲಿಗೊಬ್ಬ ದೈತ್ಯನು ಓಡಿಬಂದನು. ಅವನು ಅತ್ಯಂತ ದುಷ್ಟನಾದವನು ಅವನ ಆಕೃತಿ, ದೀಪದ ಹುಳುವಿನಂತೆ

ಬ್ರಹ್ಮಾದೀನಾಮಗಮ್ಯೋಽಸೌ ಪರ್ವತಸ್ಕಂಧಮಂಡಲಃ ।
ವ್ಯೋಮಸ್ಫೋಟಮಹಾಮೂರ್ಧಾ ನೀಲವರ್ಣೋ ಯಥಾ ಘನಃ
॥೧೩॥

ಜಪಾಕುಸುಮನಯನೋ ಮೇಘಸ್ಪೃಕ್ ಶೃಂಗಮಂಡಲಃ ।
ಬಾಲಾಂತಿಕಮುಪಾಯಾತೋ ಗ್ರಸನ್ನಿವ ಜಗತ್ತ್ರಯಮ್ ॥೧೪॥

ತಂ ಧರ್ತುಂ ಬಾಲಕೋ ಯಾತಿ ಯತ್ರ ಯತ್ರ ಸ ಗಚ್ಛತಿ ।

ಇದ್ದಿತು. ಆದುದರಿಂದಲೇ ಅವನನ್ನು ಎಲ್ಲರೂ 'ಶಲಭಾಸುರ' ಎಂದು ಕ ಯುತ್ತಿದ್ದರು. ॥೧೨॥

ನಾನಾಗಲೀ ಅಥವಾ ದೇವೇಂದ್ರಾದಿ ಇತರ ದೇವತೆಗಳಾಗಲೀ ಯಾರೂ ಅವನನ್ನು ಅತಿಕ್ರಮಿಸಲು ಶಕ್ತರಾಗಿರಲ್ಲಿಲ್ಲ. ಅವನ ಭುಜಗಳು ಪರ್ವತದಂತೆ ದೃಢವಾಗಿದ್ದವು. ಅವನ ಎತ್ತರವನ್ನು ಹೇಳಬೇಕೆಂದರೆ, ಅವನು ಎದ್ದುನಿಂತರೆ ಅವನ ತಲೆಯು ನಭೋಮಂಡಲವನ್ನೂ ಸೀಳಿಕೊಂಡು ಮೇಲಿನ ವರೆಗೂ ಹೋಗುತ್ತಲಿದ್ದಿತು. ಅಂಜನಪರ್ವತವೋ ಎಂಬುವಷ್ಟು ಕಪ್ಪಾಗಿದ್ದಿತು, ಅವನ ದೇಹದ ವರ್ಣ. ನೀರು ತುಂಬಿದ ಮಹಾಮೇಘದಂತೆ ಅವನು ಕಂಡು ಬರುತ್ತಿದ್ದನು. ॥೧೩॥

ಕೆಂಪು ದಾಸವಾಳದ ಹೂವಿನಂತೆ ಕೆಂಡದಂತಹ ಕಣ್ಣುಗಳುಳ್ಳವನು. ಅವನ ತಲೆಯ ಮೇಲೆ ಎರಡು ಕೋಡುಗಳಿದ್ದವು. ತುಂಬು ಮೇಘಗಳನ್ನು ಸಹ ಅತ್ತಿತ್ತ ಚಲಿಸುವಂತೆ ಅವು ಮಾಡಬಲ್ಲವಾಗಿದ್ದವು ಇಂತಹ ಸ್ಫುರದ್ರೂಪಿಯು ಬಾಲಕನ ಸ ೕಾ ಪಕ್ಕೆ ಧಾವಿಸಿ ಬಂದು ಸೇರಿದನು. ಬರುವಾಗ ಅವನ ರಭಸ-ಸಾಹಸಗಳನ್ನು ನೋಡಿದರೆ ಅವನು ತ್ರಿಭುವನಗಳನ್ನೂ ಒಮ್ಮೆಲೆ ನುಂಗಿಬಿಡುವನೋ, ಎಂಬಂತೆ ತೋರುತ್ತಲಿದ್ದಿತು. ॥೧೪॥

ದೈತ್ಯನ ಸ್ವಾಭಾವಿಕವಾದ ರೂಪವು ಇಷ್ಟು ಭಯಂಕರವಾಗಿದ್ದರೂ ಇಲ್ಲಿಗೆ

ಏವಂ ತೌ ಸು-ಚಿರಂ ಕಾಲಂ ಭ್ರಮತಃ ಸ್ಮ ಮಹಾಜವೌ ||೬೫||

ತತಃ ಶ್ರಾಂತೋಽಭವದ್ಬಾಲೋ ರುಷಾ ಧಾವತ್ತದಂತಿಕಮ್ |
ದಧಾರ ಸಹಸಾ ದೈತ್ಯಂ ಶಲಭಂ ಬಲವತ್ತರಮ್ ||೬೬||

ಸ ಪಕ್ಷೌ ಸ್ಫಾಲಯಾಮಾಸ ಶ್ಯೇನೋ ಹಸ್ತಗತೋ ಯಥಾ |
ಬಾಧತೇ ಚರಣಾಘಾತೈಃ ತಂ ಬಾಲಂ ಶಲಭಾಸುರಃ ||೬೭||

ಪ್ರಸಾರ್ಯ ನಯನೇ ಕ್ರೂರೇ ಪಶ್ಯತಿ ಸ್ಮ ತದಾ ಶಿಶುಮ್ |

---

ಬರುವಾಗ ಮಟ್ಟಿಗೆ ಚಿತ್ರ-ವಿಚಿತ್ರವಾಗಿಯೂ, ಚಿತ್ತಾಕರ್ಷಕವಾಗಿಯೂ ತೋರು ವಂತಹ ಚಿಟ್ಟೆಯ ವೇಷವನ್ನು ಧರಿಸಿ ಆವನು ಬಂದಿದ್ದನು. ಆದುದರಿಂದಲೇ ದೇವಿಗಾಗಲೀ, ಇತರ ಸ್ತ್ರೀವರ್ಗಕ್ಕಾಗಲೀ ಅಥವಾ ಪ್ರಮಥಗಣಗಳಿಗಾಗಲೀ ಬಂದವನು 'ರಾಕ್ಷಸ' ಎಂಬ ಕಲ್ಪನೆಯು ಸಹ ಉಂಟಾಗಲಿಲ್ಲ. ಬಾಲಕನಿಗೆ ಈ ಸೂಕ್ಷ್ಮವು ಗೊತ್ತಾಗಿದ್ದರೂ ಅದನ್ನು ಹೊರಗೆ ತೋರ್ಪಡಿಸದೇ ಚಿಟ್ಟೆಯನ್ನು ಹಿಡಿದುಕೊಳ್ಳುವ ಕುತೂಹಲಿಯಂತೆ ಚಪಲತನದಿಂದ ಅವನ್ನು ಅಟ್ಟಿಸಿಕೊಂಡು ಹೋದನು. ಸಾಮಾನ್ಯ ಚಿಟ್ಟೆಗಳೇ ಜನರ ಕೈಗೆ ಸಿಕ್ಕುವುದು ಕಷ್ಟ. ಇವ ನಂತೂ ಚಿಟ್ಟೆಯ ರೂಪದ ರಾಕ್ಷಸ, ಅಲ್ಲದೇ ಬಾಲಕನನ್ನು ನಿಗ್ರಹಿಸುವುದಕ್ಕಾಗಿ ಬಂದವನು, ಎಂದ ಮೇಲೆ ಶತ್ರುವಿನ ಕೈಗೆ ಸುಲಭವಾಗಿ ಸಿಕ್ಕಿಯಾನೇನು? ಬಾಲ ಕನು ಧಾವಿಸಿ ಬಂದಂತೆಲ್ಲ ಚಿಟ್ಟೆಯು ಮನಸ್ಸೀ ಹಾರಾಡುತ್ತ ಇವನನ್ನೂ ಸುತ್ತಾ ಡಿಸಲಾರಂಭಿಸಿತು. ಚಿಟ್ಟೆ, ಚಿನ್ನ ಇರಿಬ್ಬರೂ ಬಹಳ ಹೊತ್ತು ಹೀಗೆ ಸುತ್ತಾಡಿ ದರು. ಇವರಿಬ್ಬರ ವೇಗವು ವಾಯುವನ್ನೂ ಮೀರಿಸುವಂತಿದ್ದಿತು, ||೬೫||

ಅಷ್ಟು ಕಾಲ ಸುತ್ತಾಡಿದ್ದರಿಂದ ಬಾಲಕನು ಸ್ವಲ್ಪ ಶ್ರಾಂತನಾದನು. ಚಿಟ್ಟೆಯು ಸಿಕ್ಕಲಿಲ್ಲವಲ್ಲ ಎಂದು ಬಹಳ ಕೋಪ ಬಂದಿತು. ಅದು ಕುಳಿತಿದ್ದ ಸ್ಥಳಕ್ಕೆ ಒಮ್ಮೆಲೇ ಹಾರಿಹೋಗಿ ಬಹಳ ಸಾಹಸದಿಂದ ಬಲಿಷ್ಠನಾದ ಶಲಭರೂಪೀ ಶಲಭಾಸುರನನ್ನು ಹಿಡಿದುಬಿಟ್ಟನು. ||೬೬||

ಗಿಡಗ ಅಥವಾ ಕಪೋತ ಪಕ್ಷಿಯನ್ನು ಕೈಯ್ಯಲ್ಲಿ ಹಿಡಿದುಕೊಂಡರೆ ಅದು ಹೇಗೆ

ಮುಮುಚೇ ತಂ ತದಾ ಬಾಲೋ ದಧಾರ ಚ ಪುನಃ ಪುನಃ ||೩೭||

ದರ್ಶಯಾಮಾಸ ಜನನೀಂ ಧಾರಾಷ್ಟ್ರಸ್ಯೇ ವ್ಯಪೋಥಯತ್ |
ಶಿವೋವಾಚ ದಯಾವಿಷ್ಟಾ ತಂ ಬಾಲಂ ಕ್ರೂರಮಾನಸಮ್ ||೩೮||

ಗೌರ್ಯುವಾಚ :—

ಜೀವಘಾತೋ ನ ಕರ್ತವ್ಯೋ ಮುಂಚೈನಂ ಪ್ರಾಣಿನಂ ಶಿಶೋ ! |

---

ತನ್ನ ರೆಕ್ಕೆಗಳನ್ನು ಬಡಿಯಲಾರಂಭಿಸುವುದೋ, ಅದರಂತೆ ಈ ಶಲಭಾಸುರದೂ ತನ್ನ ಊರಗಲದ ರೆಕ್ಕೆಗಳನ್ನು ಪ್ರಸರಿಸಿ ಪಟ ಪಟನೆ ಬಡಿಯಲಾರಂಭಿಸಿದನು. ಹಾಗೂ ಕಾಲುಗುರುಗಳಿಂದ ಬಾಲಕನ ದೇಹವನ್ನು ಪರಚುತ್ತ ಅತಿಯಾಗಿ ಬಾಧಿಸ ತೊಡಗಿದನು. ||೩೬||

ಮತ್ತು ಕಣ್ಣುಗಳನ್ನು ಅರಳಿಸಿ ಕ್ರೂರವಾಗಿ ಆ ಬಾಲಕನನ್ನು ನೋಡಲಾರಂಭಿಸಿದನು. ಇತ್ತ ಬಾಲಕನು ಒಮ್ಮೆ ಚಿಟ್ಟೆಯನ್ನು ಬಿಟ್ಟುಬಿಡುವುದು, ಅದು ಹಾರಾಡಲಾರಂಭಿಸಿತೆಂದರೆ ಓಡಿಹೋಗಿ ಹಿಡಿದು ತರುವುದು, ಮತ್ತೆ ಬಿಡುವುದು, ಹಿಡಿಯುವುದು, ಈ ರೀತಿ ಆಟವಾಡತೊಡಗಿದನು. ||೩೭||

ಏನೋ ಆಟವಾಡುತ್ತಿದ್ದಾನೆ ಎಂಬ ಕಲ್ಪನೆಯು ತಾಯಿಗುಂಟಾಗುವಂತೆ ತೋರ್ಪಡಿಸುತ್ತ ಮತ್ತೊಮ್ಮೆ ಚಿಟ್ಟೆಯನ್ನು ಹಿಡಿದಾಗ ಅದನ್ನು ಬಲವಾಗಿ ನೆಲಕ್ಕೆ ಅಪ್ಪಳಿಸಿಬಿಟ್ಟನು. ಇದನ್ನು ನೋಡಿ ಶಿವೆಯು ತನ್ನ ಮಗನು ಬಹಳ ನಿಷ್ಕರುಣಿ ಎಂದು ತೀರ್ಮಾನಿಸಿ, ಅವನಿಗೆ ವಿವೇಕವನ್ನು ಹೇಳಲಾರಂಭಿಸಿದಳು. ಅಲ್ಪ ಪ್ರಾಣಿಗೆ ಒದಗಿದ ಈ ವಿಪತ್ತನ್ನು ಕಂಡು ಉಮಾದೇವಿಯು ಬಹಳ ದಯಾವಿಷ್ಟ ಮಾನಸಳಾದಳು. ||೩೮||

ಪಾರ್ವತೀ :—

ಬಾಲಕ, ವಿನಾಯಕ ! ಮೂಕಪ್ರಾಣಿ, ಅದರಲ್ಲೂ ಕ್ಷುದ್ರ ಕೀಟ, ಇದನ್ನು

ಕ ಉವಾಚ :—

ಬಲಾತ್ಪುನಃ ಶಿಲಾಪೃಷ್ಠೇ ಹಠಾಚ್ಚಿಕ್ಷೇಪ ಬಾಲಕಃ ॥೩೦॥

ಸ ತದಾ ಶತಧಾ ಜಾತೋ ನಿಪಪಾತ ಚ ಭೂತಲೇ ।
ಗರ್ಜಯನ್ ಗಗನಂ ವೃಕ್ಷಾನ್ ಪಾತಯನ್ ಗೃಹತೋರಣಾನ್ ॥೩೧॥

ವಮನ್ರಕ್ತಂ ಬಹು ಮುಖಾದ್ದಶಯೋಜನವಿಸ್ತೃತಃ ।
ಚೂರ್ಣಯನ್ನಾಶ್ರಮಾನ್ವೃಕ್ಷಾಂಸ್ತತೋ ಮಾತಾ ನಿನಾಯ ತಮ್ ॥೩೨॥

---

ನಿರ್ನಿಮಿತ್ತವಾಗಿ ಹಿಂಸಿಸಿ ಕೊಲ್ಲುವುದೆಂದರೇನು ? ಹಾಗೆಲ್ಲ ಪ್ರಾಣಿಗಳನ್ನು ವಧಿಸಬಾರದು. ಪ್ರಾಣಿಹಿಂಸೆ ಮಹಾ ಪಾತಕಕರ, ತಿಳಿಯಿತೇ ?

ಬ್ರಹ್ಮಾ :—

'ಯಾರು ಏನನ್ನು ಬೇಕಾದರೂ ಹೇಳಿಕೊಳ್ಳಲಿ, ನಾನಂತೂ ಇದನ್ನು ಕೊಂದೇ ತೀರುವೆನು' ಎಂದು ಬಾಲಕನು ದೃಢಪ್ರತಿಜ್ಞೆಯನ್ನೇ ಮಾಡಿದನು. ಹಾಗೆಯೇ ಮತ್ತೊಮ್ಮೆ ಚಿಟ್ಟೆಯನ್ನು ಹಿಡಿದು ಅಲ್ಲಿದ್ದ ದೊಡ್ಡ ಬಂಡೆಯ ಮೇಲೆ ಬಲವಾಗಿ ಅಪ್ಪಳಿಸಿದನು. ॥೩೦॥

ಬಾಲಕನು ಅಪ್ಪಳಿಸಿದ ಹೊಡೆತಕ್ಕೆ ಶಲಭಾಸುರನು ನೂರಾರು ತುಂಡುಗಳಾಗಿ ನೆಲದಲ್ಲಿ ಬಿದ್ದನು. ಇವನು ನೆಲಕ್ಕೆ ಬಿದ್ದುದರಿಂದ ಉಂಟಾದ ಭಯಂಕರ ಶಬ್ದವು ಗಗನಮಂಡಲವನ್ನು ಗುಡುಗಿಸಿತು, ಮತ್ತು ಅವನ ದೇಹದ ತುಂಡುಗಳೆಲ್ಲ ಬಂಡೆಯ ಚೂರುಗಳಂತೆ ಹಾರಿ ಅಲ್ಲಲ್ಲಿ ಬಿದ್ದು ಅಲ್ಲಿದ್ದ ಮರಗಳು ಸೌಧಗಳು ಮತ್ತು ಮಹಾದ್ವಾರಗಳು ಎಲ್ಲವೂ ಉರುಳುರುಳಿ ಬೀಳುವಂತೆ ಮಾಡಿದವು. ॥೩೧॥

ಶಲಭಾಸುರನು ತನ್ನ ಮುಖದಿಂದ ಹೊಲಸು ರಕ್ತವನ್ನು ಅತಿಯಾಗಿ ವಮನ

ಬಾಲಂ ಸಂಸ್ಥಾಪಯಾಮಾಸ ಪ್ರಾದಾತ್ಸ್ತನ್ಯಂ ಚ ಭೋಜನಮ್ ।
ಸಖ್ಯೋ ನಿರೀಕ್ಷ್ಯ ತಂ ಬಾಲಂ ಮೃತಂ ದೈತ್ಯಂ ತಥಾವಿಧಮ್ ॥೩೩॥

'ಸಾಧು, ಸಾಧ್ವಿ'ತಿ ತಾಃ ಪ್ರೋಚುಃ ತಾಂ ಚ ಪರ್ವತಕನ್ಯಕಾಮ್ ।
ಗೃಹಂ ವಿವೇಶ ಗಿರಿಜಾ ತಾಶ್ಚ ಸಖ್ಯೋ ಮುದಾನ್ವಿತಾಃ ॥೩೪॥

ಚಿಕ್ಷಿಪುರ್ದೂರತೋ ದೈತ್ಯಂ ತದಾಜ್ಞಾವಶಗಾ ಗಣಾಃ ।
ಮುಮುಚುಃ ಪುಷ್ಪವರ್ಷಾಣಿ ಬಾಲಂ ದೇವಗಣಾಸ್ತದಾ ॥೩೫॥

---

ಮಾಡಿದನು. ಇದರಿಂದ ಹತ್ತು ಯೋಜನಗಳಷ್ಟು ಸುತ್ತಳತೆಯ ಭೂಮಿಯೂ ನೆನೆದು ಕೆಸರಾಯಿತು. ರಾಕ್ಷಸನು ಮರಣ ಹೊಂದುವ ಕಾಲದಲ್ಲಿ ಅವನ ದೇಹವೂ ದಶಯೋಜನ ವಿಸ್ತೃತವಾಯಿತು. ಇಷ್ಟು ದೊಡ್ಡ ದೇಹ ಉರುಳಿದರೆ ಋಷಿಗಳ ಪರ್ಣ ಕುಟೀರಗಳೂ, ಅಲ್ಲಿದ್ದ ವೃಕ್ಷಗಳೂ ಉಳಿದಾವೇನು ? ಶಲಭಾಸುರನ ಅವನ ತಾರ ಸಮಾಪನಗೊಂಡ ಬಳಿಕ ಪಾರ್ವತಿಯು ಥಟ್ಟನೆ ಮುಂದೆನುಗ್ಗಿ ಕೂಸನ್ನು ಎತ್ತಿಕೊಂಡು ಹೊರಟುಹೋದಳು. ॥೩೨॥

ಬಾಲಕನನ್ನು ತನ್ನ ತೊಡೆಯ ಮೇಲೆ ಸುರಕ್ಷಿತವಾಗಿ ಕುಳ್ಳಿರಿಸಿಕೊಂಡಳು ಮತ್ತು ಅವನಿಗೆ ಸ್ತನ್ಯವನ್ನುಪಾನಮಾಡಿಸಿದಳು. ಅನಂತರ ಉತ್ತಮವಾದ ಭೋಜನವನ್ನು ಮಾಡಿಸಿದಳು. ಇತ್ತ ಸಖಿಯರು ಮೃತನಾಗಿ ಬಿದ್ದಿದ್ದ ಆ ಶಲಭಾಸುರನನ್ನೂ, ಅವನನ್ನು ಸದೆಬಡಿದು ಆನಂದದಿಂದ ಪಾರ್ವತಿಯ ಕೌಂಕುಳಲ್ಲಿ ಕುಳಿತಿರುವ ಬಾಲಕ ಗಣೇಶನನ್ನೂ ನೋಡಿದರು. ॥೩೩॥

'ಸಾಧು, ಸಾಧು' ಎಂದು ಹೊಗಳಿ, 'ನೀನು ಬಹಳ ಭಾಗ್ಯಶಾಲಿ' ಎಂದು ಮಹಾದೇವಿಯನ್ನೂ ಮನಃಪೂರ್ವಕವಾಗಿ ಬಣ್ಣಿಸಿದರು. ಅನಂತರ ಗೌರೀ ದೇವಿಯು ಬಾಲಕನೊಂದಿಗೆ ತನ್ನ ಅಂತರ್ಮಂದಿರವನ್ನು ಪ್ರವೇಶಿಸಿದಳು. ಸಖಿಯರೂ ಸಹ ತಮ್ಮ ತಮ್ಮ ಕಾರ್ಯಗಳಲ್ಲಿ ಆಸಕ್ತರಾದರು. ಎಲ್ಲರೂ ಹರ್ಷಚಿತ್ತರಾಗಿದ್ದರು. ॥೩೪॥

ದೇವ-ದೇವಿಯರ ಆಜ್ಞಾನುವಶವರ್ತಿಗಳಾದ ಪ್ರಮಥಗಣದವರು ಮುಂದೆ

**ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ ' ಶಲಭಾಸುರವಧೋ '**
**ನಾಮೈಕೋನ ನವತಿತಮೋಽಧ್ಯಾಯಸ್ಸಮಾಪ್ತಃ**

---

ಬ ದು ಸತ್ತು ಬಿದ್ದಿದ್ದ ಶಲಭಾಸುರನ ಶವದ ತುಂಡುಗಳನ್ನು ಎತ್ತಿಕೊಂಡು ಹೋಗಿ ಬಹಳದೂರ ಬಿಸುಟಿದರು ರಾಕ್ಷಸನು ಮೃತನಾದುದಕ್ಕೆ ದೇವತಾಗಣದವರು ಬಹಳ ಹರ್ಷಿಸಿ, ಬಾಲಕ; ಗಣೇಶನ ಮೇಲೆ ಪುಷ್ಪವೃಷ್ಟಿಯನ್ನು ಸುರಿಸುವುದರ ಮೂಲಕ ತಮ್ಮ ಆನಂದವನ್ನೂ, ಕೃತಜ್ಞತೆಯನ್ನೂ ವ್ಯಕ್ತಪಡಿಸಿದರು. ॥೩೫॥

ಇಲ್ಲಿಗೆ ಶ್ರೀ ಗಣೇಶಪುರಾಣ ಉತ್ತರಖಂಡದಲ್ಲಿ ' ಶಲಭಾಸುರವಧೆ ' ಎಂಬಲ್ಲಿಗೆ
ಎಂಭತ್ತೊಂಭತ್ತನೆಯ ಅಧ್ಯಾಯಾನುವಾದವು ಮುಗಿದುದು.



॥ ಶ್ರೀ ಗಣೇಶಾಯ ನಮಃ ॥

# ಅಥ ನವತಿತಮೋऽಧ್ಯಾಯಃ

**ಕ ಉವಾಚ :—**

**ತತೋ ದ್ವಾದಶಮಾಸೇ ತು ಗಿರಿಜಾಸುತಮದ್ಭುತಮ್ ।,**
**ಉಪವಿಷ್ಟೋಲಿಭಿಸ್ಸಾರ್ಧಮಂಕೇ ಕೃತ್ವಾ ಸ್ವಲಂಕೃತಮ್ ॥೧॥**

॥ ಶ್ರೀ ಗಣೇಶಾಯ ನಮಃ ॥

## ೯೦ ನೆಯ ಅಧ್ಯಾಯ

ಬ್ರಹ್ಮಾ :—

ಮಹಾಗಣಪತಿಗೆ ಹನ್ನೆರಡನೆಯ ತಿಂಗಳು ನಡೆಯಲಾರಂಭಿಸಿತು. ಬಾಲಕನು ದಿನ-ದಿನಕ್ಕೂ, ಕ್ಷಣ-ಕ್ಷಣಕ್ಕೂ ಬೆಳೆಯಲಾರಂಭಿಸಿದನು. ಜಗದೊಡೆಯನ ನೆಚ್ಚಿನ ಮಗ, ಸ್ವಯಂ ಜಗದೀಶ್ವರ ಎಂದ ಮೇಲೆ ಯಾವ ಕೊರತೆಯುಂಟಾದೀತು? ಸಾಮಾನ್ಯರಾದವರ ಮಕ್ಕಳಾದರೆ ಹೊಟ್ಟೆಗಿದ್ದರೆ, ಬಟ್ಟೆಗಿಲ್ಲ, ಬಟ್ಟೆಗಿದ್ದರೆ ಬೆಚ್ಚಗೆ ಇರಲು ಮನೆಯಿಲ್ಲ, ಹೀಗಿರುವುದು ಬಡವರ ಪರಿಸ್ಥಿತಿ? ಅಂಥವರ ಬೆಳವಣಿಗೆ ಎಂದರೆ ಒಣಗಿರುವುದೇ ಹೊರತು ಸ್ವಲ್ಪವೂ ಪುಷ್ಟಿ ಇರುವುದೇ ಇಲ್ಲ. ಮುಖವನ್ನು ಜಿಗುಟಿ ನೋಡಿದರೆ, ಒಂದು ತೊಟ್ಟು ರಕ್ತವಂತೂ ಇರಲಿ, ನೀರು ಸಹ ಬರುವುದಿಲ್ಲ. ಅನುಕೂಲಸ್ಥರ ಮಕ್ಕಳೆಂದರೆ, ಹಾಗಲ್ಲವಲ್ಲ. ಆಹಾರ-ಆರೈಕೆಗಳು ಸಮೃದ್ಧಿಯಾಗಿರುವುದರಿಂದ ಅವರು ಒಂದಕ್ಕೆ ಹತ್ತರಷ್ಟು ಬೆಳೆಯುವರು. ಅಂಥವರ ಕೆನ್ನೆಗಳನ್ನು ಸವರಿದರೆ ಸಾಕು, ಹಾಲೇ ಉಕ್ಕುವುದು. ಇರಲಿ, ಜಗತ್ಪೋಷಕನಾದ ದೇವನ ಪೋಷಣೆಗೆ ಮತ್ಯಾವ ಲೌಕಿಕ ಸಾಮಗ್ರಿಗಳೂ ಬೇಕಾಗಿರಲಿಲ್ಲವಾಗಿ ಗಣಪತಿಯು ಪರಿಪುಷ್ಟನಾಗಿಯೇ ಇದ್ದನು. ಅವನ ಅದ್ಭುತ ಚರ್ಯೆ, ಧೀರೋದಾತ್ತರಿಗಿರಬೇಕಾದ ಸಕಲ ಸದ್ಗುಣಗಳು ಇವನ್ನೆಲ್ಲ ನೋಡಿ ದೇವಿಯು ಹರ್ಷದಿಂದ ಉಬ್ಬಿಹೋಗಿ

ಕೋಟಿಸೂರ್ಯನಿಭಂ ಕೋಟಿಭೂಷಣೈಶ್ಚ ವಿರಾಜಿತಮ್ ।
ತತಸ್ತಸ್ಯಾ ಮಹಾನಾಸೀದುತ್ಸಾಹೋ ನೃತ್ಯದರ್ಶನೇ ॥೨॥

ಬಾಲಕಾನಾಂ ಹರಸ್ಯಾಥ ಜ್ಞಾತ್ವಾ ವಾಂಛಾಂ ಶಿಶುಸ್ತದಾ ।
'ಥೇ ಥೀ ಥೇ ಥೀ' ತಿ ಶಬ್ದೇನ ನನರ್ತ ಗಿರಿಜಾಸುತಃ ॥೩॥

ಶ್ರುತ್ವಾ ತದೀಯಂ ತಂ ಶಬ್ದಂ ಹರೋ ನರ್ತಿತುಮಾಗತಃ ।

ದ್ದಳು. ಹರ್ಷವೇ ಜೀವನ, ಚಿಂತೆಯೇ ಮರಣ ಎಂಬ ನಾಣ್ನುಡಿ ಸುಳ್ಳಲ್ಲ. ಹೃಷ್ಟಳಾದ ಪರಮೇಶ್ವರಿಯು ಕೂಸಿಗೆ ದಿವ್ಯವಾದ ಉಡಿಗೆ-ತೊಡಿಗೆಗಳನ್ನು ತೊಡಿಸಿ ತೊಡೆಯ ಮೇಲೆ ಕೂರಿಸಿಕೊಂಡು ಸಖಿಯರೊಂದಿಗೆ ವಿನೋದವಾಗಿ ಮಾತನಾಡುತ್ತ ಕುಳಿತಿದ್ದಳು. ॥೧॥

ಭುವನಮನೋಹರನಾದ ಭುವನೇಶ್ವರನ ದೇಹದ ಕಾಂತಿಯು ಕೋಟಿಗಟ್ಟಲೆ ಸೂರ್ಯರು ಉದಿಸಿದಷ್ಟು ಪ್ರಕಾಶಮಾನವಾಗಿದ್ದಿತು. ಅಷ್ಟೇ ಉಜ್ವಲವಾಗಿ ಹೊಳೆವ ಆಭರಣಗಳನ್ನು ದೇವನು ಧರಿಸಿದ್ದನು. ಇದರಿಂದ ಸ್ವಭಾವ ಸುಂದರನಾದ ದೇವನು ಮತ್ತಷ್ಟು ಸುಂದರತಮನಾಗಿ ತೋರಲಾರಂಭಿಸಿದನು. ಸಾಮಾನ್ಯ ಜನರಿಗೇ ಇಷ್ಟು ಸುಂದರನಾಗಿ ತೋರುತ್ತಿದ್ದನೆಂದ ಮೇಲೆ ಸ್ವತಃ ಜನನಿಯಾದವಳಿಗೆ ಮತ್ತೆಷ್ಟು ಸುಂದರನಾಗಿ ಕಂಡಿರಬಹುದು ? ದೇವನನ್ನು ನೋಡಿದ ದೇವಿ, ಗಿರಿಜೆಗೆ 'ಮಗು ಕುಣಿಯುವುದನ್ನು ಒಮ್ಮೆ ನೋಡಬೇಕು' ಎಂಬ ಬಯಕೆಯು ಉತ್ಕಟವಾಗಿ ಉದ್ಭವಿಸಿತು. ಬಾಲಕನ ಕುಣಿತವೆಂದರೆ ದೊಡ್ಡದೊಂದು ಉತ್ಸವವೆಂದೇ ಅವಳು ಗ್ರಹಿಸಿದ್ದಳು. ॥೨।

ಸಮವಯಸ್ಕರಾದ ಇತರ ಬಾಲಕರು, ಪರಶಿವ ಇವರ ಇಚ್ಛೆಯೂ ಇದೇ ಆಗಿದ್ದಿತು. ಇದನ್ನರಿತ ಗಣಪತಿಯು ಒಡನೆಯೇ 'ಥೇ, ಥೀ, ಥೇ, ಥೀ' ಎಂದು ಶಬ್ದಮಾಡುತ್ತ ಪರಮಾನಂದದಿಂದ ಕುಣಿಯಲಾರಂಭಿಸಿದನು. ಈ ಕುಣಿತವು ಪ್ರೇಕ್ಷಕರನ್ನೂ ಕುಣಿಸುವಷ್ಟು ಅತ್ಯದ್ಭುತವಾಗಿದ್ದಿತು. ॥೩।

ಮಹಾಗಣಪತಿಯ ಕುಣಿತದ ಶಬ್ದವನ್ನು ಕೇಳಿದೊಡನೆಯೇ ಪರಶಿವನು ಉತ್ತೇಜಿತನಾಗಿ ತಾನೂ ಬಾಲಕನೊಡನೆ ಕುಣಿಯೋಣವೆನಿಸಲು ಅಲ್ಲಿಗೆ ಧಾವಿಸಿ

ಶಿವಂ ನೃತ್ಯಂತಮಾಲೋಕ್ಯ ನನರ್ತ ಶ್ರೀವರೋಽಪಿ ಚ ||೪||

ತತ ಇಂದ್ರಾದಯೋ ದೇವಾಸ್ತೇ ನರ್ತಿತುಮಾಗತಾಃ |
ಸ ಯಥಾ ನರ್ತತೇ ಬಾಲಸ್ತೇಽಪಿ ನೃತ್ಯಂತಿ ತಾದೃಶಮ್ ||೫||

ದರ್ಶಯಂತಿ ತಥಾ ಭಾವಂ ಸ ಯಥಾ ದರ್ಶಯತ್ಯಪಿ |
ಮನುಷ್ಯಾಃ ಪಶವೋ ವೃಕ್ಷಾ ಯಕ್ಷ-ರಾಕ್ಷಸ-ಪನ್ನಗಾಃ ||೬||

---

ಬಂದನು. ಉಮಾರಮಣನು ನರ್ತಿಸಲಾರಂಭಿಸಿದುದನ್ನು ನೋಡಿ ರಮಾ ರಮಣನೂ ಉತ್ಸಾಹಗೊಂಡು ಇವರೊಂದಿಗೆ ನರ್ತಿಸಲು ತಾನೂ ಮುಂದೆ ಬಂದನು. ||೪||

ಸರ್ವದಾ ಸಚ್ಚಿದಾನಂದ ಸ್ವರೂಪರೆನಿಸಿದ ಪುರಹರ-ಮುರಹರರೇ ಮಹಾ ಗಣಪತಿಯೊಂದಿಗೆ ಕುಣಿಯಲಾರಂಭಿಸಿದ ಬಳಿಕ ಸರ್ವದಾ ಗಾನ-ನರ್ತನಾದಿ ಮನರಂಜಕ ಕಾರ್ಯಕ್ರಮಗಳಲ್ಲೇ ಕಾಲಕಳೆಯುವ ದೇವೇಂದ್ರ ಮೊದಲಾದ ದೇವತೆಗಳು ಈ ನರ್ತನದಿಂದ ಉತ್ತೇಜನಗೊಳ್ಳವೇ ಇದ್ದಾರೆಯೇ ? ಓಡೋಡುತ್ತ ಬಂದು ಈ ನರ್ತನ ಮಹೋತ್ಸವದಲ್ಲಿ ಮಹದುತ್ಸಾಹದಿಂದ ಭಾಗ ವಹಿಸಿದರು. ಬಿಂಬದ ಚಲನ-ವಲನೆಗಳಿಗನುಸರಿಸಿ ಅದರ ಪ್ರತಿಬಿಂಬ, ಅರ್ಥಾತ್ ನೆರಳು ಚಲಿಸುವಂತೆ ವಿನಾಯಕನು ಯಾವ ಯಾವ ಪ್ರಕಾರಗಳಿಂದ ನರ್ತಿಸುತ್ತಿದ್ದನೋ, ಇತರ ನರ್ತಕರೂ ಸಹ ಅದೇ ಪ್ರಕಾರವಾಗಿ ಕುಣಿಯಲಾರಂಭಿಸಿದರು. ||೫||

ಬಾಲಕನು ಯಾವ ಯಾವ ಭಾವಗಳನ್ನು ತೋರಿಸಿದನೋ, ಮತ್ತು ಯಾವ ಯಾವ ಭಂಗಿಗಳಿಂದ ನರ್ತಿಸಿದನೋ ಇತರ ಅನುಯಾಯಿಗಳೂ ಹಾಗೆಯೇ ತಮ್ಮ ಕುಣಿತವನ್ನು ಸರಿಪಡಿಸಿಕೊಂಡರು. ಉತ್ತಮವರ್ಗದವರ ಈ ವಿಹಾರೋತ್ಸವವನ್ನು ಕಂಡು ಮಾನವರು, ಪಶುಗಳು, ಯಕ್ಷ-ರಾಕ್ಷಸ-ಪನ್ನಗರು ಹೆಚ್ಚೇಕೆ ? ಸ್ಥಾವರ ಜೀವಿಗಳಾದ ವೃಕ್ಷಗಳು ಸಹ ತಮ್ಮ ತಮ್ಮ ಸ್ವಭಾವಕ್ಕನುಸರಿಸಿ, ಕುಣಿಯಲಾರಂಭಿಸಿದವು. ||೬||

ಪ ನಯೋ ಮನವೋ ಭೂಪಾ ಭುವನಾನಿ ಚತುರ್ದಶ ।
ಏಕವಿಂಶತಿ ಸ್ವರ್ಗಸ್ಥಾಃ ಸಚೇತನಮಚೇತನಮ್ ॥೭॥

ಬಾಲಪ್ರಭಾವಾನ್ನೃತ್ಯ ಬಾಲಚ್ಛಂದೇನ ಭೂತಲಮ್ ।
ಮುನಿಪತ್ನ್ಯೋ ದೇವಪತ್ನ್ಯೋ ನನೃತುರ್ಗಿರಿಕನ್ಯಯಾ ॥೮॥

ನೂಪುರಾಣಾಂ ಸಿಂಜಿತೇನ ಕ್ಷುದ್ರಘಂಟಾರವೇಣ ಚ ।
ಪಾದಾಘಾತಸ್ಯ ಶಬ್ದೇನ ದಿಶೋ ವಿ-ದಿಶ ಏವ ಚ ॥೯॥

ಗಗನಂ ಪರ್ವತಾ ಆಸನ್ನಾದಯುಕ್ತಾಸ್ತದಾ ಮುನೇ! ।

---

ನಾರದಾದಿ ಮಹಾಮುನಿಗಳು. ಸ್ವಯಂಭು ಮೊದಲಾದ ಚತುರ್ದಶ ಮನುಗಳು, ಹದಿನಾಲ್ಕು ಭುವನಗಳಲ್ಲೂ ರಾಜ್ಯಭಾರಮಾಡುತ್ತಲಿದ್ದ ಅನೇಕ ಮಂದಿ ಭೂಮಿಪಾಲಕರು, ಇಪ್ಪತ್ತೊಂದು ಬಗೆಯ ಸ್ವರ್ಗಲೋಕಗಳಲ್ಲಿದ್ದು ಸುಖವನ್ನನುಭವಿಸುತ್ತಿದ್ದ ಪರಮ ಪುಣ್ಯಶಾಲಿಗಳು, ಇಡೀ ಬ್ರಹ್ಮಾಂಡದಲ್ಲಿದ್ದ ಚೇತನಾಚೇತನ ಸಮಸ್ತ ವಸ್ತುಗಳೂ ॥೭॥

ದುಷ್ಟನಿಗ್ರಹಕ್ಕಾಗಿ ಬಾಲಕನ ರೂಪದಿಂದ ಅವತರಿಸಿಬಂದು, ಲೀಲಾವಿನೋದಗಳನ್ನು ತೋರಿಸುತ್ತಲಿದ್ದ ಬಾಲಕ; ಗಣಪತಿಯ ಆಂತರಿಕ ಪ್ರೇರಣೆಯ ಪ್ರಭಾವದಿಂದ ಕುಣಿಯಲಾರಂಭಿಸಿದವು. ಇತ್ತ ಗಿರಿಕನ್ಯೆಯೂ ನರ್ತಿಸತೊಡಗಿದಳು, ಮುನಿಪತ್ನಿಯರು, ದೇವತಾಸ್ತ್ರೀಯರು ಎಲ್ಲರೂ ಮಹಾದೇವಿಯ ಸಂಗಡ ನರ್ತಿಸಿದರು. ॥೮॥

ಪೈಜಣ(ಕಾಲಂದಿಗೆ)ಗಳ ಕುಲುಕುವಿಕೆ, ಆಭರಣಗಳಿಗೆ ಹಾಗೂ ಅಂಬರಗಳ ಅಂಚುಗಳಿಗೆ ಸೇರಿಸಲ್ಪಟ್ಟ ಸ್ವರ್ಣ ಕಿರುಗಂಟೆಗಳ ಚಲನೆ, ಪಾದಾಘಾತ ಇವುಗಳಿಂದ ಹೊರಹೊಮ್ಮಿದ ಮಂಜುಲ ನಾದವು ಹತ್ತು ದಿಕ್ಕುಗಳನ್ನೂ, ವಿ-ದಿಕ್ಕುಗಳನ್ನೂ ವ್ಯಾಪಿಸಿ, ಪ್ರತಿಧ್ವನಿಯುಂಟಾಗುವಂತೆ ಮಾಡಿತು. ॥೯॥

ಗಗನಮಂಡಲವು ಗಡಗಡ ಗುಡುಗಲಾರಂಭಿಸಿತು. ಕುಲಪರ್ವತಗಳ

---

ವಿವರಣೆಗೆ ಪರಿಶಿಷ್ಟವನ್ನು ನೋಡತಕ್ಕದ್ದು.

ಚಕಂಪೇ ಧರಣೀ ಶೇಷೋ ರವಿಶ್ಚಂದ್ರಶ್ಚ ತಾರಕಾಃ ॥೧೦॥

ತತೋ ನೃತ್ಯಸ್ಯಾತಿಶಯಂ ಜ್ಞಾತ್ವಾ ಗೌರೀ ನ್ಯಷೇಧಯತ್ ।
ನ ಚಕ್ರೇ ಬಾಲಕೋ ವಾಕ್ಯಂ ಯದಾ ಗೌರೀಸಮೀರಿತಮ್ ॥೧೧॥

'ನೂಪುರಾ'ಖ್ಯೋ ಮಹಾದೈತ್ಯೋ ಮಹಾಕೃಷ್ಣತನುರ್ದೃಢಃ ।
ಪಾತಾಲಚರಣೋವ್ಯೋಮಸಂಸ್ಪರ್ಶಿ ದೃಢಮಸ್ತಕಃ ॥೧೨॥

---

ಮಹಾ ಘೋರ ಶಬ್ದವನ್ನು ಮಾಡಿದವು. ಮುನೇ, ವ್ಯಾಸ! ಆ ನರ್ತನದಿಂದುಂಟಾದ ಪರಿಣಾಮವನ್ನು ಏನೆಂದು ಬಣ್ಣಿಸಲಿ ? ಭೂಮಿಯು ಕಂಪಿಸಿ ಹೋಯಿತು, ಮಹಾಶೇಷನನು ತಲೆಯನ್ನು ಕೊಡವಿಬಿಟ್ಟನು- ಸೂರ್ಯ, ಚಂದ್ರ, ತಾರಕ ಮೊದಲಾದ ತೇಜೋಮಂಡಲಗಳು ಗರಗರ ತಿರುಗಲಾರಂಭಿಸಿದವು, ॥೧೦॥

ನರ್ತನವು ಈ ರೀತಿ ಪರಿಣಾಮಗೊಳ್ಳಲಾರಂಭಿಸಿದುದನ್ನು ಗಮನಿಸಿದ ಗಿರಿಜೆಯು ಗಣಪತಿಯ ಸಮೀಪಕ್ಕೆ ಧಾವಿಸಿ ಬಂದು 'ಇಲ್ಲಿಗೆ ನರ್ತನವು ಸಾಕು, ನಿಲ್ಲಿಸಿಬಿಡು' ಎಂದು ಹೇಳಿ, ಕುಣಿತವನ್ನು ತಡೆಗಟ್ಟಲು ಪ್ರಯತ್ನಿಸಿದಳು. ಆದರೆ, ಬಾಲಕನು ತಾಯಿಯ ಸಲಹೆಯನ್ನು ಕೇಳಲಿಲ್ಲ. ಮೊದಲಿನಂತಯೇ ಕುಣಿತವನ್ನು ಮುಂದುವರಿಸಿದನು. ॥೧೧॥

ಇತರರೂ ಸಹ ಹಾಗೆಯೇ ನರ್ತಿಸುತ್ತಲಿದ್ದರು. ಇದೇ ಸರಿಯಾದ ಸಮಯವೆಂದರಿತು ದೈತ್ಯವೀರನೊಬ್ಬನು ಅಲ್ಲಿಗೆ ಬಂದನು. ಆವನ ಹೆಸರು 'ನೂಪುರಾಸುರ' ಅವನು ಬಹಳ ಪ್ರಚಂಡನಾದವನು. ಕಾಡಿಗೆಗಿಂತಲೂ ಕಪ್ಪಾಗಿದ್ದಿತು· ಆತನ ದೇಹ. ಸಹಸ್ರಾರು ದಿಗ್ಗಜಗಳನ್ನೂ ತಡೆದು ನಿಲ್ಲಿಸುವಂತೆ ದೇಹಶಕ್ತಿಯುಳ್ಳವನು. ಆವನ ಆಳತೆಯನ್ನು ವಿವರವಾಗಿ ವರ್ಣಿಸಲಿಕ್ಕೆ ಸಾಧ್ಯವಾಗಲಾರದು. ಆದುದರಿಂದ ಗೋಪ್ಯಾರೆಯಾಗಿಯೇ ಹೇಳಿಬಿಡುವೆನು. ಆವನ ಕಾಲುಗಳು ಪಾತಾಳದಲ್ಲಿರುತ್ತಿದ್ದರೆ, ಆವನ ದಪ್ಪನೆಯ ತಲೆಯು ಅಂತರಿಕ್ಷವನ್ನು ತಗುಲಿಕೊಂಡು ನಿಂದಿರುತ್ತಿದ್ದಿತು. ॥೧೨॥

ಸ ನೂಪುರಾಂತರ್ಗತೋ ದುಷ್ಟಃ ಸೂಕ್ಷ್ಮರೂಪಃ ಶಿಶೋರಸೌ ।
ಸ ಬಾಲಸ್ತಂ ಬಬಂಧಾಶು ಮಾಯಯಾ ಬಲವತ್ತರಮ್ ॥೧೩॥

ಶೃಂಖಲಾಭಿಶ್ಚತುರ್ದಂತಂ ಯಥಾ ಮದಯುತಂ ಗಜಮ್ ।
ಅಂಕೇ ಜಗ್ರಾಹ ತಂ ಬಾಲಂ ಪುನರೇವಾದ್ರಿಕನ್ಯಕಾ ॥೧೪॥

ತದ್ಭಾರೇಣ ಪಿಪೀಡಾಥ ಭೂ-ಭಾರೇಣ ಸಮೇನ ಸಾ ।
ಉವಾಚ ವಚಸಾ ಗೌರೀ

ರಾಕ್ಷಸನೆಂದ ಮೇಲೆ ' ಕಾಮರೂಪಿಯಾದವನು ' ಎಂದು ಪ್ರತ್ಯೇಕವಾಗಿ ಹೇಳಬೇಕಾಗಿರುವುದಿಲ್ಲ. ಅವನು ಅತ್ಯಂತ ದುಷ್ಟಸ್ವಭಾವದವನು. ನೂಪುರನು ತನ್ನ ಶರೀರವನ್ನು ನೀರೂಪಿಯಾದ ವಾಯುವಿಗಿಂತಲೂ ಸೂಕ್ಷ್ಮಗೊಳಿಸಿದನು. ಅನಂತರ ಮೆಲ್ಲಗೆ ಅವರಿಬ್ಬರ ನಡುವೆ ನುಸುಳಿ ಹೋಗಿ ಗಣಪತಿಯನ್ನು ಸಮೀಪಿಸಿದನು. ಬಾಲಕನು ಕಾಲುಗಳಲ್ಲಿ ಕಾಲಂದಿಗೆಗಳನ್ನು ಧರಿಸಿದ್ದನಷ್ಟೆ? ರಾಕ್ಷಸನು ಬಲವತ್ತರವಾದ ತನ್ನ ಮಾಯಾಪ್ರಭಾವದಿಂದ ಸದ್ದಿಲ್ಲದೆ ಅವುಗಳಲ್ಲಿ ಸೇರಿಕೊಂಡುಬಿಟ್ಟನು' ಮತ್ತು ದೇವನು ತನ್ನ ಕಾಲುಗಳನ್ನು ಅತ್ತಿತ್ತ ಚಲಿಸದಿರುವಂತೆ ಬಂಧಿಸಿಬಿಟ್ಟನು. ಈ ಬಂಧನವು ನಿಮಿಷ-ನಿಮಿಷಕ್ಕೂ ಬಿಗಿಯಾಗತೊಡಗಿತು. ॥೧೩॥

ಮದೋನ್ಮತ್ತವಾದ ಚತುರ್ದಂತವುಳ್ಳ ಮತ್ತ ಮತಂಗಜಗಳನ್ನು ಕಟ್ಟಲು ಉಪಯೋಗಿಸುವ ಕಬ್ಬಿಣದ ಸರಪಣಿಗಳಿಂದ ಕಟ್ಟಿಹಾಕಿದಷ್ಟು ಭಾಸವಾಯಿತು, ಬಾಲಕನಿಗೆ ! ಆಗ ಬಾಲಕನು ಸ್ವಲ್ಪ ಕಾಲ ಕುಣಿತವನ್ನು ನಿಲ್ಲಿಸಿ ' ಇದೇನೆ'ಂದು ಚಿಂತಿಸುತ್ತ ಹಾಗೆಯೇ ನಿಂತನು. ಆಗ ಪಾರ್ವತಿಯು ಮುಂದೆ ಹೋಗಿ ಬಾಲಕನನ್ನು ಭರದಿಂದ ಎತ್ತಿಕೊಂಡು ಒಂದು ತೊಡೆಯ ಮೇಲೆ ಕುಳ್ಳಿರಿಸಿಕೊಂಡಳು. ॥೧೪॥

ಬಾಲಕನ ಭಾರವು ಮಿತಿಯನ್ನು ಮೀರಿ ಹೋಗಿದ್ದಿತು. ಇದನ್ನು ತಡೆದುಕೊಳ್ಳುವುದು ಅದ್ರಿಕನ್ಯೆಗೆ ಸರ್ವಾತ್ಮನಾ ಸಾಧ್ಯವಾಗಲಿಲ್ಲ. ಕೂಸನ್ನು ಎತ್ತಿ

ಗೌರ್ಯುವಾಚ :—

ಕಥಂ ಗುರುತರೋ ಭವಾನ್? । ॥೧೫॥

ಇದಾನೀಮೇವ ಜಾತೋಽಸಿ, ತಸ್ಮಾದುತ್ತರ ಮೇಽಂಕತಃ ।
ಮಮ ಪ್ರಾಣಾ ಗಮಿಷ್ಯಂತಿ ತವ ಭಾರೇಣ ಬಾಲಕ ! ॥೧೬॥

ಕ ಉವಾಚ :—

ಶ್ರುತ್ವಾ ಮಾತುರ್ವಚೋ ಬಾಲಃ ಪೀಡಿತಾಂ ತಾಂ ಭೃಶಂ ತದಾ ।
ಉತ್ತತಾರ ಬಲಾದಂಕಾದ್ದ್ವಧಾವಾಂಘ್ರಿಯುಗಂ ಶಿಶುಃ ॥೧೭॥

---

ಕೊಂಡುದು ಇಡೀ ಭೂ-ಮಂಡಲವನ್ನೇ ಎತ್ತಿಕೊಂಡಂತಾಯಿತು, ಗೌರಿಗೆ. ಆಗ ಯಾತನೆ ಪಡುತ್ತ ಬಾಲಕನನ್ನು ಕುರಿತು ಹೀಗೆಂದು ನುಡಿದಳು.

ಗೌರೀ :—

ಮಗು, ಗಣಪತೇ! ಇದೇನು ಇದ್ದಕ್ಕಿದ್ದಂತೆಯೇ ಬಹಳ ಭಾರವಾಗಿ ಹೋಗಿರುವೆಯಲ್ಲ? ಇದಕ್ಕೆ ಕಾರಣವಾದರೂ ಯಾವುದು ? ॥೧೫॥

ನೀನು ಈಗಿನ್ನೂ ಜನಿಸಿದ ಶಿಶು. ಇದೇನು ಅತ್ಯಲ್ಪ ಕಾಲದಲ್ಲೇ ಇಷ್ಟು ಭಾರವಾಗಿ ಬಿಟ್ಟಿರುವೆ ? ಮಹರಾಯ ! ಏನಾದರೂ ಆಗಲಿ, ಮೊದಲು ತೊಡೆಯ ಮೇಲಿನಿಂದ ಕೆಳಕ್ಕಿಳಿಯಪ್ಪ ! ಬಾಲಕ ! ನಿನ್ನ ಭಾರದಿಂದ ನನ್ನ ಪ್ರಾಣಗಳು ಹೊರಟುಹೋಗುವಂತೆ ಆಗಿಹೋಗಿದೆ. ॥೧೬॥

ಬ್ರಹ್ಮಾ :—

ನಿಜವಾಗಿಯೂ ಪಾರ್ವತೀದೇವಿಯ ಪರಿಸ್ಥಿತಿಯು ಪರಿಶೋಚನೀಯವಾಗಿದ್ದಿತು. ತಾಯಿಯ ಮಾತುಗಳನ್ನು ಕೇಳಿ, ಬಾಲಕನು ಅತ್ತ ತಿರುಗಿ ತಾಯಿಯ ದೀನ ಮುಖವನ್ನು ನೋಡಿದನು. ಕರುಳು 'ಚುರ್' ಎಂದಿತು. ಒಡನೆಯೇ ತೊಡೆಯ ಮೇಲಿನಿಂದ ಕೆಳಗೆ ಇಳಿದನು. ಮತ್ತು ಕಾಲುಗಳೆರಡನ್ನೂ ಬಲವಾಗಿ ಒಮ್ಮೆ ಕೊಡವಿಬಿಟ್ಟನು. ॥೧೭॥

ತತೋ ನಿಸ್ಸೃತ್ಯ ದೈತ್ಯೋಽಸೌ ಹ್ಯಾಕಾಶೇ ಬಭ್ರಮು ಪಕ್ಷಿವತ್ ।
ತಮಸಾ ವ್ಯಾಪಿ ಭೂಃ ಸರ್ವಾ ಶೇನ ಸಂಛಾದಿತೇ ರವೌ ॥೧೮॥

ಸೋಽಕಸ್ಮಾನ್ನಿಪಪಾತೋರ್ವ್ಯಾಂ ಶತಧಾ ಚಾಭವತ್ಖಲಃ ।
ತತಸ್ತೇ ಮುನಯೋ ದೇವಾಃ ಪರಮಾನಂದನಿರ್ವೃತಾಃ ॥೧೯॥

ತುಷ್ಟುವುರ್ಬಾಲರೂಪಂ ತಂ ಪರಮಾತ್ಮಾನಮವ್ಯಯಮ್ ।
ದೇವರ್ಷಯ ಊಚುಃ :—
ನ ಜಾನೀಮೋ ವಯಂ ದೇವ! ರೂಪಾಣಿ ತವ ಯನ್ಮಹಃ ॥೨೦॥

---

ಇದರ ರಭಸಕ್ಕೆ ನೂಪುರದೊಳಗೆ ಸೇರಿಕೊಂಡಿದ್ದ ದೈತ್ಯನು ಒಮ್ಮೆಲೇ ಹೊರಕ್ಕೆ ಪುಟಿದುಬಿದ್ದನು. ಅವನು ಸ್ವಲ್ಪವೇನಾದರೂ ಜಾಗರೂಕನಾಗಿದ್ದರೆ ಎದುರಿಗಿರುವ ಪರ್ವತಕ್ಕೋ, ಬಂಡೆಗೋ ತಗುಲಿ ಪುಡಿ ಪುಡಿಯಾಗಬೇಕಾಗಿದ್ದಿತು. ಅಷ್ಟರಲ್ಲಿ ರಾಕ್ಷಸನು ಸಾವರಿಸಿಕೊಂಡು ಅಂತರಿಕ್ಷಕ್ಕೆ ನೆಗೆದು ಹೋಗಿ ಪಕ್ಷಿಯಂತೆ ಹಾರತೊಡಗಿದನು. ಇವನ ದೇಹವು ಅಪರಿಮಿತ ಪ್ರಮಾಣವುಳ್ಳದಾದುದರಿಂದ ರವಿಬಿಂಬವನ್ನೇ ಸಂಪೂರ್ಣವಾಗಿ ಮುಚ್ಚಿಹಾಕಿತು. ಸೂರ್ಯನೇ ಕಾಣದಂತಾಗಲು ಭೂ-ಭಾಗದಲ್ಲೆಲ್ಲ ಕತ್ತಲೆಯು ಆವರಿಸಿ ನಿಂತಿತು. ॥೧೮॥

ಎಲ್ಲೂ ನೆಲೆಸಿಕ್ಕದೆ ಹೀಗೆಯೇ ಹಾರಾಡುತ್ತಿರುವಾಗ, ಅಕಸ್ಮಾತ್ತಾಗಿ ಅವನ ಉಡ್ಡಾಣಶಕ್ತಿಯು ಕುಂಠಿತವಾಯಿತು. ತತ್‌ಕ್ಷಣವೇ ಉರುಳುರುಳಿ ನೆಲಕ್ಕೆ ಧೊಪ್ಪನೆ ಬಿದ್ದು ಬಿಟ್ಟನು. ಅಷ್ಟು ಎತ್ತರದಿಂದ ಬಿದ್ದ ಹೊಡೆತಕ್ಕೆ ಖಲನ ದೇಹವು ನೂರಾರು ಹೋಳುಗಳಾಯಿತು. ಆಗ ,ದೇವತೆಗಳೂ, ಮುನಿಗಳೂ, ಎಲ್ಲರೂ ಪರಮಾನಂದತುಂದಿಲರಾದರು ಎಲ್ಲರಿಗೂ ಒಂದು ಬಗೆಯ ಆತಂಕ ಪರಿಹಾರವಾದಂತೆ ಆಯಿತು. ॥೧೯॥

ಆಗ ಎಲ್ಲರೂ ಒಟ್ಟಿಗೆ ಸೇರಿ ಪರಮಾತ್ಮನೂ, ಅವ್ಯಯ ಸ್ವರೂಪನೂ ಆದ ಬಾಲಕನನ್ನು ಮನಃಪೂರ್ತಿಯಾಗಿ ಹೀಗೆಂದು ಸ್ತುತಿಸಲಾರಂಭಿಸಿದರು.
ದೇವತೆಗಳು ಹಾಗೂ ಋಷಿಗಳು :—

ಭಗವನ್, ದೇವೇಶ! ನೀನು ಮಹಾಮಹಿಮನು. ಸಮಯೋಚಿತವಾಗಿ

ಲೀಲಾ, ಮಾಯಾಶ್ಚ ವಿವಿಧಾ ದೈತ್ಯ-ದಾನವನಾಶಿಕಾಃ ।
ಚರಣಾತ್ತ್ಯಜಿತೋ ದೈತ್ಯೋ ರವಿಮಂಡಲಲೋಪಕಃ ॥೨೦॥

ಭ್ರಮಿತ್ವಾ ವ್ಯೋಮ ನಿ-ಭೃಶಂ ಪತಿತಃ ಶತಧಾಭವತ್ ।
[1]ಸಂಹೃತ್ಯ ಜೀವಸಂಘಾತಾನ್ ವೃಕ್ಷಾನಾಶ್ರಮ-ಪರ್ವತಾನ್ ॥ ೨೨॥

ತವ ನೃತ್ಯಂ ತತೋ ವೀಕ್ಷ್ಯ ಸರ್ವೇ ನೃತ್ಯಂ ಪ್ರ-ಚಕ್ರಿರೇ ।

---

ಅನೇಕ ಬಗೆಯ ರೂಪಗಳನ್ನು ನೀನು ಧರಿಸಬಲ್ಲೆ. ಅಂತಸ್ತೇಜಸ್ಸ್ವರೂಪನಾದ ನಿನ್ನನ್ನು ತತ್ತ್ವತಃ ತಿಳಿಯಲು ಪಾಮರರಾದ ನಾವು ಎಂದಿಗಾದರೂ ಸಮರ್ಥರಾದೇವೆಯೇ ? ॥೨೦॥

ಜಗತ್ತಿಗೆ ನೀನು ತೋರಿಸುವ ಅದ್ಭುತ ಲೀಲೆಗಳನ್ನೂ, ಮಾಯಾಮಯ ಕೃತ್ಯಗಳನ್ನೂ ಇಷ್ಟೆಂದು ನಿರ್ಣಯಿಸಿ ಹೇಳಲು ಸಾಧ್ಯವಿಲ್ಲ. ನಿನ್ನ ಈ ಎಲ್ಲ ಬಗೆಯ ಭಿನ್ನರೂಪಗಳೂ, ದುಷ್ಟರೂ ಜಗದ್ಭಾರಭೂತರೂ ಆದ ದೈತ್ಯ-ದಾನವರ ವಿದಾರಣಕ್ಕಾಗಿಯೇ ಹೊರತು, ಬೇರೆ ಯಾವ ಸ್ವಾರ್ಥಸಾಧನೆಗೂ ದೇವನಿಗೆ ಇರುವುದಿಲ್ಲ. ಪ್ರಕೃತ ಇಂತಹ ಅದ್ಭುತಾಕಾರನಾದ ಈ ದೈತ್ಯನನ್ನು ಕೇವಲ ಕಾಲಿನಿಂದಲೇ ಚಂಡಿನಂತೆ ಒದೆದು ಅಂತರಿಕ್ಷಕ್ಕೆ ಹಾರಿಸಿಬಿಟ್ಟೆಯಲ್ಲವೇ ? ಅವನ ಆಕೃತಿ ಸಾಮಾನ್ಯವಾದುದೇ ? ರವಿಮಂಡಲವನ್ನೇ ಸಂಪೂರ್ಣವಾಗಿ ಮುಚ್ಚಿಬಿಡುವಂತಹದು. ॥೨೧॥

ದೈತ್ಯನು ಅಂತರಿಕ್ಷದಲ್ಲೆಲ್ಲ ಸುತ್ತಾಡಿ ಎಲ್ಲಿಯೂ ಸುರಕ್ಷಿತವಾದ ಸ್ಥಳವು ದೊರೆಯದೆ ಹೋದ್ದರಿಂದ ಬಿದ್ದು ನೂರಾರು ಹೋಳುಗಳಾಗಿ ಹೋದನು. ಪಾಪಿಗಳು ದೌಷ್ಟ್ಯವನ್ನು ತಾವು ಮೃತರಾದರೂ ಬಿಡುವುದಿಲ್ಲ ಎಂಬುದಕ್ಕೆ ಇವನೇ ಸಾಕ್ಷಿಯಾಗಿದ್ದಾನೆ. ಇವನ ಜಡದೇಹವು ಸಹ ಆಶ್ರಮಗಳು, ಸಮೀಪದಲ್ಲಿರುವ ವೃಕ್ಷಗಳು ಇವುಗಳ ಮೇಲೆ ಬಿದ್ದು ಅವನ್ನು ಉನ್ಮೂಲನಗೊಳಿಸಿ ದ್ವೇಷವನ್ನು ಸಾಧಿಸಿಕೊಂಡಿವೆ. ಇವನ ದೇಹಪತನದಿಂದ ಎಷ್ಟು ಮಂದಿ ಅನ್ಯಾಯವಾಗಿ ಸತ್ತುಹೋದರು ? ಪರ್ವತಗಳು ಸಹ ನುಚ್ಚು ನುಗ್ಗಾಗಿ ಹೋದವು ? ॥೨೨॥

ಭಗವನ್ ! ಹೆಚ್ಚೇನು ಹೇಳೋಣ, ನಿನ್ನ ನರ್ತನವನ್ನು ನೋಡಿ ಪರವಶ

---

ವಿವರಣೆಗೆ ಪರಿಶಿಷ್ಟವನ್ನು ನೋಡಿ.

ಕ ಉವಾಚ :—

ತತಸ್ತೇ ಪ್ರಪುಜುಃ ಸರ್ವೇ ತಂ ಬಾಲಂ ವಿಶ್ವರೂಪಿಣಮ್ ॥೨೩॥

ನೃತ್ಯೋತ್ಸವೇ ನಿವೃತ್ತೇ ತು ಗೌತಮಾದೀನ್ ವಿಸೃಜ್ಯ ಸಾ ।
ಪಾರ್ವತೀ ಬಾಲಮಾದಾಯ ಲಾಲಯಿತ್ವಾ ಸ್ತನಂ ದದೌ ॥೨೪॥

ಸ್ತ್ರಿಯಸ್ಸರ್ವಾ ವಿಸೃಜ್ಯಾಥ ವಿವೇಶ ನಿಜಮಂದಿರಮ್ ।
ತತಃ ಪುನಃ ಕದಾಚಿತ್ಸ ಮುನಿಬಾಲೈಸ್ಸಮನ್ವಿತಃ ॥೨೫॥

---

ರಾಗಿ ಹೋದ ತ್ರಿಮೂರ್ತಿಗಳೇ ಮೊದಲಾಗಿ ಎಲ್ಲ ದೇವತೆಗಳೂ ಕುಣಿಯಲಾರಂಭಿಸಿದರಲ್ಲವೇ ? ನಿನ್ನದು ಎಂತಹ ಅನಿರ್ವಚನೀಯವಾದ ಆಕರ್ಷಣೆ ?

ಬ್ರಹ್ಮಾ :—

ಅನಂತರ ಎಲ್ಲರೂ ಅಹಮಹಮಿಕೆಯಾಬಂದು ವಿಶ್ವರೂಪಿಯಾದ ಬಾಲಕನಿಗೆ ಪ್ರಣಮಿಸಿ, ಸಕಲೋಪಚಾರಗಳಿಂದಲೂ ಪೂಜಿಸಿದರು. ॥೨೩॥

ನೂಪುರಾಸುರನ ಗದ್ದಲದಿಂದಾಗಿ ನರ್ತನೋತ್ಸವವು ಮುಗಿದುಹೋಯಿತು. ಇದಕ್ಕಾಗಿ ಬಂದಿದ್ದ ಗೌತಮಾದಿ ಮಹರ್ಷಿಗಳನ್ನೂ, ಇತರ ದೇವತೆಗಳನ್ನೂ, ಗೌರಿಯು ಗೌರವಿಸಿ ಅವರವರ ನಿಲಯಗಳಿಗೆ ಕಳಿಸಿಕೊಟ್ಟಳು. ತನ್ನ ಮಗನನ್ನು ಎತ್ತಿಕೊಂಡು ಅಂತರ್ಗೃಹಕ್ಕೆ ಹೊರಟು ಹೋದಳು. ಒಳಕ್ಕೆ ಹೋದ ಬಳಿಕ ಶಿಶುವನ್ನು ಎದೆಗವಚಿಕೊಂಡು ಸಂತೋಷದಿಂದ ಅದಕ್ಕೆ ಸ್ತನ್ಯವನ್ನು ಪಾನ ಮಾಡಿಸಿದಳು. ॥೨೪॥

ನರ್ತನ ಸಮಾರಂಭದಲ್ಲಿ ಮುನಿಪತ್ನಿಯರು, ದೇವತಾಸ್ತ್ರೀಯರು ಮೊದಲಾದವರೆಲ್ಲರೂ ತನ್ನೊಂದಿಗೆ ಭಾಗವಹಿಸಿದ್ದರಷ್ಟೆ ? ಅವರಿಗೆಲ್ಲ ಮಂಗಲದ್ರವ್ಯಗಳನ್ನು ಕೊಟ್ಟು, ಅವರನ್ನೂ ಅವರವರ ಮನೆಗಳಿಗೆ ಕಳಿಸಿಕೊಟ್ಟಳು. ಅನಂತರ ತನ್ನ ಕಾರ್ಯಗಳನ್ನು ಗಮನಿಸಲು ಅಂತಃಪುರಕ್ಕೆ ಬಾಲಕನೊಡನೆ ಹೊರಟು ಹೋದಳು. ಹೀಗೆಯೇ

ಗೃಹಾದ್ಬಹಿಃ ಕ್ರೀಡನಾರ್ಥಂ ಯಯೌ ಚಿಕ್ರೀಡ ಲೀಲಯಾ ।
ಮಲ್ಲಯುದ್ಧಂ ಚ ತೇ ಚಕ್ರುರ್ದ್ವಂದ್ವಶೋಽನೇಕಧಾ ಬಹು ॥೨೬॥

ಪಾತಯಾಮಾಸುರಾಗೃಹ್ಯ ಶಿಖಾಯಾಂ ತೇ ಪರಸ್ಪರಮ್ ।
ಜಘ್ನುಶ್ಶಿರಶ್ಶಿರೋಭಿಶ್ಚ ಜಾನುಭಿರ್ಜಾನುನೀ ತಥಾ ॥೨೭॥

ಕೂರ್ಪರಂ ಕೂರ್ಪರೇಣೈವ ಚರಣಂ ಚರಣೇನ ಚ ।
ರರುಹುಃ ಪೃಷ್ಠಭಾಗಂ ತೇ ಸ್ಕಂಧಭಾಗಂ ಪರಸ್ಪರಮ್ ॥೨೮॥

ಕೆಲವು ಕಾಲ ಕಳೆಯಿತು. ಒಮ್ಮೆ ಬಾಲಕ; ಗಣಪತಿಯು ಮುನಿಬಾಲಕರ ಸಂಗಡ ಆಟವಾಡಲು ಹೋದನು. ॥೨೫॥

ಕೆಲವು ಕಾಲ ಅಂಗಳದಲ್ಲೇ ಆಟವಾಡುವರು, ಮತ್ತೆ ಕೆಲವು ವೇಳೆ ಹೊರಕ್ಕೆ ಹೋಗಿ ಮೈದಾನಗಳಲ್ಲಿ ಆಟವಾಡುವರು. ಈ ಸಾರೆ ಎಲ್ಲರೂ ಮನೆಯಿಂದ ಹೊರಗಡೆ ಹೋಗಿ ಆಟವಾಡಬೇಕೆಂದು ತೀರ್ಮಾನಿಸಿದರು. ಅಂತೆಯೇ ಹೊರಟ ಹೋದರು. ಇತರ ಹುಡುಗರಿಗಿಂತಲೂ ಗಣಪತಿಯು ವಯಸ್ಸಿನಲ್ಲಿ ಬಹಳ ಚಿಕ್ಕವನಾದರೂ ದೊಡ್ಡವರೊಂದಿಗೆ ಸಮನೆನಿಸಿಕೊಂಡು ಲೀಲೆಯಿಂದ ಬಹುವಿಧವಾಗಿ ಆಟವಾಡಿದನು. ಹುಡುಗರೆಲ್ಲರೂ ಸೇರಿ ತಮ್ಮ ತಮ್ಮ ವಯೋಽನುಗುಣವಾಗಿ ಜೊತೆಯುವರನ್ನು ಆರಿಸಿಕೊಂಡು ಮಲ್ಲಯುದ್ಧವನ್ನಾಡಲು ಉಪಕ್ರಮಿಸಿದರು. ಇವರೆಲ್ಲ ಚಿಕ್ಕವಯಸ್ಸಿನವರಾದರೂ ಪರಸ್ಪರರನ್ನು ಹೊಂಚು ಕಾಯುವುದು, ದೊಡ್ಡ ಜಟ್ಟಿಗಳಂತೆ ಅನೇಕ ಪಟ್ಟುಗಳನ್ನು ಹಾಕಲು ಪ್ರಯತ್ನಿಸುವುದು, ಸೆಡ್ಡು ಹೊಡೆಯುವುದು ಈ ಕ್ರಮವೆಲ್ಲ ದೊಡ್ಡವರಿಗಿಂತಲೂ ಚನ್ನಾಗಿದ್ದಿತು. ಮತ್ತು ನೋಡಲು ಬಹಳ ಉತ್ಸಾಹಕರವಾಗಿದ್ದಿತು. ॥೨೬॥

ಈ ಬಾಲಯೋಧರು ಒಬ್ಬರ ಜಟ್ಟನ್ನು ಮತ್ತೊಬ್ಬರು ಹಿಡಿದು ತಮ್ಮ ಕಾಲಿನಿಂದ ಅವರ ಕಾಲಿನ ನಿಲುವನ್ನು ತಪ್ಪಿಸಿ ಕೆಳಕ್ಕೆ ಕೆಡಹುವರು. ಒಬ್ಬರ ತಲೆಗೆ ಮತ್ತೊಬ್ಬರು ತಮ್ಮ ತಲೆಗಳನ್ನು ಘಟ್ಟಿಸುವರು. ಮೊಣಕಾಲುಗಳಿಂದ ಹೊಡೆಯುವರು ಕೂರ್ಪರಗಳಿಂದ ಕೂರ್ಪರಗಳನ್ನು ತಿವಿದಾಡಿದರು, ಕಾಲುಗಳಿಂದ

ಲತ್ತಾಪ್ರಹಾರಾನ್ನಿರ್ಜಘ್ನುರುದರೇ ಮಸ್ತಕೇಽಪಿ ಚ ।
ಕೇಚಿಚ್ಚ ಪುಪುಜುರ್ಬಾಲಂ ಗಂಧ- ಪುಷ್ಪಾಕ್ಷತಾದಿಭಿಃ ॥೨೯॥

ಕೇಚಿನ್ನೀತ್ವಾಶ್ರಮಪದಂ ಭೋಜಯಾಮಾಸುರಂಧಸಾ ।
ಸಮಾಶ್ಚಕ್ರುಃ ಪದಯುಗಂ ಕೇಚಿನ್ಮಾಲಾಂ ದದುಃ ಶುಭ ಮ್ ॥೩೦॥

ಕಾಲುಗಳನ್ನು ಒದೆದಾಡಿದರು. ಒಬ್ಬರ ಬೆನ್ನಿನ ಮೇಲೆ ಮತ್ತೊಬ್ಬರು ಹತ್ತಿ ಸವಾರಿ ಮಾಡಿದರು. ಮತ್ತೆ ಕೆಲವರು ಎರಡುಮೂರು ಹೆಗಲ ಮೇಲೆ ಹತ್ತಿ ಕುಳಿತು 'ಕೊಸುಮರಿ ಬೇಕೇ' ಎಂದು ಕೂಗಲಾರಂಭಿಸಿದರು. ಈ ವಿನೋದಗಳು ಪರಸ್ಪರ ನಡೆಯಲಾರಂಭಿಸಿದವು. ॥೨೭–೨೮॥

ಕೈಗಳನ್ನು ಮುಷ್ಟಿಕಟ್ಟಿ ಒಬ್ಬೊಬ್ಬರ ಎದೆಗೂ ನೆತ್ತಿಗೂ ಗುದ್ದಿದರು. ಮತ್ತೆ ಕೆಲವು ಕೈಲಾಗದ ಸಾತ್ತ್ವಿಕ ಹುಡುಗರು ಗಣಪತಿಯನ್ನು ದೇವನಂತೆ ಒಂದೆಡೆ ಕುಳ್ಳಿರಿಸಿ, ಪೂಜೆ ಮಾಡತೊಡಗಿದರು. ಅಲ್ಲಲ್ಲಿ ಬೆಳೆದಿದ್ದ ಪುಷ್ಪಗಳು ಗರಿಕೆ ಇವನ್ನು ಹುಡುಕಿ ತಂದರು. ಸಣ್ಣ ಸಣ್ಣ ಕಲ್ಲು ಹರಳುಗಳನ್ನೇ ಮಂತ್ರಾಕ್ಷತೆಯಂತೆ ಉಪಯೋಗಿಸಿದರು. ಹುಡಿಮಣ್ಣೇ ಅವರ ದೃಷ್ಟಿಯಲ್ಲಿ ಅರಸಿನ-ಕುಂಕುಮ ಗಂಧಗಳಾಗಿ ಪರಿಣಮಿಸಿದವು. ಹುಡುಗರೆಂದ ಮೇಲೆ ಹೇಗೆಯೋ ಆಟವಾಡಲಿ, ಅದು ಬಹಳ ಚಂದವಾಗಿಯೇ ಕಾಣಿಸುವುದು. ॥೨೯॥

ಕೆಲವು ಬಾಲಕರು ಗಣಪತಿಯನ್ನು ತಮ್ಮ ತಮ್ಮ ಆಶ್ರಮಗಳಿಗೆ ಕರೆದುಕೊಂಡು ಹೋಗಿ ಸಿದ್ಧವಾಗಿದ್ದ ಅನ್ನದಿಂದ ಭೋಜನವನ್ನು ಮಾಡಿಸಿದರು. ಹುಡುಗರ ಪೈಕಿ ಮತ್ತೆ ಕೆಲವರು ಬಾಲಕನ ಬಳಿಗೆ ಬಂದು ಅವನ ಎರಡೂ ಕಾಲುಗಳನ್ನು ಹಿಡಿದುಕೊಂಡು ನಮಸ್ಕರಿಸಿದರು. ಹಿರಿಯರು ದೇವತಾರ್ಚನೆಗಾಗಿಯೂ, ಅಲಂಕಾರಾರ್ಥವಾಗಿಯೂ ರಚಿಸಿಟ್ಟುಕೊಂಡಿದ್ದ ಸುಂದರವಾದ ಪುಷ್ಪ ಮಾಲಿಕೆಗಳನ್ನು ಅವರಿಗೆ ತಿಳಿದೋ ತಿಳಿಯದೆಯೋ ಅಂತೂ ತಂದು ದೇವನಿಗೆ ಸಮರ್ಪಿಸಿದರು. ॥೩೦॥

ಅವಿಪುತ್ರಸ್ವರೂಪೇಣ ದೈತ್ಯಃ ಸಿಂಧುಪ್ರಣೋದಿತಃ ।
ಯಂ ದೃಷ್ಟ್ವಾ ಭಯಮಭ್ಯೇತಿ ದಂಡಪಾಣಿರ್ಭಯಾನಕಃ ॥೩೦॥

ಸ್ವಬಲೇನ ಜಘಾನಾರೀಂಸ್ತೀಕ್ಷ್ಣಧಾರನಖೋ ಬಲೀ ।
ಬಿರುದಂ ಬಾಹುದೇಶೇ ಸ ಜಿತ್ವಾ ಸರ್ವಾನ್ ಬಬಂಧ ಹ ॥೩೧॥

ವಿಶಾಲಾಕ್ಷೋ ಬೃಹಚ್ಛೃಂಗೋ ಮಹಾಗೋತ್ರವಿದಾರಣಃ ।
ಪುಚ್ಛಾಘಾತೇನ ಜೀವಾನಾಂ ಯಶ್ಚಕ್ರೇ ನಾಶನಂ ಖಲಃ ॥೩೨॥

---

ಈ ಆಟದ ಸಮಯದಲ್ಲಿ ಅಲ್ಲಿಗೊಬ್ಬ ದುಷ್ಟ ದೈತ್ಯನು ಬಂದನು. ಅವನನ್ನು ಉದ್ದಿಶ್ಯವಾಗಿ ಸಿಂಧು ದೈತ್ಯನು ಗಣಪತಿಯನ್ನು ಕೊಲ್ಲುವುದಕ್ಕಾಗಿ ಪ್ರೇರಿಸಿ ಕಳಿಸಿದ್ದನು, ಅವನು ಈ ಬಾಲಕರ ಸಮೀಪಕ್ಕೆ ಬರುವಾಗ ಒಂದು ಆಡಿನ ಮರಿಯಂತೆ ಸೌಮ್ಯವಾದ ಆಕೃತಿಯನ್ನು ಧರಿಸಿ ಬಂದಿದ್ದನು. ಸ್ವಭಾವತಃ ಇವನು ಮೇಷದ ಆಕೃತಿಯವನೇ. ನೋಡಲು ಜನರ ದೃಷ್ಟಿಯಿಂದ ಇವನು ಆಡಿನ ಮರಿಯಂತೆ ಕಂಡುಬಂದರೂ ಅವನ ಶಕ್ತಿಯು ಪರಮಾದ್ಭುತವಾದುದು. ಆದುದರಿಂದ ಅವನನ್ನು ನೋಡಿದರೆ, ಲೋಕವನ್ನೆಲ್ಲ ಭಯಪಡಿಸುವ ದಂಡಪಾಣಿ ; ಯಮನು ಸಹ ಭಯಪಡುತ್ತಲಿದ್ದನು. ||೩೦||

ಇವನ ಉಗುರುಗಳು ನಿಶಿತವಾದ ನಿಸ್ತ್ರಿಂಶದಂತೆ ಇದ್ದುದರಿಂದ ಯಾತ್ತಾವ ಆಯುಧಗಳ ಸಹಾಯವಿಲ್ಲದೇ, ಕೇವಲ ಉಗುರುಗಳಿಂದಲೇ ಶತ್ರುಗಳನ್ನೆಲ್ಲ ಸೀಳಿ ಹಾಕಿ ಜಯವನ್ನು ಗಳಿಸಿದವನು. ಇಷ್ಟೇ ಅಲ್ಲದೇ 'ಅಸಹಾಯಶೂರ' ಎಂಬ ಬಿರುದನ್ನು ಬರೆದಿರುವ ಪಟ್ಟಿಯನ್ನು ತನ್ನ ಬಾಹುವಿಗೆ ಕಟ್ಟಿಕೊಂಡು ಮೆರೆಯುತ್ತಿದ್ದವನು. ಈ ಬಿರುದು ಅವನ ಶಕ್ತಿ-ಸಾಮರ್ಥ್ಯಗಳಿಂದ ಲಬ್ಧವಾದುದು. ಅವನು ಅಂತಹ ಸಾಹಸಿಗನೇ ಸರಿ- ||೩೧||

ರಾಕ್ಷಸನು ಮೆಡ್ಡೆಗಣ್ಣಿನವನು. ನೀಳವಾಗಿಯೂ, ದೃಢವಾಗಿಯೂ ಹಾಗೂ ಮೊನಚಾಗಿಯೂ ಇರುವ ಇವನ ಕೊಂಬುಗಳು ಎಲ್ಲರನ್ನೂ ಕಂಪನಗೊಳಿಸುತ್ತಿದ್ದವು. ತನ್ನ ಕೊಂಬುಗಳ ಸಹಾಯದಿಂದಲೇ ಮಹಾ ಮಹಾ ಪರ್ವತಗಳನ್ನೆಲ್ಲ

ಉನ್ಮೂಲಯನ್ನಮಹಾ ದ್ರುಮಾನ್ ಶೃಂಗಾಘಾತೇನ ಪರ್ವತಾನ್ ।
ಪೃಷ್ಠಲಗ್ನೋ ಮನುಷ್ಯಾಣಾಂ ಬಲಾನ್ಮಾರಯತೇ ಬಲೀ ॥೩೪॥

ಸ ಯಯೌ ಪಾರ್ವತೀಬಾಲಂ ಹಂತುಕಾಮೋ ಮಹಾಸುರಃ ।
ಪೃಷ್ಠತೋ ಧಾವಯಿತ್ವಾ ಸ ಯಾವನ್ಮಾರಯತೇ ತು ತಮ್ ॥೩೫॥

ದಧಾರ ಶೃಂಗಯೋರ್ಬಾಲೋ ಹಸ್ತಾಭ್ಯಾಂ ತಾವದೇವ ಹಿ ।
ರುರೋಹ ಚ ಸ ತತ್ಪೃಷ್ಠೇ ಹಯಪೃಷ್ಠೇ ಯಥಾರ್ಭಕಃ ॥೩೬॥

---

ಬಗೆದು ಹಾಕುತ್ತಿದ್ದನು. ಖಲ; ಈ ಮೇಷಾಸುರನು ತನ್ನ ಹುರುಬುರಕಾದ ಬಾಲದಿಂದ ಒಮ್ಮೆ ಹೊಡೆದನೆಂದರೆ ಅನೇಕರು, ಅಲ್ಲಿಯೇ ಪ್ರಾಣಗಳನ್ನು ಬಿಡುತ್ತಲಿದ್ದರು. ॥೩೩॥

ತನ್ನ ಕೋಡುಗಳನ್ನು ನೆಲಕ್ಕೆ ಹಾಕಿ ಒಮ್ಮೆ ಎಬ್ಬಿದನೆಂದರೆ ಅನೇಕ ಮಹಾ ಮಹಾ ವೃಕ್ಷಗಳೂ, ಪರ್ವತಗಳೂ ಬುಡಸಹಿತ ಕಿತ್ತಿ ನೆಲಕ್ಕೆ ಬೀಳುವುವು. ಇವನು ಜನರ ಸಂಚಾರವನ್ನೇ ಸರ್ವದಾ ಗಮನಿಸುತ್ತಲಿದ್ದು ಹಿಂದಿನಿಂದ ಅವರನ್ನು ಹಿಂಬಾಲಿಸಿ ಹೋಗಿ ಒಮ್ಮೆಲೇ ಅವರ ಬೆನ್ನಿನ ಮೇಲೆ ಹತ್ತಿ ಹಿಸುಕಿ ಅವರನ್ನು ಬಲಾತ್ಕಾರದಿಂದ ಕೊಂದುಬಿಡುತ್ತಿದ್ದನು. ಅಂತಹ ಮೋಸಗಾರನೂ, ಬಲಿಷ್ಠನೂ ಆಗಿದ್ದನು, ಈ ರಾಕ್ಷಸ ॥೩೪॥

ಇಂತಹ ಮಹಾಸುರನು ಪಾರ್ವತೀನಂದನನನ್ನು ಕೊಂದುಬಿಡುವುದಕ್ಕಾಗಿ ಹವಣಿಸುತ್ತ ಬಾಲಕರು ಆಟವಾಡುತ್ತಲಿದ್ದ ಸ್ಥಳಕ್ಕೆ ಧಾವಿಸಿ ಬಂದನು. ತಮ್ಮ ಪಾಡಿಗೆ ಆಟವಾಡುತ್ತಲಿದ್ದ ಬಾಲಕರನ್ನೆಲ್ಲ ಬೆನ್ನಟ್ಟಿ ಹೋಗಿ ಕೊಲ್ಲಲು ಪ್ರಯತ್ನಪಡುತ್ತಿರುವಷ್ಟರಲ್ಲೇ ಮಹಾಗಣಪತಿಯು ಓಡಿ ಬಂದುದು ಅವನ ಕೊಂಬುಗಳೆರಡನ್ನೂ ತನ್ನ ಕೈಗಳಿಂದ ಭದ್ರವಾಗಿ ಹಿಡಿದುಬಿಟ್ಟನು. ಮತ್ತು ಬಹಳ ಚಾತುರ್ಯದಿಂದ ಆದರ ತಿವಿತವನ್ನು ತಪ್ಪಿಸಿಕೊಳ್ಳುತ್ತ ಮೇಲಕ್ಕೆ

ತತೋ ಮುನಿಸುತಾಃ ಕೇಚಿತ್ಪುಚ್ಛಂ ಧೃತ್ವಾ ವ್ಯಕರ್ಷಯನ್ ।
ಕೇಚಿದ್ದಂಡೈಶ್ಚ ಲಗುಡೈರ್ನಿಜಘ್ನುರ್ದೈತ್ಯಪುಂಗವಮ್ ॥೩೭॥

ಸೋಽವಮತ್ಯ ತು ತಾನ್ ಜಘ್ನೇ ಪುಚ್ಛಾಘಾತೇನ ಸ-ಸತ್ತ್ವರಮ್ ।
ನಿಪೇತುಸ್ತೇ ತದಾ ಭೂಮೌ ಪುಚ್ಛಾಘಾತೇನ ಪೀಡಿತಾಃ ॥೩೮॥

ದೃಷ್ಟ್ವಾ ತಸ್ಯ ಬಲಂ ಬಾಲೋಽವತರಚ್ಚ ದಧಾರ ತಮ್ ।
ಆಸ್ಫಾಲಯತ್ತದಾ ಸ್ಪೃಷ್ಟೇ ಭ್ರಾಮಯಿತ್ವಾ ಚಿರಂ ತು ತಮ್ ॥೩೯॥

---

ನೆಗೆದು ಆದರ ಬೆನ್ನನ್ನು ಆಕ್ರಮಿಸಿಕುಳಿತುಬಿಟ್ಟನು. ಈ ದೃಶ್ಯವು ಕುದುರೆ ಸವಾರಿಮಾಡುತ್ತಲಿರುವ ಬಾಲಕನೋ ಎಂಬಂತೆ ಕಂಡುಬಂದಿತು.

॥೩೫-೩೬॥

ಇದನ್ನು ನೋಡಿದೊಡನೆಯೇ ಇತರ ಮುನಿಪುತ್ರರೆಲ್ಲರೂ ಬಹಳ ಉತ್ಸಾಹಗೊಂಡು ಆದರ ದೀರ್ಘವಾದ ಬಾಲವನ್ನು ಭದ್ರವಾಗಿ ಹಿಡಿದು ಅತ್ತಿತ್ತ ದರದರನೆ ಎಳೆದಾಡಿ ಹಿಂಸಿಸತೊಡಗಿದರು. ಮತ್ತೆ ಕೆಲವು ಬಾಲಕರು ಕೈಗೋಲು ಹಾಗೂ ಒನಕೆ ಕೊನೆಗೆ ಕೈಗೆ ಸಿಕ್ಕಿದ್ದನ್ನು ತೆಗೆದುಕೊಂಡು ಮನಸ್ವಿಯಾಗಿ ಆ ದೈತ್ಯಪುಂಗವನನ್ನು ಧಬ ಧಬ ಹೊಡೆಯಲಾರಂಭಿಸಿದರು. ॥೩೭॥

ಆದರೇನು ? ಆವನಿಗೆ ಈ ಹೊಡೆತಗಳು ನೊಣ ಕುಳಿತಷ್ಟು ಸಹ ಹಿಂಸೆ ಕೊಡಲಿಲ್ಲ. ಒಮ್ಮೆ ಈ ಬಾಲಕರ ಕಡೆಗೆ ಧಿಕ್ಕರಿಸುವ ದೃಷ್ಟಿಯಿಂದ ತಿರುಗಿ ನೋಡಿ ಬಲವಾಗಿ ಗರ್ಜಿಸಿ ಒಮ್ಮೆಲೇ ತನ್ನ ಬಾಲದಿಂದ ಹೊಡೆದನು. ಈ ಹೊಡೆತ ಬಿದ್ದೊಡನೆಯೇ ಅಷ್ಟು ಜನ ಬಾಲಕರೂ ಬಹಳ ಯಾತನೆಗೊಳಗಾಗಿ ತುಪು ತುಪು ಸಿಡಿದು ನೆಲಕ್ಕೆ ಬಿದ್ದರು. ॥೩೮॥

ರಾಕ್ಷಸನ ಬಾಲದ ಏಟಿನಿಂದ ಬಾಲಕರು ವಿಲಿ ವಿಲಿ ಒದೆದಾಡುತ್ತ ನೆಲದಲ್ಲಿ ಬಿದ್ದು ನರಳುತ್ತಿರುವುದನ್ನೂ, ರಾಕ್ಷಸನ ಈ ತರಹದ ಬಲ-ಪರಾಕ್ರಮಗಳನ್ನೂ

ಸಹಸ್ರಧಾ ವಿಶೀರ್ಣಾಂಗೋ ಮಮಾರ ಸಹಸಾಸುರಃ ।
ಅಂತ್ಯಶಬ್ದೇನ ತಸ್ಯಾಥ ಬಿಭಾಯ ಭುವನತ್ರಯಮ್ ॥೪೦॥

ವಮನ್ರಕ್ತಂ ಬಹು ಮುಖಾತ್ ಪ್ರಸಾರ್ಯ ವಿಕೃತಂ ಮುಖಮ್ ।
ತತೋ ಬಾಲಾ ಮುನೀನಾಂ ತೇಽಕಥಯನ್ನಚಲೋದ್ಭವಾಮ್ ॥೪೧॥

ಅರಿತ ಮಹಾಗಣಪತಿಯು ಛಾಗದ ಬೆನ್ನಿನ ಮೇಲೆ ಕುಳಿತವನು ಕೆಳಕ್ಕೆ ಧುಮ್ಮಿಕ್ಕಿ ಸ್ವಲ್ಪವೂ ವಿಲಂಬಮಾಡದೇ ಅದರ ಎರಡು ಕೊಂಬುಗಳನ್ನೂ ಮತ್ತೆ ಬಲವಾಗಿ ಹಿಡಿದುಬಿಟ್ಟನು. ತನ್ನ ಹಸ್ತದಿಂದ ಅದರ ಬೆನ್ನಿನ ಮೇಲೆ ಒಮ್ಮೆ ಚಪ್ಪರಿಸಿ ದಂತೆ ಬಲವಾಗಿ ಹೊಡೆದನು. ಮತ್ತು ಅದರ ಕೊಂಬುಗಳನ್ನು ಹಿಡಿದು ಬಹಳ ಹೊತ್ತು ಗರ ಗರ ತಿರುಗಿಸಿದನು. ॥೩೯॥

ದೇವನ ಹಸ್ತತಲದಿಂದ ಬಿದ್ದ ಆಸ್ಫಾಲನಾರೂಪವಾದ ಹೊಡೆತ, ಗಿರ ಗಿರ ತಿರುಗಿಸಿದುದು ಈ ಎಲ್ಲ ಆಕಸ್ಮಿಕಗಳ ಪರಿಣಾಮವಾಗಿ ಆ ದೈತ್ಯನ ದೇಹವು ಝುರ್ಝುರಿತವಾಗಿ ಹೋದುದು ಮಾತ್ರವಲ್ಲದೇ, ಅವನು ನೆಲಕ್ಕೆ ಬಿದ್ದು ತತ್ಕ್ಷಣವೇ ಸತ್ತುಹೋದನು. ಅವನು ಸಾಯುವಾಗ ಒಮ್ಮೆ ಕೆಟ್ಟ ಧ್ವನಿಯಿಂದ ಅರಚಿದನು. ಇದರ ಪರಿಣಾಮವಾಗಿ ಭುವನತ್ರಯವೂ ಗಡ ಗಡ ನಡುಗಿ ಹೋಯಿತು. ॥೪೦॥

ಬಾಯಿಯಿಂದ ರಾಕ್ಷಸನು ರಕ್ತವನ್ನು ಪ್ರವಾಹದಂತೆ ಕಾರಿದನು. ವಿಕಾರ ಗೊಂಡ ತನ್ನ ಮುಖವನ್ನು ಮುಂದಕ್ಕೆ ಚಾಚಿ ಧೊಪ್ಪನೆ ನೆಲಕ್ಕೆ ಬಿದ್ದನು. ಆಗ ಮುನಿಸುತರೆಲ್ಲ ಸಾವರಿಸಿಕೊಂಡು ಮೇಲೆದ್ದು ದಾರುಣವಾದ ಈ ದೃಶ್ಯವನ್ನು ನೋಡಲಾರದೇ 'ಮೊದಲು ಈ ಸುದ್ದಿಯನ್ನು ದೇವಿಗೆ ತಿಳಿಸೋಣ' ಎಂದು ನಿಶ್ಚಯಿಸಿ, ಓಡುತ್ತ ಹೋಗಿ ಅಚಲೋದ್ಭವೆ (ಗಿರಿರಾಜಸುತೆ)ಗೆ ನಡೆದ ವಿಷಯ ವನ್ನು ವಿಶದವಾಗಿ ಹೀಗೆಂದು ತಿಳಿಸಿದರು. ॥೪೧॥

**ಬಾಲಕಾ ಊಚುಃ :—**

**ಅನೇನ ನಿಧನಂ ನೀತ ಅಪ್ಯಜೇಯೋ ಮಹಾಸುರಃ ।**
**ನಿಹಂತುಂ ನಃ ಸಮಾಯಾತಃ ಕ್ರೀಡತಾ ಬಲಶಾಲಿನಾ ॥೪೨॥**

**ಕ ಉವಾಚ :—**

**ಅಂಬಾ ನಿರೀಕ್ಷ್ಯ ನಿಹತಂ ಮಹಾದೈತ್ಯಂ ಸುತಂ ಚ ತಮ್ ।**
**ಆಶ್ಚರ್ಯಂ ಪರಮಂ ಕೃತ್ವಾ ನಿನಾಯ ನಿಜಮಂದಿರಮ್ ॥೪೩॥**

ಬಾಲಕರು :—

ತಾಯೇ ! ಯಾರ ತಂಟೆಗೂ ಹೋಗದೇ ನಮ್ಮ ಪಾಡಿಗೆ ನಾವು ಆಟ ಮಾಡುತ್ತಲಿದ್ದೆವು. ಇದ್ದಕ್ಕಿದ್ದಂತೆಯೇ ಅಲ್ಲಿಗೆ ಮೇಷಾಕಾರದ ಬಲಿಷ್ಠನಾದ ಒಬ್ಬ ದೈತ್ಯಾಧಮನು ಬಂದು ನಮ್ಮನ್ನೆಲ್ಲ ಹೆದರಿಸಿ ಓಡಿಸುತ್ತ ಹಿಂಸಿಸಲಾರಂಭಿಸಿದನು. ಅವನ ಧ್ಯೇಯ, ಬಾಲಕ; ಗಣೇಶನನ್ನೂ, ನಮ್ಮನ್ನೂ ಕೊಲ್ಲಬೇಕೆಂಬುದೇ ಆಗಿದ್ದಿತು. ಆದರೇನು ? ಅವನ ಆಟ ನಡೆದೀತೇ ? ಗಣಪತಿಯು ಮುಂದೆ ಬಂದು ಅಜೇಯ್ಯನಾದ ಆ ರಕ್ಕಸನನ್ನು ಆಟವಾಡಿದಂತೆಯೇ ಕೊಂದು ಬಿಟ್ಟನು. ನೋಡಿದೆಯ, ತಾಯೇ ! ನಮ್ಮ ಗಣಪತಿ ಎಷ್ಟು ಬಲಶಾಲಿ ಎಂಬುದನ್ನು ? ॥೪೨॥

ಬ್ರಹ್ಮ :-

ಮಹಾದೈತ್ಯನು ಮೃತನಾಗಿ ಬಿದ್ದುದನ್ನೂ, ಅವನನ್ನು ನಿರ್ಲಕ್ಷ್ಯದಿಂದ ಕೊಂದು ನೋಡುತ್ತ ಗಂಭೀರವಾಗಿ ನಿಂದಿರುವ ತನ್ನ ಮಗ ; ಗಣಪತಿಯನ್ನೂ ಜಗದಂಬೆಯು ನೋಡಿದಳು. ಮೈ ನಡುಗಿತು. ಅವಳಿಗುಂಟಾದ ಆಶ್ಚರ್ಯಕ್ಕೆ ಮಿತಿಯೇ ಉಳಿಯಲಿಲ್ಲ. ಮುಂದೆ ಒಂದು ಕ್ಷಣ ಕಾಲ ಸಹ ಅಲ್ಲಿ ನಿಲ್ಲಲು ದೇವಿಯ ಮನಸ್ಸು ಒಡಂಬಡಲಿಲ್ಲ. ಬಾಲಕನನ್ನು ತನ್ನ ಮನೆಗೆ ಕೂಡಲೇ ಕರೆದು ಕೊಂಡು ನಡೆದುಬಿಟ್ಟಳು. ॥೪೩॥

ದದ್ಧ್ಯೋದನಂ ಭ್ರಾಮಯಿತ್ವಾ ಬಾಲೋಪರಿ ಜಲೇನ ಹ ।
ತತ್ಯಾಜ ದೂರತೋ ಗೇಹಾತ್ ಸ್ತನಪಾನಂ ತತೋ ದದೌ ॥೪೪॥

ತಾನಿ ಖಂಡಾನಿ ದೈತ್ಯಸ್ಯ ತತ್ಯಜುರ್ದೂರತೋ ಗಣಾಃ ।
ಮುನಯೋ ಮುನಿಪತ್ನ್ಯಶ್ಚ ಮುನಿಬಾಲಾಸ್ಸ್ತ್ರಿಯೋಽಪಿ ಚ ॥೪೫॥

ಪ್ರಶಶಂಸುಸ್ಸುತಂ ಗೌರ್ಯಾ ದೇವಾಃ ಪುಷ್ಪಾಣಿ ತತ್ಯಜುಃ ।
ಆಶಿಷೋಽಪಿ ದದುರ್ವಿಪ್ರಾ ನೃತ್ಯಂತೇ ಸ್ಮಾಪ್ಸರೋಗಣಾಃ ॥೪೬॥

ಮನೆಯನ್ನು ತಲುಪಿದೊಡನೆಯೆ ಮೊಸರಿನಲ್ಲಿ ಅನ್ನವನ್ನು ಕಲೆಸಿ ಮಗುವಿಗೆ ಮೊದಲು ನಿವಾಳಿಯನ್ನು ತೆಗೆದಳು. ಕದಲಾರತಿಯನ್ನು ಎತ್ತಿದಳು. ಅವನ್ನು ತೆಗೆದುಕೊಂಡು ಹೋಗಿ ಮನೆಯಿಂದಾಚೆ ಬಹು ದೂರ ಎಸೆದು ಹಿಂದಿರುಗಿ ಬಂದಳು. ಅನಂತರ ಬಾಲಕನನ್ನು ಎತ್ತಿಕೊಂಡು ಮುದ್ದಿಸುತ್ತ ಸ್ತನ್ಯವನ್ನು ಪಾನಮಾಡಿಸಿದಳು. ॥೪೪॥

ದೈತ್ಯನ ಅವಶೇಷಗಳನ್ನು ಎಂದರೆ ಮೃತ ಕಳೇಬರದ ತುಣುಕುಗಳನ್ನು ಗಣಗಳು ಹೊತ್ತೊಯ್ದು ನಗರದಿಂದ ಹೊರಕ್ಕೆ ಬಹುದೂರ ಎಸೆದು ಬಂದರು. ಬಾಲಕನ ಬಲ-ವೀರ್ಯಗಳನ್ನು ಕಂಣಾರೆ ಕಂಡವರೂ, ಕಿವಿಯಾರೆ ಕೇಳಿದವರೂ ಆದ ಮುನಿಗಳು, ಮುನಿಪತ್ನಿಯರು, ಋಷಿಕುಮಾರರು ಮತ್ತಿತರ ಸ್ತ್ರೀಯರೂ ಎಲ್ಲರೂ ಗೌರೀಪುತ್ರನಾದ ಬಾಲಕನನ್ನು ಬಾಯಿ ತುಂಬ ಪ್ರಶಂಸಿಸಿದರು. ದೇವತೆಗಳಿಗೆ ಹಿಡಿಸಲಾರದಷ್ಟು ಆನಂದ ಉಂಟಾಯಿತು. ಅವರು ಬಾಲಕನ ಮೇಲೆ ಪುಷ್ಪವೃಷ್ಟಿಯನ್ನು ವರ್ಷಿಸಿದರು. ಬ್ರಾಹ್ಮಣೋತ್ತಮರು ಬಾಲಕನಿಗೆ ಅನೇಕ ವೇದೋಕ್ತ ಮಂತ್ರಗಳಿಂದ ಶುಭಾಶೀರ್ವಾದಗಳನ್ನು ಮಾಡಿದರು. ಈ ಸಂದರ್ಭದಲ್ಲಿ ತಮ್ಮ ಹರ್ಷವನ್ನು ವ್ಯಕ್ತಪಡಿಸಲಿಕ್ಕಾಗಿ ಅಪ್ಸರ ರಮಣೀಮಣಿಯರು ಹಾವ-ಭಾವ-ವಿಲಾಸ-ವಿಭ್ರಮಗಳೊಡನೆ ನರ್ತಿಸಿದರು. ॥೪೫-೪೬॥

ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ 'ಅವಿಜೇಯ
ವಧೋ' ನಾಮ ನವತಿತಮೋಽಧ್ಯಾಯಃ
ಸಮಾಪ್ತಃ

---

ಇಲ್ಲಿಗೆ ಶ್ರೀ ಗಣೇಶ ಪುರಾಣ ಉತ್ತರಖಂಡದಲ್ಲಿ 'ಅವಿಜೇಯ ವಧೆ'
ಎಂಬಲ್ಲಿಗೆ ತೊಂಭತ್ತನೆಯ ಅಧ್ಯಾಯಾನುವಾದವು ಮುಗಿದುದು.



॥ ಶ್ರೀ ಗಣೇಶಾಯ ನಮಃ ॥

# ಅಥೈಕನವತಿತಮೋಽಧ್ಯಾಯಃ

**ಕ ಉವಾಚ :—**

**ತತೋ ದ್ವಿತೀಯೇ ವರ್ಷೇ ಸ ಬಾಲೋ ಬಾಲೈರಸಂಖ್ಯಕೈಃ ।**
**ಚಿಕ್ರೀಡ ವಾಟಿಕಾಮಧ್ಯೇ ನಾನಾ ದ್ರುಮ-ಲತಾಕುಲೇ ॥೧॥**

**ಫಲಾನಿ ಭಕ್ಷಯಾಮಾಸ ಖರ್ಜೂರೀ.ಪನಸಾನಿ ಚ ।**
**ದದೌ ತೇಭ್ಯೋಽತಿಬಲಾತ್ಸ ಪಾತಯಿತ್ವಾ ಬಹೂನ್ಯಪಿ ॥೨॥**

॥ ಶ್ರೀ ಗಣೇಶಾಯ ನಮಃ ॥

## ೯೧ ನೆಯ ಅಧ್ಯಾಯ.

ಬ್ರಹ್ಮಾ :-

ಮಹಾಗಣಪತಿಗೆ,ಎರಡನೆಯ ಸಂವತ್ಸರ ನಡೆಯಲಾರಂಭಿಸಿತು. ಆಗ ಅವನು ನಡೆಸಿದ ಬಾಲಲೀಲಾ-ವಿನೋದಗಳನ್ನು ತಿಳಿದಮಟ್ಟಿಗೆ ಹೇಳುವೆನು, ಗಮನ ವಿಟ್ಟು ಕೇಳು. ಒಂದು ದಿವಸ ಗಣಪತಿಯು ತನ್ನ ಸಂಗಡಿಗರಾದ ಮುನಿ ಬಾಲಕ ರೊಂದಿಗೆ ಆಟವಾಡಲು ಕ್ರೀಡೋದ್ಯಾನಕ್ಕೆ ಹೊರಟು ಹೋದನು. ಗಣಪತಿಯ ಸಂಗಡ ಲೆಖ್ಖಕ್ಕೆ ಸಿಕ್ಕದಷ್ಟು ಹುಡುಗರು ಹೊರಟಿದ್ದರು. ಅದು ದೇವ-ದೇವಿಯರ ವಿಹಾರಾರ್ಥವಾಗಿ ನಿರ್ಮಿತವಾಗಿದ್ದ ಕೈದೋಟವೆಂದ ಮೇಲೆ ಎಷ್ಟು ರಮಣೀ ಯವಾಗಿರಬಹುದು ? ಅದರಲ್ಲಿ ಅನೇಕ ಜಾತಿಯ ಗಿಡ-ಮರಗಳೂ, ಲತೆಗಳೂ ತುಂಬಿದ್ದವು. ಇವರೆಲ್ಲ ಆದರ ಮಧ್ಯಭಾಗಕ್ಕೆ ಹೋಗಿ ಆಟವಾಡಲಾರಂಭಿ ಸಿದರು. ॥೧॥

ಫಲಭಾರಭರಿತಗಳಾದ ಖರ್ಜೂರ,ಹಲಸು ಮೊದಲಾದ ವೃಕ್ಷಗಳನ್ನು ಸ್ವತಃ

'ಕೂಟೋ' ನಾಮ ಮಹಾ ದೈತ್ಯಃ ಕೂಟ-ಮಾಯಾಕರಃ ಖಲಃ ।
ತತ್ರೈಷಾ ಕಾಲ ಮಾಜ್ಞಾಯ ವಾಪಿಕಾಯಾಂ ವಿಷಾಣಿ ಸಃ

ಲೋಡಯಾಮಾಸ ದುರ್ಬುದ್ಧಿಸ್ಸರ್ವೇಷಾಂ ಹಿ ಜಿಘಾಂಸಯಾ ।
ಯೇಷಾಂ ತು ಸ್ಪರ್ಶಮಾತ್ರೇಣ ಮ್ರಿಯಂತೇ ಪ್ರಾಣಿನಃ ಕ್ಷಣಾತ್

---

ಗಣಪತಿಯೇ ಏರಿದನು, ಸಾಕಷ್ಟು ಹಣ್ಣನ್ನು ತಾನು ತಿಂದುದಲ್ಲದೇ ಮರಗಳ ಕೆಳಗೆ ನಿಂತು. ಫಲಗಳನ್ನು ನಿರೀಕ್ಷಿಸುತ್ತಿದ್ದ ಬಾಲಕರ ಕಡೆಗೂ ಅವನ್ನು ಕಿತ್ತು ಎಸೆಯುತ್ತಲಿದ್ದನು. ಹುಡುಗರೂ ಬಹಳ ಆಶೆಬುರುಕರಾಗಿದ್ದರು. ಒಂದೊಂದು ಸಕ್ಕೆ ಎರಡು-ಮೂರರಂತೆ ಹಣ್ಣುಗಳನ್ನು ತಿಂದಿದ್ದರೂ ತಿಂದಿರಬಹುದು. ಇರಲಿ, ಎಷ್ಟೇ ಆಶೆ ಇವರಿಗಿದ್ದರೂ, ಆಶೆ ಇರುವಷ್ಟು ಹೊಟ್ಟೆ ಇಲ್ಲವಷ್ಟೇ? ಹೊಟ್ಟೆಯು ಬಿರಿಯುವವರೆಗೂ ಇವರು ಹಣ್ಣುಗಳನ್ನು ತಿಂದು ತೇಗಿದರು. ಬೇಡ ಬೇಡವೆಂದರೂ ಗಣಪತಿಯು ಒತ್ತಾಯದಿಂದ ಮೇಲಿದ್ದ ಹಣ್ಣುಗಳನ್ನು ಕೆಡಹುತ್ತಲೇ ಇದ್ದನು. ॥೨॥

ಅಷ್ಟರಲ್ಲಿ ಆ ಸ್ಥಳಕ್ಕೆ ದೈತ್ಯಾಧಮನೊಬ್ಬನು ಓಡಿ ಬಂದನು. ಅವನ ಹೆಸರು 'ಕೂಟ' ಹೆಸರಿಗೆ ತಕ್ಕಂತೆ ಮೋಸ, ದ್ರೋಹಗಳನ್ನು ಮಾಡುವುದರಲ್ಲಿ ಅವನು ಅಪ್ರತಿಮನಾಗಿದ್ದನು. ಅವನಂತಹ ನೀಚಸ್ವಭಾವದವನು ಅವನು ಮಾತ್ರವೇ ಆಗಿದ್ದನು. 'ಹುಡುಗರು ಹೇಗೂ ಸಾಕಷ್ಟು ಹಣ್ಣು ತಿಂದಿದ್ದಾರೆ. ಈಗ ಅವರಿಗೆ ಬಾಯಾರುವುದು. ಇದೇ ನೀರು ಕುಡಿಯುವ ಕಾಲ' ಎಂಬುದನ್ನು ತಿಳಿದು ಅಲ್ಲಿದ್ದ ಇಳಿಯುವ ಭಾವಿಯಲ್ಲಿ ಅನೇಕ ಬಗೆಯ ಅತ್ಯುಗ್ರ ವಿಷವಸ್ತುಗಳನ್ನು ಹಾಕಿದನು. ॥೩॥

ವಿಷವು ನೀರಿನೊಂದಿಗೆ ಸರಿಯಾಗಿ ಬೆರೆಯಲಿ ಎಂಬ ದುರುದ್ದೇಶ್ಯದಿಂದ ಭಾವಿಯನ್ನೆಲ್ಲ ಒಮ್ಮೆ ಕಲಕಿದನು. ಒಡನೆಯೇ ಆ ಭಾವಿಯಲ್ಲಿದ್ದ ಸುಮಧುರ ಜಲವೆಲ್ಲ ವಿಷಮಯವಾಯಿತು, ಸಮೀಪದಲ್ಲಿ ಸುಳಿದವರನ್ನು ಸಹ ಕೊಲ್ಲುವಷ್ಟು ತೀಕ್ಷ್ಣವಾಯಿತು. ಅವನ ಉದ್ದಿಶ್ಯ ಗಣಪತಿಯನ್ನು ಮಾತ್ರ ಕೊಲ್ಲುವುದಾಗಿರದೇ

ಯಂದುತ್ಥವಾಯುನಾ ಸ್ಪೃಷ್ಟಾ ನಿಪತಂತಿ ಖಗಾ ಭುವಿ ।
ತತಃ ಕೂಟೋ ಗತಸ್ತತ್ರ ತಸ್ಥೌ ನಾಶದಿದೃಕ್ಷಯಾ ॥೫॥

ತತಸ್ತೇ ಬಾಲಕಾಃ ಪಾತುಮುಜ್ಝಾನಾಶ್ವ ಜಲಂ ಯಯುಃ ।
ಪುಪುಃ ಸರ್ವೇ ಸ್ವಚುಲಕೈರಂಜಲೀಭಿಶ್ಚ ಕೇಚನ ॥೬॥

ಮೃತಾರ್ಥ ಮುತ್ಸ್ಯ ಸಮಾದಾಯ ಬಹಿರ್ಯಾತಾ ಮೃತಾಸ್ತದಾ ।
ರಕ್ಷಕೋ ಗ್ರಾಮಮಧ್ಯೇ ತು ಘೋಷಯಾಮಾಸ ತನ್ಮೃತಿಮ್ ॥೭॥

---

ಅವನ ಸಂಗಡಿಗರನ್ನೂ ಒಮ್ಮೆಲೇ ಕೊಂದುಬಿಡಬೇಕೆಂಬುದೇ ಆಗಿದ್ದಿತು. ಇದುವರೆಗೂ ಬಂದಿದ್ದ ದೈತ್ಯರು ದೇವನ ವಿಷಯದಲ್ಲಿ ಮಾತ್ರ ದ್ರೋಹವನ್ನೆಣಿಸುತ್ತಿದ್ದವರು. ಆದರೆ ಇವನು ಎಲ್ಲರನ್ನೂ ಮಾರಿಸಿದವನು, ಅಲ್ಲವೇ ವ್ಯಾಸ ! ಭಾವಿಯ ಜಲವನ್ನು ಸ್ಪರ್ಶಮಾಡಿದರೇ ಸಾಕು, ಜನರೆಲ್ಲರೂ ಮೃತರಾಗುತ್ತಿದ್ದರು, ಅಷ್ಟು ಕಟುವಾಯಿತು ಆ ಜಲ. ॥೪॥

ಜಲವನ್ನು ಸ್ಪರ್ಶಿಸಿದರಂತೂ ಇರಲಿ, ಭಾವಿಯ ಜಲವ ಮೇಲೆ ಹಾಯ್ದು ಬಂದ ವಾಯುವನ್ನು ಸೇವಿಸಿಯೇ ಎಷ್ಟೋ ಮಂದಿ ಮನುಷ್ಯರು, ಪಕ್ಷಿಗಳು, ಪಶುಗಳು ಮೃತಿಯನ್ನೈದಿ ತುಪು ತುಪು ಉದುರಿ ಬೀಳುವುವು. ಇಷ್ಟಾದ ಬಳಿಕ ಕೂಟನಿಗೆ 'ತಾನು ಮಾಡಿದ ಉಪಾಯವು ಫಲಕಾರಿಯಾಗಿದೆ' ಎಂಬ ನಿಶ್ಚಯ ಉಂಟಾಯಿತು. ತಾನು ಒಂದು ಗಿಡದ ಮರೆಗೆ ಅವಿತಿಟ್ಟುಕೊಂಡು ಜಲಪಾನದಿಂದ ಬಾಲಕರು ಮೃತಿಯನ್ನೈದುವ ಮಹೋತ್ಸವವನ್ನು ನೋಡಿ ಜನ್ಮವನ್ನು ಸಾರ್ಥಕಪಡಿಸಿಕೊಳ್ಳಲಿಕ್ಕಾಗಿ ಸಹಸ್ರಾಕ್ಷನಂತೆ ನಿಂತನು. ॥೫॥

ಸ್ವಾಭಾವಿಕವಾಗಿ ಆ ಸಮಯಕ್ಕೆ ಹುಡುಗರಿಗೆ ಬಾಯಿಯೂ ಆರಿ ಬಂದಿತು. ನೀರನ್ನು ಕುಡಿಯುವ ಆತುರದಿಂದ ಎಡವಿ ಬೀಳುವುದನ್ನೂ ಗಮನಿಸದೆ, ಒಬ್ಬರ ಮೇಲೊಬ್ಬರು ಬೀಳುತ್ತ 'ನಾನು ಮೊದಲು, ತಾನು ಮೊದಲು' ಎಂದು ಭಾವಿಯ ಬಳಿಗೆ ಬಂದರು, ಕೆಲವರು ಚುಲಕಗಳಿಂದಲೂ ಮತ್ತೆ ಕೆಲವರು ಬೊಗಸೆಗಳಿಂದಲೂ ನೀರನ್ನು ಯಥೇಷ್ಟವಾಗಿ ಹೀರಿದರು. ॥೬॥

ರಾಕ್ಷಸನು ಮಿಶ್ರಣಮಾಡಿದ ವಿಷಗಳ ಅತ್ಯುಗ್ರ ವೇಗದಿಂದ ಆ ಭಾವಿ

ತತೋ ಮಹಾರವಂ ಕೃತ್ವಾ ತತ್ರಾಯಯುಸ್ಸರ್ವನಾಗರಾಃ ।
ಘ್ನಂತಃ ಪಾಣಿಭಿರ್ವಕ್ಷಃ ಪಾಷಾಣೈರಪರೇ ಶಿರಃ ॥೮॥

ಹಾಹಾಕಾರೋ ಮಹಾನಾಸೀತ್ಪುಂ-ವಧೂ-ಗೋಷ್ಠಿತಾಮಪಿ ।
ತೇಷಾಮಾಕ್ರಂದನಂ ಶ್ರುತ್ವಾ ಶಿವಾಯಾ ಅಪಿ ಬಾಲಕಃ ॥೯॥

ಅಜೀವಯದ್ದೃಷ್ಟಿಪಾತೈಃ ಸರ್ವಾಂಸ್ತಾನ್ ಪುರಬಾಲಕಾನ್ ।
ಕ್ರೂರದೃಷ್ಟ್ಯಾ ಕೂಟದೈತ್ಯಂ ಮೃತಂ ಭೂಮೌ ನ್ಯಪಾತಯತ್ ॥೧೦॥

---

ಯಲ್ಲಿದ್ದ ಸಕಲ ವಿಧ ಜಲಜೀವಿಗಳೂ ಅಷ್ಟರೊಳಗಾಗಿಯೇ ಸತ್ತು ಮೇಲೆಲ್ಲ ತೇಲಾಡುತ್ತಿದ್ದವು. ಜಲಪಾನಕ್ಕಾಗಿ ಹೋಗಿದ್ದ ಈ ಬಾಲಕರ ಬೊಗಸೆಗಳ ತುಂಬ ಮೃತ ಮತ್ಸ್ಯಗಳು ಬಂದವು, ಹುಡುಗರು ಬಣ್ಣ ಬಣ್ಣದ ಈ ಮೀನುಗಳನ್ನು ನೋಡಿ ಉಲ್ಲಾಸಗೊಂಡು ವಿನೋದಾರ್ಥವಾಗಿ ಅವುಗಳೊಡನೆ ಮೇಲೆದ್ದು ಬಂದರು. ಆದರೆ ನಿಮಿಷಮಾತ್ರದಲ್ಲಿಯೇ ಅವರು ತಮ್ಮ ಕೈಗಳಲ್ಲಿದ್ದ ಮೀನುಗಳಂತೆಯೇ ಉಗಿ ಬಿದ್ದರು. ಅರ್ಥಾತ್ ಮೃತರಾದರು. ಈ ಸುದ್ದಿ ನಗರ ರಕ್ಷಿಗೆ ತಿಳಿಯಿತು. ಅವನು ಓಡೋಡುತ್ತ ಗ್ರಾಮಮಧ್ಯಕ್ಕೆ ಹೋಗಿ ತೋಟವಲ್ಲಿ ಆಕಸ್ಮಾತ್ ಈ ದುರ್ಘಟನೆಯೊದಗಿದುದನ್ನು ಸಾರಿದನು. ॥೭॥

ಇದನ್ನು ಕೇಳಿದ ಜನರೆಲ್ಲರೂ ಹಾಹಾಕಾರಮಾಡುತ್ತ ಭಾವಿಯ ಬಳಿಗೆ ಓಡಿ ಬಂದರು. ಅವರ ಮುಖವಾದ್ಯಗಳ ರವವು ಎಲ್ಲರನ್ನೂ ಘಾಬರಿಗೊಳಿಸುತ್ತಲಿದ್ದಿತು, ಬಾಲಕರೆಲ್ಲ ಮೃತರಾಗಿ ಬಿದ್ದ ಹೃದಯವಿದ್ರಾವಕವಾದ ಆ ದೃಶ್ಯವನ್ನು ನೋಡಿದೊಡನೆಯೇ ವಿಯೋಗ ಶೋಕವನ್ನು ತಾಳಲಾರದೇ ಕೈಗಳಿಂದ ಎದೆಗಳನ್ನು ಬಡಿದುಕೊಂಡರು, ಕೆಲವರು ಕಲ್ಲಿಗೆ ತಲೆಗಳನ್ನು ಘಟ್ಟಿಸಿದರು. ॥೮॥

ಸ್ತ್ರೀ-ಪುರುಷ ಸಮುದಾಯದ ಈ ಆರ್ತನಾದವು ಬಹಳ ಬಲವಾಗಿದ್ದುದರಿಂದ ಬಹಳ ದೂರದ ವರೆಗೂ ಕೇಳಲಾರಂಭಿಸಿತು. ಅವರ ಈ ಆಕ್ರಂದನವನ್ನು ಕೇಳಿದೊಡನೆಯೇ ಪಾರ್ವತೀತನಯನು ಬಹಳ ಕರುಣೆಗೊಂಡು ಮೃತರಾದ ಬಾಲಕರ ಕಳೇಬರಗಳ ಮೇಲೆ ತನ್ನ ಅಮೃತಮಯವಾದ ಕರುಣಾದೃಷ್ಟಿಯನ್ನು ಬೀರಿದನು. ಆ ಕೂಡಲೇ ಮೃತರಾದ ಪೌರ ಬಾಲಕರೆಲ್ಲ ನಿದ್ರೆಯಿಂದೆಚ್ಚರಗೊಳ್ಳುವವ

**ಪಂಚಯೋಜನವಿಸ್ತೀರ್ಣಾಂ ಚೂರ್ಣಿತಾಂ ತೇನ ವಾಟಿಕಾಮ್ ।**
**ಪಶ್ಯಂತೋ ನಾಗರಾಸ್ಸರ್ವೇ ಕತಿಚಿಚ್ಚ ಪಲಾಯಿತಾಃ ॥೧೧॥**

**ಸೋಽಜೀವಯಜ್ಜಲಚರಾನ್ನಿರ್ವಿಷಾಂ ವಾಪಿಕಾಂ ವ್ಯಧಾತ್ ।**
**ಸ್ವ-ಸ್ವಬಾಲಂ ಸಮಾದಾಯ ಸರ್ವೇ ತೇ ಸ್ವಾಲಯಂ ಯಯುಃ ॥೧೨॥**

**ಪ್ರಶಶಂಸುಶ್ಶಿವಾಬಾಲಂ ನಿನಿಂದು[1]ರ್ನಾಸ್ತಿಕಾಃ ಖಲಾಃ ।**
**'ಅಸ್ಯ ಸಂಗಾದರಿಷ್ಟಾನಿ ನಶ್ಯಂತೀ'ತಿ ಪರೇಽಬ್ರುವನ್ ॥೧೩॥**

ರಂತೆ ಪುನರುಜ್ಜೀವನಗೊಂಡರು. ಅನಂತರ ಗಣಪತಿಯು ಅದೇ ದೃಷ್ಟಿಯನ್ನೇ ಅತ್ಯುಗ್ರಗೊಳಿಸಿ ಮರದ ಮರೆಗೆ ಮರೆಸಿಕೊಂಡು ನಿಂತಿದ್ದ ಕೂಟಾಸುರನ ಮೇಲೆ ಕ್ಷೇಪಿಸಿದನು. ಎಂದ ಮೇಲೆ ಕೂಟನು ಉಳಿದಾನೆಯೇ ? ಅವನ ದೇಹದಲ್ಲೆಲ್ಲ ವಿದ್ಯುತ್ಸಂಚಾರವಾದಂತಾಗಲು ಅವನು ನಿಮಿಷಮಾತ್ರದಲ್ಲಿಯೇ ಸತ್ತು ಹೋದನು. ಅವನ ಮೃತ ಶರೀರವು ನೆಲಕ್ಕೆ ಬಿದ್ದು ಬಿಟ್ಟಿತು. ॥೯-೧೦॥

ದೈತ್ಯನ ದೇಹಪಾತದ ಪರಿಣಾಮವಾಗಿ ಐದು ಯೋಜನಗಳ ಸುತ್ತಳತೆಯ ತೋಟದ ಪ್ರದೇಶವು ನುಚ್ಚು-ನುಗ್ಗಾಗಿ ಹೋಯಿತು. ಇದನ್ನೆಲ್ಲ ನಾಗರಿಕರು ನೆಟ್ಟ ನೋಟದಿಂದ ನೋಡುತ್ತ ನಿಂದಿದ್ದರು. ಕೆಲವರಂತೂ ಈ ಅದ್ಭುತವನ್ನು ನೋಡಿ ಹೆದರಿ ನಡುಗಿ ಹೋದರು. ಮತ್ತು ಅಲ್ಲಿ ನಿಂದಿರಲಾರದೇ ಬಹಳ ದೂರದ ವರೆಗೂ ಓಡಿಹೋದರು. ॥೧೧॥

ಅನಂತರ ವಿಷವೇಗದಿಂದ ಮರಣಕ್ಕೆ ಈಡಾದ ಸಕಲ ವಿಧ ಜಲಚರ ಜೀವಿಗಳನ್ನೂ ಇತರ ಪಶು-ಪಕ್ಷಿಗಳನ್ನೂ ಗಣಪತಿಯು ತನ್ನ ಅಮೃತ ಪೂರ್ಣ ದೃಷ್ಟಿಯಿಂದ ಒಮ್ಮೆ ನೋಡಿ, ಉಜ್ಜೀವನಗೊಳಿಸಿದುದು ಮಾತ್ರವಲ್ಲದೇ, ವಿಷಮಯವಾಗಿ ಹೋಗಿದ್ದ ಆ ಭಾವಿಯ ಜಲವನ್ನೆಲ್ಲ ನಿರ್ವಿಷವನ್ನಾಗಿ ಮಾಡಿದನು. ಅನಂತರ ಅಲ್ಲಿ ನೆರೆದಿದ್ದ ನಾಗರಿಕರು ತಮ್ಮ ತಮ್ಮ ಬಾಲಕರನ್ನು ಸಂಗಡ ಕರೆದುಕೊಂಡು ತಮ್ಮ ತಮ್ಮ ಆಲಯಗಳಿಗೆ ತೆರಳಿದರು. ॥೧೨॥

ನಾಗರಿಕರೆಲ್ಲ ಪರಶಿವೆಯ ಸುತನನ್ನು ಬಾಯಿ ತುಂಬ ಹೊಗಳಿದರು. ಅವರ ಪೈಕಿ ನಾಸ್ತಿಕರಾದ ಕೆಲವು ಮೂರ್ಖ ತರುಣರು ಬಾಲಕನನ್ನು ನಿಂದಿಸಿದರು. 'ಕತ್ತೆ ಬಲ್ಲುದೇ ಹತ್ತೀಕಾಳಿನ ಸವಿಯ?' ಎಂಬ ಗಾದೆಗನುಸರಿಸಿ ಮೂರ್ಖರಾದ ಇವರು

---

1 ವಿವರಣೆಗೆ ಪರಿಶಿಷ್ಟವನ್ನು ನೋಡಿ.

ತತಸ್ತೃತೀಯವರ್ಷೇ ತು ಪ್ರಾತಃ ಕಾಲೇಽದ್ರಿಜಾಸುತಃ ।
ವಂಚಯಿತ್ವಾ ಬಹಿರ್ಯಾತೋ ಮುನಿಬಾಲಾಸ್ತಮನ್ವಯುಃ ||೧೪||

ತ ಊಚುಃ

ಬಾಲಕಾ ಊಚುಃ :—

ನಿಶಿ ದೇವ ! ತ್ವಾಂ ಸ್ವಪ್ನೇ ಪಶ್ಯಾಮ ಸರ್ವದಾ ||೧೫||

---

ಸರ್ವೇಶ್ವರ ಗಣಪತಿಯ ಮಹಿಮೆಯನ್ನು ತಿಳಿಯಬಲ್ಲರೇ ? 'ಈ ಬಾಲಕನ ಸಹವಾಸವಿರುವುದರಿಂದಲೇ ಈ ಬಗೆಯ ಸಕಲಾರಿಷ್ಟಗಳೂ ಪರಿಹಾರವಾಗುತ್ತಲಿವೆ' ಎಂದು ತಿಳಿದವರನೇಕರು ಹೇಳಿದರು. ||೧೩||

ಬಾಲಕನಿಗೆ ಎರಡು ವರ್ಷಗಳು ಕಳೆದು ಹೋಗಿ ಮೂರನೆಯ ವರ್ಷವು ಆರಂಭವಾಯಿತು, ಒಂದು ದಿವಸ ಪ್ರಾತಃಕಾಲ ಅದ್ರಿಜಾ (ಗಿರಿಜೆಯ) ಸುತನು ಯಾರೊಬ್ಬ ಬಾಲಕನಿಗೂ ತಾನು ಹೊರಗೆ ಹೋಗುವ ವಿಷಯವನ್ನು ತಿಳಿಸವೇ ಸುಮ್ಮನೆ ಹೊರಗೆ ಹೊರಟು ಬಿಟ್ಟನು. ಆದರೇನು? ಸರ್ವದಾ ಇವನ ಚಿಂತನೆಯಲ್ಲಿಯೇ ಕಾಲಕಳೆಯುತ್ತಲಿದ್ದ ಮುನಿಬಾಲಕರಿಗೆ ಈ ಸಂಗತಿ ತಿಳಿಯದೇ ಇದ್ದೀತೇ ? ಅವರೂ ಧಾವಿಸುತ್ತ ಬಾಲಕನನ್ನು ಅನುಸರಿಸಿ ನಡೆದರು. ||೧೪||

ಹಗಲು-ರಾತ್ರಿಗಳು ಕಳೆದರೂ ಒಬ್ಬರಿಗೊಬ್ಬರು ಭೇಟಿಯಾಗದ್ದರಿಂದ ಹುಡುಗರಿಗೆ ಬಹಳ ಬೇಸರವಾಯಿತು. ಅಕಸ್ಮಾತ್ ಪುನಃ ಭೇಟಿಯಾದೊಡನೆಯೇ ಪ್ರೇಮದಿಂದ ಪರಸ್ಪರ ಅಪ್ಪಿಕೊಂಡರು, ಮತ್ತು ತಮಗುಂಟಾದ ಅನುಭವವನ್ನು ಹೀಗೆಂದು ಹೇಳಲಾರಂಭಿಸಿದರು.

ಬಾಲಕರು :—

ರಾತ್ರಿ ನಾವು ಮಲಗಿರುವಾಗಲೂ ದೇವ ! ನಿನ್ನನ್ನು ಸ್ವಪ್ನದಲ್ಲಿ ಕಾಣುವೆವು.

**ರಾತ್ರಿರ್ಯುಗಸಮಾ ದೇವ ! ಜಾಯತೇ ತ್ವಾಮಪಶ್ಯತಾಮ್ ।**
**ಇದಾನೀಂ ತ್ವಾಂ ನಿರೀಕ್ಷ್ಯೈವ ಪ್ರಸನ್ನಾಸ್ಮೋಽಖಿಲಾ ವಯಮ್ ॥೧೬॥**

**ಕ್ರೀಡಾಮೋಽದ್ಯ ಮಹಾಸತ್ತ್ವ! ದ್ವಂದ್ವೀಭೂಯ ಯಥಾಸುಖಮ್ ।**

**ಕ ಉವಾಚ :—**

**ತತೋಽರ್ಧ ಏಕತೋ ಭೂತ್ವಾ ಪರೇಽರ್ಧೇ ಪರತೋಽಪಿ ಚ ॥೧೭॥**

**ಅಭ್ಯಘ್ನನ್ ಪಂಕಗೋಲೇನ ನಾದಯಂತೋಽಥ ರೋದಸೀ ।**

---

ಒಂದು ದಿವಸದ ಅನುಭವವಲ್ಲ. ಮುಖಸ್ತುತಿಯಂತೂ ಮೊದಲೇ ಅಲ್ಲ. ಸರ್ವದಾ ಹಾಗೆಯೇ ಕಾಣುತ್ತಲಿದ್ದೇವೆ- ॥೧೫॥

ಹಗಲು ವೇಳೆಯಲ್ಲೆಲ್ಲ ನಿನ್ನೊಂದಿಗೇ ಇದ್ದುಬಿಡುವುದರಿಂದ ಆ ಬಗ್ಗೆ ನಮಗೆ ಚಿಂತೆಯೇ ಇರುವುದಿಲ್ಲ. ರಾತ್ರಿಯ ವೇಳೆ ನೀನು ನಿಮ್ಮ ಅರಮನೆಯಲ್ಲಿರುವೆ. ನಾವು ನಮ್ಮ ಮುರಕು ಜೋಪಡಿಯಲ್ಲಿರುವೆವು, ಆಗಮಾತ್ರ ನಿನಗೂ ನಮಗೂ ಭೇಟಿಯಾಗದೆ ಇರುವುದರಿಂದ ರಾತ್ರಿ ಕಾಲವನ್ನು ಕಳೆಯುವುದೆಂದರೆ ಯುಗವನ್ನು ಕಳೆದಂತೆ ಕಷ್ಟವಾಗುವುದು. ಇದೋ, ಈಗ ನಿನ್ನನ್ನು ನೋಡಿದೆವು. ಎಷ್ಟೋ ಉಲ್ಲಾಸವೆನಿಸಿದೆ. ನಮ್ಮಲ್ಲಿ ಯಾರನ್ನು ಬೇಕಾದರೂ ಕೇಳು, ಎಲ್ಲರೂ ಆನಂದಿತರಾಗಿರುವೆವು. ॥೧೬॥

ಈ ದಿನ ಹೊಸ ಬಗೆಯ ಒಂದು ಆಟವನ್ನಾಡೋಣ. ನಾವೆಲ್ಲ ಎರಡು ಭಾಗಗಳಾಗಿ ವಿಂಗಡಿಸಿಕೊಂಡು ಯಥೇಷ್ಟವಾಗಿ ಆಟವಾಡೋಣವೇ ?

ಬ್ರಹ್ಮಾ :—

ಹೀಗೆ ಹೇಳಿ ಅವನನ್ನು ಒಡಂಬಡಿಸಿದರು. ಮತ್ತು ಕೂಡಲೇ ಎರಡು ಭಾಗಗಳಾಗಿ ವಿಂಗಡಿಸಿಕೊಂಡು ಅತ್ತಕಡೆ ಕೆಲವರು, ಇತ್ತ ಕಡೆ ಮತ್ತೆ ಕೆಲವರು ನಿಂತರು. ॥೧೭॥

ಎಷ್ಟೆಂದರೂ ಹುಡುಗರ ಆಟ. ಅದಕ್ಕೆ ನೀತಿ-ನಿಯಮಗಳುಂಟೇ ? ಮನ

ಆಹ್ಲಾದೇನಾಥ ಯುದ್ಧ್ಯಂತೋ ವಿಕರ್ಷಂತಃ ಪರಸ್ಪರಮ್ ॥೧೮॥

ರಮಂತಸ್ತೇ ಯಯುರ್ದೂರಮಾಶ್ರಮಂ ಕಸ್ಯಚಿನ್ಮುನೇಃ ।
ಸರೋವರೇ ತತ್ರ ರೇಮುರ್ಯೋಜನಾಯತವಿಸ್ತರೇ ॥೧೯॥

ಸಿಂಚಂತೋಽಂಜಲಿಭಿರ್ವಾರಿ ದ್ವಂದ್ವೀಭೂತ್ವಾ ಯಥಾ ಪುರಾ ।
ನಿಮಜ್ಯ ಸ್ಕಂಧಮಾರುಹ್ಯ ಮಜ್ಜಯಂತೋ ಬಲಾತ್ಪರಮ್ ॥೨೦॥

---

ಸ್ಸಿಗೆ ತೋರಿದುದು, ಕೈಗಳಿಗೆ ಸಿಕ್ಕುದು ಇವನ್ನೇ ಕ್ರೀಡಾಸಾಧನಗಳನ್ನಾಗಿ ಮಾಡಿಕೊಂಡರು. ಕೇಸರಿನಿಂದ ಕಂದುಕ (ಚೆಂಡು) ಗಳನ್ನು ನಿರ್ಮಿಸಿದರು. ಒಂದು ಗುಂಪಿನವರ ಮೇಲೆ ಮತ್ತೊಂದು ಗುಂಪಿನವರು ಅವನ್ನು ಎಸೆಯಲಾರಂಭಿಸಿದರು. ಇದರ ಪರಿಣಾಮವೇನಾದೀತು ? ಎಂಬ ಕಲ್ಪನೆಯು ಸಹ ಆ ಹುಡುಗರ ಮನಸ್ಸಿಗೆ ಬರಲಿಲ್ಲ. ಇವರು ಹುಡುಗರಾದುದರಿಂದ ಅಷ್ಟರ ಮಟ್ಟಿಗೆ ಪೂರ್ವಾಪರ ವಿಚಾರಗಳು ಬರಲಿಕ್ಕೆ ಸಾಧ್ಯವೂ ಇಲ್ಲ. ತಮ್ಮ ಹೊಡೆತವು ಎದುರಾಳಿಗೆ ತಗುಲಿದಾಗ ' ಹೋ ' ಎಂದು ಹರ್ಷ ಧ್ವನಿಗೈವರು. ತಮಗೆ ಎದುರಾಳಿಗಳಿಂದ ಏಟು ಬಿದ್ದಾಗ ಅದನ್ನು ಸಹಿಸಲಾರದೇ 'ಅಯ್ಯೋ' ಎಂದು ಅಳುವರು. ಅಂತೂ ಇವರ ಕೂಗಾಟದಿಂದ ದಿಕ್ಕುಗಳೆಲ್ಲ ಕಿವುಡು ಕಚ್ಚಿದವು. ಚೆಂದಾಟ ಬೇಸರ ಬಂದಕೂಡಲೇ ಸಂತೋಷಕ್ಕಾಗಿ ಪರಸ್ಪರ ಯುದ್ಧವನ್ನಾಡುವರು. ಒಬ್ಬರನ್ನೊಬ್ಬರು ಹಿಡಿದೆಳೆದಾಡುವರು. ಒಬ್ಬರನ್ನೊಬ್ಬರು ಕೆಡವಲು ಹವಣಿಸುವರು. ॥೧೮॥

ಹೀಗೆಯೇ ಆಟವಾಡುತ್ತ ಬಹಳ ದೂರದಲ್ಲಿದ್ದ ಒಬ್ಬ ಮಹರ್ಷಿಯ ಆಶ್ರಮದ ವರೆಗೂ ನಡೆದುಹೋದರು. ಆ ಆಶ್ರಮದ ಬಳಿ ಒಂದು ಸರೋವರವಿದ್ದಿತು. ಅದರ ಸುತ್ತಳತೆ ಒಂದು ಯೋಜನದಷ್ಟು ಇದ್ದಿತು. ಈ ಬಾಲಕರು ಅದರಲ್ಲಿಳಿದು ಮನಸ್ವಿಯಾಗಿ ಆಟವಾಡಲಾರಂಭಿಸಿದರು. ॥೧೯॥

ಹುಡುಗರಿಗೆ ನೀರನ್ನು ಕಂಡರೆ ಬಹಳ ಆಶೆ. ನೀರಿನಲ್ಲಿಳಿದಾಗಲೂ ಸಹ ಹಿಂದೆ ವಿಂಗಡಿಸಿಕೊಂಡಂತೆ ತಮ್ಮ ತಮ್ಮವರನ್ನು ಎರಡು ಗುಂಪಾಗಿ ವಿಂಗಡಿಸಿಕೊಂಡು ತಮ್ಮ ತಮ್ಮ ಬೊಗಸೆಗಳಿಂದ ಎದುರು ಗುಂಪಿನವರ ಮುಖಗಳಿಗೆ ನೀರನ್ನೆರಚಲಾರಂಭಿಸಿದರು. ಒಬ್ಬರನ್ನೊಬ್ಬರು ನೀರಿನಲ್ಲಿ ಮುಳುಗಿಸುವುದು, ಮೊದಲು ಮುಳುಗಿದವನ ಕತ್ತಿನ ಮೇಲೆ ಕುಳಿತುಕೊಳ್ಳುವುದು, ಅವನ ಪರದಾಟವನ್ನು

ತತೋ ದೈತ್ಯೋ ಮತ್ಸ್ಯರೂಪೀ ತೇಷು ಕ್ರೀಡಾರತೋಽಭವತ್ ।
ಆಸ್ಫಾಲಯನ್ ಕರಾಘಾತೈಸ್ತಜ್ಜಲಂ ತೇಷು ಪುಚ್ಛತಃ ॥೨೧॥

ಕಲುಷಾತ್ತಜ್ಜಲಾದ್ಭಂಗಾಜ್ಜಗ್ಮುಸ್ತೀರಂ ಮುಹುರ್ಮುಹುಃ ।
ತೀರೇ ದೃಷ್ಟ್ವಾದ್ರಿಜಾಪುತ್ರಂ ಮತ್ಸ್ಯಸ್ತನ್ನಿಕಟಂ ಯಯೌ ॥೨೨॥

ವ್ಯಾದಾಯ ವದನಂ ದಧ್ರೇ ತದಂಘ್ರೀ ವಿಚಕರ್ಷ ಚ ।
ನಿನಾಯ 'ಧಾವ, ಧಾವೇ' ತಿ ಕ್ರೋಶಯಂತಂ ಮಹಾಜಲೇ ॥೨೩॥

ನೋಡಿ ನಗುತ್ತ ಚಪ್ಪಾಳೆ ತಟ್ಟುವುದು, ಈ ರೀತಿ ಹುಡುಗರ ಆಟ ಆರಂಭ
ವಾಯಿತು. ॥೨೦॥

ಅಲ್ಲೇ ಒಬ್ಬ ದೈತ್ಯನು ಉದ್ಭವಿಸಿ ಬಂದನು. ಅವನು ಮತ್ಸ್ಯರೂಪಿ. ಮಹಾ
ಬಲಶಾಲಿಯಾಗಿದ್ದನು. ಅವನೂ ಸಹ ಇವರೊಡನೆ ಆಟವಾಡಲು ಸೇರಿಕೊಂ
ಡನು, ರಾಕ್ಷಸನು ತನ್ನ ರೆಕ್ಕೆಗಳಿಂದ ನೀರನ್ನು ಬಹಳ ಬಲವಾಗಿ ಬಡಿಯುವನು.
ಬಾಲದಿಂದ ನೀರನ್ನೆತ್ತಿ ಬಾಲಕರ ಕಣ್ಣು- ಮೂಗುಗಳಿಗೆಲ್ಲ ತುಂಬುವಂತೆ ಚಿಮ್ಮು
ವನು, ಈ ರೀತಿ ನಾನಾರೀತಿಯಿಂದ ಹಿಂಸಿಸತೊಡಗಿದನು. ॥೨೧॥

ಮತ್ಸ್ಯಾಸುರನ ಸರಸರ ಸುಳಿದಾಟ ಪದೇ ಪದೇ ಮುಳುಗೇಳುವುದು,
ಬಾಲ, ರೆಕ್ಕೆಗಳನ್ನು ಪಟ ಪಟ ಬಡಿಯುವುದು. ಇದರಿಂದಾಗಿ ಆ ಸರೋವರದ
ಸ್ವಚ್ಛವಾದ ನೀರೆಲ್ಲ ಕಲಕಿ ಹೋಗಿ ಬಗ್ಗಡವಾಯಿತು. ಮತ್ತು ಇವರ ಆಟಕ್ಕೆ
ತುಂಬ ಅಡಚಣೆಯಾಯಿತು. ಇದನ್ನು ಕಂಡು ಬಾಲಕರು ಪದೇ ಪದೇ ತೀರಪ್ರದೇ
ಶಕ್ಕೆ ಬರಬೇಕಾಗುತ್ತ ಬಂದಿತು. ಗಣಪತಿಯೂ ಸಹ ಈ ಬಾಲಕರೊಂದಿಗೆ ತೀರ
ದಲ್ಲಿ ನಿಂದಿದ್ದನು. ಇದನ್ನು ನೋಡಿದ ಕೂಡಲೇ ಮತ್ಸ್ಯಾಸುರನು ಬೇಗ ಬೇಗನೆ
ಈಜುತ್ತ ಗಣಪತಿಯ ಸಮೀಪಕ್ಕೆ ಬಂದು ತಲುಪಿದನು. ॥೨೨॥

ಬರುವಾಗ ತನ್ನ ಬಾಯಿಯನ್ನು ತೆರೆದುಕೊಂಡೇ ಬಂದನು. ಬಾಲಕ
ನನ್ನು ಸಮೀಪಿಸಿದ ಕೂಡಲೇ ಗಣಪತಿಯ ಕಾಲುಗಳೆರಡನ್ನೂ ಹಿಡಿದು ನೀರಿನೊ
ಳಕ್ಕೆ ಎಳೆದುಬಿಟ್ಟನು. ಆಗ ಬಾಲಕನು 'ಓಡಿ ಬನ್ನಿ. ಮೇಲಕ್ಕೆತ್ತಿರಿ' ಎಂದು

ನಿಮಜ್ಜ್ಯ ಸ ಜಲೇ ತೇನ ಚಿರಕಾಲಂ ಮಹಾಸುರಃ ।
ಆರೋದಿಷುರ್ಮುನಿಸುತಾ ಮಗ್ನಂ ವೀಕ್ಷ್ಯಾದ್ರಿಜಾಸುತಮ್ ॥೨೪॥

ಹಾಹಾಕಾರಂ ಪ್ರಕುರ್ವಂತಃ ಕರಸ್ಪೃಷ್ಟೋಷ್ಠಸಂಯುತಮ್ ।
ಕೇಚಿದ್ಗತ್ವಾ ಸರೋ ರಮ್ಯಂ ಪಶ್ಯಂತೋ ದದೃಶುರ್ನ ತಮ್ ॥೨೫॥

ಭವಾನೀತಾಡನಾದ್ಭೀತಾಃ ಕೇಚಿದ್ಬಾಲಾಃ ಪಲಾಯಿತಾಃ ।
ಕೇಚಿತ್ತೇ ಬಾಲಕಾ ಗತ್ವಾಶಂಸರ್ಮಗ್ನಂ ಶಿಶುಂ ಚ ತಮ್ ॥೨೬॥

---

ಕೂಗಿಕೊಳ್ಳುತ್ತಿರುವಾಗಲೇ ಮತ್ಸ್ಯನು ಆವೇಶದಿಂದ ಅವನನ್ನು ಎಳೆದುಕೊಂಡು ಹ್ರದ (ಮಡು) ವಿರುವ ಕಡೆಗೆ ಕೊಂಡೊಯ್ದನು. ॥೨೩॥

ಅದುವರೆಗೂ ಹಾಗೂ ಹೀಗೂ ಮೇಲೆ ನಿಂದಿದ್ದ ಬಾಲಕರಿಗೆ ಬಾಲಕ–ಮತ್ಸ್ಯ ಇವರು ಕಂಡು ಬಂದರು. ಮುಂದೆ ಸ್ವಲ್ಪ ಹೊತ್ತಿನಲ್ಲೇ ಎಂದರೆ ಮಡುವಿನ ಭಾಗ ಬಂದೊಡನೆಯೇ ಮತ್ಸ್ಯವು ಬಾಲಕನನ್ನು ಬಲಾತ್ಕಾರದಿಂದ ಮುಳುಗಿಸಿ ತಾನೂ ಮುಳುಗಿ ಕುಳಿತನು. ಎಷ್ಟು ವೇಳೆ ಕಳೆದರೂ ಯಾರೊಬ್ಬರೂ ಮೇಲಕ್ಕೇಳಲೇ ಇಲ್ಲ. ಆಗ ಹುಡುಗರಿಗೆ ‘ಗಿರಿಜಾತನಯನು ನೀರಿನಲ್ಲಿ ಮುಳುಗಿ ಹೋದನು’ ಎಂಬುದು ನಿಶ್ಚಯವಾಯಿತು. ಮುಗಿಲೇ ಹರಿಬೀಳುವಂತೆ ಎಲ್ಲರೂ ಒಮ್ಮೆಲೆ ಘಟ್ಟಿ ಧ್ವನಿಯಿಂದ ಅಳಲಾರಂಭಿಸಿದರು. ॥೨೪॥

ಬಾಲಕರ ದುಃಖವು ಸೀಮಾತೀತವಾಯಿತು. ಮುಖವಾದ್ಯವನ್ನೇ ಆರಂಭಿಸಿ ಹಾಹಾಕಾರ ಮಾಡಿದರು. ಅವರಲ್ಲಿ ಸ್ವಲ್ಪ ಬುದ್ಧಿಶಾಲಿಯಾದವರು, ಸರೋವನ್ನು ಒಂದೆರಡು ಸಾರೆ ಸುತ್ತಿ ‘ಬಾಲಕನು ಎಲ್ಲಿಯಾದರೂ ಕಂಡಾನೆಯೇ’ ಎಂದು ಹುಡುಕಿದರು. ಬಾಲಕನು ಎಲ್ಲೂ ಕಂಡುಬರಲಿಲ್ಲ. ಇದಾದ ಮೇಲಂತೂ ಇತರ ಬಾಲಕರು ಬಹಳ ನಿರಾಶೆಪಟ್ಟರು. ॥೨೫॥

ಭವಾನೀದೇವಿಯು ಎಲ್ಲಿ ತಮ್ಮನ್ನು ಶಿಕ್ಷಿಸುವಳೋ ಎಂದು ಹೆದರಿದ ಕೆಲವು ಅಳ್ಳೆದೆಯ ಬಾಲಕರು ಯಾರಿಗೂ ಹೇಳದೇ, ಏನನ್ನೂ ಕೇಳದೇ ಪಲಾಯನ ಸೂಕ್ತವನ್ನು ವೇಗವೇಗವಾಗಿ ಪಠಿಸಿದರು. ಆದರೆ ವಿವೇಕವುಳ್ಳ ಕೆಲವು ಬಾಲಕರು

**ಬಾಲಕಾ ಊಚುಃ :—**

**ಸರ್ವಾನ್ನಃ ಕ್ರೀಡತೋ ಹಿತ್ವಾ ನೀತೋ ಮತ್ಸ್ಯೇನ ಬಾಲಕಃ |**

**ಕ ಉವಾಚ :—**

**ಶ್ರುತ್ವಾ ತದ್ವಚನಂ ಗೌರೀ ಮೂರ್ಛಿತಾ ಪತಿತಾ ಭುವಿ ||೨೭||**

**ಮುಹೂರ್ತಾಚ್ಚೇತನಾಂ ಲಬ್ಧ್ವಾ ರೋದಮಾನಾ ಯಯೌ ಬಹಿಃ |**
**ಮುಂಚಂತೀ ನೇತ್ರಜಂ ವಾರಿ [1] ಮಸ್ತಕಾತ್ಪತಿತಾಂಚಲಾ ||೨೮||**

---

ಹಿಂಜರಿಯದೆ ಪಾರ್ವತಿಯ ಬಳಿಗೆ ಬಂದು ನಡೆದ ದುರ್ಘಟನೆಯ ವಿಷಯವನ್ನು ವಿಶದವಾಗಿ ಹೀಗೆಂದು ಹೇಳಿದರು. ||೨೬||

ಬಾಲಕರು :—

ತಾಯೀ ! ನಾವೆಲ್ಲರೂ ಒಟ್ಟಿಗೆ ಆಟವಾಡುತ್ತಲಿದ್ದೆವು. ಹೀಗಿರುವಾಗ ಒಂದು ಮತ್ಸ್ಯ ಬಂದು ನಮ್ಮ ಪೈಕಿ ಯಾರನ್ನೂ ಮುಟ್ಟದೇ ಬಾಲಕ, ಗಣೇಶ ನನ್ನು ಮಟ್ಟಿಗೆ ಎಳೆದುಕೊಂಡು ಹೊರಟು ಹೋಯಿತು.

ಬ್ರಹ್ಮಾ :—

ಈ ಮಾತುಗಳು ಪಾರ್ವತಿಯ ಕಿವಿಗಳಿಗೆ ಸಿಡಿಲಿನಂತೆ ಬಡಿದವು. ಅವಳು ಒಂದು ಕ್ಷಣ ಸಹ ಎಚ್ಚರದಿಂದಿರಲಾರದೇ ಒಡನೆಯೇ ಸಂಜ್ಞಾವಿಹೀನಳಾಗಿ ನೆಲದ ಮೇಲೆ ಬಿದ್ದುಬಿಟ್ಟಳು. ||೨೭||

ಸಖಿಯರ ಶೈತ್ಯೋಪಚಾರದಿಂದಲೂ, ಮಗನ ಮೇಲಿನ ಮಮತೆಯಿಂದಲೂ ಸ್ವಲ್ಪ ಹೊತ್ತಿನೊಳಗಾಗಿಯೇ ಪುನಃ ಎಚ್ಚರಗೊಂಡಳು. ದುಃಖವು ಅವಳನ್ನು ಅತಿಯಾಗಿ ಆವರಿಸಿತು. ಥಟ್ಟನೆಯಾಗಿ ಅಳುತ್ತಲೇ ಮನೆಯನ್ನು ಬಿಟ್ಟು ಹೊರಕ್ಕೆ ಬಂದುಬಿಟ್ಟಳು. ಅವಳ ಕಣ್ಣುಗಳಿಂದ ದುಃಖಾಶ್ರು ಧಾರಾಕಾರವಾಗಿ

---

ವಿವರಣೆಗೆ ಪರಿಶಿಷ್ಟವನ್ನು ನೋಡಬಹುದು.

ಸ್ಖಲಂತೀ ನಿಃಶ್ವಸಂತೀ ಚ ಪತಂತೀ ಧರಣೀತಲೇ ।
ಸಖ್ಯಸ್ತಾಮನ್ವಯುಃ ಕಾಶ್ಚಿದ್ಧಿತ್ವಾ ಕಾರ್ಯಾಣಿ ಸತ್ವರಾಃ ॥೨೯॥

ಸಾ ತು ತೀರಂ ಶೀಘ್ರತರಮಾಗತಾ ಸಖಿಭಿಃ ಸಹ ।
ಮುನಯಸ್ತಮುದಂತಂ ಚ ಶ್ರುತ್ವಾಯಾತಾಃ ಸರಃ ಪ್ರತಿ ॥೩೦॥

ಅಗಾಧೇಽಂಭಸಿ ತೇ ಕೇಚಿನ್ಮಗ್ನಾ ನಾಪುರುಮಾಸುತಮ್ ।
ತಾಮೂಚುರ್ಜನನೀಂ ಕೇಚಿನ್ಮಗ್ನಃ ' ನೋ ಬಾಲಕೋ ಜಲೇ ' ॥೩೧॥

ಸುರಿಯಲಾರಂಭಿಸಿತು. ಅವಳು ಓಡಿಬಂದ ರಭಸಕ್ಕೆ ತಲೆಯ ಮೇಲಿದ್ದ ಸೆರಗು ಜಾರಿ ಕೆಳಕ್ಕೆ ಬಿದ್ದು ಬಿಟ್ಟಿತು. ದೇವಿಗೆ ಅದರ ಲಕ್ಷ್ಯ ಸಹ ಉಳಿಯಲಿಲ್ಲ, ॥೨೮॥

ನಡೆದು ಬರುವಾಗ ಅನೇಕ ಸಲ ಎಡವಿದಳು. ನಿಟ್ಟುಸಿರನ್ನು ಎಡೆಬಿಡದೇ ಬಿಡುತ್ತಲಿದ್ದಳು. ಕೆಲವು ವೇಳೆಯಂತೂ ನೆಲಕ್ಕೆ ಬಿದ್ದೇ ಬಿಟ್ಟಳು. ಉನ್ಮಾದದಂತಿರುವ ದೇವಿಯ ಈ ದುಃಸ್ಥಿತಿಯನ್ನು ಕಂಡು ಸಖಿಯರು ಘಾಬರಿಗೊಂಡರು. ಹಾಗೂ ತಾವು ಮಾಡುತ್ತಲಿದ್ದ ಕಾರ್ಯಗಳನ್ನು ಅಷ್ಟಷ್ಟಕ್ಕೇ ಬಿಟ್ಟು ಜಗದೀಶ್ವರಿಯನ್ನು ಹಿಂಬಾಲಿಸಿ ಓಡಿ ನಡೆದರು. ॥೨೯॥

ಎಲ್ಲಿಯೂ ನಿಲ್ಲದೇ ದೇವಿಯು ಓಡೋಡುತ್ತಲೇ ಒಂದು ಕ್ಷಣದೊಳಗಾಗಿ ಸರೋವರದ ತೀರಕ್ಕೆ ತನ್ನ ಸಖಿಯರೊಂದಿಗೆ ಬಂದು ಸೇರಿದಳು. ' ಹಾಹಾ ' ಎನ್ನುವಷ್ಟರಲ್ಲಿ ಪುರಂತಪ ಈ ಸುದ್ದಿಯು ಎಲ್ಲರ ಕಿವಿಗಳನ್ನೂ ಮುಟ್ಟಿತು. ಮುನಿಗಳಿಗೆ ಈ ವರ್ತಮಾನ ತಲುಪಿದೊಡನೆಯೇ ತಮ್ಮತಮ್ಮ ಕೃಷ್ಣಾಜಿನ, ಯೋಗದಂಡ, ಕಮಂಡಲು ಇವನ್ನೆಲ್ಲ ತೆಗೆದುಕೊಂಡು ಆ ಸ್ಥಳಕ್ಕೆ ಓಡುತ್ತ ಬಂದರು. ॥೩೦॥

ಪಾರ್ವತಿಯೊಡನೆ ಸಮದುಃಖಿಗಳಾಗಿ ಸರೋವರದ ಸಮೀಪಕ್ಕೆ ಬಂದಿದ್ದವರಲ್ಲಿ ಈಜುವುದಕ್ಕೆ ಅಭ್ಯಾಸವಿರುವ ಕೆಲವು ಜನರು ಅಗಾಧವಾದ ಆ ಸರೋವರದ ಜಲದಲ್ಲಿ ಧುಮ್ಮಿಕ್ಕಿ ಎಲ್ಲೆಡೆಯೂ ಹುಡುಕಿ ಬೇಸತ್ತರು. ಅನಂತರ ಅವರು ಅರ್ಧ ಮಟ್ಟಕ್ಕೆ ನೀರಿನಿಂದ ಮೇಲಕ್ಕೆದ್ದು ಬಂದು ಪರ್ವತರಾಜಕುಮಾರಿಯನ್ನು

ತೈಃ ಪುನರ್ನ ಚ ದೃಷ್ಟಶ್ಚ ಮತ್ಸ್ಯೋದರಗತಃ ಸುತಃ ।
ರೋದನಂ ಪುನರಾರೇಭೇ ಗೌರೀ ಶ್ರುತ್ವಾ ತು ತದ್ವಚಃ ॥೩೨॥

ಉಮೋವಾಚ :—

ಮಮ ಪ್ರಾಣಾ ಗಮಿಷ್ಯಂತಿ ವಿನಾ ತಂ ಸರ್ವಸುಂದರಮ್ ।
ಅತಿಕ್ಲೇಶೇನ ಸಂಲಬ್ಧಮತಿಪೌರುಷಮೀಶ್ವರಮ್ ॥೩೩॥

ಚರಾಚರಗುರುಂ ಮಾಯಾತೀತಂ ಮಾಯಾವಿನಂ ಪರಮ್ ।
ಅನಂತಕೋಟಿಬ್ರಹ್ಮಾಂಡನಾಯಕಂ ವಿಶ್ವಸಂಭವಮ್ ॥೩೪॥

ಕುರಿತು 'ಈ ನೀರಿನಲ್ಲೆಲ್ಲೂ ಬಾಲಕನು ಕಾಣಿಸುವುದಿಲ್ಲ.' ॥೩೧॥

ಮೀನುರೂಪದ ರಾಕ್ಷಸನ ಉದರದಲ್ಲಡಗಿದ್ದ ಗಣೇಶನು ಮೇಲ್ಮೇಲೆ ಹುಡ ಕುತ್ತಿದ್ದ ಈ ಜನರಿಗೆ ಕಂಡುಬರುವ ಬಗೆ ಎಂತು ? 'ಬಾಲಕನು ಇಲ್ಲಿಲ್ಲ' ಎಂಬ ಮಾತುಗಳನ್ನು ಕೇಳಿದ ಕೂಡಲೇ ಪಾರ್ವತಿಯು ಪುನಃ ಹೀಗೆಂದು ರೋದಿ ಸುವುದಕ್ಕೆ ಆರಂಭಿಸಿಬಿಟ್ಟಳು. ॥೩೨॥

ಗೌರೀ :....

ಅಯ್ಯೋ ! ಅಂತಹ ಸುರಸುಂದರ ಬಾಲಕನನ್ನು ನಾನು ಕಾಣಲಾರೆನಾದರೆ, ಖಂಡಿತವಾಗಿಯೂ ನನ್ನ ಪ್ರಾಣಗಳು ನಿಲ್ಲಲಾರವು. ಈ ಮಗನನ್ನು ಪಡೆಯ ಬೇಕಾದರೆ ನಾನು ಬಹಳ ಪಟ್ಟಿಗೆ ಕ್ಲೇಶವನ್ನು ಅನುಭವಿಸಿರುವೆನು. ಅವನೂ ಸಾಮಾನ್ಯನಾದವನಲ್ಲ. ವಯಸ್ಸಿಗೆ ಮೀರಿದ ಶಕ್ತಿ-ಸಾಹಸಗಳುಳ್ಳವನು. ಸಕ ಲಕ್ಕೂ ಈಶ್ವರನಾದವನು. ॥೩೩॥

ಈ ಚರಾಚರ ವಸ್ತುಗಳಿಗೆಲ್ಲ ಇವನು ಮಾರ್ಗದರ್ಶಕನಾದವನು. ಮಾಯೆ ಯ ಆವರಣವನ್ನೂ ಮೀರಿದವನು. ಆ ಮಾಯೆಗೂ ಒಡೆಯನಾದ ದೊಡ್ಡ ಮಾಯಾವಿ, ಇವನು. ಲೋಕದಲ್ಲಿ ಇವನಿಗಿಂತಲೂ ಉತ್ತಮನಾದವನು ಬೇರೊ ಬ್ಬನಿರುವುದಿಲ್ಲ. ಅನೇಕ ಕೋಟಿ ಬ್ರಹ್ಮಾಂಡಗಳೂ ಇವನ ಆಜ್ಞೆಯಂತೆ ನಡೆದು

**ಕ ಉವಾಚ :—**

**ಲಲಾಟಂ ನಿಜಘ್ನಾನೋರೂ ವಾರಂ ವಾರಂ ಕರೇಣ ಸಾ ।**
**ರುರುದುರ್ಮುನಯೋ ವೀಕ್ಷ್ಯ ರುದಂತೀಂ ತಾಂ ತಥಾವಿಧಾಮ್ ॥೩೫॥**

**ತತಃ ಕಾರುಣಿಕೋ ದೇವೋ ನಿಶಮ್ಯ ಕರುಣಂ ವಚಃ ।**
**ಸ್ವಯಮಂಡಜರೂಪೋಽಭೂದ್ಯುಯುಧಾತೇ ಪರಸ್ಪರಮ್ ॥೩೬॥**

**ತದಾಘಾತೇನ ಜಲಜಾ ಮೃತಾಸ್ತೀರೇ ನಿಪೇತಿರೇ ।**

ಕೊಳ್ಳುವುವು. ಈ ವಿಶ್ವಕ್ಕೆಲ್ಲ ನನ್ನ ಈ ಸುಕುಮಾರನೇ ಬೀಜಭೂತನಾಗಿದ್ದಾನೆ. ॥೩೪॥

ಬ್ರಹ್ಮಾ :—

ಹೀಗೆಂದು ನಾನಾ ಬಗೆಯಿಂದ ಬಾಲಕನ ಗುಣಗಳನ್ನು ಅಳುತ್ತಲೇ ಗಾನ ಮಾಡಿದಳು. ತನ್ನ ಕೈಗಳಿಂದ ಹಣೆಯನ್ನೂ, ಎದೆಯನ್ನೂ ಪದೇ ಪದೇ ಬಡಿದುಕೊಳ್ಳಲಾರಂಭಿಸಿದಳು. ಕರುಳನ್ನು ಕರಗಿಸುತ್ತಿದ್ದ ಇವಳ ಅಳುವಿನ ಧ್ವನಿಯನ್ನು ಕೇಳಿ ಪರಮಸಾತ್ತ್ವಿಕರೂ, ವೀತರಾಗರೂ ಆದ ಮುನಿಗಳು ಸಹ ಎಳೆಯ ಮಕ್ಕಳಂತೆ ದೊಡ್ಡ ಧ್ವನಿ ತೆಗೆದು ಅಳಲಾರಂಭಿಸಿದರು. ॥೩೫॥

ಮೇನಕಾತ್ಮಜೆ, ಮಹಾಮುನಿಗಳು ಇವರೆಲ್ಲರ ಸಕರುಣ ರೋದನ ಧ್ವನಿಯನ್ನು ಕೇಳಿ, ಬಾಲಕ ; ಗಣೇಶನು 'ಇನ್ನು ಹೆಚ್ಚು ಕಾಲ ತಡೆಯಬಾರದು' ಎಂದು ನಿಶ್ಚಯಿಸಿದನು. ಮತ್ತು ತನ್ನ ಅತಿ ಮಾನುಷ ದೇಹವನ್ನು ಮೀನಿನ ದೇಹದಂತೆ ಕೂಡಲೇ ಮಾರ್ಪಡಿಸಿಬಿಟ್ಟನು. ಮೀನಾಗಿ ಮಾರ್ಪಟ್ಟ ದೇವನು ಬಹಳ ಕಲಿತನದಿಂದ ಮತ್ಸ್ಯಾಸುರನೊಂದಿಗೆ ಕಡಿದಾಡತೊಡಗಿದನು. ಇವರಿಬ್ಬರೂ ಪರಸ್ಪರ ಪ್ರಬಲವಾಗಿ ಹೋರಾಡಲಾರಂಭಿಸಿದರು. ॥೩೬॥

ಇವರಿಬ್ಬರ ಬಡಿದಾಟದಿಂದ ಝುರ್ಝುರಿತಗಳಾದ ಆ ಸರೋವರದಲ್ಲಿದ್ದ

ದಂಷ್ಟ್ರಾಭ್ಯಾಂ ದಶತಃ ಸ್ಮೋಭೌ ಘ್ನತಃ ಸ್ವಪುಚ್ಛಘಾತತಃ ॥ ೩೭

ಉದರಂ ಸ್ವೋದರೇಣೈವ ಪೃಷ್ಠಂ ಪೃಷ್ಠೇನ ಜಘ್ನತುಃ ।
ಏವಂ ಚಿರತರಂ ಯುದ್ಧಂ ಕೃತ್ವಾ ದಾರುಣಮೋಜಸಾ ॥೩೮॥

ಮತ್ಸ್ಯರೂಪಂ ಗುಣೇಶೋಽಥ ಬಲಾಜ್ಜಘ್ನೇ ಮುಖೇ ಮುಖಮ್ ।
ಭಗ್ನಾಸ್ಯೋ ಭಗ್ನದರ್ಪೋಽಸೌ ಭಗ್ನನೇತ್ರೋಽಭವಚ್ಚ ಸಃ ॥೩೯॥

ಪಪಾತ ಜಲಮಧ್ಯೇ ಸ ಪೃಷ್ಠೇಽಗಾತ್ಸ ಉಮಾಸುತಃ ।
ಯತ್ರ ಯತ್ರ ಯಯೌ ಸೋಽಥ ತತ್ರ ತತ್ರಾಪ್ಯಸೌ ಯಯೌ ॥೪೦॥

---

ಅನೇಕ ಜಲಚರ ಜಂತುಗಳು ಕೂಡಲೇ ಮೃತಿಯನ್ನೈದಿದವು. ಮತ್ತು ಆ ಪ್ರಾಣಿಗಳ ಮೃತ ಶರೀರಗಳು ಅಲೆಗಳ ಹೊಡೆತಕ್ಕೆ ಸಿಕ್ಕು ತೀರ ಪ್ರದೇಶಕ್ಕೆ ಬಂದುಬಿದ್ದವು. ದೊಡ್ಡ ದೊಡ್ಡ ಮೀನುಗಳಾದ ಇವರಿಬ್ಬರೂ ತಮ್ಮ ತೀಕ್ಷ್ಣ ಕೋರೆಯ ಹಲ್ಲುಗಳಿಂದ ಒಬ್ಬರ ದೇಹವನ್ನು ಮತ್ತೊಬ್ಬರು ಕಡಿದು ಗಾಯಪಡಿಸಿದರು. ಚಾವಟಿಯಂತಿದ್ದ ತಮ್ಮ ಬಾಲಗಳಿಂದ ಎದುರಾಳಿಯನ್ನು ಬಲವಾಗಿ ಹೊಡೆದರು. ॥೩೭॥

ಶತ್ರುವಿನ ಹೊಟ್ಟೆಯನ್ನು ತಮ್ಮ ಹೊಟ್ಟೆಗಳಿಂದ ತಿಕ್ಕಿದರು. ಬೆನ್ನಿನಿಂದ ಬೆನ್ನಿಗೆ ಗುದ್ದಿದರು. ಈ ಎರಡೂ ಬಹಳ ಬಲಿಷ್ಠ ಪ್ರಾಣಿಗಳೆಂದ ಬಳಿಕ, ಎಷ್ಟು ದ್ವೇಷ–ಪೌರುಷಗಳಿಂದ ಕಾದಾಡಿರಬಹುದು ? ಈ ಮತ್ಸ್ಯ ಯುದ್ಧವು ಬಹಳ ದೀರ್ಘಕಾಲ ನಡೆಯಿತು. ಯಾರೊಬ್ಬರೂ ಕದನದಿಂದ ಹಿಂಜರಿಯಲಿಲ್ಲ. ॥೩೮॥

ಆಗ ಗುಣೇಶನು ಮತ್ಸ್ಯರೂಪಿಯಾದ ಅಸುರನ ಕರಾಳ ಮುಖಕ್ಕೆ ತನ್ನ ಮುಖದಿಂದ ಬಲವಾಗಿ ಒಮ್ಮೆ ಹೊಡೆದನು- ಈ ಏಟಿಗೆ ಮತ್ಸ್ಯಾಸುರನ ಮೂತಿಯು ಛಿನ್ನ-ಭಿನ್ನವಾಗಿ ಹೋಯಿತು, ಆವನ ಕಣ್ಣುಗುಡ್ಡೆಗಳು ಒಡೆದುಹೋದವು. ಆಗ ಅವನಿಗಿದ್ದ ಸೊಕ್ಕು, ಕದನ ಕುತೂಹಲ ಎಲ್ಲವೂ ಝುರ್ರನೆ ಇಳಿದು ಹೋದವು. ॥೩೯॥

ಈ ವೇದನೆಯನ್ನು ರಾಕ್ಷಸನಿಂದ ತಡೆದುಕೊಳ್ಳುವುದಾಗಲಿಲ್ಲ. ಸ್ವಲ್ಪವೂ

ಕ್ವಚಿಲ್ಲೀನಂ ತು ತಂ ದೃಷ್ಟ್ವಾ ಪುಚ್ಛಾಘಾತೈರತಾಡಯತ್ ।
ತತ್ಪುಚ್ಛಂ ತು ಮುಖೇ ಧೃತ್ವಾ ಗುಣೇಶೋ ಬಹಿರಾನಯತ್ ॥೪೧॥

ಚುಚೂರ್ಣ ನಿಜಭಾರೇಣ ಗತಾಸುಂ ವಿಸಸರ್ಜ ಸಃ ।
ತ್ಯಜಂತಂ ರುಧಿರಂ ವಕ್ತ್ರಾನ್ನದಂತಂ ಬಲವತ್ತರಮ್ ॥೪೨

ತೇನ ಶಬ್ದೇನ ಮಹತಾ ಚಂಕಪೇ ಭುವನತ್ರಯಮ್ ।

ತಡಮಾಡದೇ ಅಗಾಧ ಜಲವಿರುವ ಪ್ರದೇಶಕ್ಕೆ ಅವನು ವೇಗವಾಗಿ ಈಜುತ್ತ ನಡೆದು ಬಿಟ್ಟನು. ಆದರೆ, ಉಮಾಸುತನು ಅವನನ್ನು ಬಿಟ್ಟಾನೆಯೇ? ಅವನೂ ರಾಕ್ಷಸನನ್ನು ಬೆನ್ನಟ್ಟಿ ಈಜತೊಡಗಿದನು. ರಾಕ್ಷಸನು ಸರೋವರದ ಯಾವ ಯಾವ ಸ್ಥಳಗಳಿಗೆ ಹೋಗಿ ಅಡಗಿಕೊಳ್ಳಲು ಯತ್ನಿಸಿದನೋ, ವಿನಾಯಕನು ತಾನೂ ಸಹ ಅದೇ ವೇಗದಿಂದ ರಾಕ್ಷಸನನ್ನು ಬೆನ್ನಟ್ಟಿ ಅಲ್ಲಲ್ಲಿಗೆ ನುಗ್ಗಿ ಪೀಡಿಸತೊಡಗಿದನು. ||೪೦||

ಹೀಗಿರುವಾಗ ಮತ್ಸ್ಯಾಸುರನು ಒಂದು ಆಯಕಟ್ಟಾದ ಮಡುವಿನ ಸ್ಥಳವನ್ನು ನೋಡಿ ಅಲ್ಲಿ ಒಮ್ಮೆಲೇ ಮುಳುಗಿಬಿಟ್ಟನು. ಇದನ್ನು ನೋಡಿದೊಡನೆಯೇ ಮತ್ಸ್ಯರೂಪಿಯಾದ ಭಗವಾನ್ ಗಣಪತಿಯು ಗರಗಸದಂತಿದ್ದ ತನ್ನ ಬಾಲದಿಂದ ದೈತ್ಯನನ್ನು ಒಮ್ಮೆ ಬಲವಾಗಿ ಬಡಿದುಬಿಟ್ಟನು. ಈ ಏಟಿಗೆ ಮತ್ಸ್ಯಾಸುರನು ತಲೆ ಕೆಳಗಾಗಿ ಉರುಳಿದನು. ಆಗ ದೇವನು ಅವನ ಬಾಲವನ್ನು ತನ್ನ ಬಾಯಿಯಿಂದ ಕಚ್ಚಿಕೊಂಡು ವೇಗವಾಗಿ ಮೇಲೆದ್ದು ಬಂದನು. ||೪೧||

ಮತ್ತು ಜಲದಲ್ಲಿದ್ದ ಕಠಿಣವಾದ ಒಂದು ಬಂಡೆಯ ಮೇಲೆ ಅವನನ್ನಿರಿಸಿ ಅವನ ಮೇಲೆ ತನ್ನ ವಿಶಿಷ್ಟ ಭಾರವನ್ನೂ ಹೇರಿದನು. ಇನ್ನು ಮತ್ಸ್ಯನು ಉಳಿಯಬಲ್ಲನೇ ? ಪುಡಿಪುಡಿಯಾಗಿ ಹೋದನು. ಅನಂತರ ಮುಮೂರ್ಷುವಾದ ಆ ಮತ್ಸ್ಯಾಸುರನನ್ನು ಬಾಲಕನು ಬಹು ದೂರ ಬಿಸುಟಿದನು. ಆ ಅಸುರನ ಬಾಯಿಯಿಂದ ರಕ್ತವು ಧಾರಾಕಾರವಾಗಿ ಹರಿಯಿತು. ಮತ್ಸ್ಯಾಸುರನು ಪ್ರಾಣಗಳನ್ನು ವಿಸರ್ಜಿಸುವಾಗ ಬಹಳ ಘೋರವಾಗಿ ಅರಚಿದನು. ||೪೨||

ಅವನು ಅರಚಿದ ಘೋರಶಬ್ದಕ್ಕೆ ತ್ರಿಭುವನಗಳೂ ಗಡಗಡ ನಡುಗಿ

ನಿರ್ಯಯೌ ಜಲಮುತ್ಸೃಜ್ಯ ಲಿಲಿಂಗ ಪಾರ್ವತೀಂ ತದಾ ॥೪೩॥

ಆನಂದಮಗ್ನಾ ಗೌರೀ ತಂ ಸ್ತನಪಾನಂ ಮುದಾ ದದೌ ।

ಗೌರ್ಯುವಾಚ :—

ಮಾಮಪೃಷ್ಟ್ವಾಥ ಕುತ್ರ ತ್ವಂ ಗತೋಽಸಿ ? ಬಾಲಕೈಃ ಸಹ ॥೪೪॥

ಯದ್ಯದಾಯಾತಿ ವಿಘ್ನಂ ತೇ ತತ್ತದ್ದೈವಾದ್ವಿನಶ್ಯತಿ ।
ಮರೀಚೇರಕ್ಷಣಾಚ್ಛಂಭೋಃ ಕೃಪಯಾ ಜಗದೀಶಿತುಃ ॥೪೫॥

---

ಹೋದವು. ಅನಂತರ ದೇವನು ಪುನಃ ಬಾಲಕನ ರೂಪವನ್ನು ತಳೆದು ನೀರಿನಿಂದ ಮೇಲೆದ್ದು ತೀರ ಪ್ರದೇಶಕ್ಕೆ ಬಂದು, ಜನ ಜಂಗುಳಿಯು ನಡುವೆ ನಡುಗುತ್ತ ನಿಂದಿದ್ದ ತನ್ನ ತಾಯಿ ಪಾರ್ವತಿಯನ್ನು ಮಮತೆಯಿಂದ ಆಲಿಂಗಿಸಿದನು. ॥೪೩॥

ಆಗ ಗೌರಿಗುಂಟಾದ ಆನಂದವನ್ನು ಬಣ್ಣಿಸಲಿಕ್ಕೆ ನನ್ನ ಚತುರ್ಮುಖಗಳೂ, ಆದಿಶೇಷನ ಸಹಸ್ರ ಮುಖಗಳೂ ಸಾಲವು. ಅಂಬೆಯು ಗಣಪತಿಯನ್ನು ಎದೆಗವಚಿಕೊಂಡು ಸಂತೋಷದಿಂದ ಸ್ತನ್ಯವನ್ನು ಪಾನಮಾಡಿಸಿದಳು. ಮತ್ತು ಮಗನನ್ನು ಕುರಿತು ನಿರ್ವೇದವ (ಬೇಜಾರ) ನ್ನು ವ್ಯಕ್ತಪಡಿಸುವ ಧ್ವನಿಯಿಂದ ಹೀಗೆ ಮಾತನಾಡಿಸಿದಳು.

ಗೌರೀ :—

ಪುತ್ರ ! ನನ್ನನ್ನು ಕೇಳದೇ ಈ ಬಾಲಕರ ಸಂಗಡ ಎಲ್ಲಿಗೆ ಹೋಗಿದ್ದೆ ? ॥೪೪॥

ನೀನು ಅದಾವ ನಕ್ಷತ್ರದಲ್ಲಿ ಜನಿಸಿದೆಯೋ ಕಾಣೆ. ವಿಘ್ನಗಳ ಒಂದರ ಮೇಲೊಂದರಂತೆ ಬರುತ್ತಲೇ ಇವೆ. ಮತ್ತು ಎಲ್ಲ ವಿಘ್ನಗಳೂ ಪ್ರಾಣಾಂತಕರವಾಯೇ ಇವೆ. ಆದರೆ ದೈವಾನುಗ್ರಹ. ಗುಡ್ಡದಂತೆ ಬಂದ ವಿಪತ್ತುಗಳು ಮಂಜಿನಂತೆ ಕರಗಿಹೋಗುತ್ತಿವೆ. ಇದಕ್ಕೆ ಮರೀಚಿ ಮಹರ್ಷಿಗಳು ಕಟ್ಟಿದ 'ರಕ್ಷಾಕವಚ,'

ಕುರುಷೇ ಕಿಂ ಚಪಲತಾಂ ? ರಕ್ಷಿತವ್ಯಃ ಕಥಂ ಮಯಾ ? ।
ತ್ವದ್ವಿಯೋಗಾನ್ಮಮ ಪ್ರಾಣಾ ಗಮಿಷ್ಯಂತಿ ಪ್ರಿಯಾರ್ಭಕ ! ॥೪೬॥

ಕ ಉವಾಚ :—

ತತೋ ಮುನಿಗಣಾಃ ಪ್ರೋಚುಃ

ಮುನಯ ಊಚುಃ :—

ತ್ವಾಂ ವಿನಾ ದುಃಖಿತಾ ವಯಮ್ ।

---

ಹಾಗೂ ನಿನ್ನ ಜನಕನಾದ ಜಗದೀಶ್ವರ ; ಜಟಾಜೂಟನ ಕೃಪೆ ಕಾರಣಗಳಾಗಿವೆ. ॥೪೫॥

ಇನ್ನೊಮ್ಮೆ ಇಂತಹ ತುಂಟತನವನ್ನು ಮಾಡುವಿಯ ? ನೀನು ದಿನ ದಿನಕ್ಕೂ ದುಷ್ಟತನವನ್ನು ಹೆಚ್ಚಿಸಿಕೊಂಡು ಹೋದರೆ, ನಾನು ಹೇಗೆ ನಿನ್ನನು ಸಂರಕ್ಷಿಸಲಿ ? 'ಏನನ್ನಾದರೂ ಮಾಡಿಕೊಳ್ಳಲಿ. ನನಗೇನಂತೆ' ಎಂದು ಬಿಟ್ಟು ಬಿಡೋಣವೆಂದರೆ, ಹಾಳು ಮಮತೆಯು ನನ್ನನ್ನು ಬಾಧಿಸುತ್ತಿದೆ, ಪ್ರಿಯಕುಮಾರ. ಒಂದು ಕ್ಷಣ ಕಾಲವೇನಾದರೂ ನಿನ್ನನ್ನಗಲಿ ಹೋದೆನೆಂದರೆ, ನನ್ನ ಪ್ರಾಣಗಳೇ ಹಾರಿ ಹೋಗುವುವು. ಗಣಪತಿ ! ನನ್ನ ಭಾಗಕ್ಕೆ 'ಬಾಯಿಗೆ ಹಾಕಿಕೊಂಡ ಬಿಸಿ ತುಪ್ಪದಂ'ತಾಗಿರುವೆ ನೀನು. ಇತ್ತ ತುಪ್ಪವನ್ನೂ ಉಗುಳಲಾರೆ, ಅತ್ತ ಗಂಟಲನೂ ಸುಡಿಸಿಕೊಳ್ಳಲಾರೆ. ಹೀಗಾಯಿತು ನನ್ನ ಪರಿಸ್ಥಿತಿ. ॥೪೬॥

ಬ್ರಹ್ಮಾ :—

ಆಗ ಮುನಿಗಳೆಲ್ಲ ಮುಂದೆ ಬಂದು ತಮಗುಂಟಾದ ಮನೋವ್ಯಾಕುಲತೆಯನ್ನೂ ದೇವನಿಗೆ ಮನವಿಮಾಡಿಕೊಂಡರು.

ಮುನಿಗಳು :—

ಭಗವನ್! ನೀನು ನಮಗೆ ಗೋಚರನಾಗದಿದ್ದರೆ, ನಾವೆಲ್ಲರೂ ದುಃಖಸಾಗರ

ಇದಾನೀಂ ಪುನರಾನಂದಂ ಪ್ರಾಪ್ತಾಸ್ತ್ವದ್ದರ್ಶನಾದ್ವಿಭೋ ! ||೪೭||

ಕ ಉವಾಚ :—

ಪುಪೂಜತುರ್ಮುನಯೋ ನಾನಾ ದ್ರವ್ಯೈಃ ಸಖ್ಯಃ ಸ್ತ್ರಿಯೋಽಪಿ ಚ ।

ನಮಸ್ಕೃತ್ಯ ಗುಣೇಶಂ ತಂ ಪ್ರಾರ್ಥಯನ್ ಸರ್ವ ಏವ ತಮ್ ||೪೮||

ಸ್ತ್ರಿಯ ಊಚುಃ :—

ವಯಂ ತ್ವದೀಯಾ ದೇವೇಶ ! ನ ನಸ್ತ್ಯಕ್ತುಂ ತ್ವಮರ್ಹಸಿ ।

---

ದಲ್ಲಿ ಮುಳುಗಿದಂತೆಯೇ ಸರಿ. ನೀನು ಮಟ್ಟಿಗೆ ನಮ್ಮನ್ನಗಲಿ ಅನಾಥರನ್ನಾಗಿ ಮಾಡಬೇಡ. ಇದೋ, ಈಗ ನಿನ್ನ ದಿವ್ಯಮಂಗಲಮೂರ್ತಿಯನ್ನುಕಂಡೆವು, ಆನಂದಿತರಾಗಿದ್ದೇವೆ. ನಮ್ಮ ಸುಖ-ದುಃಖಗಳು ಸರ್ವಾತ್ಮನಾ ನಿನ್ನ ಇರುವಿಕೆಯನ್ನೇ ಅವಲಂಬಿಸಿವೆ. ವಿಭೋ ! ಹೆಚ್ಚು ಹೇಳಲಾರೆವು. ||೪೭||

ಬ್ರಹ್ಮಾ :-

ಅನಂತರ ಮುನಿಗಳು, ಸಖೀಜನರು, ಇತರ ಸ್ತ್ರೀವರ್ಗ ಹೆಚ್ಚೇನು ? ಅಲ್ಲಿ ನೆರೆದಿದ್ದವರೆಲ್ಲರೂ ಸ್ವಾಮಿಯ ಮುಂದೆ ಬಂದು ಭಕ್ತಿಯುತರಾಗಿ ಸಕಲವಿಧ ಪೂಜೋಪಕರಣಗಳಿಂದ ಅರ್ಚಿಸಿದರು. ಪದೇ ಪದೇ ನಮಸ್ಕರಿಸಿದರು. ಮತ್ತೆ ಎಲ್ಲರೂ ಗಣಪತಿಯನ್ನು ಹೀಗೆಂದು ಪ್ರಾರ್ಥಿಸಿದರು. ||೪೮||

ಸರ್ವರು :—

ಭಗವನ್ ! ಗಣಪತೇ ! ಕೇವಲ ಪಾಮರರಾದ ನಾವು ಸರ್ವಾತ್ಮನಾ ನಿನ್ನವರು. ದೇವೇಶ! ಆದುದರಿಂದ ನಮ್ಮನ್ನು ತ್ಯಜಿಸುವುದು ನಿನಗೆ ಸರ್ವಥಾ ಉಚಿತವಾದುದಲ್ಲ.

ಕ ಉವಾಚ :—

ತತೋಮಾ ಬಾಲಮಾದಾಯ ಯಯೌ ಸ್ವಸ್ಥಾನಮುತ್ತಮಮ್ ॥೪೯॥

ಅನಂತರಂ ಗಣಾಃ ಸಖ್ಯೋ ಮುನಯೋ ಹರ್ಷನಿರ್ಭರಾಃ ।
ಮಾರ್ಗಮಧ್ಯೇಽಪರಃ 'ಶೈಲ'ನಾಮಾ ದೈತ್ಯೋ ಮಹಾಬಲಃ ॥೫೦॥

ಸರ್ವಶತ್ರುಹರೋ ನಕ್ರದೃಢಾಂಗೋಽಶನಿನಾಶನಃ ।
ಗಿರೀಣಾಂ ಯಸ್ಯ ಶಬ್ದೇನ ದಾರಣಂ ಜಾಯತೇ ಕ್ಷಣಾತ್ ॥೫೧॥

ಬ್ರಹ್ಮ :—

ಎಲ್ಲರೂ ಬಹು ದೈನ್ಯದಿಂದ ಹೀಗೆ ಪ್ರಾರ್ಥಿಸಿ ನಿಂದ ಬಳಿಕ, ಉಮೆಯು ಬಾಲಕನನ್ನೆತ್ತಿಕೊಂಡು ಉತ್ತಮವಾದ ತನ್ನ ಮಂದಿರಕ್ಕೆ ನಡೆದುಬಿಟ್ಟಳು. ॥೪೯॥

ಅನಂತರ ಪ್ರಮಥ ಗಣಗಳೂ, ಸಖೀಜನರೂ, ಮುನಿಗಳೂ ಪರಮಾನಂದ ಭರಿತರಾಗಿ ದೇವಿ, ಪಾರ್ವತಿಯನ್ನು ಹಿಂಬಾಲಿಸಿ ನಡೆದರು. ಆದರೆ, ವಿಪತ್ತು ಇಷ್ಟಕ್ಕೇ ಕೊನೆಗೊಂಡಿರಲಿಲ್ಲ. ಮಹಾ ಮೃತ್ಯುಸ್ವರೂಪನಾದ ರಾಕ್ಷಸನೊಬ್ಬನು ಇವರೆಲ್ಲರ ಬರುವಿಗಾಗಿಯೇ ಕಾದುಕೊಂಡು ಮಾರ್ಗ ಮಧ್ಯೇ ಕುಳಿತು ಬಿಟ್ಟಿದ್ದನು. ಅವನ ಹೆಸರು 'ಶೈಲಾಸುರ' ಪರ್ವತವು ಎಷ್ಟು ಬಲಿಷ್ಠವೋ ಆ ಹೆಸರಿನ ಈ ಅಸುರನೂ ಅಷ್ಟೇ ಬಲಿಷ್ಠನಾಗಿದ್ದನು. ಅವನ ದೇಹವು ಶೈಲಾಕಾರವಾದುದು ॥೫೦॥

ಅವನ ಜೀವಮಾನದಲ್ಲಿ ತನಗೆ ಶತ್ರುಗಳಾದವರೆಲ್ಲರನ್ನೂ ನಿಶ್ಶೇಷವಾಗಿ ಕೊಂದು ಹಾಕಿದ್ದನು. 'ಹೊಸ ಹಗೆಗಳಾರಾದರೂ ಉದ್ಭವಿಸಿಯಾರೇ ?' ಎಂದು ಸರ್ವದಾ ಅವರನ್ನು ಅರಸುತ್ತಲೇ ಇದ್ದ ೧. ಅವನ ದೇಹ ಮೊಸಳೆಯಂತೆ ತರಿ ತರಿಯಾಗಿಯೂ, ದೃಢಾಂಗಗಳುಳ್ಳದ್ದಾಗಿಯೂ ಇದ್ದಿತು. ಸಿಡಿಲೇನಾದರೂ ಅವನ ಮೇಲೆ ಬಿದ್ದರೆ, ಆ ಅಶನಿಯೇ ಚೂರು ಚೂರಾಗುತ್ತಲಿದ್ದಿತು. ಅಷ್ಟು ದೃಢವಾದುದು, ಅವನ ದೇಹ. ಅವನೊಮ್ಮೆ ಕೂಗಿದನೆಂದರೆ, ಪರ್ವತಗಳೆಲ್ಲ ಆ ಶಬ್ದಕ್ಕೆ ಒಂದೇ ನಿಮಿಷದಲ್ಲಿ ಬಿರುಕು ಬಿಟ್ಟುಬಿಡುವುವು. ॥೫೧॥

ಮಾರ್ಗಂ ನಿರುಧ್ಯ ಸಹಸಾ ಸಂಸ್ಥಿತೋ ರೋದಸೀ ಸ್ಪೃಶನ್ ।
ದ್ವಿಯೋಜನ ಮಸ್ತಕೋಽಸಾವಥೋ ದ್ವಾದಶಯೋಜನಃ ॥೫೨॥

ಸರಸ್ತಡಾಗ ವೃಕ್ಷಾಶ್ಚ ಲತಾ ಯತ್ರ ವಿಭಾಂತಿ ಚ ।
ಕ್ರೀಡಂತಿ ಸಿಂಹ-ಶಾರ್ದೂಲಾ ವಾರಣಾ ಯಕ್ಷ-ರಾಕ್ಷಸಾಃ ॥೫೩॥

ಸರ್ವೇ ತೇ ವಿಹ್ವಲಾಃ ಪ್ರೋಚುಃ 'ಕಿಮಿದಂ ವಿಘ್ನಮುತ್ಥಿತಮ್ ?
ತದಂತಿಕೇ ಸ್ಥಿತಾ ಗೌರೀ ತೇಽಪಿ ಸರ್ವೇ ಸ್ಥಿತಾಸ್ತದಾ ॥೫೪॥

ಇಂತಹ ಶೈಲಾಸುರನು ತನ್ನ ದೇಹವು ಆಕಾಶ-ಭೂಮಿಗಳೆರಡನ್ನೂ ಆವರಿಸಿ ನಿಲುವಂತೆ ವೃದ್ಧಿಗೊಳಿಸಿ, ಜನ ಸಂಚಾರದ ದಾರಿಯನ್ನು ತಡೆದು ನಿಂತು ಬಿಟ್ಟನು. ಅವನ ದಪ್ಪವಾದ ತಲೆಯು ಎರಡು ಯೋಜನಗಳಷ್ಟು ಸ್ಥಳವನ್ನು ಆಕ್ರಮಿಸಿದ್ದಿತು. ಇತರ ಕೆಳಭಾಗದ ಅವನ ದೇಹವು ಹನ್ನೆರಡು ಯೋಜನಗಳಷ್ಟು ಭೂಮಿಯನ್ನು ವ್ಯಾಪಿಸಿ ನಿಂದಿದ್ದಿತು. ॥೫೨॥

ಸರಸ್ಸು, ತಡಾಗಗಳು, ಮಹಾಮಹಾ ವೃಕ್ಷಗಳು, ಲತೆ ಇವೆಲ್ಲ ಇದುವರೆಗೂ ಶೋಭಿಸುತ್ತಿದ್ದುವು. ಒಮ್ಮೆಲೇ ಇವನ ವ್ಯಾಪ್ತಿಯಿಂದ 'ಇವೆಯೋ, ಇಲ್ಲವೋ' ಎಂಬಂತಾದವು. ಋಷಿಗಳ ಆಶ್ರಮಗಳೆಂದ ಮೇಲೆ, ಅಲ್ಲಿ ವಾಸಿಸುವ ಜಾತಿ ವೈರ್ಟಪ್ರಾಣಿಗಳೂ ಸಮರಸಭಾವದಿಂದ ವಿಹರಿಸುತ್ತಿದ್ದವಷ್ಟೇ? ಅದರಂತೆ ಯಕ್ಷ-ರಾಕ್ಷಸರೂ ಅಲ್ಲಿ ವಾಸವಾಗಿದ್ದರು. ಎಲ್ಲರಿಗೂ ಈ ಶೈಲಾಸುರನು ಮಹಾಮೃತ್ಯುವಾಗಿ ತೋರಿ ಬರಲಾರಂಭಿಸಿದನು. ಎಲ್ಲರೂ ಎದೆ ನಡುಗಿದರು. 'ಪುನಃ ಇದಾವ ವಿಘ್ನ ಬಂತಪ್ಪ ? ' ಎಂದು ಬೊಬ್ಬೆ ಇಟ್ಟರು. ಅತಿ ಭಯಾನಕವಾದ ಈ ಅದ್ಭುತ ದೃಶ್ಯವನ್ನು ಕಂಡಕೂಡಲೇ ಎಲ್ಲರೂ ಸಮದುಃಖಿಗಳಾದುದರಿಂದ ಅವಿಭಕ್ತ ಕುಟುಂಬಿಗಳಂತಾದರು. ಸ್ತ್ರೀ-ಪುರುಷರೆಂಬ ಭೇದವು ಸಹ ಅಳಿಸಿಹೋಯಿತು. ಆದುದರಿಂದ ಅವರೆಲ್ಲರೂ ಒಂದು ಕಡೆ ಗುಂಪಾಗಿ ಸೇರಿಕೊಂಡು 'ಮುಂದೇನು ಗತಿ ? ' ಎಂದು ಚಿಂತಿಸುತ್ತ ನಿಂತರು. ಗೌರಿಯೂ ಸಹ ತನ್ನ ಬಾಲಕನೊಂದಿಗೆ ಅಲ್ಲಿಯೇ ಇದ್ದಳು. ॥೫೩-೫೪॥

ತತಸ್ತೇ ಮುನಯಃ ಪ್ರೋಚುಃ

ಮುನಯ ಊಚುಃ :—

ಕದಾ ದ್ರಕ್ಷ್ಯಾಮ ಯೋಷಿತಃ? ।
ಅಪತ್ಯಾನಿ, ಗುಣೇಶಸ್ಯ ಕದಾ ಸ್ಯಾದತ್ರ ವಿಕ್ರಮಃ ? ॥೫೫॥
ಗಮಿಷ್ಯತಿ ವೃಥಾ ಹೋಮಕಾಲೋಽಯಂ ನಃ ಸ್ವಧಾಕ್ರಿಯಾಃ ।

ಇದರಿಂದ ಅನುಷ್ಠಾನಪರರಾಗಿದ್ದ ಮುನಿಗಳಿಗೂ, ಇತರ ಗೃಹಸ್ಥರಿಗೂ ಬಹಳ ಘಾಬರಿಯಾಯಿತು. ಉಪನಯನಾರಭ್ಯ ಇದುವರೆಗೂ ಎಂತಹ ವಿಷಮ ಸಂದರ್ಭ ಒದಗಿದಾಗ್ಯೂ ಒಮ್ಮೆ ಕೂಡ ಅನುಷ್ಠಾನದ ಕಾಲವನ್ನು ಅವರು ಮೀರಿ ದವರಲ್ಲ. ಪ್ರಕೃತ ಹೋಮ(ಅಗ್ನಿಹೋತ್ರ)ಕಾಲವು ಸಮೀಪಿಸುತ್ತಿದ್ದುದರಿಂದಲೂ, ಪತ್ನಿಯರ ಸಾನ್ನಿಧ್ಯವಿಲ್ಲದೇ ಹೋಮಗಳನ್ನು ಮಾಡಲು ಬರುತ್ತಿರಲಿಲ್ಲವಾಗಿಯೂ ಅವರಿಗುಂಟಾದ ಘಾಬರಿಯು ಕ್ಷಣ-ಕ್ಷಣಕ್ಕೂ ಹೆಚ್ಚಾಗತೊಡಗಿತು. ಆಗ ಅವರು ಹೀಗೆಂದು ಮಾತನಾಡಿಕೊಂಡರು.

ಮುನಿಗಳು :—

ನಮ್ಮ ನಮ್ಮ ಗೃಹಿಣಿಯರನ್ನೂ, ಪುತ್ರರನ್ನೂ ಎಂದಿಗೆ ನೋಡುವೆವೋ, ಕಾಣೆ ವಲ್ಲ ? ಇದುವರೆಗೂ ಇರದಿದ್ದ ಈ ಪರ್ವತವು ನಮಗೂ ಮತ್ತು ಅವರಿಗೂ ನಡುವೆ ಈ ಪರಿಯಾಗಿ ಬೆಳೆದು ನಿಂತುಬಿಟ್ಟಿದೆಯಲ್ಲ ? ಮುಂದೇನು ಗತಿ ? ಈ ವಿಘ್ನವನ್ನು ಪರಿಹರಿಸಲು ಗುಣೇಶನೇಕೆ ಇನ್ನೂ ಮುಂದುವರಿದು ಬಂದಿರಲಿಕ್ಕಿಲ್ಲ ? ಅವನು ಎಂದಿಗೆ ಪರಾಕ್ರಮವನ್ನು ತೋರುವನೋ, ಅದೂ ಗೊತ್ತಾಗಲೊಲ್ಲದು. ॥೫೫॥

ಹೋಮಕಾಲವು ವ್ಯರ್ಥವಾಗಿ ಮೀರಿ ಹೋಗುತ್ತಲಿದೆಯಲ್ಲವೇ ? ದೇವ-ಪಿತೃಕಾರ್ಯಗಳೆಲ್ಲ ಲುಪ್ತವಾಗಿ ಹೋಗುವುವಲ್ಲವೇ ? ಮುಂದೇನು ಗತಿ ?

ಕ ಉವಾಚ :—

ಗೌರೀ ಜಗಾದ ತಾನ್ ಸರ್ವಾನ್

ಗೌರ್ಯುವಾಚ :—

ಮಾ ಖೇದಂ ಕರ್ತುಮರ್ಹಥ ? ||೫೬||

ಮಮಾಪಿ ಚಿಂತಾ ಸಂಪ್ರಾಪ್ತಾ ಶಂಕರಸ್ಯ ಹಿ ಜಾಯತೇ |

ಕ ಉವಾಚ :—

ಶ್ರುತ್ವಾ ವಾಕ್ಯಾನಿ ತಾನ್ಯಾಶು ಗುಣೇಶೋ ಬುದ್ಧಿಮತ್ತರಃ ||೫೭||

ಬ್ರಹ್ಮಾ :—

ಋಷಿಗಳು ಈ ರೀತಿ ಚಿಂತಿಸುತ್ತಿರುವಾಗ ಇವರಷ್ಟೇ ಕಳವಳಕ್ಕೆ ಒಳಗಾದ ಗೌರೀದೇವಿಯು ಅವರ ದುಃಖವನ್ನು ಈ ರೀತಿ ಸಮಾಧಾನ ಮಾಡತೊಡಗಿದಳು.

ಗೌರೀ :—

ಮುನಿವರ್ಯರೇ ! ನೀವು ಖೇದಪಡಬೇಕಾದ ಪ್ರಮೇಯವಿರುವುದಿಲ್ಲ. ||೫೬||

ಭಗವಾನ್ ಶಂಕರನನ್ನು ನೋಡುವುದು ಹೇಗೆ? ಎಂದು? ಎಂಬ ಚಿಂತೆಯು ನನ್ನನ್ನಾದರೂ ವಿಪರೀತವಾಗಿ ಬಾಧಿಸುತ್ತಲಿದೆ. ನಾನೂ ನಿಮ್ಮೊಡನೆ ಸಮದುಃಖಿಯಾಗಿರುವೆನು. ಇದರಂತೆ ಶಂಕರನು ಸಹ ನಮ್ಮನ್ನು ನೋಡಲು ಆತುರಪಡುತ್ತಲಿದ್ದಾನೆ. ಆದುದರಿಂದ ಸರ್ವೇಶ್ವರನೂ, ಸರ್ವ ಸಮರ್ಥನೂ ಆದ ಮಹಾದೇವನು ಯಾವುದಾದರೊಂದು ಪರಿಹಾರೋಪಾಯವನ್ನು ಮಾಡಿಯೇ ತೀರುವನು.

ಬ್ರಹ್ಮಾ :—

ಬಹಳ ಸೂಕ್ಷ್ಮದರ್ಶಿಯಾದ ಗಣಪತಿಯು ಇವರ ನುಡಿಗಳಿಂದ ಪ್ರಕೃತ ಅವರಿ

ಪ್ರಗೃಹ್ಯ ತು ವಿರಾಡ್ರೂಪಂ ಶ್ವಾಸಮಾತ್ರಾನ್ನಿರಾಕರೋತ್ ।
ದದೃಶುರ್ನ ಚ ತದ್ರೂಪಂ ಮೋಹಿತಾ ಮುನಯೋಽಪಿ ತೇ ॥೫೮॥

ತಚ್ಛ್ವಾಸಯೋಗಾತ್ಸಗಿರಿರ್ಬಭ್ರಾಮ ಗಗನೇ ತದಾ ।
ಆಶ್ಚರ್ಯಂ ಪರಮಂ ಪ್ರಾಪ್ತಾಸ್ಸರ್ವೇ ತೇ ತಂ ಪ್ರಶಂಸಿರೇ ॥೫೯॥

ವಾತ್ಯಾಗತಂ ಯಥಾ ಪತ್ರಂ ತತೋಽಸೌ ಪತಿತೋ ಭುವಿ ।

---

ಗೊಗಿದ ವಿಘ್ನದ ನೈಜ ಸ್ಥಿತಿಯನ್ನು ಅರಿತನು. ॥೫೭॥

ಒಡನೆಯೇ ಗಣಪತಿಯು ವಿರಾಡ್ರೂಪವನ್ನುತಳೆದನು. ಪರ್ವತ ರೂಪಿಯಾದ ರಾಕ್ಷಸನ ಮೇಲೆ ಬಲವಾದ ಒಂದು ಶ್ವಾಸವನ್ನು ಊದಿದನು. ಬಿರುಗಾಳಿಯ ಹೊಡೆತಕ್ಕೆ ಸಿಲುಕಿದ ಒಣಗಿದ ಎಲೆಯಂತೆ ಇವರೆಲ್ಲರೆದುರಿಗೆ ಆಕಾಶ-ಭೂಮಿಗಳನ್ನುಆವರಿಸಿಕೊಂಡು ಅದ್ಭುತಾಕಾರವಾಗಿ ನಿಂದಿದ್ದ ಪರ್ವತವು ಭರ್ರನೆ ಹಾರುತ್ತ ಅಂತರಿಕ್ಷಕ್ಕೆ ನಡೆದುಬಿಟ್ಟಿತು. ತಪಸ್ವಿಗಳು ಅಷ್ಟೈಶ್ವರ್ಯ ಸಿದ್ಧಿ ಸಂಪನ್ನರಾಗಿದ್ದರೂ ದೈವೀಮಾಯಾ ಮಹಿಮೆಯಿಂದ ಅವರಾರಿಗೂ ದೇವನ ಈ ವಿರಾಡ್ರೂಪವು ಗೋಚರವಾಗಲಿಲ್ಲ. ॥೫೮॥

ತಮ್ಮೆದುರು ದಿಗಂತದಂತೆ ನಿಂತಿದ್ದ ಈ ಪರ್ವತವು ದೇವನುಸುರಿದ ಶ್ವಾಸ ಪ್ರಭಾವದಿಂದ ತರಗಿನಂತಾಗಿ ಅಂತರಿಕ್ಷದಲ್ಲಿ ಹಾರಾಡುತ್ತಿರುವುದನ್ನು ನೋಡಿ ಅಲ್ಲಿ ನೆರೆದಿದ್ದ ದೇವ, ಮುನಿಗಳೂ, ಇತರ ಮಾನವರೂ ದಂಗುಬಡಿದುಹೋದರು. ದೇವನ ವಿರಾಡ್ರೂಪ ಕಣ್ಣುಗಳಿಗೆ ಕಂಡಿರಲಿಲ್ಲವಾಗಿದ್ದರೂ, ಅವನು ಬಲವಾಗಿ ಉಸಿರು ಬಿಟ್ಟುದು ಮಾತ್ರ ಎಲ್ಲರಿಗೂ ಅತಿ ಸ್ಪಷ್ಟವಾಗಿ ಕೇಳಿಸಿತು. ಆದುದರಿಂದ ಈ ಬಾಲಕನಿಂದಲೇ ಪರ್ವತರೂಪೀ ಈ ರಕ್ಕಸನು ಮೇಲಕ್ಕೆ ಹಾರಿಸಲ್ಪಟ್ಟನೆಂಬ ಸಂಗತಿ ಜನರಿಗೆ ತಿಳಿಯಿತು. ಆಗ ಅವರೆಲ್ಲರೂ ದೇವದೇವನಾದ ಮಹಾಗಣಪತಿಯನ್ನು ಒಮ್ಮನಸ್ಸಿನಿಂದ ಪ್ರಶಂಸಿಸಿದರು ॥೫೯॥

ಗಾಳಿಗೆ ಸಿಕ್ಕಿದ ಎಲೆಯಂತೆ ಆಸುರನು ಅಂತರಾಳದಲ್ಲಿ ಹಾರಾಡುತ್ತಲಿದ್ದ

ಸಹಸ್ರಧಾಭವಚ್ಛೈಲಃ ಪುನರ್ವೃಕ್ಷಾನಚೂರ್ಣಯತ್ ||೬೦||

ತತಸ್ತೇ ಮುನಯಃ ಪ್ರೋಚುಃ

ಮುನಯ ಊಚುಃ :—

ಸಾಧು, ಸಾಧು ಗಣೇಶ್ವರ ! ।

ದೂರೀಕೃತಮರಿಷ್ಟಂ ನಃ ಸ್ವಾಶ್ರಮಸ್ಥಾ ವಯಂ ಸುಖಮ್ ||೬೧||

ವಸಾಮಸ್ತ್ವತ್ಪ್ರಸಾದೇನ ಸ್ವ-ಸ್ವಕರ್ಮರತಾ ಭೃಶಮ್ :

ನೆಂದು ಹೇಳಿದೆನಷ್ಟೇ ? ಗಾಳಿಯು ಮಂದವಾದೊಡನೆ ತರಗು ನೆಲಕ್ಕುದುರಿ ಬೀಳುವಂತೆ ಹಾರುವ ಶಕ್ತಿ ರಾಕ್ಷಸನಿಗೆ ಕುಂಠಿತವಾಗಲು ಅವನೂ ಸಹ ಉರುಳು ರುಳಿ ಧೊಪ್ಪನೆ ನೆಲಕ್ಕೆ ಬಿದ್ದುಬಿಟ್ಟನು. ಬಿದ್ದ ಹೊಡೆತಕ್ಕೆ ತಾನು ಸಾವಿರಾರು ಚೂರುಗಳಾಗುವುದಲ್ಲದೇ ಸುತ್ತ-ಮುತ್ತಲೂ ಇದ್ದ ಗಿಡ-ಮರ.ಬಳ್ಳಿಗಳನ್ನೆಲ್ಲ ಧ್ವಂಸ ಗೊಳಿಸಿದನು. ||೬೦||

ಆಗ ಜನರಿಗುಂಟಾದ ಆನಂದ ವರ್ಣನಾತೀತವಾಗಿದ್ದಿತು. ಎಲ್ಲ ಮುನಿ ಗಳೂ ಮುಂದೆ ಬಂದು ಗಣಪತಿಯನ್ನು ಈ ರೀತಿಯಾಗಿ ಪುನಃ ಸ್ತುತಿಸಿದರು.

ಮುನಿಗಳು :—

ಗುಣೇಶ್ವರ ! ಸಾಧು-ಸಾಧು. ನಮ್ಮೆಗೆಲ್ಲರಿಗೂ ಉಂಟಾಗಿದ್ದ ಮಹದ ರಿಷ್ಟವನ್ನು ನೀನು ನಿಮಿಷಮಾತ್ರದಲ್ಲಿ ದೂರೀಕರಿಸಿರುವೆ, ಇನ್ನು ಸುಖವಾಗಿ ನಮ್ಮ ನಮ್ಮ ಆಶ್ರಮಗಳಿಗೆ ಹೋಗಿ ತಲುಪುವೆವು. ದೊಡ್ಡದೊಂದು ಆತಂಕವೇ ತಪ್ಪಿ ಹೋಯಿತು. ||೬೧||

ನಿನ್ನ ಪರಮಾನುಗ್ರಹ ಪ್ರಭಾವದಿಂದಲೇ ನಾವು ನಮ್ಮ ಆಶ್ರಮಗಳಲ್ಲಿ ಸುಖ ದಿಂದ ವಾಸಮಾಡುತ್ತಲಿದ್ದೇವೆ. ಅಂತೆಯೇ ನಮ್ಮ ನಮ್ಮ ವರ್ಣ ಹಾಗೂ ಆಶ್ರ

ಕ ಉವಾಚ :—

ಏವಮುಕ್ತ್ವಾ ಚ ನತ್ವಾ ಚ ಪೃಷ್ಟ್ವಾ ಸಂಪೂಜ್ಯ ತಂ ಯಯುః ||೬೨||

ಪಾರ್ವತೀ ಚ ತಮಾದಾಯ ವಿವೇಶ ನಿಜಮಂದಿರಮ್ !
ಸಖ್ಯಶ್ಚ ಮುನಿಪತ್ನ್ಯಶ್ಚ ಪೃಷ್ಟ್ವಾ ತಾಂ ಸ್ವ-ಗೃಹಂ ಯಯುః ||೬೩||

ಇದಂ ಯః ಶೃಣುಯಾನ್ಮರ್ತ್ಯః ಸರ್ವತ್ರ ಸುಖಮಾಪ್ನುಯಾತ್ ।
ಆಯುರಾರೋಗ್ಯಮೈಶ್ವರ್ಯಂ ಸರ್ವತ್ರ ವಿಜಯಂ ತಥಾ ||೬೪||

---

ಮೋಚಿತ ಕರ್ಮಗಳನ್ನು ನಿರಾತಂಕವಾಗಿ ಆಚರಿಸುತ್ತಲಿದ್ದೇವೆ.

ಬ್ರಹ್ಮ :—

ಈ ರೀತಿ ಸ್ತುತಿಸಿ, ದೇವನಿಗೆ ವಿನಯದಿಂದ ನಮಸ್ಕರಿಸಿ ಪೂಜಿಸಿದರು. ಹಾಗೂ ಅವನ ಅನುಮತಿಯನ್ನು ಪಡೆದು ತಮ್ಮ ತಮ್ಮ ಸ್ಥಳಗಳಿಗೆ ತೆರಳಿದರು. ||೬೨||

ಇತ್ತ ಪರ್ವತರಾಜಕುಮಾರಿಯು ತನ್ನ ಮಗನನ್ನೆತ್ತಿಕೊಂಡು ತನ್ನ ಅರಮನೆಯನ್ನು ಪ್ರವೇಶಿಸಿದಳು. ಸಖೀಜನರು, ಮುನಿಪತ್ನಿಯರು ಮಹಾದೇವಿಯ ಅಪ್ಪಣೆಯನ್ನು ಹೊಂದಿ ತಾವೂ ತಮ್ಮ ತಮ್ಮ ವಸತಿಗಳನ್ನು ಕುರಿತು ಹೊರಟುಹೋದರು. ||೬೩||

ಪರಮ ಪಾವನವಾದ ಈ ಕಥಾಭಾಗವನ್ನು ಯಾವ ಮಾನವನು ಭಕ್ತಿ-ಶ್ರದ್ಧೆಗಳಿಂದ ಶ್ರವಣಮಾಡುವನೋ, ಅವನು ಆಯುರಾರೋಗ್ಯೈಶ್ವರ್ಯಾದಿಗಳಿಂದ ಸಂಪನ್ನನಾಗುವನು. ಅವನು ಕೈಗೊಂಡ ಕೆಲಸಗಳೆಲ್ಲ ಅತಿ ಸುಲಭವಾಗಿ ಸಾಧಿಸುವವು. ಅವನು ಸರ್ವತ್ರ ವಿಜಯಿಯಾಗುವನು. ||೬೪||

ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ 'ಕೂಟಾದ್ಯ
ಸುರ ವಧ ವರ್ಣನಂ' ನಾಮ್ನೈಕನವತಿತಮೋಽ
ಧ್ಯಾಯಸ್ಸಮಾಪ್ತಃ

---

ಇಲ್ಲಿಗೆ ಶ್ರೀ ಗಣೇಶ ಪುರಾಣ, ಉತ್ತರಖಂಡದಲ್ಲಿ ' ಕೂಟಾದ್ಯಸುರವೀರರ
ವಧೆಯ ವರ್ಣನೆ ' ಎಂಬಲ್ಲಿಗೆ ತೊಂಭತ್ತೊಂದನೆಯ ಅಧ್ಯಾಯಾನು-
ವಾದವು ಮುಗಿದುದು.

॥ ಶ್ರೀ ಗಣೇಶಾಯ ನಮಃ ॥

# ಅಥ ದ್ವಿ-ನವತಿತಮೋಽಧ್ಯಾಯಃ

**ಕ ಉವಾಚ :—**

**ತತಃ ಕದಾಚಿದ್ಗಿರಿಜಾ ಪ್ರಾತಃ ಸ್ನಾತ್ವಾ ತ್ವರಾನ್ವಿತಾ ।**
**ಸುಪ್ತೇ ಬಾಲೇ ಚತುರ್ವರ್ಷೇ [1] ಲಿಂಗಪೂಜಾಂ ಚಕಾರ ಸಾ ॥೧॥**

**ವಾಮಹಸ್ತೇ ನಿಧಾಯೈವ ಪಾರ್ಥಿವೀಂ ಮೂರ್ತಿಮುತ್ತಮಾಮ್ ।**

---

॥ ಶ್ರೀ ಗಣೇಶಾಯ ನಮಃ ॥

## ೯೨ ನೆಯ ಅಧ್ಯಾಯ.

ಬ್ರಹ್ಮ :—

ಹೀಗೆಯೇ ಒಂದು ವರ್ಷ ಕಾಲ ಕಳೆದುಹೋಯಿತು. ಬಾಲಕ; ಗಣಪತಿಗೆ ನಾಲ್ಕನೆಯ ಸಂವತ್ಸರ ನಡೆಯುತ್ತಿದ್ದಿತು. ಆಗ ಮಹಾದೇವಿಯು ಕೆಲವೊಂದು ಕಾಲ ಪಾರ್ಥಿವೇಶ್ವರನ ಪೂಜೆಯನ್ನು ಆಚರಿಸಬೇಕೆಂದು ಸಂಕಲ್ಪಿಸಿ ಆರಂಭಿಸಿಬಿಟ್ಟಳು. ಒಂದು ದಿವಸ ಬೆಳಗಿನ ಸಮಯ. ಗಣಪತಿಯು ಇನ್ನೂ ನಿದ್ರೆಯಿಂದೆಚ್ಚತ್ತಿರಲಿಲ್ಲ, ಅವನು ಏಳುವುದರ ಒಳಗಾಗಿಯೇ ಪೂಜೆಯನು ಮುಗಿಸಿಬಿಡೋಣವೆಂದು ಗೌರಿಯು ತೀರ್ಮಾನಿಸಿದಳು. ಬ್ರಾಹ್ಮೀಮುಹೂರ್ತದಲ್ಲಿಯೇ ಎಚ್ಚೆತ್ತು ಸ್ನಾನಾದಿ ಪ್ರಾತರ್ವಿಧಿಗಳನ್ನು ಅವಸರವಸರದಿಂದಲೇ ಮುಗಿಸಿದಳು. ಅನಂತರ ಪಾರ್ಥಿವ ಲಿಂಗದ ಪೂಜೆಯನ್ನು ಮಾಡತೊಡಗಿದಳು. ॥೧॥

ದೇವಿಯು ಪೂಜಾವಿಧಿಗನುಸರಿಸಿ ಪಾರ್ಥಿವೇಶ್ವರನ ಲಿಂಗವನ್ನು ತನ್ನ

---

[1] ವಿವರಣೆಗೆ ಪರಿಶಿಷ್ಟವನ್ನು ನೋಡಿರಿ.

ಸ ಉತ್ಥಾಯ ರುದನ್ ಸ್ತನ್ಯಂ ಯಯಾಚೇ ಹಠತತ್ಪರಃ ॥೨॥

'ಕ್ಷಣಂ ತಿಷ್ಠ, ಕ್ಷಣಂ ತಿಷ್ಠೇ'ತ್ಯೇವಂ ಮಾತಾ ನ್ಯಷೇಧತ ।
ಸ ರುಷಾಪಾತಯನ್ಮೂರ್ತಿಂ ತದ್ಧಸ್ತಾದ್ಧಸ್ತಘಾತತಃ ॥೩॥

ಎಡದ ಹಸ್ತದಲ್ಲಿ ಇರಿಸಿಕೊಂಡು ಧ್ಯಾನಾವಾಹನಾದಿ ಷೋಡಶೋಪಚಾರ ಪೂಜೆಯನ್ನು ಸಲ್ಲಿಸಲಾರಂಭಿಸಿದಳು. ಮಹಾದೇವಿಯು ಮನಸ್ಸಿಟ್ಟು ಮಾಡಿದ ಮಹಾದೇವನ ಮೃಣ್ಮಯ ಮೂರ್ತಿಯು ಸಲಕ್ಷಣವಾಗಿಯೂ, ಬಹಳ ಮನೋಹರವಾಗಿಯೂ ಇದ್ದಿತು. ಇಷ್ಟರಲ್ಲಿ ಬಾಲಕನಿಗೆ ಎಚ್ಚರವಾಯಿತು. ಗಣಪತಿಯು ಎದ್ದ ಕೂಡಲೇ ತಾಯಿಯನ್ನರಸುತ್ತ ದೇವಿ ಇದ್ದೆಡೆ ಬಂದನು. 'ಈಗಲೇ ಸ್ತನ್ಯವನ್ನು ಕೊಡು' ಎಂದು ಹಠಮಾಡುತ್ತ ಯಾಚಿಸಿದನು. ॥೨॥

'ಒಂದು ಕ್ಷಣ ತಡೆ, ಪೂಜೆಯು ಮುಗಿದ ಕೂಡಲೇ ಕೊಡುವೆನು' ಎಂದು ರಮಿಸಿ ಹೇಳಿ, ಅವನ ಹಠವನ್ನು ಸಮಾಧಾನಮಾಡಲೆತ್ನಿಸಿದಳು. ಆದರೆ, ಗಣಪತಿಯು ಇದರಿಂದ ಸಮಾಧಾನವನ್ನು ಹೊಂದಿಯಾನೇ? ಮುದ್ದು ಮುದ್ದಾಗಿ ಮುಖವನ್ನು ತಿರುವುತ್ತ ಅವಳ ಸಮೀಪಕ್ಕೆ ಬಂದೇ ಬಿಟ್ಟನು. ತಾನು ಬೇಡಿದೊಡನೆಯೇ ಸ್ತನ್ಯವನ್ನು ಕೊಡದಿದ್ದುದಕ್ಕೆ ಗಣಪತಿಗೆ ತಾಯಿಯ ಮೇಲೆ ಕೋಪವು ಮಿತಿಮೀರಿ ಬಂದಿತು. ಅಲ್ಲದೆ 'ಸರ್ವೇಶ್ವರನಾದ ತಾನು ಇವಳಿಗೆ ಮಗನಾಗಿ ಜನಿಸಿದ್ದರೂ ಅದನ್ನು ತತ್ತ್ವತಃ ತಿಳಿಯಲಾರದೇ ತನ್ನ ತಾಯಿಯು ಯಾವ ಯಾವ ಕಲ್ಪಗಳನ್ನೋ ನಂಬಿ ಪಾಮರರಂತೆ ಪಾರ್ಥಿವೇಶ್ವರನ ಪೂಜೆಯನ್ನು ಆರಂಭಿಸಿರುವಳಲ್ಲ ? ಇವಳಿಗೆ ತತ್ತ್ವವನ್ನು ತಿಳಿಸುವ ಬಗೆಯಾದರೂ ಹೇಗೆ ?' ಎಂದು ಚಿಂತಿಸಿ, ಅತ್ಯದ್ಭುತವಾದ ಸರ್ವಾತ್ಮ ರೂಪವನ್ನು ಪ್ರದರ್ಶಿಸುವುದೊಂದೇ ಉಪಾಯ ಎಂದು ನಿಶ್ಚಯಿಸಿದನು. ಅದಕ್ಕೊಂದು ಸನ್ನಿವೇಶವನ್ನು ಕಲ್ಪಿಸಿಕೊಳ್ಳುವುದು ಬೇಡವೇ ? ಅದಕ್ಕಾಗಿಯೇ ರೋಷಗೊಂಡವನಂತೆ ನಟಿಸಿದನು. ಅವಳನ್ನು ಸಮೀಪಿಸಿದ ಕೂಡಲೇ ಅವಳು ಪಾರ್ಥಿವ ಮೂರ್ತಿಯನ್ನು ಧರಿಸಿದ್ದ ವಾಮ

ತಂ ಚ ಸಾ ಹಸ್ತಘಾತೇನ ಜಘಾನ ದೃಢರೋಷತಃ ।
ಸ ರುಷಾ ಪುನರಾಗತ್ಯ ದದಂಶಾಂಗುಲಿಮುಲ್ಬಣಮ್ ॥೪॥

ಮುಂಚ, ಮುಂಚ, ಮಮ ಪ್ರಾಣಾ ಗಮಿಷ್ಯಂತೀತಿ ಸಾಬ್ರವೀತ್ ।
ದಷ್ಟ್ವಾಮಂಗುಲಿಮುತ್ಸೃಜ್ಯ ಪಪಾಲ ದೂರತೋಽರ್ಭಕಃ ॥೫॥

ಅಸ್ರವದ್ರುಧಿರಂ ತಸ್ಯಾ ಅಂಗುಲೇರ್ಬಹುಲಂ ಭುವಿ ।

---

(ಸುಂದರ) ವಾದ ವಾಮಹಸ್ತಕ್ಕೆ ತನ್ನ ಕೈಯಿಂದ ಬಡಿದು, ಆ ಪಾರ್ಥಿವೇಶ್ವರನ ದಿವ್ಯ ಮೂರ್ತಿಯನ್ನು ಕೈಯಿಂದ ಬಲವಾಗಿ ತಾಕಿಸಿ ಕೆಳಕ್ಕೆ ಕೆಡಹಿದನು. ॥೩॥

ಮಗು ಮುದ್ದಾದ ಮಾತ್ರಕ್ಕೆ ಅವನ ತುಂಟ ಚೇಷ್ಟೆಯು ಮುದ್ದೆನಿಸೀತೇನು? ಅಲ್ಲದೇ ಗಣಪತಿಯು ಮಾಡಿದ ಚೇಷ್ಟೆಯು ಸಾಮಾನ್ಯವಾದುದೇ? ಯಾವ ಪಾರ್ಥಿವಮೂರ್ತಿ ಲಿಂಗವನ್ನು ತನ್ನ ಪತಿದೇವನಾದ ಪರಮೇಶ್ವರನ ಸಾಕ್ಷಾತ್ಪ್ರತೀಕವೆಂದು ದೃಢವಾಗಿ ನಂಬಿ ಪೂಜಿಸುತ್ತಿದ್ದ ಪಾರ್ವತಿಗೆ, ಗಣಪತಿಯು ಲಿಂಗಕ್ಕೆ ಸಲ್ಲಿಸಿದ ಅಗೌರವವನ್ನು ನೋಡಿ ದೇಹವೆಲ್ಲ ಉರಿದುಹೋಯಿತು. ಮತ್ತು ಪೂಜಿಸುವಾಗ ಲಿಂಗವು ಕೈಯಿಂದ ಕೆಳಕ್ಕೆ ಬಿದ್ದುದು ಒಂದು ಬಗೆಯ ಅಪಶಕುನ ಎಂಬ ಕಲ್ಪನೆಯೂ ಉಂಟಾಗಿ ಮನಸ್ಸಿಗೆ ಬಹಳ ಘಾಸಿಯಾಯಿತು. ಇದರಿಂದ ಉದ್ರಿಕ್ತಳಾದ ಉಮೆಯು ಒಂದು ಕ್ಷಣ ಕಾಲ ಮುದ್ದು ಮಗನೆಂಬ ಮಮತೆಯನ್ನು ಮರೆತು, ಗಣಪತಿಗೆ ತನ್ನ ಕೈಯಿಂದ ಎರಡು ಏಟುಗಳನ್ನು ರೋಷದಿಂದ ಬಿಗಿದಳು. ಗಣಪತಿಯೂ ಕೋಪಗೊಂಡವನಂತೆ ನಟಿಸುತ್ತ ಓಡಿ ಬಂದು ಅವಳ ಕೈ ಬೆರಳನ್ನು ಬಲವಾಗಿ ಕಚ್ಚಿಬಿಟ್ಟನು. ॥೪॥

ಗಿರಿಜಾದೇವಿಗೆ ಇದರ ಯಾತನೆಯನ್ನು ತಡೆದುಕೊಳ್ಳುವುದಾಗಲಿಲ್ಲ. ತನ್ನ ಬೆರಳನ್ನು ಈಚೆಗೆ ಸೆಳೆಯುತ್ತ 'ಬಿಡೋ, ನನ್ನ ಪ್ರಾಣಗಳೇ ಹೋಗುತ್ತಲಿವೆ' ಎಂದು ಕಿರುಚಿಕೊಂಡಳು. ಆಗ ಗಣಪತಿಯು ಕಡಿದ ಬೆರಳನ್ನು ಬಿಟ್ಟು, ಪಾರ್ವತಿಯ ಕೈಗೆ ಸಿಕ್ಕದಂತೆ ದೂರ ಓಡಿಹೋದನು. ॥೫॥

ಪಾರ್ವತಿಯ ಬೆರಳಿನಿಂದ ರಕ್ತವು ಧಾರಾಕಾರವಾಗಿ ಪ್ರವಾಹದಂತೆ ಬಹಳ

ಯಥಾ ಕ್ಷೀರಮರ್ಕವೃಕ್ಷಾದ್ದೃಢಾಘಾತೇನ ಪೀಡಿತಾತ್ ||೬||

ತತೋ ಯಷ್ಟಿಂ ಸಮಾದಾಯ ತಾಡಿತುಂ ಸಾ ಸುತಂ ಯಯೌ |
ಧಾವಯಿತ್ವಾ ದಧಾರೈನಂ ದದರ್ಶ ಶಿವರೂಪಿಣಮ್ ||೭||

ವಾಗಿ ಹರಿಯುಲಾರಂಭಿಸಿತು. ಅರ್ಕ(ಎಕ್ಕ)ದ ಗಿಡವನ್ನು ಬಲವಾಗಿ ಘಾತಿಸಿದರೆ ಅದ ರಿಂದ ಹಾಲು ಅನುಸ್ಯೂತವಾಗಿ ಹರಿಯುತ್ತಿರುವಂತೆ ದೇವಿಯ ಬೆರಳು ಕಂಡು ಬಂದಿತು. ||೬||

ಪ್ರಸಂಗವು ವಿ-ಕೋಪಕ್ಕೆ ಬಂದಷ್ಟು ಅವಳಲ್ಲಿ ಪ್ರತೀಕಾರ ಬುದ್ಧಿಯೂ ಬಲವಾಗತೊಡಗಿತು. ಇದರಿಂದ ನಿನಗೊಂದು ಸಂದೇಹ ಹುಟ್ಟಿದೆ. ಇದು ನನಗೆ ಗೊತ್ತು. ನೀನು ಪ್ರಶ್ನಿಸುವುದಕ್ಕಿಂತ ಮುಂಚಿತವಾಗಿಯೇ ಅದನ್ನು ಪರಿಹರಿಸಿಬಿಡು ವೆನು, ವ್ಯಾಸ ! ಕೇಳು. ರಾಗ-ದ್ವೇಷಗಳು ಗುಣನಿಮಿತ್ತ ಎಂಬುದನ್ನು ಮೊದಲೇ ತಿಳಿಸಿರುವೆನಲ್ಲವೇ? ವ್ಯಾಸ ! ಶರೀರವು ಪಾರ್ಥಿವವಾಗಲಿ, ಅಥವಾ ತೇಜೋಮಯ ವಾಗಲಿ ಅಂತೂ ಅದು ಭೌತಿಕವಷ್ಟೇ? ಭೂತಗಳ ನಿರ್ಮಾಣವು ಗುಣಸಮ್ಮಿಶ್ರಣ ದಿಂದ ಉಂಟಾಗಿದೆ. ದೇವಾದಿ ಅತ್ಯುತ್ತಮ ಶರೀರಗಳು ರಜಸ್ತಮೋಗುಣಗಳಿಗೆ ಸಂ ಪೂರ್ಣವಾಗಿ ಎಡೆಯಾಗದಿದ್ದರೂ ಆ ಗುಣಗಳ ಅಲ್ಪಪರಿಮಾಣದ ಅವಶೇಷವು ಆ ದೇಹಗಳಲ್ಲೂ ಸಂಕ್ರಾಂತವಾಗಿ ಇರಲೇಬೇಕಷ್ಟೇ ? ಸಾತ್ತ್ವಿಕಶರೀರಿಗಳು ಎಂದರೆ ಸತ್ತ್ವಗುಣದ ಪರಮಾಧಿಕ್ಯವುಳ್ಳವರು ಎಂದೇ ಅರ್ಥ. ಇಲ್ಲವಾದರೆ ತಾತ್ಕಾಲಿಕವಾಗಿ ಯಾದರೂ ಕಾಮ-ಕ್ರೋಧಾದಿಗಳು ಆ ದೇಹಿಗಳಿಗೆ ಬರಲಿಕ್ಕೆ ಸಾಧ್ಯವೇ ಇಲ್ಲ. ಹೀಗೆ ಹೇಳಿದ್ದರಿಂದ ದೇವಾದಿ ಉತ್ತಮ ಜೀವಿಗಳನ್ನು ಅವಹೇಳನಗೊಳಿಸುತ್ತಿರುವೆನೆಂದು ಭಾವಿಸಬೇಡ. ತತ್ತ್ವಾಂಶವನ್ನು ಹೇಳಿದೆ, ಅಷ್ಟೇ. ಹೇಳಲಾರಂಭಿಸಿದರೆ ವಿಷ ಯವು ಎಲ್ಲೆಲ್ಲಿಗೋ ಹೋಗಿಬಿಡುವುದು ಇರಲಿ, ಮುಂದಿನ ಕಥೆಯನ್ನು ಕೇಳು. ಅನಂತರ ದೇವಿಯು ಕೈಗೊಂದು ಕೋಲನ್ನು ತೆಗೆದುಕೊಂಡು ಬಾಲಕನನ್ನು ಹೊಡೆಯಲು ಅಟ್ಟಿಸಿಕೊಂಡು ಹೋದಳು. ಓಡೋಡುತ್ತ ಹೋಗಿ ಕೊನೆಗೊಮ್ಮೆ ಬಾಲಕನನ್ನು ಹಿಡಿದುಬಿಟ್ಟಳು. ಆಗ ದೇವಿಗೆ ತೋರಿದ ಅದ್ಭುತವನ್ನು ಏನೆಂದು ಹೇಳಲಿ ? ದೇವಿಯು ಬಾಲಕನ ಮುಖವನ್ನು ರೋಷದಿಂದ ಒಮ್ಮೆ ನೋಡಿದೊಡ ನೆಯೇ ಆ ಮುಖವು ಪರಶಿವನಂತೆ ಕಂಡುಬಂದಿತು. ||೭||

ಪಂಚವಕ್ತ್ರಂ ದಶಭುಜಂ ತ್ರಿಣೇತ್ರಂ ಶೇಷಶೋಭಿತಮ್ ।
ತ್ರಿ-ಶೂಲಂ ಡಮರುಂ ಭಸ್ಮ ರುಂಡಮಾಲಾಂ ಚ ಬಿಭ್ರತಮ್ । ॥೮॥

ವಸಾನಂ ಚರ್ಮಣೀ ಹಸ್ತಿ-ವ್ಯಾಘ್ರಯೋಃ ಶಶಿಶೇಖರಮ್ ।
ದೃಷ್ಟ್ವೇತ್ಥಂ ಲಜ್ಜಿತಾ ಯಷ್ಟಿಂ ತತ್ಯಾಜಾಧೋಮುಖೀ ಶಿವಾ ॥೯॥

ಪುರೋ ವಾ ಮಂದಿರಂ ವಾಪಿ ಗಂತುಂ ಸಾ ನಾಶಕತ್ತದಾ ।
ತಚ್ಚಿಂತಾಂ ಸ ಪರಿಜ್ಞಾಯ ಬಭೂವಾರ್ಧಕರೂಪವಾನ್ ॥೧೦॥

---

ಐದು ಮುಖಗಳು, ಹತ್ತು ಭುಜ, ತೃತೀಯ ನೇತ್ರ, ಶೇಷಭೂಷಣ ಕೈಯಲ್ಲಿ ತ್ರಿಶೂಲ, ಡಮರುಗಳು, ದೇಹಕ್ಕೆಲ್ಲ ಭಸ್ಮವಿಲೇಪನ, ನೀಲಿಕಂಠದಲ್ಲಿ ರುಂಡಮಾಲೆ ಇತ್ಯಾದಿಗಳಿಂದ ಅಲಂಕೃತನಾಗಿ ದೇವನು ನಿಂದಿದ್ದಂತೆ ದೇವಿಗೆ ತೋರೋಣವೇ ? ॥೮॥

ಆನೆ ಮತ್ತು ಹುಲಿಗಳ ಚರ್ಮಗಳನ್ನು ದೇಹಕ್ಕೆ ಆಚ್ಛಾದಿಸಿಕೊಂಡಿದ್ದಾನೆ. ತಲೆಯಲ್ಲಿ ಚಂದ್ರಮನನ್ನು ಅಲಂಕಾರಾರ್ಥವಾಗಿ ಧರಿಸಿದ್ದಾನೆ. ಇಂತಹ ಭವ್ಯ ರೂಪವನ್ನು ನೋಡಿದೊಡನೆಯೇ ದೇವಿಯು ತನ್ನ ಕೈಯ್ಯಲ್ಲಿದ್ದ ಕೋಲನ್ನು ದೂರ ಬಿಸುಟು, ನಾಚಿಕೆಯಿಂದ ತಲೆಯನ್ನು ತಗ್ಗಿಸಿಕೊಂಡು ನಿಂತುಬಿಟ್ಟಳು. ॥೯॥

ಪಾರ್ವತಿಗುಂಟಾದ ಸಂದಿಗ್ಧ ಪರಿಸ್ಥಿತಿಯನ್ನು ಊಹಿಸುವುದಕ್ಕೂ ಸಾಧ್ಯವಿಲ್ಲ. ಮುಂದೆ ಹೋಗೋಣವೆಂದರೆ ಪರಮೇಶ್ವರನು ಎದುರಿಗೆ ನಿಂದಿರುವಂತೆ ಭಾಸವಾಗುತ್ತಿದೆ, ಹಿಂದಿರುಗಿ ಮಂದಿರಕ್ಕೆ ಹೋಗೋಣವೆಂದರೆ ದೇವನು ಎದುರಿಗೆ ನಿಂದಿರುವಾಗ ಯಾವ ರೀತಿಯಿಂದಲೂ ಅವನೊಂದಿಗೆ ಮಾತನಾಡದೆ ಹೋಗುವಂತೆಯೂ ಇಲ್ಲ. 'ಇದೇನು ನಿನ್ನ ಈ ವೇಷ ? ಕೈಯ್ಯಲ್ಲಿ ಕೋಲನ್ನೇಕೆ ಹಿಡಿದು ಓಡಿ ಬರುತ್ತಲಿರುವೆ ? ' ಎಂದು ಪತಿಯು ವಿಚಾರಿಸಿದರೆ ಏನೆಂದು ಉತ್ತರವನ್ನು ಹೇಳುವುದು ? ಇವೇ ಮೊದಲಾದ ಅಪರಿಹಾರ್ಯ ಸಮಸ್ಯೆಗಳು ಉದ್ಭವಿಸಿದುದರಿಂದ ಉಸಿರನ್ನುಸಹ ಗಟ್ಟಿಯಾಗಿ ಬಿಡದೆ ದೇವಿಯು ಅಪ್ರತಿಭಳಾಗಿ ಸುಮ್ಮನೆ ನಿಂದುಬಿಟ್ಟಳು. ತಾನು ಶಿವನಂತೆ ರೂಪವನ್ನು ತೋರಿಸಿದ್ದರಿಂದ

ಕ್ರೀಡತೇ ಮುನಿಪುತ್ರೇಷು ಮುನಿಬಾಲಸ್ವರೂಪವಾನ್ ।
ಅನ್ವಯಾದ್ಗಿರಿಜಾ ಬಾಲಂ ನಾಪಶ್ಯತ್ತೇಷು ತಂ ಸುತಮ್ ॥೧೧॥

ಪಪ್ರಚ್ಛ ತಾನ್ ಮುನಿಸುತಾನ್

ಗೌರ್ಯುವಾಚ :—

'ಮಮ ಬಾಲಃ ಕುತೋ ಗತಃ ? ।
ದಷ್ಟ್ವಾಂಗುಲೀಂ ಮದೀಯಾಂ ತು ಪಸಾಲ ಚಪಲೋಽರ್ಭಕಃ ॥೧೨॥

---

ಪಾರ್ವತಿಯಲ್ಲುಂಟಾದ ಪರಿಣಾಮವನ್ನು ಅರಿತ ಮಹಾಗಣಪತಿಯು ಕಣ್ಣು ಗಳನ್ನು ಎವೆ ಇಡುವಷ್ಟರಲ್ಲೇ ಶಿವನ ರೂಪವನ್ನು ಅಳಿಸಿ ಮೊದಲಿನಂತೆ ಬಾಲಕ ನಾಗಿ ಮಾರ್ಪಟ್ಟನು. ಮತ್ತು ರೂಪವನ್ನು ಮಾರ್ಪಡಿಸಿದಾಗ ಗಣಪತಿಯಂತೆ ಬದಲಾಯಿಸದೆ, ಸಾಧಾರಣ ಮುನಿಕುಮಾರನಂತಾದನು. ॥೧೦॥

ಇಷ್ಟೆಲ್ಲ ಬದಲಾವಣೆಯನ್ನು ಮಾಡಿದ ಬಳಿಕ ಮುನಿ ಬಾಲಕರ ಸಂಗಡ ಆಟವಾಡಲಾರಂಭಿಸಿದನು. ತಮ್ಮೊಡನೆ ಆಟಕ್ಕೆ ಹೊಸದಾಗಿ ಬಂದು ಸೇರಿಕೊಂಡ ವನು ಅಪರಿಚಿತನಾದರೂ, ಯಾರೊಬ್ಬರಿಗೂ ಈ ಬದಲಾವಣೆಯು ಲಕ್ಷ್ಯಕ್ಕೆ ಬರಲೇ ಇಲ್ಲ. ಆಡುವುದರಲ್ಲಿ ತಲ್ಲೀನರಾದ ಆ ಬಾಲಕರಿಗೆ ಸ್ವೀಯ-ಪರಕೀಯ ಎಂಬ ಭಾವನೆಯು ಉಂಟಾಗಲು ಸಾಧ್ಯವೇ ? ಸ್ವಲ್ಪ ಹೊತ್ತಿನ ಮೇಲೆ ಇತ್ತ ಗೌರಿಯು ಎದುರಿಗೆ ನಿಂತಿರುವ ವಿಶ್ವೇಶ್ವರನಿಗೆ ನಡೆದ ವಿಷಯವನ್ನು ತಿಳಿಸಿ ಬಿಡೋಣವೆಂದು ಮುಖವನ್ನು ಅತ್ತ ಕಡೆ ತಿರುಗಿಸಿ ಬಹಳ ಸಂಕೋಚದಿಂದ ಒಮ್ಮೆ ನೋಡಿದಳು. ಆದರೆ ಪರಶಿವನು ಅಲ್ಲಿ ಕಂಡುಬರಲಿಲ್ಲ- 'ತಾನು ಮುಗ್ಧ ಳಂತೆ ನಿಂದಿರುವುದನ್ನುನೋಡಿ ಮಹಾದೇವನು ಹಾಗೆಯೇ ತಪೋಽನುಷ್ಠಾನಕ್ಕಾಗಿ ತೆರಳಿರಬಹುದು' ಎಂದು ನಿಶ್ಚಯಿಸಿ, ಸುತ್ತ-ಮುತ್ತಲೂ ನೋಡಿದಳು. ಸ್ವಲ್ಪ ದೂರ ಹೋದೊಡನೆಯೇ ಮೈದಾನದಲ್ಲಿ ಋಷಿಕುಮಾರರು ಆಟವಾಡುತ್ತಲಿದ್ದುದು ಕಂಡುಬಂದಿತು. ಅಲ್ಲಿಗೆ ಧಾವಿಸಿ ಹೋಗಿ, ಅವರ ಮಧ್ಯದಲ್ಲೆಲ್ಲ ಹುಡುಕಿ ನೋಡಿ ದಳು, ಎಲ್ಲೂ ಗಣಪತಿಯ ಸುಳಿವೇ ಹತ್ತಲಿಲ್ಲ.

ಆಗ ಮುನಿಪುತ್ರರನ್ನು ಕುರಿತು ಹೀಗೆಂದು ಪ್ರಶ್ನಿಸಿದಳು.

ಕ ಉವಾಚ :—

ತ ಊಚುರ್ಮುನಿಪುತ್ರಾಸ್ತಾ 'ಮಿತೋ ಯಾತೋಽರ್ಭಕಸ್ತವ' ।
ತತೋ ಜಗಾಮ ಗಿರಿಜಾ ಪುರತಃ ಪುರತೋಽಪಿ ಚ ॥೧೩॥

ವಿಶೀರ್ಣಕಬರೀಭಾರಾ ಶ್ರಮಘರ್ಮಸಮನ್ವಿತಾ ।
ಇತಸ್ತತೋ ಧಾವಮಾನಾ ಸ್ರಸ್ತವಸ್ತ್ರಾಂಚಲಾ ಶಿವಾ ॥೧೪॥

---

ಗೌರೀ :—

ಗಣಪತಿ ಎಲ್ಲಿದ್ದಾನೆ ? ಬಲ್ಲಿರಾ ? ಇದೋ ನೋಡಿ, ಆ ತುಂಟನು ನನ್ನ ಈ ಬೆರಳನ್ನು ಕಡಿದು ಎಲ್ಲಿಗೋ ಓಡಿಹೋಗಿದ್ದಾನೆ. ಅವನೆಷ್ಟು ಚಪಲ್ನ ನಾಗಿಬಿಟ್ಟಿದ್ದಾನೆ ?

ಬ್ರಹ್ಮಾ :—

'ತಾಯೀ ! ನಿನ್ನ ಮಗ ಗಣಪತಿಯು ಇಲ್ಲಿಂದ ಹೊರಟು ಹೋಗಿದ್ದಾನೆ' ಎಂದು ಮುನಿಕುಮಾರರು ಉತ್ತರಿಸಿದರು. ಇದನ್ನು ಕೇಳಿದನಂತರ ಬಾಲಕನನ್ನು ಹುಡುಕಿ ತರೋಣವೆಂದು ನಿಶ್ಚಯಿಸಿ ಗೌರಿಯು ಒಂದೇ ಮನಸ್ಸಿನಿಂದ ಮುಂದೆ ಮುಂದೆ ಓಡತೊಡಗಿದಳು. ॥೧೩॥

ಮಗನನ್ನು ಹುಡುಕಲು ಓಡುವ ಸಂಭ್ರಮದಲ್ಲಿ ಅವಳ ತಲೆಗೂದಲ ಗಂಟು ಬಿಚ್ಚಿಹೋಯಿತು. ಓಡಿದ ಆಯಾಸದಿಂದ ಅವಳ ದೇಹವೆಲ್ಲ ಬೆವರಿತು. ಒಮ್ಮೆ ಪೂರ್ವದಿಕ್ಕಿನ ಕಡೆಗೆ ಓಡುವಳು. ಅಲ್ಲಿ ಬಾಲಕನು ಕಾಣದಿರಲು ಹಾಗೆಯೇ ಹಿಂದಿರುಗಿ ಪಶ್ಚಿಮದಿಕ್ಕಿಗೆ ಓಡಲಾರಂಭಿಸುವಳು. ಈ ಅವಸರ, ಆತಂಕಗಳಿಂದ ಅವಳ ಉಟ್ಟ ವಸ್ತ್ರವು ಅಸ್ತ-ವ್ಯಸ್ತವಾಯಿತು. ಸೆರಗು ನೆಲವನ್ನು ಗುಡಿಸಲಾರಂಭಿಸಿತು. ॥೧೪॥

ತಸ್ಯಾಃ ಶ್ರಮಂ ಸ ವಿಜ್ಞಾಯ ಯಯೌ ಪೂರ್ವಸ್ವರೂಪವಾನ್ | '
ತದಂತಿಕಂ ದಧಾರೈನಂ ಹಸ್ತಾಭ್ಯಾಂ ಗಿರಿಜಾ ದೃಢಮ್ ||೧೫||

ಸ್ತ್ರೀಯಾಂಚಲೇನ ತಂ ಬದ್ಧ್ವಾ ಯಯೌ ಹೃಷ್ಟಾ ಸ್ವ-ಮಂದಿರಮ್ |
ಉವಾಚ ರೋಷಾತ್

ಗೌರ್ಯುವಾಚ :—

ಸಮ್ಯಕ್ತ್ವಂ ಮಮ ಹಸ್ತೇ ಸಮಾಗತಃ ||೧೬||

---

ಅತಿಯಾಗಿ ಓಡಿದ್ದರಿಂದ ತಾಯಿಗೆ ಉಂಟಾದ ದೇಹಶ್ರಮ, ಮೇಲುಸಿರು ತಿಳಿದ ಗಣಪತಿಯು ಮೊದಲಿನಂತೆ ಬಾಲಕನ ರೂಪವನ್ನು ಧರಿಸಿ ದೇವಿಯ ಎದುರಿಗೆ ಕಾಣಿಸಿಕೊಂಡನು. ಮತ್ತು ತಾಯಿಯ ಸಮೀಪಕ್ಕೆ ಬಂದು ನಿಂತನು. ಇವನನ್ನು ನೋಡಿದೊಡನೆಯೇ ಪಾರ್ವತಿಯು ತನ್ನ ಎರಡೂ ಕೈಗಳಿಂದ ಗಣಪತಿಯನ್ನು ಭದ್ರವಾಗಿ ಹಿಡಿದುಕೊಂಡುಬಿಟ್ಟಳು. ||೧೫||

ಮತ್ತೆ ಎಲ್ಲಿಯಾದರೂ ತಪ್ಪಿಸಿಕೊಂಡು ಹೋದಾನು ಎಂಬ ಹೆದರಿಕೆ ಉಂಟಾಗಲು ಅವನನ್ನು ತನ್ನ ಸೀರೆಯ ಸೆರಗಿನಿಂದ ಬಿಗಿದು ಕಟ್ಟಿದಳು. 'ಇನ್ನು ತಾನೆ ಓಡಿಹೋದಾನು ? ' ಎಂಬ ನಂಬುಗೆಯು ಉಂಟಾಗಲು ಅವಳಿಗೆ ಒಂದು ಬಗೆಯ ನೆಮ್ಮದಿ ಉಂಟಾಯಿತು. ಅವನೊಡನೆ ತನ್ನ ಮನೆಗೆ ಹೊರಟಳು. ಮತ್ತು ಅವನನ್ನು ಸಿಟ್ಟಿನಿಂದ ಗದರಿಸುತ್ತ ಹೀಗೆ ನುಡಿದಳು.

ಗೌರೀ :—

ತುಂಟ ! ಈಗ ಎಲ್ಲಿಗೆ ತಪ್ಪಿಸಿಕೊಂಡು ಓಡಿಹೋಗುವೆಯೋ? ಹೋಗು ನೋಡೋಣ ? ನನ್ನ ಕೈಗೆ ಸಿಕ್ಕುಬಿಟ್ಟೆ ? ||೧೬||

[1] ಅಪಸ್ಮಾರಾತಿಚಪಲ ! ತಾಡಯಿಷ್ಯೇಽಧುನಾ ಭೃಶಮ್ ।
ಶಂಭವೇ ವಾ ನಿವೇದಿಷ್ಯೇ ಸ ತ್ವಾಂ ವಾ ತಾಡಯಿಷ್ಯತಿ ॥೧೭॥

ಕ ಉವಾಚ :—

ಶ್ರುತ್ವೇತ್ಥಂ ವಚನಂ ಮಾತುರ್ಲುಲುಂಠ ಧರಣೀತಲೇ ।
ನಿಃಸೃತಂ ಬಂಧನಂ ಜ್ಞಾತ್ವಾ ಪಪಾಲ ತ್ವರಯಾ ಪುನಃ ॥೧೮॥

ಪುನರ್ಧಾವತಿ ಸಾ ಸೃಷ್ಟೇ ದುಃಖಿತಾ ಭೃಶವಿಹ್ವಲಾ ।
ಏತಸ್ಮಿನ್ನಂತರೇ ದುಷ್ಟೋ ದಾನವಃ 'ಕರ್ದಮಾ'ಸುರಃ ॥೧೯॥

---

ಅಪಸ್ಮಾರ! ಎಂತಹ ಚಪಲಸ್ವಭಾವದವನೋ, ನೀನು. ನಿನ್ನನ್ನು ಚನ್ನಾಗಿ ಹೊಡೆದುಬಿಡುವೆನು ನೋಡು; ಇರಲಿ ಬಾ. ನಿಮ್ಮ ತಂದೆ. ಶಂಭುವಿಗೆ ನಿನ್ನ ಈ ದುಷ್ಟತನವನ್ನೆಲ್ಲ ಹೇಳುವೆನು. ಅವನಾದರೂ ನಿನ್ನನ್ನು ಚನ್ನಾಗಿ ಹೊಡೆಯುವನು. ॥೧೭॥

ಬ್ರಹ್ಮ :—

ತಾಯಿಯಾಡಿದ ಈ ಮಾತುಗಳನ್ನು ಕೇಳಿ ಅಂತರಂಗದಲ್ಲಿ ನಸುನಕ್ಕು ಬಾಹ್ಯದಲ್ಲಿ ಬಹಳ ಹೆದರಿಹೋದವನಂತೆಯೂ, ಅಳುವವನಂತೆಯೂ ನಟಿಸುತ ಧೊಪ್ಪನೆ ನೆಲಕ್ಕೆ ಬಿದ್ದು ಉರುಳಾಡಲಾರಂಭಿಸಿದನು. ಇವನ ಕೈ.ಕಾಲುಗಳ ಬಡಿತ, ಉರುಳಾಟ ಇವುಗಳಿಂದಾಗಿ ಇವನನ್ನು ಬಿಗಿದಿದ್ದ ಸೀರೆಯ ಸೆರಗು ಕಳಚಿಬಿಟ್ಟಿತು. ಕಟ್ಟು ಸಡಲಿದುದನ್ನು ತಿಳಿದೊಡನೆಯೇ ಗಣಪತಿಯು ಬೇಗನೆ ಮೇಲಕ್ಕೆದ್ದು ಅಲ್ಲಿಂದ ಮತ್ತೆ ಓಡಿ ನಡೆದನು. ॥೧೮॥

'ಕೈಗೆ ಸಿಕ್ಕಿದವನು ಪುನಃ ತಪ್ಪಿಸಿಕೊಂಡು ಓಡಿಹೋದನಲ್ಲ?' ಎಂಬುದಾಗಿ ಭಗವತಿಯು ಬಹಳ ದುಃಖಿಸಿದಳು. ಇದುವರೆಗೂ ಗೌರಿಗೆ ಗಣಪತಿಯ ಮೇಲೆ ಕೋಪ ಮಾತ್ರವಿದ್ದಿತು. ಈಗೀಗ ಮಮತೆಯೂ ಅದರೊಂದಿಗೆ ಸೇರಿಹೋಗಿ ಒಂದು ವಿಚಿತ್ರಬಗೆಯ ಪರಿಣಾಮವನ್ನು ಆವಳ ಮನಸ್ಸಿನ ಮೇಲೆ ಅವ್ಯಕ್ತವಾಗಿ ಬೀರಲಾರಂ

---

[1] ವಿವರಣೆಗೆ ಪರಿಶಿಷ್ಟವನ್ನು ನೋಡಿರಿ

ದ್ವಿಜರೂಪಧರೋ ಮಾಲಾಂ ದಧಾನೋ ದಕ್ಷಿಣೇ ಕರೇ ।
ಕಮಂಡಲುಂ ವಾರಿಪೂರ್ಣಂ ಭಸ್ಮೋದ್ಧೂಲಿತವಿಗ್ರಹಃ ॥೨೦॥

ಅರುಣಾರ್ಕನಿಭೇ ವಸ್ತ್ರೇ ವಸಾನೋ ಮಾಯಿಕೋ ಭೃಶಮ್ ।
ಸ ಊಚೇ ವಚನಂ ಬಾಲಂ

ಕರ್ದಮ ಉವಾಚ :—

ಕಿಮರ್ಥಂ ತ್ವಂ ಪಲಾಯಸೇ ? ॥೨೧॥

---

ಭಿಸಿತು. ಇದರಿಂದ ಪರಮೇಶ್ವರಿಯು ಕಸಿವಿಸಿಪಟ್ಟು ಹಣ್ಣಾಗಿಹೋದಳು. ಗಣಪತಿಯನ್ನು ಹಿಡಿದು ತರಲು ಮತ್ತೆ ಅವನ ಬೆನ್ನು ಹಿಂದೆ ಓಡಲಾರಂಭಿಸಿದಳು. ಇಷ್ಟರಲ್ಲಿ ಮುಂದೆ ಮುಂದೆ ಓಡುತ್ತಿದ್ದ ಗಣಪತಿಗೆ ಒಬ್ಬ ದುಷ್ಟ ದಾನವನು ಎದುರಾಗಿ ಅವನನ್ನು ತಡೆದು ನಿಲ್ಲಿಸಿದನು. ಅವನೇ 'ಕರ್ದಮಾಸುರ.' ॥೧೯॥

ಅವನು ಬಾಲಕನನ್ನು ಮೋಸಗೊಳಿಸಲಿಕ್ಕಾಗಿ ತನ್ನ ದಾನವ ಜಾತಿಗೆ ಸಹಜವಾದ ಕರಾಳಾಕೃತಿಯನ್ನು ಮರೆಮಾಚಿ, ಬ್ರಾಹ್ಮಣನ ವೇಷವನ್ನು ಧರಿಸಿದ್ದನು. ಅದಕ್ಕೆ ತಕ್ಕಂತೆ ತನ್ನ ಬಲದ ಹಸ್ತದಲ್ಲಿ ಅಕ್ಷಮಾಲೆಯನ್ನು ಧರಿಸಿ ಸರ್ವದಾ ಜಪತತ್ಪರನಂತೆ ತೋರುತ್ತಿದ್ದನು. ಎಡದ ಕೈಯಲ್ಲಿ ಜಲಪೂರ್ಣವಾದ ಕಮಂಡಲುವನ್ನು ಹಿಡಿದಿದ್ದನು. ದೇಹಕ್ಕೆಲ್ಲ ಭಸಿತವನ್ನು ಬಳಿದುಕೊಂಡಿದ್ದನು. ॥೨೦॥

ಅರುಣೋದಯ ಕಾಲಕ್ಕಿರುವ ಸೂರ್ಯನ ಪ್ರಕಾಶದಂತೆ ಕೆಂಪು ವರ್ಣದ ವಸ್ತ್ರಗಳನ್ನು ಉಟ್ಟು ಹೊದೆದಿದ್ದನು. ಇವನ ಬಾಹ್ಯರೂಪವು ಮಹಾವಿರಕ್ತನಾದ ಮಹರ್ಷಿಯಂತೆ ಕಂಡುಬಂದರೂ ಅಂತರಂಗದಲ್ಲಿ ಕೃತ್ರಿಮವು ತುಂಬಿದ್ದಿತು. ಅವನು ನಾನಾ ಬಗೆಯ ಮಯಮಾವಿದ್ಯೆಗಳಲ್ಲಿ ಪ್ರವೀಣನಾಗಿದ್ದನು. ಇಂತಹ ಅಧಮನಾದ ಕರ್ದಮನು ಬಾಲಕ; ಗಣೇಶನನ್ನು ತಡೆದು ನಿಲ್ಲಿಸಿ, ಮಹಾಹಿತೈಷಿಯಂತೆ ನಟಿಸುತ್ತ ಅವನೊಡನೆ ಹೀಗೆಂದು ಮಾತನಾಡಿದನು.

ಕರ್ದಮ :—

ಬಾಲಕ ! ಏತಕ್ಕೆ ಹೀಗೆ ಓಡುತ್ತಲಿರುವೆ ? ॥೨೧॥

ತ್ವದ್ಭೀತೇರ್ವಾರಣಂ ಸದ್ಯಃ ಕರಿಷ್ಯೇಽಹಂ ನ ಸಂಶಯಃ ।
ನೇಷ್ಯೇ ತ್ವಾಂ ಯತ್ರ ತೇ ಮಾತಾ ನ ಜಾನೀಯಾತ್ಕಥಂಚನ ॥೨೨॥
ನ ಚ ಕಾಲಭಯಂ ತತ್ರ ನ ಚಾನ್ಯದ್ಭಯಮಣ್ವಪಿ ।

ಕ ಉವಾಚ :—

ತಮುವಾಚಾರ್ಭಕೋ ಭೀತಃ

ಗಣೇಶ ಉವಾಚ :—

ತಥಾ ಕುರು, ಯಥಾ ಮನು ॥೨೩॥

---

ನಿನಗೆ ಬಂದೊದಗಿರುವ ಅಂತಹ ವಿಪತ್ತಾದರೂ ಯಾವುದು ? ಹೇಳು. ಒಂದೇ ಒಂದು ನಿಮಿಷದಲ್ಲಿ ಅದನ್ನು ನಿವಾರಿಸಿಬಿಡುವೆನು, ಚಿಂತಿಸಬೇಡ. ನನ್ನ ಮಾತಿನಲ್ಲಿ ಸಂಶಯಗೊಳ್ಳಬೇಡ. ಓಹೋ! ತಿಳಿಯಿತಷ್ಟೇ ನಿನ್ನರಹಸ್ಯ. ನೀನೇನೋ ತುಂಟತನವನ್ನು ಮಾಡಿ ಓಡಿಬಂದಿರಬೇಕಲ್ಲವೇ ? ಅದಕ್ಕಾಗಿಯೇ ನಿನ್ನ ತಾಯಿ ನಿನ್ನನ್ನು ಅಟ್ಟಿಸಿಕೊಂಡು ಬರುತ್ತಿದ್ದಾಳೆ. ಈಗೇನಾದರೂ ನೀನು ಅವಳ ಕೈಗಳಿಗೆ ಸಿಕ್ಕಿಬಿಟ್ಟರೆ, ನಿನ್ನನ್ನು ಬಡಿದೇ ಬಿಡುವಳಲ್ಲವೇ ? ಇರಲಿ, ಹೆದರಬೇಡ. ನೀನು ಅವಳ ಕಣ್ಣಿಗೆ ಬೀಳದಂತೆ ಒಂದೆಡೆ ನಿನ್ನನ್ನು ಬಚ್ಚಿಟ್ಟು ಬಿಡುವೆನು. ಅವಳೂ ಹುಡುಕಿ ಹುಡುಕಿ ಬೇಸರಪಡಲಿ, ಅಷ್ಟರಲ್ಲಿ ಅವಳ ಕೋಪವೂ ಬಹುಮಟ್ಟಿಗೆ ಇಳಿದಿರುವುದು. ಅನಂತರ ನೀನು ನಿನ್ನ ತಾಯಿಯ ಸಮೀಪಕ್ಕೆ ಹೋಗುವೆಯಂತೆ. ॥೨೨॥

ನಾನು ನಿನ್ನನ್ನು ಬಚ್ಚಿಡಬೇಕೆಂದು ಯೋಚಿಸಿರುವ ಸ್ಥಳವು ಬಹಳ ರಹಸ್ಯವಾದುದು. ಅಲ್ಲಿ ಅಡಗಿ ಕುಳಿತವರನ್ನು ಕಾಲನು ಸಹ ಬಂದು ಕರೆದೊಯ್ಯಲಾರನು. ' ಈಗಿನ ಭಯಕ್ಕಿಂತಲೂ ಹೆಚ್ಚು ಭಯಂಕರ ವಸ್ತು ಮತ್ತಾವುದಾದರೂ ಅಲ್ಲಿದ್ದರೆ ಏನು ಗತಿ ? ' ಎಂದೂ ನೀನು ಚಿಂತಿಸಬೇಕಾಗಿಲ್ಲ ಆ ಸ್ಥಳದಲ್ಲಿ ಭಯದ ಹೆಸರು ಸಹ ಇರುವುದಿಲ್ಲ.

ಬ್ರಹ್ಮ :—

ಆಪಾತತಃ ಸುಶ್ರಾವ್ಯವಾದ ನುಡಿಯನ್ನು ಕರ್ದಮನು ನುಡಿದಿದ್ದರೂ

ನ ಪಶ್ಯೇಜ್ಜನನೀ ತಾತಃ ಶರಣಂ ತ್ವಾಮುಪಾಗತಃ ।

ಕ ಉವಾಚ :--

ಏವಂ ವದತಿ ಯಾವತ್ತು ಯಯೌ ಬಾಲಸ್ವಭಾವತಃ ॥೨೪॥

ಗಿಗೀಲ ತಾವದೇವಾಸೌ ತಂ ದುಷ್ಟಃ ಕರ್ದಮಾಸುರಃ ।
ರಂಭಾಫಲಸ್ಯ ಪಕ್ವಸ್ಯ ಖಂಡಂ ಕೋಮಲಮರ್ಭಕಮ್ ॥೨೫॥

ಅವನ ಅಂತರಂಗದ ರಂಗು ಸರ್ವಾಂತರ್ಯಾಮಿಯಾದ ಗಣಪತಿಗೆ ತೋರದೇ ಇರಲಿಲ್ಲ. ಇದೇ ನಿಮಿತ್ತದಿಂದಲೇ ಇವನನ್ನು ನಿಗ್ರಹಿಸಬೇಕೆಂದು ನಿಶ್ಚಯಿಸಿ ಇತರ ಬಾಲಕರು ಭಯಪಡುವಂತೆ ತಾನೂ ನಟಿಸುತ್ತ ಕರ್ದಮನನ್ನು ಕುರಿತು ಹೀಗೆ ನುಡಿದನು.

ಬಾಲಕ :—

ಮಹಾತ್ಮ ! ದಯೆ ಇಟ್ಟು ನನಗೆ ಅಸ್ತ್ರರಮಟ್ಟಿಗೆ ರಕ್ಷಣೆ ಕೊಟ್ಟು ಉಪಕಾರವನ್ನು ಮಾಡು. ನೀನು ಹೇಳಿದಂತೆ ನಾನು ನಡೆಯುವೆನು. ನಾನು ನಿನಗೆ ಶರಣು ಬಂದಿರುವೆನು. ನನ್ನ ತಾಯಿಯಾಗಲೀ, ತಂದೆಯಾಗಲೀ ಯಾರೂ ನನ್ನನ್ನು ನೋಡದಂತೆ ಮಾಡು.

ಬ್ರಹ್ಮಾ :—

ಬಾಲಕನು ಹೀಗೆ ಹೇಳಿ ಒಡನೆಯೇ ಸ್ವಾಭಾವಿಕ ಮುಗ್ಧ ಬಾಲಕನಂತೆ ಕರ್ದಮನ ಸಮೀಪಕ್ಕೆ ಹೋಗಿ ನಿಂತನು. ॥೨೩-೨೪॥

ಚಿಕ್ಕಮಕ್ಕಳು ಬಂದು 'ನನ್ನನ್ನು ರಕ್ಷಿಸೆಂ'ದು ಕೇಳಿದರೆ ಎಂತಹ ಕಟುಕನ ಕರುಳಾದರೂ ಕರಗಿಹೋಗುವುದಿಲ್ಲವೇ ? ಹೀಗಿದ್ದರೂ ಈ ಹೃದಯಶೂನ್ಯನಿಗೆ ಲೇಶವೂ ದಯೆ ಉದಿಸಲಿಲ್ಲ. ಪಕ್ವವಾದ ರಸಬಾಳೆಯ ಹಣ್ಣಿನ ಚೂರನ್ನು ಹಸಿದವನು ಆಶೆಯಿಂದ ನುಂಗುವಂತೆ ಕೋಮಲಶರೀರಿ ಬಾಲಕ; ಗಣಪತಿಯನ್ನು ಕರ್ದಮನು ಆನಂದದಿಂದ ಒಮ್ಮೆಲೇ ನುಂಗಿಬಿಟ್ಟನು. ॥೨೫॥

ತತ್ಪಾದಪದ್ಮಚಿಹ್ನಾನಿ ಭೂಮೌ ದೃಷ್ಟ್ವಾ ಯಯೌ ಶಿವಾ ।
ದ್ವಿಜಂ ದದರ್ಶ ಪುರತೋಽಪೃಚ್ಛತ್ತಂ ಚ ತತೋಽರ್ಭಕಮ್ ॥೨೬॥

ಗೌರ್ಯುವಾಚ :—

ಸ್ವಾಮಿನ್ ! ತ್ವಯಾ ಮಮ ಸುತ ಇತೋ ಗಚ್ಛನ್ನಿರೀಕ್ಷಿತಃ? ।
ಇಮಾನಿ ಪದಪದ್ಮಾನಿ ಚಿಹ್ನಯುಕ್ತಾನಿ ಪಶ್ಯ ಭೋಃ ! ॥೨೭॥

ಇದಾನೀಂ ಧಾವಮಾನಸ್ಸ ಕುತ್ರ ಗುಪ್ತೋಽಭವದ್ದ್ವಿಜ ! ।

---

ಇತ್ತ ಗಿರಿಜೆಯು ಗಣಪತಿಯನ್ನರಸುತ್ತ ಧಾವಿಸಿ ಬಂದಳಷ್ಟೇ? ಬಾಲಕನ ಓಟದ ಗತಿಯು ವೇಗವತ್ತರವಾಗಿದ್ದುದರಿಂದಲೂ, ಇವಳು ಶ್ರಮಗೊಂಡಿದ್ದಳಾದುದರಿಂದಲೂ ಬಹಳ ಹಿಂದೆ ಉಳಿದುಬಿಟ್ಟಿದ್ದಳು. ಗಣಪತಿಯು ನಿಮಿಷಮಾತ್ರದಲ್ಲೇ ಇವಳಿಗೆ ಕಾಣಿಸದಷ್ಟು ದೂರ ಓಡಿ ಹೋಗಿ ಮರೆಯಾಗಿದ್ದನು. ಪಾರ್ವತಿಯು ಬಾಲಕನ ಹೆಜ್ಜೆಗಳನ್ನೇ ಗುರುತಿಸುತ್ತ ಬ್ರಾಹ್ಮಣ ರೂಪಿಯಾದ ಕರ್ದಮನು ನಿಂತಿದ್ದ ಸ್ಥಳಕ್ಕೆ ಬಂದಳು. ಎದುರಿಗೆ ಗೋಚರನಾದ ಬ್ರಾಹ್ಮಣನನ್ನು ಕುರಿತು ತನ್ನ ಬಾಲಕನ ಇರುವನ್ನು ಹೇಳೆಂದು ಹೀಗೆ ಪ್ರಶ್ನಿಸಿದಳು. ॥೨೬॥

ಗೌರೀ :—

ಸ್ವಾಮಿನ್, ದ್ವಿಜವರ ! ಇತ್ತ ಕಡೆ ನನ್ನ ಬಾಲಕನು ಬಂದನಲ್ಲವೇ ? ಅವನು ಎತ್ತ ಕಡೆಗೆ ಹೋದನೆಂಬುದನ್ನು ಬಲ್ಲಿರಾ ? ನೀವು ಅವನು ಓಡಿಹೋದುದನ್ನು ನೋಡಿದಿರಾ ? ಇಲ್ಲಿ ನೋಡಿ, ಅವನ ಪುಟ್ಟ ಪುಟ್ಟ ಪದಪದ್ಮಗಳ ಗುರುತು ಸ್ಪಷ್ಟವಾಗಿ ಕಾಣುತ್ತಲಿದೆ. ॥೨೭॥

ಈಗಿನ್ನೂ ಓಡಿ ಬಂದಿದ್ದಾನೆ. ಇಷ್ಟರಲ್ಲೇ ಎಲ್ಲಿ ಮರೆಯಾದನೋ ತಿಳಿಯದಲ್ಲ ? ದ್ವಿಜವರ ! ದಯೆ ಇಟ್ಟು ಆ ಸಂಗತಿಯನ್ನು ನನಗೆ ತಿಳಿಸಿರಿ.

ಕ ಉವಾಚ :—

ತತಸ್ತಾಮಬ್ರವೀದ್ವಿಪ್ರೋ ದುಃಖಿತಾಂ ತದ್ವಿಯೋಗತಃ ॥೨೮॥

ದ್ವಿಜ ಉವಾಚ :—

ಕಿಂ ನಃ ಪ್ರಯೋಜನಂ ? ಮಾತಸ್ತನಯೇನ ತವಾನಘೇ ! ।
ಉದಾಸೀನತಯಾ ಮಾತಸ್ತಿಷ್ಠತಾಮೀಶಚೇತಸಾಮ್ ॥೨೯॥

ತಥಾಪಿ ನೈವ ದೃಷ್ಟಸ್ತೇ ತನಯಃ ಕ್ವಾಪಿ ಶೈಲಜೇ ! ।
ತನಯಃ ಕಿಂ ತ್ವಯಾ ದೇವಿ ! ಮದಧೀನಃ ಕೃತೋಽಭವತ್ ? ॥೩೦॥

---

ಬ್ರಹ್ಮಾ :—

ಪುತ್ರನ ವಿಯೋಗದಿಂದ ದುಃಖಾರ್ತಳಾದ ಪಾರ್ವತಿಯು ಈ ರೀತಿ ಅಂಗಲಾಚಿ ಪ್ರಾರ್ಥಿಸಿದುದನ್ನು ಕೇಳಿದ ಕರ್ದಮಾಧವನು ಅವಳನ್ನು ಅಧಿಕ್ಷೇಪಿಸುವ ಧ್ವನಿಯಿಂದ ಹೀಗೆಂದು ಉತ್ತರಿಸಿದನು. ॥೨೮॥

ಕರ್ದಮ :—

ತಾಯೇ ! ಇದೇನು, ಹೀಗೆ ಪ್ರಶ್ನಿಸುತ್ತಿರುವೆ ? ಪ್ರಪಂಚದ ಯಾವ ಬಗೆಯ ಆಗು-ಹೋಗುಗಳಲ್ಲೂ ಆಸಕ್ತರಾಗದೇ, ಕೇವಲ ಔದಾಸೀನ್ಯದಿಂದಿದ್ದು, ಸರ್ವದಾ ಸದಾಶಿವನನ್ನೇ ಧ್ಯಾನಿಸುತ್ತಲಿರತಕ್ಕವರು, ನಾವು. ಇಂತಹ ವಿರಕ್ತರಾದ ನಮಗೆ ನಿನ್ನ ಮಗನನ್ನು ಕಟ್ಟಿಕೊಂಡು ಪ್ರಯೋಜನವಾದರೂ ಏನಿದೆ ? ನೀನೇ ಹೇಳು. ॥೨೯॥

ಇದು ನಮ್ಮಂತಹ ಯೋಗನಿಷ್ಠರ ಸಹಜಸ್ವಭಾವವಾಗಿದ್ದರೂ, ಪ್ರಕೃತ ನಿನ್ನ ಮಗನನ್ನು ನಾನು ನೋಡಲಿಲ್ಲ. ಚಪಲಸ್ವಭಾವದ ಹುಡುಗನು ಎಲ್ಲಿಯೋ ಅಡಗಿ ಕುಳಿತಿರಬಹುದು. ನೀನೇನಾದರೂ ಅವನನ್ನು ರಕ್ಷಣೆಗಾಗಿ ನನಗೆ ಅಧೀನಪಡಿಸಿದ್ದರೆ, ಆಗ ನಾನು ಅವನನ್ನು ಅವಶ್ಯವಾಗಿ ನೋಡಿಕೊಳ್ಳುತ್ತಲಿದ್ದೆ. ಇದಾವುದನ್ನೂ ಮಾಡದೇ ಒಮ್ಮಿಂದೊಮ್ಮೆಲೇ ಬಂದು ' ನನ್ನ ಮಗನೆಲ್ಲಿ ? ಹೇಳು '

ಕ ಉವಾಚ :—

ಏವಂ ವದತಿ ತಸ್ಮಿಂಸ್ತು ದುಃಖಿತಾಂ ವೀಕ್ಷ್ಯ ಶೈಲಜಾಮ್ ।
ಆವಿರಾಸೀನ್ನಿರ್ವಿಕಾರಸ್ತನ್ಮುಖಾತ್ಸ ಗುಣೇಶ್ವರಃ ॥೩೦॥

ಸಾ ಪ್ರಾಹ ತನಯಂ ದೃಷ್ಟ್ವಾ

ಗೌರ್ಯುವಾಚ :—

ಕಥಂ ಮಿಥ್ಯಾ ಬ್ರವೀಷಿ ರೇ ! ॥

ಎಂದು ಪ್ರಶ್ನಿಸಿದರೆ ನಾನು ಏನೆಂದು ಉತ್ತರ ಹೇಳಬೇಕು ? ತಾಯೇ ! ॥೩೦॥

ಬ್ರಹ್ಮಾ:—

'ಈ ಬ್ರಾಹ್ಮಣನನ್ನು ವಿಚಾರಿಸಿದರೆ, ತನ್ನ ಮಗನ ಸುದ್ದಿಯು ತಿಳಿಯ್ಯ ಬಹುದೆಂ'ಬ ಮಹದಾಶಾಪೂರ್ಣಳಾಗಿ ಬಂದಿದ್ದ ಭಗವತಿಗೆ ಕರ್ದಮನ ನಿರಾಶಾದಾಯಕವಾದ ಮಾತುಗಳಿಂದ ಬಹಳ ಆಶಾಭಂಗವಾಯಿತು. ತತ್ಪರಿಣಾಮವಾಗಿ ದುಃಖವೂ ಮಿತಿಮೀರಿ ಬಂದಿತು. ಇದನ್ನು ಬಾಲಕನು ತಿಳಿದನು. ತನ್ನ ತಾಯಿಯನ್ನು ಇಷ್ಟುರವುಟ್ಟಿಗೆ ಬಳಲಿಸಿದುದಕ್ಕಾಗಿಯೂ, ರಾಕ್ಷಸನ ಧಾರ್ಷ್ಟ್ಯದ ಈ ಉತ್ತರಕ್ಕಾಗಿಯೂ ಗಣಪತಿಯು ಮನನೊಂದವನಾಗಿ ಒಡನೆಯೇ ಕರ್ದಮನ ಕರಾಳ ಮುಖದಿಂದ ಹೊರಹೊಮ್ಮಿ ಬಂದುಬಿಟ್ಟನು. ರಾಕ್ಷಸನು ಬಾಲಕನನು ನುಂಗಿ ಕೆಲವು ಕಾಲ ಕಳೆದಿದ್ದರೂ, ಕರ್ದಮನ ಕಂಠದ ಮೂಲಕ ಪ್ರವೇಶಿಸುವಾಗ ಲಾಗಲೀ, ಕೋರೆ ಹಲ್ಲುಗಳ ತಿವಿತದಿಂದಲಾಗಲೀ ಅಥವಾ ಜಠರದ ಅಗ್ನಿಜ್ವಾಲೆಯಿಂದಲಾಗಲೀ ಸ್ವಲ್ಪವೂ ಗಾಸಿಗೊಂಡಿರದೆ, ಮೊದಲು ಹೇಗೆ ಇದ್ದನೋ, ಈಚೆಗೆ ಬಂದಾಗಲೂ ಬಾಲಕನು ಅದೇ ರೂಪದಿಂದ ಇದ್ದನು. ॥೩೧॥

ಇದುವರೆಗೂ ಮಹಾಸಾತ್ತ್ವಿಕ ಮೂರ್ತಿಯಂತೆ ತೋರಿಬರುತ್ತಿದ್ದ ಛದ್ಮವೇಷದ ಬ್ರಾಹ್ಮಣನ ಬಾಯಿಯಿಂದ ಬಾಲಕನು ಒಮ್ಮೆಲೆ ಹೊರಕ್ಕೆ ಬಂದುದನ್ನು

ತನ್ಯೈವ ನಿಕಟೇ ಪುತ್ರೋ ದೃಷ್ಟೋಽಯಂ ಗೋಪಿತಸ್ತ್ವಯಾ ॥೩೨॥

ಸಂತಃ ಪ್ರಾಣಾತ್ಯಯೇ ಪ್ರಾಪ್ತೇ ನ ಭಾಷಂತೇಽನೃತಂ ಕ್ವಚಿತ್ ।

ಕ ಉವಾಚ :—

ಇತಿ ತಸ್ಯಾ ವಚಃ ಶ್ರುತ್ವಾ ಸ ದೈತ್ಯೋ ದೀರ್ಘದೇಹವಾನ್ ॥೩೩॥

ನೋಡಿದೊಡನೆಯೇ ಭವಾನಿಗೆ ಬ್ರಾಹ್ಮಣನ ಮೇಲೆ ಬಹಳ ಕೋಪ ಬಂದಿತು. ಆಗ ಬಿರುಸಾದ ಧ್ವನಿಯಿಂದ ಆ ಅಧಮನನ್ನು ಅಧಿಕ್ಷೇಪಿಸಿ ಹೀಗೆಂದು ಮಾತ ನಾಡಿದಳು.

ಗೌರೀ :—

ಎಲವೋ, ತುಚ್ಛ ! ಬಾಲಕನನ್ನು ನುಂಗಿ ಕುಳಿತಿದ್ದರೂ 'ಏನನ್ನೂ ಕಾಣೆನೆಂ'ದು ಸುಳ್ಳು ಬೊಗಳಿದೆಯಲ್ಲವೇ ? ಈ ಬಾಲಕನು ನಿನ್ನ ಬಳಿಯೇ ಇದ್ದನು. ನೀನೇ ಇವನನ್ನು ಬಚ್ಚಿಟ್ಟಿದ್ದವನು. ನಾನೇ ಇದನ್ನು ಪ್ರತ್ಯಕ್ಷವಾಗಿ ನೋಡಿದ್ದೇನೆ. ನನ್ನೆದುರು ವ್ಯರ್ಥವಾಗಿ ಅಪಲಪಿಸಬೇಡ. ॥೩೨॥

ಏನೋ ಮಹಾಸತ್ಪುರುಷನಾದವನಂತೆ ಮಾತನಾಡಿದೆಯಲ್ಲವೇ ? ಸತ್ಪುರುಷರಾದವರ ಸ್ವಭಾವವೆಂತಹುದು, ಎಂಬುದನ್ನಾದರೂ ನೀನು ಬಲ್ಲೆಯೇನೋ ? ಪ್ರಾಣವೇ ಹೋಗುವಂತಹ ವಿಪತ್ಸಮಯ ಬಂದರೂ ಸತ್ಪುರುಷರು ಒಮ್ಮೆಯಾದರೂ ಸುಳ್ಳು ಮಾತುಗಳನ್ನಾಡುವುದಿಲ್ಲ.

ಬ್ರಹ್ಮಾ :—

ಬಾಲಕನ ನಿರ್ಗಮನ, ಪಾರ್ವತೀದೇವಿಯಾಡಿದ ಮರ್ಮಭೇದಕ ಮಾತುಗಳು, ಈ ಎಲ್ಲ ಆಕಸ್ಮಿಕ ಸನ್ನಿವೇಶಗಳನ್ನು ಕಂಡೊಡನೆಯೇ 'ತನ್ನ ರಹಸ್ಯ ಬಯಲಾಯಿತು ' ಎಂಬುದು ರಾಕ್ಷಸನಿಗೆ ತಿಳಿದುಹೋಯಿತು. ಬಾಲಕನನ್ನು ಈ ಮೊದಲು

**ವ್ಯೋಮಸ್ಪೃಙ್ಮಸ್ತಕೋ ಬಾಲಮಾದಾಯ ನಿರ್ಯಯೌ ತತಃ ।**
**ತತಃ ಸಾ ಸೃಷ್ಟತೋ ಲಗ್ನಾ ಕ್ರಂದತೀ ತನಯಂ ಶಿವಾ ॥೩೪॥**

**ಗುಣೇಶೋಽಪಿ ತತೋ ದಧ್ರೇ ತಸ್ಮಾದ್ದೀರ್ಘತರಂ ವಪುಃ ।**
**ದೃಷ್ಟ್ವಾ ದುಃಖಂ ಜನನ್ಯಾಸ್ತು ಪ್ರಶೋಚಂತ್ಯಾ ಮುಹುರ್ಮುಹುಃ ॥೩೫॥**

ನುಂಗಿದಾಗ ಅವನು ಜಠರಾಗ್ನಿಗೆ ಆಹುತಿಯಾಗಿರಬಹುದೆಂದು ನಂಬಿದ್ದ ರಾಕ್ಷಸನಿಗೆ ಬಾಲಕನು ಅಕ್ಷತನಾಗಿ ತನಗೆ ತಿಳಿಯದಂತೆಯೇ ಈಚೆಗೆ ಬಂದುದನ್ನು ನೋಡಿ ಆಶ್ಚರ್ಯವೂ, ಅವನ ಶಕ್ತಿ-ಸಾಮರ್ಥ್ಯಗಳಿಗೆ ಭಯವೂ ಮತ್ತು ಇಂತಹ ಶತ್ರುವನ್ನು ಒಂದು ಕ್ಷಣವಾದರೂ ಬದುಕಿಸಕೂಡದೆಂಬ ದ್ವೇಷ-ನಿಶ್ಚಯಗಳೂ ಉಂಟಾದವು. ರಾಕ್ಷಸನು ಯಾವುದೊಂದು ಮಾತನ್ನೂ ಆಡದೇ, ಒಮ್ಮೆಲೇ ತನ್ನ ದೇಹವನ್ನು ಅತಿ ದೀರ್ಘಾಕಾರವಾಗಿರುವಂತೆ ವೃದ್ಧಿಗೊಳಿಸಿ ಬಾಲಕನನ್ನು ಎತ್ತಿಕೊಂಡು ಮ್ಯಾಲಿಗೊಂದು ಹೆಜ್ಜೆಯನ್ನಿಕ್ಕುತ್ತ ಓಡೋಡಿ ನಡೆದುಬಿಟ್ಟನು. ಅವನ ದೈರ್ಘ್ಯವೆಷ್ಟಿತ್ತೆಂದರೆ, ಅವನ ತಲೆಯು ನಭೋಮಂಡಲವನ್ನು ಸ್ಪರ್ಶಿಸುತ್ತಲಿದ್ದಿತು. ಈ ಅದ್ಭುತವನ್ನು ನೋಡಿ ಪಾರ್ವತಿಯು ಘಾಬರಿಗೊಂಡಳು. ಏನನ್ನು ಮಾಡುವುದಕ್ಕೂ ಅವಳಿಗೆ ತೋರಲಿಲ್ಲ. ಕರ್ದಮನನ್ನು ಹಿಂಬಾಲಿಸಿ ತಾನೂ ನಡೆದಳು. ಬಹಳ ಆರ್ತತೆಯಿಂದ ಅಳುತ್ತಲೇ ಇದ್ದಳು. ॥೩೩-೩೪॥

ರಾಕ್ಷಸನ ವಂಚನೆಯನ್ನೆಲ್ಲ ನಿರೀಕ್ಷಿಸುತ್ತಲಿದ್ದ ಗುಣೇಶನು ಒಮ್ಮೆಲೇ ಕರ್ದಮನಿಗಿಂತಲೂ ಅತಿ ದೀರ್ಘವಾಗಿ ಬೆಳೆದು ನಿಂತನು. ಕರ್ದಮನೊಡನೆ ಸ್ವಲ್ಪ ಕಾಲ ಹೋರಾಡಿ, ಅನಂತರ ಅವನನ್ನು ನಿಗ್ರಹಿಸಬೇಕೆಂಬ ಚಪಲ ಗಣೇಶನಿಗಿದ್ದರೂ, ತಮ್ಮಿಬ್ಬರ ಕರಾಳ, ಗಗನಚುಂಬಿ ವಿಗ್ರಹಗಳನ್ನು ನೋಡಿ ಹೆದರಿ ಅಳುತ್ತಲಿದ್ದ ಪಾರ್ವತಿಯನ್ನು ನೋಡಿ · ಇನ್ನೂ ಹೆಚ್ಚು ವೇಳೆ ಇವಳನ್ನು ಹೀಗೆ ಅಳಿಸಬಾರದೆಂದು ನಿಶ್ಚಯಿಸಿದನು- ಇತ್ತ ಪಾರ್ವತಿಯು ಬಿಕ್ಕಿ ಬಿಕ್ಕಿ ಅಳುತ್ತಲೆ ಇದ್ದಳು. ॥೩೫॥

**ತದ್ದೇಹಂ ಶತಧಾ ಕೃತ್ವಾ ಚುಚೂರ್ಣಾಂಘ್ರಿವಿಘಾತತಃ ।**
**ಪತಮಾನೋಽಪಿ ತದ್ದೇಹಶ್ಚೂರ್ಣಯಾಮಾಸ ಶಾಖಿನಃ ॥೩೬॥**

**ಜನನ್ಯಾ ಅಗ್ರತಸ್ತಸ್ಥೌ ಸಂಹೃತ್ಯೈವಂ ತು ದಾನವಮ್ ।**
**ಗುಣೇಶೋ ಮುನಯೋ ದೇವಾಸ್ತತ್ಪತ್ನ್ಯೋಽಥ ಸಮಾಗತಾಃ ॥೩೭॥**

**ಊಚುಸ್ತಾಂ ಪಾರ್ವತೀಂ**

ಸರ್ವ **ಊಚುಃ** :—

**ವಿಘ್ನಾಃ ಕಿಯಂತೋಽಸ್ಯ ಭವಂತಿ ಹಿ ? ।**

ಆಗ ಗಣಪತಿಯು ಕರ್ದಮನ ದೀರ್ಘದೇಹಕ್ಕೆ ಒಮ್ಮೆ ತನ್ನ ಕಾಲಿನಿಂದ ಬಲವಾಗಿ ಒದೆದುಬಿಟ್ಟನು ಇನ್ನು ಕರ್ದಮನ ಕಥೆಯು ಮುಂದುವರೆದೀತೇ ? ಅವನ ದೇಹ ನೂರಾರು ತುಂಡುಗಳಾಗಿ ಬಿದ್ದಿತು ಗಣಪತಿಯು ಮತ್ತೆ ಮತ್ತೆ ಅಸುರನನ್ನು ಒದೆದು ಪುಡಿ ಪುಡಿಮಾಡಿ ಹಾಕಿದನು. ಅವನ ದೇಹದ ಅವಶೇಷಗಳು ನೆಲಕ್ಕೆ ಬೀಳುವಾಗ ಭೂಗತ ವೃಕ್ಷಗಳೆಲ್ಲ ನಾಮಾವಶೇಷಗಳನ್ನಾಗಿ ಮಾಡಿದವು. ॥೩೬॥

ಕರ್ದಮ ದಾನವನನ್ನು ಧ್ವಂಸಮಾಡಿದ ಬಳಿಕ ಗಣಪತಿಯು ವೀರಶ್ರೀ ವಿರಾಜಿತನಾಗಿ ಪೂರ್ವರೂಪದಿಂದ ತನ್ನ ತಾಯಿಯ ಎದುರಿಗೆ ಬಂದು ನಿಂತನು. ಇಷ್ಟರೊಳಗೆ ಬಾಲಕನು ಕಾಣದೇ ಹೊರಟು ಹೋಗಿದ್ದುದನ್ನು ಕೇಳಿ ಮುನಿಗಳೂ ತತ್ಪತ್ನಿಯರೂ ಮತ್ತು ದೇವತೆಗಳೂ ಎಲ್ಲರೂ ಅಲ್ಲಿಗೆ ಓಡುತ್ತ ಬಂದು ಸೇರಿದರು. ॥೩೭॥

ರಾಕ್ಷಸನು ಸಂಹೃತನಾದುದನ್ನು ಕಂಡು ಎಲ್ಲರಿಗೂ ಮಿತಿಮೀರಿ ಹರ್ಷ ಉಂಟಾಯಿತು. ಆಗ ಪಾರ್ವತಿಯನ್ನು ಕುರಿತು ಈ ರೀತಿ ಅಭಿನಂದಿಸಲಾರಂಭಿಸಿದರು.

ಜನರು :—

ಅಮ್ಮ, ಪಾರ್ವತಿ ! ನಿನ್ನ ಮಗ; ಗಣಪತಿಗೆ ಎಷ್ಟು ಬಗೆಯ ವಿಘ್ನ

ತ ಏವ ನಾಶಮಾಯಾಂತಿ ತವ ಪುಣ್ಯಾತ್ಸುರೇಶ್ವರಿ ! ॥೩೮॥

ಕ ಉವಾಚ :—

ಸರ್ವೈಸ್ತೈಃ ಪೂಜಿತಂ ಬಾಲಂ ಗೃಹೀತ್ವಾ ಸ್ವ-ಕಟೌ ಶಿವಾ ।
ಗೃಹಂ ಜಗಾಮ ತೈಸ್ತಾಭಿರ್ಹರ್ಷನಿರ್ಭರಮಾನಸಾ ॥೩೯॥

ಪುರಾಮರಗಣಾನ್ ಜಿತ್ವಾ [1]ಗರುತ್ಮಾನ ಮೃತಂ ಯಥಾ ।
ಉತ್ತತಾರ ಶಿವಾ ಬಾಲಂ ಸ್ವಾಂಗಣೇ ಕಟಿದೇಶತಃ ॥೪೦॥

---

ಗಳು ಬರುತ್ತಲಿವೆ? ಒಂದರ ಹಿಂದೊಂದರಂತೆ ವಿಪತ್ತುಗಳು ಕಾಯ್ದುಕೊಂಡೇ ಕುಳಿತಿರುವಂತಿದೆಯಲ್ಲವೇ? ಆದರೇನು ? ತಮ್ಮಷ್ಟಕ್ಕೆ ತಾವೇ ಹೇಗೆ ಬರುವುವೋ, ಆದರಂತೆಯೇ ನಶಿಸಿಯೂ ಹೋಗುತ್ತಲಿವೆ. ಮಹೇಶ್ವರಿ! ಇದೆಲ್ಲ ನಿನ್ನ ಹೊಟ್ಟೆಯ ಪುಣ್ಯ. ಇದರಲ್ಲಿ ಸಂದೇಹವೇ ಇಲ್ಲ. ॥೩೮॥

ಬ್ರಹ್ಮ :—

ಜನರ ಈ ಬಗೆಯ ಅಭಿನಂದನಾವಚನಗಳನ್ನು ಕೇಳಿ ಪರಶಿವೆಯು ಉಬ್ಬಿಹೋದಳು. ಎಲ್ಲರಿಂದಲೂ ಪೂಜಿತನಾದ ತನ್ನ ಸುಕುಮಾರ; ಗಣಪತಿಯನ್ನು ಎತ್ತಿಕೊಂಡು ಕೌಂಕುಳಲ್ಲಿ ಕೂರಿಸಿಕೊಂಡಳು. ಸಖಿಯರೊಂದಿಗೆ ಸಂತೋಷದಿಂದ ಮಾತನಾಡುತ್ತಲೇ ತನ್ನ ಮಂದಿರದ ಕಡೆಗೆ ನಡೆದಳು. ಆಗ ಅವಳ ಮನಸ್ಸು ಬಹಳ ಉಲ್ಲಸಿತವಾಗಿದ್ದಿತು. ॥೩೯॥

ಹಿಂದೆ ತನ್ನ ತಾಯಿಯಾದ ವಿನತಾದೇವಿಯನ್ನು ಕದ್ರುವಿನ ದಾಸ್ಯವೃತ್ತಿಯಿಂದ ಬಿಡಿಸಲು ಗರುಡನು ಹೊರಟು ದೇವತೆಗಳೊಡನೆ ಹೋರಾಡಿ, ಅವರನ್ನೆಲ್ಲ ಸೋಲಿಸಿ ಅಮೃತ ಕಲಶವನ್ನು ತಂದಂತೆ ದೇವಿಯು ಕಂಡಳು. ಮನೆಯನ್ನು ಪ್ರವೇಶಿಸಿದ ಬಳಿಕ ಸೊಂಟದಲ್ಲಿದ್ದ ಗಣಪತಿಯನ್ನು ಅಂಗಳದಲ್ಲಿ ಇಳಿಸಿದಳು. ॥೪೦॥

---

[1] ವಿವರಣೆಗೆ ಪರಿಶಿಷ್ಟವನ್ನು ನೋಡತಕ್ಕದ್ದು.

ಸ ತು ಮೂರ್ಛಾಂ ಗತೋ ಉಂರ್ತ್ಯ ಧರಣ್ಯಾಂ ಚ ಪುನಃ ಪುನಃ ।
ವಾರಂ ವಾರಂ ದದೌ ಜೃಂಭಾಂ ಪ್ರಸಾರ್ಯ ಮುಖಪಂಕಜಮ್ ॥೪೧॥

'ಕಿಂ ಜಾತಮಧುನೈವಾಸ್ಯ ?' ಧಾವಯಿತ್ವಾಯಯೌ ಶಿವಾ ।
ಮುಖಮಧ್ಯೇ ದದರ್ಶಾಸ್ಯ ವಿಶ್ವಂ ವಿಶ್ವಸ್ವರೂಪಿಣಃ ॥೪೨॥

ಸಪ್ತದ್ವೀಪಾಂ ವಸುಮತೀಂ ಪುರ-ಗ್ರಾಮ-ವನಾಕರಾ೯ ।
ಬ್ರಹ್ಮಾಣಂ ಭಾಸ್ಕರಂ ಶೇಷಂ ವಿಷ್ಣುಂ ಪರ್ವತ-ಸಾಗರಾ೯ ॥೪೩॥

ತಾಯಿಗೆ ತಾನು ವಿಶ್ವಾತ್ಮಕನೆಂಬುದನ್ನು ಸ್ಪಷ್ಟವಾಗಿ ತೋರಿಸಲಿಕ್ಕೆ ಇದೇ ಸರಿಯಾದ ಸನ್ನಿವೇಶವೆಂದು ತಿಳಿದ ಗಣಪತಿಯು ಒಮ್ಮೆಲೇ ಮೂರ್ಛೆಬಂದವನಂತೆ ನೆಲದಲ್ಲಿ ಬಿದ್ದು ಏಕಪ್ರಕಾರವಾಗಿ ಉರುಳಾಡ ತೊಡಗಿದನು. ತನ್ನ ಮುಖಕಮಲ ವನ್ನು ಅರಳಿಸಿ ಪದೇ ಪದೇ ಆಕಳಿಸಿದನು. ಏನೋ ಒಂದು ಬಗೆಯ ವಿಕಾರ ಚೇಷ್ಟೆಗಳನ್ನು ಮಾಡಲಾರಂಭಿಸಿದನು. ॥೪೧॥

'ಇದೇನು ? ಈಗಿನ್ನೂ ಚಟುವಟಿಕೆಯಿಂದಿದ್ದನಲ್ಲವೇ ? ಇಷ್ಟರೊಳ ಗಾಗಿ ಈ ಕೂಸಿಗೆ ಏನಾಗಿರಬಹುದು ?' ಎಂದು ಅಂಜುತ್ತ ಪಾರ್ವತಿಯು ಮಗನು ಉರುಳಾಡುತ್ತಿರುವ ಸ್ಥಳಕ್ಕೆ ಧಾವಿಸಿಬಂದಳು. ಅವನ ಮುಖದ ಹತ್ತಿರ ತನ್ನ ಮುಖವನ್ನಿರಿಸಿದಳು. ಮತ್ತು ಅವನು ಆಕಳಿಸುತ್ತಿದ್ದುದನ್ನು ಸೂಕ್ಷ್ಮವಾಗಿ ಪರಿಶೀಲಿಸಿದಳು. ವಿಶ್ವಾತ್ಮಕನಾದ ಬಾಲಕನ ಬಾಯಿಯ ಮಧ್ಯದಲ್ಲಿ ಇಡೀ ವಿಶ್ವವೇ ಅವಳಿಗೆ ತೋರಿ ಬರಲಾರಂಭಿಸಿತು. ॥೪೨॥

ಪಾರ್ವತಿಯು ಬಾಲಕನ ವದನಾರವಿಂದದಲ್ಲಿ ಯಾವ ಯಾವ ವಸ್ತುಗಳನ್ನು ಕಂಡಳೆಂಬುದನ್ನು ಸೂಕ್ಷ್ಮವಾಗಿ ಹೇಳುವೆನು, ವ್ಯಾಸ ! ಕೇಳು. ಸಪ್ತದ್ವೀಪಗ ಳಿಂದ ಮಂಡಿತವಾದ ಇಡೀ ಭೂಭಾಗವೇ ಅಲ್ಲಿ ಕಾಣತೊಡಗಿತ್ತು. ಅನೇಕ ಪಟ್ಟಣ ಗಳು, ವನಗಳ ಸಮುದಾಯ, ಚತುರ್ಮುಖನಾದ ನಾನು, ಪ್ರಪಂಚವನ್ನೆಲ್ಲ ಬೆಳ

ಗಂಧರ್ವಾ ಯಕ್ಷ-ರಕ್ಷಾಂಸಿ ಮುನಿ-ಪಕ್ಷಿಗಣಾ ಸಹಿ ।
ನದೀ-ವಾಪೀ-ತಡಾಗಾನಿ ಮನೂನಷ್ಟೌ ವಸೂನಪಿ ॥೪೪॥

ಶಶಿಸೂರ್ಯಾನಲೋಡೂನಿ ಸ-ಚೇತನಮಚೇತನಮ್ ।
ಪಾತಾಲಾನ್ಯಪಿ ಸಪ್ತಾನಿ ಸ್ವರ್ಗಾನಪ್ಯೇಕವಿಂಶತೀಃ ॥೪೫॥

ಏವಂ ತ್ರಿಭುವನಂ ದೃಷ್ಟ್ವಾ ಮುಮೂರ್ಛ ಗಿರಿಜಾ ತದಾ।
ನಿಮೀಲ್ಯ ನಯನೇ ಭ್ರಾಂತಾ ಮುಹೂರ್ತದ್ವಯಮಾಸ್ಥಿತಾ ॥೪೬॥

---

ಗುವ ಭಾಸ್ಕರ, ಆದಿಶೇಷ, ಮಹಾವಿಷ್ಣು, ಕುಲಪರ್ವತಗಳು, ಸಾಗರಗಳು, ॥೪೩॥

ದೇವಗಾಯಕರಾದ ಗಂಧರ್ವರು, ಯಕ್ಷರು, ರಾಕ್ಷಸರು, ಮಹರ್ಷಿಗಳು, ನಾನಾಜಾತಿಯ ವಿಹಂಗಮಗಳ ಸಮುದಾಯ, ಎಲ್ಲ ವಿಧ ನದಿಗಳು, ಭಾವಿಗಳು, ಕೆರೆ-ಕುಂಟೆಗಳು, ಹದಿನಾಲ್ಕು ಜನ ಮನುಗಳು, ಎಂಟು ಮಂದಿ ವಸುಗಳು, ಇವರನ್ನು ಸ್ಪಷ್ಟವಾಗಿ ನೋಡಿದಳು. ॥೪೪॥

ಚಂದ್ರ, ಸೂರ್ಯ, ನಕ್ಷತ್ರ, ಇವೇ ಮೊದಲಾದ ತೇಜೋಮಂಡಲಗಳು, ಚೇತನಾಚೇತನ (ಸಜೀವ, ನಿರ್ಜೀವ) ವಸ್ತುಗಳು ಎಲ್ಲವೂ ನೋಡಿದಂತೆಲ್ಲ ಹೊಸ ಹೊಸದಾಗಿ ಕಾಣಬಂದವು, ಅತಲ, ವಿತಲ, ಸುತಲಾದಿ ಏಳು ಬಗೆಯ ಪಾತಾಳ ಲೋಕಗಳು ಕಂಡವು. ಸ್ವಲ್ಪ ದೃಷ್ಟಿಯನ್ನು ಮೇಲ್ಮುಖವಾಡಿ ನೋಡಲು ಇಪ್ಪತ್ತೊಂದು ವಿಧ ಸ್ವರ್ಗಲೋಕಗಳೂ ಒಂದು ಪಾತ್ರೆಯ ಮೇಲೆ ಮತ್ತೊಂದು ಪಾತ್ರೆಯನ್ನಿರಿಸಿದಂತೆ ತೋರಲಾರಂಭಿಸಿದವು. ॥೪೫॥

ತನ್ನ ಮಗನಾದ ಪುಟ್ಟ ಗಣಪತಿಯ ಪುಟಾಣಿ ಬಾಯಿಯಲ್ಲಿ ತ್ರಿಭುವನಗಳೂ ಕಾಣಿಸುತ್ತಿರುವುದನ್ನು ನೋಡಿ ಹೈಮವತಿಯು ಹೌಹಾರಿ ಕುಳಿತಳು. ಆವಳಿಗೆ ಇದೇನೆಂದು ವಿಚಾರಮಾಡಿದಂತೆಲ್ಲ ಯಾವುದೊಂದು ಬಗೆ ಹರಿಯದೇ ಹೋದುದರಿಂದಲೂ, ನೋಡಿದ ಪ್ರತಿಯೊಂದು ದೃಶ್ಯವೂ ಮಹದದ್ಭುತವಾಗಿದ್ದುದರಿಂದಲೂ ಒಮ್ಮೆಲೇ ಮೂರ್ಛೆಬಂದು ಬಿಟ್ಟಿತು. ಕಣ್ಣುಗಳೆರಡನ್ನೂ

---

ವಿವರಣೆಗೆ ಪರಿಶಿಷ್ಟವನ್ನು ನೋಡತಕ್ಕದ್ದು.

**ಶಿವಂ ಸಸ್ಮಾರ ಮನಸಾ ಸಾಪಧಾನಾ ತತೋಽಭವತ್ ।**
**ಯಥಾಪೂರ್ವಂ ಸ್ಥಿತಂ ಬಾಲಂ ಪಶ್ಯತಿ ಸ್ಮ ಪುರಃ ಸ್ಥಿತಮ್ ॥೪೭॥**

**ತತಸ್ತಂ ಪರಿತುಷ್ಟಾವ ತತ್ಪ್ರಸಾದಾತ್ಪ್ರಸನ್ನಧೀಃ ।**

**ಪಾರ್ವತ್ಯುವಾಚ :—**

**ಪರಮಾತ್ಮಾ ತ್ವಮೇವಾಸಿ, ಚರಾಚರಗುರುರ್ಭವಾನ್ ॥೪೮॥**

---

ಸಂಪೂರ್ಣವಾಗಿ ಮುಚ್ಚಿಬಿಟ್ಟಳು. ತನ್ನನ್ನೇ ತಾನು ಗುರುತಿಸಲಾರದಷ್ಟು ಭ್ರಾಂತಳಾದಳು. ಎರಡು ಮುಹೂರ್ತಗಳ ವರೆಗೆ ಅವಳಿಗೆ ಸ್ವಲ್ಪವೂ ಪ್ರಜ್ಞೆಯೇ ಇರಲಿಲ್ಲ, ಆದಾಗ್ಯೂ ಒಂದು ಬಗೆಯಿಂದ ಈ ದೃಶ್ಯಗಳು ಸ್ವಾಪ್ನಿಕ ದೃಶ್ಯಗಳಂತೆ ಕಂಡುಬರುತ್ತಲಿದ್ದವು. ॥೪೬॥

ಸ್ವಲ್ಪ ಕಾಲ ಕ್ರಮಿಸುವಷ್ಟರಲ್ಲಿ ಮನಸ್ಸು ತಿಳಿಯಾಗಲಾರಂಭಿಸಿತು. ತನಗೆ ತೋರಿದುದು ವಾಸ್ತವವೇ ? ಎಂಬುದನ್ನು ಆಲೋಚಿಸಿದಳು. ಇದು ಉತ್ಪಾತವಿರಬಹುದೇ ಎಂದು ಭ್ರಮಿಸಿ, ಮನಸ್ಸಿನಲ್ಲೇ ತನ್ನ ಆರಾಧ್ಯದೈವ, ಮಹಾದೇವನನ್ನು ಸ್ಮರಿಸಿಕೊಂಡಳು. ಆ ಕೂಡಲೇ ಸುರೇಶ್ವರಿಯ ಮನಸ್ಸು ಸಂಪೂರ್ಣವಾಗಿ ತಿಳಿಯಾಯಿತು. ಕಲಕಿದ ಮನಸ್ಸು ಸ್ವಚ್ಛವಾದಂತೆಲ್ಲ ಅವಳಿಗೆ ಬಹಳಮಟ್ಟಿಗೆ ನೆಮ್ಮದಿ ಎನಿಸಿತು. ಅಂಜುತ್ತಲೇ ಪುನಃ ಬಾಲಕನ ಕಡೆಗೆ ತಿರುಗಿ ನೋಡಿದಳು. ಈ ಅದ್ಭುತಗಳಲ್ಲಿ ಒಂದೂ ಆಗ ಆಗಜೆಗೆ ಕಾಣಿಸಲಿಲ್ಲ. ಬಾಲಕನು ಮೊದಲಿಗೆ ತನ್ನಷ್ಟಕ್ಕೆ ತಾನು ಸುಖವಾಗಿ ಎಂದಿನಂತೆ ಇವಳ ಎದುರಿಗೆ ನಿಂತಿದ್ದನು. ॥೪೭॥

ಬಾಲಕನ ದರಹಸಿತ ಮುಖಕಮಲವನ್ನು ನೋಡಿದೊಡನೆಯೇ ಅವಳನ್ನಾವರಿಸಿದ್ದ ಅಜ್ಞಾನವು ಅಳಿಸಿಹೋಗಿ, ಅವಳ ಕಣ್ಣುಗಳು ನಿಚ್ಚಳವಾದವು. ಇದುವರೆಗೂ ಕಲಕಿಹೋಗಿದ್ದ ದೇವಿಯ ಮನಸ್ಸು ಸ್ಥಿಮಿತಕ್ಕೆ ಬಂದುದು ಸಹ ಗಣಪತಿಯ ಅನುಗ್ರಹದಿಂದಲೇ. ಆಗ ಅವಳಿಗೆ ಪರಮಾವಧಿ ಸಂತೋಷವಾಯಿತು. ದೇವರ ದೇವನಾದ ಗಣಪತಿಯನ್ನು ಹೀಗೆ ಸ್ತುತಿಸಲಾರಂಭಿಸಿದಳು.

ಗೌರೀ :—

ನನ್ನಂತಹ ಪಾಮರಳ ಕಣ್ಣುಗಳಿಗೆ ಸಾಮಾನ್ಯನಾದ ಬಾಲಕನಂತೆ ಕಂಡು

**ಚಿದಾನಂದಘನೋ ನಿತ್ಯೋ ನಿತ್ಯಾನಿತ್ಯಸ್ವರೂಪವಾನ್ ।**
**ತ್ವತ್ಕುಕ್ಷೌ ಪರಿಪುಷ್ಟಾನಿ ಭುವನಾನಿ ಚತುರ್ದಶ ॥೪೯॥**

**ದೇವಾ ಯಕ್ಷಾಶ್ಚ ರಕ್ಷಾಂಸಿ ಸರಿತೋ ವೃಕ್ಷಸಂಚಯಾಃ ।**
**ಸರ್ವಂ ಚರಾಚರಂ ದೃಷ್ಟಂ ಮಯಾ ವಕ್ತುಂ ನ ಶಕ್ಯತೇ ॥೫೦॥**

**ಭ್ರಾಂತಾಹಂ ಪತಿತಾ ಭೂಮೌ ಸಾವಧಾನಾ ಶಿವಸ್ಮೃತೇಃ ।**

---

ಬರುತ್ತಿರುವ ಕರುಣಾಕರಮೂರ್ತೇ! ನೀನು ಪರಮಾತ್ಮನಾಗಿರುವೆ, ಸ್ಥಾವರ-ಜಂಗಮಾತ್ಮಕವಾದ ಈ ಪ್ರಪಂಚಕ್ಕೆಲ್ಲ ಮಾರ್ಗದರ್ಶಕನಾದ ಗುರುವಾಗಿರುವೆ. ॥೪೮॥

ನೀನು ಚೇತನ ವಸ್ತುಗಳನ್ನೆಲ್ಲ ಚೈತನ್ಯಗೊಳಿಸತಕ್ಕವನು. ಆನಂದ ಘನನು. 'ಆಸೀದಸ್ತಿ ಭವಿಷ್ಯತಿ' ಎಂದರೆ, ಹಿಂದೆ ಇದ್ದಿತು. ಇಂದು ಇದೆ. ಮುಂದೆಯೂ ಇರುವುದು ಎಂಬ ವ್ಯವಹಾರಕ್ಕೆ ವಿಷಯವಾದ ವಸ್ತು ನೀನೊಬ್ಬನೇ ಆಗಿರುವೆ. ಕೆಲ ಕಾಲ ತೋರಿ ಆನಂತರ ತೋರದಂತಾಗುವ ಉಪಾಧಿಭೂತನೂ ನೀನೇ. ಸ್ವಯಂ ನಿತ್ಯನಾಗಿದ್ದರೂ ಉಪಾಧಿಗಳ ಸಂಪರ್ಕವಿಯೋಗಗಳಿಂದ ಅನಿತ್ಯನಾಗಿಯೂ ತೋರುವೆ. ಎಂದರೆ ಅನಿತ್ಯವಾದ ಉಪಾಧಿಗಳ ನಾಶಹೊಂದಿದರೆ ತದಂತರ್ಗತನಾದ ನೀನು ಭಾಸವಾಗುವುದಿಲ್ಲವಾಗಿ ಅಜ್ಞಜನರು ನಿನ್ನನ್ನೇ ನಾಶಹೊಂದಿದವನನ್ನಾಗಿ ಭಾವಿಸುವರು. ನಿನ್ನ ಉದರದಲ್ಲಿ ಹದಿನಾಲ್ಕು ಭುವನಗಳೂ ಪರಿಪೂರ್ಣವಾಗಿ ಕುಳಿತಿರುವವಲ್ಲವೇ? ॥೪೯॥

ಮೂವತ್ತು ಮೂರು ಕೋಟಿ ದೇವತೆಗಳು, ಯಕ್ಷರೂ, ರಾಕ್ಷಸಯೋನಿಗಳು, ನದಿಗಳು, ಸ್ಥಾವರಜೀವಿಗಳಾದ ವೃಕ್ಷಸಮುದಾಯ, ಇವೇ ಮೊದಲಾದ ಸಕಲ ಚರಾಚರ ವಸ್ತುಗಳನ್ನೂ ಭಗವನ್! ನಿನ್ನ ಈ ಪುಟ್ಟ ಉದರದಲ್ಲಿ ಸ್ಪಷ್ಟವಾಗಿ ಕಂಡೆನು. ವರ್ಣಿಸುವ ನನ್ನ ಈ ಬಾಯಿಯೂ ನೀನೇ ಆಗಿರುವೆಯಾದುದರಿಂದ ನಾನೇನು ವರ್ಣಿಸಿಯೇನು? ನನಗೆ ಶಕ್ತಿ ಸಾಲದು. ॥೫೦॥

ಈ ಅದ್ಭುತಗಳೆಲ್ಲ ನನ್ನ ಮೆದುಳಿಗೆ ಹೇಗೆ ಅಳವಟ್ಟಾವು? ಇದನ್ನು ನೋಡಿ

**ಜಾತಾಹಂ ಬಾಲರೂಪೇಣಾಪಶ್ಯಂ ತ್ವಾಂ ಪ್ರಾಕೃತಂ ಶಿಶುಮ್ ॥೫೧॥**

**ಕ ಉವಾಚ :—**

**ಏವಂ ಸ್ತುವತ್ಯಾಂ ತಸ್ಯಾಂ ತು ಮಾಯಾಮಾವಿಷ್ಕರೋತ ಸಃ ।**
**ಲಾಲಯಿತ್ವಾ ಕಟೌ ಗೃಹ್ಯ ಸ್ತನಪಾನಂ ದದೌ ಶಿವಾ ॥೫೨॥**

**ಗೃಹಂ ಪ್ರವಿಷ್ಟಾ ಗಿರಿಜಾ ಗೃಹಕಾರ್ಯರತಾಭವತ್ ।**

ನಾನುಭ್ರಾಂತಳಾಗಿ ಹೆಚ್ಚು ಕಾಲ ನೋಡಲಾರದೇ ಮೂರ್ಛೆಗೊಂಡು ನೆಲಕ್ಕೆಬಿದ್ದು ಬಿಟ್ಟಿದ್ದೆನು. ಪರಶಿವನ ದಿವ್ಯ ಮೂರ್ತಿಯ ಸ್ಮರಣೆಯಿಂದ ಪುನಃ ಈಗ ಎಚ್ಚರ ಗೊಂಡೆನು. ಭಗವನ್ ! ನೀನು ಜನನ–ಮರಣಗಳ ಈ ಝುಂಝಾವಾತಕ್ಕೆ ಸಿಲುಕದ ಧೀರನು. ನಿತ್ಯಮುಕ್ತನು. ಇಂತಹ ಪರಾತ್ಪರತರವಸ್ತುವಾದ ನಿನ್ನನ್ನು ನನ್ನ ಅಜ್ಞಾನದ ಮೂಲಕ ' ಪ್ರಾಕೃತಶಿಶು ' ಎಂದು ಭಾವಿಸಿ ಬಿಟ್ಟಿದ್ದೆನು. ಈಗಲೂ ಸಹ ನಾನು ಅದೇ ರೂಪವನ್ನು ಕಾಣುತ್ತಲಿದ್ದೇನೆ. ॥೫೧॥

ಬ್ರಹ್ಮ :—

ಗಿರಿಜೆಯು ಮೇಲ್ಮಟ್ಟಕ್ಕೇರಿದ ಮನೋಧರ್ಮದಿಂದ ಹೀಗೆ ಸ್ತುತಿಸುತ್ತಿರಲು, ಮಹಾಮಾಯಾವಿಯಾದ ಗಣಪತಿಯು ತುರೀಯಾತೀತದಲ್ಲಿ ಲೀನವಾಗಿದ ಅವಳ ಅಂತರ್ಮುಖ ಚಿತ್ತವೃತ್ತಿಯನ್ನು ವ್ಯವಹಾರಕ್ಕೆ ಯೋಗ್ಯವಾಗುವಂತೆ ಬಹಿರ್ಮುಖಗೊಳಿಸಿದನು. ಒಡನೆಯೇ ಗೌರಿಗೆ ' ತಾನು ತಾಯಿ, ಗಣಪತಿಯು ತನ್ನ ಮಗ' ಇವೇ ಮೊದಲಾದ ವ್ಯಾವಹಾರಿಕ ಮನೋವ್ಯಾಪಾರಗಳು ತಡೆ ಇಲ್ಲದೆ ನಡೆಯಲಾರಂಭಿಸಿದವು. ಮಗುವನ್ನು ಎತ್ತಿಕೊಂಡು ಸೊಂಟದಲ್ಲಿ ಕುಳ್ಳಿರಿಸಿಕೊಂಡಳು. ಆಟವಾಡಿಸಿದಳು. ಸ್ತನ್ಯವನ್ನೂ ಪಾನಮಾಡಿಸಿದಳು. ಸರಿ, ವ್ಯವಹಾರವು ಯಥಾಪ್ರಕಾರವಾಗಿ ಮತ್ತೆ ಆರಂಭವಾಯಿತು. ॥೫೨॥

ಮಹಾದೇವಿಯು ಮಗುವನ್ನೆತ್ತಿಕೊಂಡು ಮನೆಯೊಳಗೆ ಹೋಗಿ ಮನೆಯ

ಮುನಯೋ ಮುನಿಪತ್ನ್ಯಶ್ಚ ಯಯುಃ ಸ್ವಂ ಸ್ವಂ ನಿವೇಶನಮ್ ೫೩||

ಇದಮಾಖ್ಯಾನಕಂ ಶ್ರುತ್ವಾ ಸರ್ವಪಾಪೈಃ ಪ್ರಮುಚ್ಯತೇ ||೫೪||

ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ 'ವಿಶ್ವರೂಪ
ದರ್ಶನಂ' ನಾಮ ದ್ವಿ-ನನತಿತಮೋಽ-
ಧ್ಯಾಯಸ್ಸಮಾಪ್ತಃ

---

ಕೆಲಸಗಳಲ್ಲಿ ಮಗ್ನಳಾದಳು. ಇವಳೊಡನೆ ಇದ್ದ ಮುನಿಗಳಿಗಾಗಲೀ, ಮುನಿಪತ್ನಿಯರಿಗಾಗಲೀ ವಿಶ್ವರೂಪದ ದೃಶ್ಯವು ಕಂಡಿರದಿದ್ದರೂ, ಪಾರ್ವತಿಯು ಗೈದ ಸ್ತುತಿಯಿಂದ ಸಾಮಾನ್ಯವಾಗಿ ಎಲ್ಲವೂ ತಿಳಿದಂತಾಗಿದ್ದಿತು. ಅಷ್ಟರಿಂದಲೇ ಅವರೆಲ್ಲ ತೃಪ್ತರಾಗಿ ತಮ್ಮ ತಮ್ಮ ನಿಲಯಗಳಿಗೆ ತೆರಳಿದರು. ||೫೩||

ವ್ಯಾಸ ! ಹೆಚ್ಚೇನು ಹೇಳುವುದುಳಿದಿದೆ ? ಈ ಆಖ್ಯಾಯಿಕೆಯು ಪರಮ ಪವಿತ್ರತಮವಾದುದು. ಇದನ್ನು ಭಕ್ತಿ-ಶ್ರದ್ಧೆಗಳಿಂದ ಕೇಳಿದವರು ಸಕಲ ಪಾಪ ಪಂಕ ಸಂಪರ್ಕದಿಂದಲೂ ನಿರ್ಮುಕ್ತರಾಗುತ್ತಾರೆ. ||೫೪||

ಇಲ್ಲಿಗೆ ಶ್ರೀ ಗಣೇಶ ಪುರಾಣ, ಉತ್ತರಖಂಡದಲ್ಲಿ 'ವಿಶ್ವರೂಪ ಪ್ರದರ್ಶನ '
ಎಂಬಲ್ಲಿಗೆ ತೊಂಭತ್ತೆರಡನೆಯ ಅಧ್ಯಾಯಾನುವಾದವು ಮುಗಿದುದು.



|| ಶ್ರೀ ಗಣೇಶಾಯ ನಮಃ ||

## ಅಥ ತ್ರಿ-ನವತಿತಮೋಽಧ್ಯಾಯಃ

**ಕ ಉವಾಚ :—**

**ತತಸ್ತು ಪಂಚಮೇ ವರ್ಷೇ ಪ್ರವೃತ್ತೇ ಮುನಿಬಾಲಕಾಃ |**
**ಉಷಃಕಾಲೇ ಗುಣೇಶಸ್ಯ ಸಮಾಗಮ್ಯ ಗೃಹಂ ಪ್ರತಿ ||೧||**

**ಬಾಲಕಾ ಊಚುಃ :—**

**ಪ್ರಾತಃಕಾಲೇ ಕಥಂ ಶೇಷೇ? ಪ್ರೋತ್ತಿಷ್ಠೋತ್ತಿಷ್ಠ ಹೇ ಸಖೇ! |**

---

,|| ಶ್ರೀ ಗಣೇಶಾಯ ನಮಃ ||

## ೯೩ ನೆಯ ಅಧ್ಯಾಯ.

ಬ್ರಹ್ಮ :—

ವತ್ಸ, ವ್ಯಾಸ ! ಈ ದಿವ್ಯ ಚರಿತ್ರೆಯನ್ನು ಮನವಿಟ್ಟು ಕೇಳು. ಮಹಾ ಗಣಪತಿಗೆ ನಾಲ್ಕು ವರ್ಷಗಳು ತುಂಬಿ ಐದನೆಯ ಸಂವತ್ಸರ ಆರಂಭವಾಯಿತು ಹೀಗಿರುವಾಗ ಒಂದು ದಿವಸ ಇನ್ನೂ ನಸುಕು ಹರಿಯುವುದರ ಒಳಗಾಗಿಯೇ ಮುನಿಬಾಲಕರೆಲ್ಲ ನಿದ್ರೆಯಿಂದೆಚ್ಚೆತ್ತು ಆಟವಾಡುವುದಕ್ಕಾಗಿ ಗಣಪತಿಯನ್ನು ಕರೆದೊಯ್ಯಲು ಅವನ ಮನೆಯ ಬಾಗಿಲಿಗೆ ಬಂದರು. ಗಣಪತಿ ಇನ್ನೂ ಎಚ್ಚರಗೊಂಡಿರಲಿಲ್ಲ. ಇದನ್ನು ನೋಡಿದ ಬಾಲಕರು ಈ ರೀತಿ ಮಾತನಾಡುತ್ತ ಅವನನ್ನು ಎಬ್ಬಿಸತೊಡಗಿದರು. ||೧||

ಬಾಲಕರು :—

ರಾತ್ರಿಯು ಕಳೆದು ಪ್ರಭಾತ ಉಂಟಾದರೂ ಇನ್ನೂ ಮಲಗಿರುವೆಯ ? ಮಿತ್ರ, ಗಣಪತೇ ! ಏಳು, ಮೇಲಕ್ಕೆದ್ದು ಬಾ. ಆಟವಾಡೋಣ. ತಾಯೇ!

ಉತ್ಥಾಪಯ ನಿಜಂ ಬಾಲಂ

ಕ ಉವಾಚ :—

ಇತ್ಯೂಚುಸ್ತೇ ಶಿವಾಮುಪಿ ॥೨॥

ತಾನುವಾಚ ಶಿವಾ ವಾಕ್ಯಂ

ಗೌರ್ಯುವಾಚ :—

ನಿದ್ರಾ ವೋ ನ ಸಮಾಗತಾ ? ।

ಕ್ರೀಡಾಯಾಮೇವ ಸಕ್ತಾನಾಂ ಚಪಲಾನಾಂ ದಿವಾ ಶಮ್ ॥೩॥

ಕಥಂ ಯಾಹೀತ್ಯನುದಿತೇ ನಿರ್ಲಜ್ಜಾ ಮೂಢಭಾಃ ? ।

---

ನಾವು ಎಷ್ಟು ಕೂಗಿದರೂ ನಿನ್ನ ಮಗನು ಏಳಲೊಲ್ಲನು. ಅವನನ್ನು ನೀನಾದರೂ ಎಚ್ಚರಗೊಳಿಸು.

ಬ್ರಹ್ಮ :—

ತಾವು ಕೂಗಿದುದಲ್ಲದೇ ಪರಶಿವೆಯನ್ನೂ ಒತ್ತಾಯಗೊಳಿಸಿದರು. ॥೨॥

ಆಗ ದೇವಿಗೆ ಬಹಳ ಅಸಹನೆ ಉಂಟಾಯಿತು. ಬಾಲಕರನ್ನು ಕುರಿತು ಗದರಿಸುತ್ತ ಹೀಗೆ ನುಡಿದಳು.

ದೇವೀ :—

ಬಾಲಕರೇ ! ನಿಮಗೇನು ನಿದ್ರೆಯೇ ಬರುವುದಿಲ್ಲವೋ ಹೇಗೆ ? ನೀವು ಈಚೀಚೆಗೆ ಬಹಳ ತುಂಟರಾಗಿ ಹೋಗಿದ್ದೀರಿ. ಸರ್ವದಾ ಆಟವಾಡುವುದರಲ್ಲೇ ನೀವು ಕಾಲವನ್ನು ಕಳೆಯಲಾರಂಭಿಸಿದ್ದೀರಿ. ಹಗಲು, ರಾತ್ರಿಗಳೆಂಬ ಪರಿವೆ ಸಹ ನಿಮಗಿರುವುದಿಲ್ಲ. ನಿಮ್ಮ ಚಾಪಲ್ಯ ಬಹಳ ಮಟ್ಟಿಗೆ ಹೆಚ್ಚಿ ಹೋಗಿದೆ. ॥೩॥

ನಿಮಗೆ ನಿದ್ರೆ ಬರಲಿಲ್ಲವೆಂದ ಮಾತ್ರಕ್ಕೆ ನಿದ್ರೆಮಾಡುತ್ತಿರುವವರನೂ

ತ ಊಚುಃ ;—

ಮಾತರ್ನ ತವ ವಾಕ್ಯೇನ ಕೋಪೋ ನೋ ಜಾಯತೇ ಕ್ವಚಿತ್ ||೪||

ವಯಂ ತೇ ಬಾಲಕಾಃ ಕಿಂ ನ ? ತ್ವಂ ವಾ ನೋ ಜನನೀ ನ ಕಿಮ್ ? |
ಅಸ್ಮಿಂಸ್ತವ ಶಿಶೌ ಸಕ್ತಂ ಸರ್ವೇಷಾಂ ಮಾನಸಂ ಸದಾ ||೫||

ಏನಂ ಪಶ್ಯಾಮ ಪುರತೋ ದಿವಾ-ನಕ್ತಂ ನಿರಂತರಮ್ |
ವಿನೈನಂ ಚ ಸಮಾಧಾನಂ ನ ನಶ್ಚೇತಸಿ ಜಾಯತೇ ||೬||

---

ಎಚ್ಚರಿಸಲು ಪ್ರಯತ್ನಪಟ್ಟು ' ಆಟಕ್ಕೆ ಬಾ ' ಎಂದು ನಾಚಿಕೆ ಇಲ್ಲದೇ ಹೇಗೆ ಕರೆಯುತ್ತಿರುವಿರೋ ನನಗೆ ಬೇರೆ ಗೊತ್ತಿಲ್ಲ. ಎಂತಹ ದಡ್ಡರು ಮತ್ತು ಮೊಂಡರಾಗಿ ಹೋದಿರೋ ?

ಬಾಲಕರು :—

ತಾಯೇ ! ನೀನು ಎಷ್ಟೆಷ್ಟು ವಿಧದಿಂದ ಬೈದರೂ, ಹೊಡೆದರೂ ನಮಗಂತೂ ಕೋಪವು ಬರುವುದೇ ಇಲ್ಲ. ||೪||

'ಏತಕ್ಕಾಗಿ' ಎನ್ನುವೆಯೋ, ಹೇಳುವೆವು ಕೇಳು. ನಾವು ನಿನ್ನ ಹುಡುಗರು, ಹೌದೋ ಅಲ್ಲವೋ ? ಇದರಂತೆ ನೀನು ನಮಗೆಲ್ಲ ಜನನಿ ಹೌದೋ ಅಲ್ಲವೋ ? ಹೀಗಿರುವಾಗ ಒಬ್ಬರ ಮಾತಿಗೆ ಮತ್ತೊಬ್ಬರು ಕೋಪಮಾಡಿಕೊಳ್ಳುವುದೆಂದರೇನು? ಇದಂತೂ ಸಾಧ್ಯವೇ ಇಲ್ಲ. ಆ ಮಾತಂತೂ ಒತ್ತೊಟ್ಟಿಗೆ ಇರಲಿ, ಇತ್ತ ನೋಡು. ನಿನ್ನ ಮಗ ; ಗಣಪತಿಯಲ್ಲಿ ನಮ್ಮೆಲ್ಲರ ಮನಸ್ಸೂ ಲಗ್ನವಾಗಿ ಹೋಗಿದೆ. ನಾವಂತೂ ಸರ್ವದಾ ಅವನನ್ನು ಚಿಂತಿಸುತ್ತಲೇ ಇರತಕ್ಕವರು. ಈಗಲಾದರೂ ಗೊತ್ತಾಯಿತೋ, ನಾವು ಏತಕ್ಕಾಗಿ ಇಷ್ಟು ಹೊತ್ತಿಗೆ ಮುಂಚೆಯೇ ಎದ್ದು ಇಲ್ಲಿಗೆ ಬಂದೆವೆಂಬುದು ? ||೫||

ನಾವು ಮನೆಯಲ್ಲಿರಲಿ, ಮತ್ತೆ ಎಲ್ಲಿಗಾದರೂ ಹೋಗಿರಲಿ, ರಾತ್ರಿಯ ಕಾಲವಲ್ಲಾಗಲಿ, ಅಥವಾ ಎಚ್ಚರದಿಂದಿರುವಾಗಲಾಗಲಿ ಇವನನ್ನು ಪ್ರತ್ಯಕ್ಷವಾಗಿಯಲ್ಲ

ಕ ಉವಾಚ :—

ಶ್ರುತ್ವಾ ವಾಕ್ಯಾನಿ ತೇಷಾಂ ತು ಪ್ರೋದತಿಷ್ಠತ್ತದಾ ಶಿಶುಃ ।
ಲಿಲಿಂಗ ಬಹಿರಾಗತ್ಯ ಗುಣೇಶಸ್ತೈಃ ಪರಸ್ಪರಮ್ ॥೭॥

ಯುಯುರ್ಬಹಿರ್ಮುದಾ ಯುಕ್ತಾ ಧೃತ್ವಾ ಹಸ್ತಾನ್ ಪರಸ್ಪರಮ್ ।
ದ್ವಿ-ಭಾಗೀಭೂಯ ಚಿಕ್ರೀಡುರ್ನಾನಾಯುದ್ಧವಿಚೇಷ್ಟಿತೈಃ ॥೮॥

ದಿದ್ದರೂ ಪರೋಕ್ಷವಾಗಿ ನಾವು ನೋಡುತ್ತಲೇ ಇರತಕ್ಕವನು. ಇವನೊಬ್ಬನಿಲ್ಲದಿದ್ದರೆ ನಮ್ಮವರಲ್ಲಾರ ಮನಸ್ಸೂ ಉಲ್ಲಾಸಗೊಳ್ಳುವುದೇ ಇಲ್ಲ. ನಾವು ಜೀವಚ್ಛವದಂತೆ ಆಗುವೆವು. ಹೆಚ್ಚೇನನ್ನು ಹೇಳೋಣ? ||೬||

ಬ್ರಹ್ಮ :—

ಇವರಿವರ ಪರಸ್ಪರ ಸಂಭಾಷಣೆಯನ್ನು ಕೇಳಿದ, ಸದಾ ಬೋಧಸ್ವರೂಪನಾದ ಗಣಪತಿಯು ಎಚ್ಚರಗೊಂಡವನಂತೆ ನಟಿಸುತ್ತ ಶಯನವನ್ನು ಬಿಟ್ಟೆದ್ದು ಬಂದು ಪ್ರಾತರ್ವಿಧಿಗಳಾದ ಬಳಿಕ ಸ್ನೇಹಿತರನ್ನು ಪ್ರೇಮಭರದಿಂದ ಆಲಿಂಗಿಸಿದನು. ಮಿತ್ರರಾದ ಮುನಿಬಾಲರೂ ಸಹ ಹರ್ಷಿತರಾಗಿ ದೇವನನ್ನು ಅಪ್ಪಿಕೊಂಡರು. ಈ ರೀತಿ ಪರಸ್ಪರರಲ್ಲಿ ಆಲಿಂಗನಾದಿ ಸ್ನೇಹ ಧರ್ಮಗಳು ನಡೆದವು. ||೭||

ಇಷ್ಟೆಲ್ಲ ನಡೆದ ಬಳಿಕ ಹುಡುಗರು ಒಬ್ಬರ ಕೈಯನ್ನು ಮತ್ತೊಬ್ಬರು ಹಿಡಿದುಕೊಂಡು ಪರಸ್ಪರವಾಗಿ ಮಾತನಾಡುತ್ತ ಗುಂಪು ಚದುರದಂತೆ ಜಾಗರೂಕರಾಗಿ ಮೈದಾನ ಪ್ರದೇಶಕ್ಕೆ ಹೊರಟು ಹೋದರು. ತಮ್ಮ ಗುಂಪನ್ನು ಎರಡಾಗಿ ವಿಭಾಗಿಸಿಕೊಂಡರು. ಅವಕ್ಕೆ ದೇವ-ದಾನವರ ಗುಂಪುಗಳೆಂದು ನೂತನವಾಗಿ ಹೆಸರುಗಳನ್ನಿಟ್ಟುಕೊಂಡರು. ನಿಜವಾಗಿಯೂ ಯುದ್ಧ ಮಾಡುವವರಂತೆ ತಮ್ಮ ಕೈ-ಕಾಲುಗಳನ್ನು ಅಲುಗಾಡಿಸುತ್ತ ಯುದ್ಧದ ಆಟವನ್ನು ಆಡಲಾರಂಭಿಸಿದರು. ||೮||

ಮಸ್ತಕಂ ಮಸ್ತಕೇನೈವ ವಕ್ಷಸಾ ವಕ್ಷ ಏವ ಚ ।
ಬಾಹುಭ್ಯಾಂ ಚೈವ ಬಾಹೂ ಚ ನಿಜಘ್ನುಸ್ತೇ ಪರಸ್ಪರಮ್ ॥೯॥

ಜಲೇನ ರಜಸಾ ಚೈವ ಕಂದುಕೈರ್ಮೃಕ್ಷ್ಲಿಭಿಸ್ತಥಾ ।
ಕರ್ದಮೈರ್ಗೋಮಯೈಃ ಕೇಚಿದಾಂದೋಲನವಿಕರ್ಷಣೈಃ ॥೧೦॥

ಕೋಲಾಹಲಂ ಪ್ರಕುರ್ವಂತಃ ಶೃಂಗ-ವಂಶರವಾನಪಿ ।
ದೇವಭೂತಾ ಜಯಂ ಜಗ್ಮುರ್ದೈತ್ಯಭೂತಾಃ ಪರಾಜಯಮ್ ॥೧೧॥

---

ಇತರರ ತಲೆಗೆ ತಮ್ಮ ತಲೆಯಿಂದ ಘಟ್ಟಿಸಿದರು. ಎದೆಯನ್ನು ಎದೆಗಳಿಗೆ ತಾಕಿ ಸಿದರು. ಒಬ್ಬರನ್ನೊಬ್ಬರು ತಮ್ಮ ಬಾಹುಗಳಿಂದ ಬಿಗಿದರು. ಯುದ್ಧದ ಆಟ ವನ್ನಾಡುತ್ತಲಿದ್ದವರು ಕೇವಲ ಚಿಕ್ಕ ವಯಸ್ಸಿನ ಬಾಲಕರಾಗಿದ್ದರೂ, ಯುದ್ಧ ಕಲೆಯು ಮಟ್ಟಿಗೆ ಎಂತಹ ಯೋಧಾಗ್ರಣಿಗೂ ದರ್ಶನೀಯವಾಗಿದ್ದಿತು. ॥೯॥

ನೆಲದ ಧೂಳಿಯನ್ನು ಸಮೃದ್ಧಿಯಾಗಿ ಸಂಗ್ರಹಿಸಿ ನೀರಿನಿಂದ ಅದನ್ನು ಕಲೆಸಿ, ಚಂಡಿನಂತೆ ಮುದ್ದೆಗಳನ್ನು ಮಾಡಿ ಒಂದು ಗುಂಪಿನ ಮೇಲೆ ಎದುರು ಗುಂಪಿನ ವರು ಎಸೆದಾಡುತ್ತ ಅದೊಂದು ಬಗೆಯ ಯುದ್ಧವನ್ನು ಆಟದರೂಪದಲ್ಲಿ ಆರಂಭಿಸಿ ದರು. ಕೆಲವರು ಕೆಸರನ್ನೇ ಚಂಡಿನಂತೆ ಉಪಯೋಗಿಸಿದರು. ಕೆಲವರು ಸಗಣಿ ಯನ್ನು ಎದುರಾಳಿಗಳ ಮೇಲೆ ಒಗೆದರು. ಕೆಲವರು ಎದುರಾಳಿಗಳನ್ನು ತಮ್ಮ ಕೈಗಳಿಂದ ಭದ್ರವಾಗಿ ಹಿಡಿದುಕೊಂಡು ಜೋರಾಗಿ ಹಿಂದು-ಮುಂದೆ ತಳ್ಳಾಡಿದರು. ಮತ್ತೆ ಕೆಲವರು ಶತ್ರುರೂಪಿಗಳನ್ನು ತಮ್ಮ ಗುಂಪಿನ ಬಳಿಗೆ ದರ ದರ ಎಳೆದು ತಂದರು. ॥೧೦॥

ಕೆಲವರು ಕೊಂಬುಗಳನ್ನು ತುತ್ತೂರಿಯಂತೆ ಊರಿದರು. ಮತ್ತೆ ಕೆಲ ವರು, ಬಾಳೆಎಲೆ, ತೆಂಗಿನಗರಿ ಮೊದಲಾದುವುಗಳಿಂದ ಪೀಪಿಗಳನ್ನು ಮಾಡಿ ತಮ್ಮ ಬಲವನ್ನೆಲ್ಲ ಉಪಯೋಗಿಸಿ ಊದಲಾರಂಭಿಸಿದರು. ಕೆಲವರು ಬಿದಿರಿನ ಕೊಳಲುಗಳನ್ನು ಬಾರಿಸಿದರು. ಅಂತೂ ಈ ಗದ್ದಲದಿಂದ ದೊಡ್ಡದೊಂದು ಕೋಲಾಹಲವನ್ನೇ ಎಬ್ಬಿಸಿ ಬಿಟ್ಟರು. ಈ ಗುಂಪಿನ ಪೈಕಿ ದೇವತೆಗಳು

ಏವಂ ಯುದ್ಧ್ಯತ್ಸು ತೇಷ್ವೇವಂ 'ಖಡ್ಗ'ನಾಮಾ ಮಹಾಸುರಃ ।
ಆಯಯಾವುಷ್ಟ್ರರೂಪೇಣ ವಿಶಾಲೇನ ನಭಃಸ್ಪೃಶಾ ॥೧೬॥

ಪುಚ್ಛವಾತೇನ ಮಹತಾ ಪತಿತಾ ವೃಕ್ಷಸಂಚಯಾಃ ।
ಶೂಲದಂತೋ ಲಲಜ್ಜಿಹ್ವಃ ಪಾದೇನಾಮರ್ದಯದ್ದಿಶಃ ॥೧೩॥

ಸ ಮಹಾಂತಂ ರವಂ ಕೃತ್ವಾ ತಮಧಾವದ್ಗಣೇಶ್ವರಮ್ ।
ಪ್ರತಿಶಬ್ದೇನ ಸಹಸಾ ನಾದಯನ್ವಿದಿಶೋ ದಿಶಃ ॥೧೪॥

ಎನಿಸಿಕೊಂಡವರು ಜಯಶೀಲರಾದರು, ಅಸುರರೆನಿಸಿ ಕೊಂಡವರು ಪರಾಜಯ ವನ್ನು ಹೊಂದಿದರು. ॥೧೧॥

ಇಷ್ಟರಲ್ಲಿ ಅಲ್ಲಿಗೊಬ್ಬ ಅಸುರನು ಬಂದನು. ಅವನು ಎಷ್ಟು ಬಲಿಷ್ಠನೋ ಅಷ್ಟೇ ದುಷ್ಟನೂ ಆಗಿದ್ದನು. ಆ ದೈತ್ಯನ ಹೆಸರು 'ಖಡ್ಗ'. ಇವನು ಒಂದು ಭಾರಿಯಾದ ಒಂಟೆಯ ರೂಪದಿಂದ ಅಲ್ಲಿಗೆ ಬಂದನು. ಆ ಒಂಟೆಯ ಉದ್ದಗಲ ಗಳನ್ನು ವಿಚಾರಿಸುವುದಾದರೆ ಭೂವ್ಯಂತರಿಕ್ಷಗಳೂ ಅವನ ದೇಹದಿಂದ ತುಂಬಿ ಹೋಗಿವಂತೆ ಕಾಣುತ್ತಿದ್ದವು. ॥೧೨॥

ತುಂಡಾದ ತನ್ನ ಬಾಲವನ್ನು ಬಲವಾಗಿ ಬೀಸಿ, ಅದರಿಂದುಂಟಾದ ಬಿರುಗಾಳಿ ಯಿಂದ ಸಾಲು ಮರಗಳನ್ನೆಲ್ಲ ಕೆಡವಿದನು. ಉಷ್ಟ್ರದ ಹಲ್ಲುಗಳು ಶೂಲದಂತೆ ಚೂ ಪಾಗಿದ್ದವು. ನಾಲಿಗೆಯು ಸರ್ಪದ ಜಿಹ್ವೆಗಳಂತೆ ಯಾವಾಗಲೂ ಚಲಿಸುತ್ತಲೇ ಇ ದ್ದಿತು. ಅವನು ಒಮ್ಮೆ ಪಾದವನ್ನು ಊರಿದನೆಂದರೆ, ಯಾವ ದಿಕ್ಕಿನಲ್ಲಿ ಅವನು ಪಾದ ವನ್ನು ಊರುವನೋ, ಆ ದಿಕ್ಕಿನಲ್ಲಿದ್ದ ಗಿಡ-ಮರ, ಪರ್ವತ, ಗೃಹಾರಾಮ, ಕ್ಷೇತ್ರ ಗಳೆಲ್ಲ ಧ್ವಸ್ತವಾಗಿ ಹೋಗುತ್ತಿದ್ದವು. ॥೧೩॥

ಅವನು ಬರುವಾಗ ದೊಡ್ಡ ಧ್ವನಿಯಿಂದ ಅರಚುತ್ತಲೇ ಬಂದನು. ಮತ್ತು ನೆಟ್ಟಗೆ ಗಣೇಶನ ಮೇಲೆಯೇ ನುಗ್ಗಿದನು. ಇವನ ಕೂಗಿಗೆ ದಿಗ್ವಿದಿಕ್ಕುಗಳೆಲ್ಲ ಗುಡುಗಿ ಉತ್ತರವಾಗಿ ಪ್ರತಿಧ್ವನಿಯನ್ನು ಕೊಟ್ಟವು. ॥೧೪॥

ತಂ ದೃಷ್ಟ್ವಾ ವಿದ್ರುತಾಸ್ಸರ್ವೇ ಮುನಿಪುತ್ರಾ ಭಯಾತುರಾಃ ।
'ಧಾವ, ಧಾವೇ'ತಿ ತಂ ಬಾಲಂ ಚುಕ್ರುಶುಃ ಕೇಚಿದರ್ಭಕಾಃ ॥೧೫॥

ತೇಷಾಮಾಕ್ರಂದಿತಂ ಶ್ರುತ್ವಾ ಸಹಸಾ ಸ ಗುಣೇಶ್ವರಃ ।
ಕೃತ್ವಾ ಮಹತ್ತರಂ ರೂಪಂ ಉಡ್ಡೀಯ ತಂ ಜಘಾನ ಹ ॥೧೬॥

ಮುಷ್ಟಿಘಾತೇನ ಶಿರಸಿ ವಜ್ರೇಣೇವ ಮಹಾಚಲಮ್ ।
ಸ ಭಿನ್ನಹೃದಯೋ ದುಷ್ಟೋ ವಮನ್ರಕ್ತಂ ಮುಖಾದ್ಬಹು ॥೧೭॥

ಇಂತಹ ಭಯಾನಕ ರೂಪವುಳ್ಳ ಉಷ್ಟ್ರರೂಪೀ ಅಸುರನು ಗಣಪತಿಯ ಮೇಲೆ ನುಗ್ಗಿ ಓಡುತ್ತ ಬಂದುದನ್ನು ಕಂಡೊಡನೆಯೇ ಮುನಿಪುತ್ರರ ಆಟದ ಹುಮ್ಮಸ್ಸೆಲ್ಲವೂ ಉಡುಗಿಹೋಯಿತು. ಅವರು ನಡುಗುವ ಧ್ವನಿಯಿಂದಲೇ ಸಂಗಡಿಗರನ್ನು ಕುರಿತು 'ಓಡಿರಿ, ತಡಮಾಡಬೇಡಿ. ಓಡಿಬಿಡಿ' ಎಂದು ಎಚ್ಚರಿಸುತ್ತ ತಾವು ಎಲ್ಲರಿಗಿಂತಲೂ ಮುಂದಾಗಿಯೇ ಓಡಿಹೋದರು. ಗಣಪತಿಯ ಸುತ್ತಮುತ್ತಲೂ ಇದ್ದ ಕೆಲವು ಹುಡುಗರು ಸಹ 'ಓಹೋ ಗಣಪತೇ! ಸಿಕ್ಕಿಬಿಟ್ಟೆಯ ? ಓಡು' ಎಂದು ಕೂಗುತ್ತ ಓಡತೊಡಗಿದರು. ॥೧೫॥

ಬಾಲಕರ ಈ ಆಕ್ರಂದನವನ್ನು ಕೇಳಿದ ಕೂಡಲೇ ಗಣಪತಿಯು ಬಹಳ ಶೀಘ್ರವಾಗಿ ತನ್ನ ಆಕೃತಿಯನ್ನು ವೃದ್ಧಿಪಡಿಸಿ ಥಂಗನೆ ಮೇಲಕ್ಕೆ ನೆಗದು ಒಂಟಿಯನ್ನೊಮ್ಮೆ ಬಲವಾಗಿ ಗುದ್ದಿದನು. ॥೧೬॥

ವಜ್ರದಂತೆ ಬಹಳ ಕಠಿಣವಾದ ಗಣಪತಿಯ ಮುಷ್ಟಿಪ್ರಹಾರವು ಉಷ್ಟ್ರದ ನಡುನೆತ್ತಿಗೆ ಬಿದ್ದಿತು. ಇಂದ್ರನ ವಜ್ರಾಯುಧದಿಂದ ಪರ್ವತಕ್ಕೆ ಏಟು ಬಿದ್ದಂತಾಗಲು ಆಗ ಪರ್ವತಗಳು ಒಂದೊಂದೇ ಹೊಡೆತಕ್ಕೆ ಹೇಗೆ ಸೀಳಿಬಿದ್ದವೋ, ಅದರಂತೆ ಖಡ್ಗನೂ ಎದೆಸೀಳಿ ಹೋದವನಾಗಿ ನೆಲಕ್ಕೆ ಬಿದ್ದನು. ಆ ದುಷ್ಟನು

ಕೃತ್ವಾ ಘೋರಂ ಮಹಾಶಬ್ದಂ ಪತಿತೋ ಧರಣೀತಲೇ ।
ವಿಚಾಲ್ಯ ಚರಣಾನ್ ಗ್ರೀವಾಮಾಕ್ರಂದ್ಯ ಚ ಪುನಃ ಪುನಃ ॥೧೮॥

ಸ್ವೀಯಂ ದೇಹಂ ಸಮಾಸ್ಥಾಯ ತತ್ಯಾಜ ಜೀವಿತಂ ಕ್ಷಣಾತ್ ।
ದಶಾಷ್ಟಯೋಜನಾಯಾಮಃ ಪಾತಯನ್ ವೃಕ್ಷಸಂಚಯಾನ್ ॥೧೯॥

ಉದುದ್ಧೂಲ ರಜೋ ಭೌಮಂ ಗಗನಂ ಪ್ರಾವೃತಂ ಕ್ಷಣಾತ್ ॥
ತದ್ದೇಹಸಾತಾತ್ಪತಿತಾ ಜಂತವೋಽಥ ಪತತ್ರಿಣಃ ॥೨೦॥

---

ತನ್ನ ಮುಖದಿಂದ ರಕ್ತವನ್ನು ಅತಿಯಾಗಿ ಅಗ ಕಾರಿಕೊಂಡನು. ॥೧೭॥

ದೇಹಗತ ರಕ್ತವೆಲ್ಲ ಸುರಿದು ಹೋದೊಡನೆ ಅದು ಭಗ ಭಗ ಉರಿಯಲಾರಂಭಿಸಿತು. ಖಡ್ಗನಿಗೆ ನಿಂದಿರಲು ತ್ರಾಣ ಉಳಿಯಲಿಲ್ಲ. ಈ ಸಂಕಟವನ್ನುಸರ್ವಾತ್ಮನಾ ತಡೆಯಲಾರದೇ ಬಹಳ ಘೋರವಾಗಿ ಒಮ್ಮೆ ಅರಚಿ ಧೊಪ್ಪನೆ ನೆಲಕ್ಕೆ ಬಿದ್ದನು. ಅವನ ಪ್ರಾಣಗಳು ಉತ್ಕ್ರಮಿಸುವಾಗ ಸಂಧಿ-ಬಂಧಗಳನ್ನೆಲ್ಲ ಸಡಿಲಿಸಿಬಿಟ್ಟವು. ಕೈಕಾಲುಗಳನ್ನು ತಟಪಟ ಬಡಿದನು. ತಲೆಯನ್ನು ಕೊಡವಿದನು. ಸಾವಿನ ಸಂಕಟವನ್ನು ತಡೆಯಲಾರದೇ ಪದೇ ಪದೇ ಅರಚಲಾರಂಭಿಸಿದನು. ॥೧೮॥

ದೇಹವು ಗಡ ಗಡ ನಡುಗಿತು. ಗಣಪತಿಯನ್ನು ನುಂಗಿ ನೀರನ್ನು ಕುಡಿದುಬಿಡೋಣವೆಂದು ನಿಶ್ಚಯಿಸಿ ಬಂದಿದ್ದ ದುಷ್ಟ ಖಡ್ಗನು ಅವನ ಹೊಡೆತಕ್ಕೆ ಬಲಿಬಿದ್ದು ಕೊನೆಗೆ ತನ್ನದೇಹವನ್ನೇ ವಿಸರ್ಜಿಸಬೇಕಾಗಿ ಬಂದಿತು. ಒಂದೇ ಒಂದು ಕ್ಷಣದಲ್ಲಿ ರಕ್ಕಸನು ತನ್ನ ಜೀವನ ಯಾತ್ರೆಯನ್ನು ಮುಗಿಸಿದನು. ದುಷ್ಟರ ಅಂತ್ಯವೇ ಹೀಗೆ. ಹದಿನೆಂಟು ಯೋಜನಗಳಷ್ಟು ದೇಹವನ್ನು ಬೆಳೆಸಿ ಹಾಗೆಯೇ ನೆಲಕ್ಕೆ ಬಿದ್ದನು. ಅಲ್ಲಿದ್ದ ಗಿಡಮರ ಬಳ್ಳಿಗಳೆಲ್ಲ ಇವನ ಪತನದಿಂದ ಧ್ವಂಸವಾಗಿ ಹೋದವು. ॥೧೯॥

ಖಡ್ಗನ ದೇಹ ನೆಲಕ್ಕೆ ಬಿದ್ದುದರ ಪರಿಣಾಮವಾಗಿ ನೆಲದ ಧೂಳೆಲ್ಲ ಮೇಲಕ್ಕೆದ್ದು ನಭೋಮಂಡಲವನ್ನು ಒಂದು ಕ್ಷಣದಲ್ಲೇ ವ್ಯಾಪಿಸಿ ಬಿಟ್ಟಿತು. ಅವನ

ತಂ ತಥಾ ಪತಿತಂ ದೃಷ್ಟ್ವಾ ಸರ್ವ ಏವ ಕುಮಾರಕಾಃ ।

ಬಾಲಕಾ ಊಚುಃ :—

ಸಾಧು ಸಾಧು ಶಿವಾಪುತ್ರ ! ಮಹಾದೈತ್ಯೋ ನಿಪಾತಿತಃ ॥೨೦॥

ದೃಷ್ಟ್ವಾ ಮಹಾಂತಂ ತಂ ದೈತ್ಯಂ ವಯಂ ಭೀತ್ಯಾ ಪಲಾಯಿತಾಃ ।
ಕಥಂ ತ್ವಯಾ ಮಹಾದೈತ್ಯಃ ಪೌರುಷೇಣ ಕನೀಯಸಾ ॥೨೧॥

ಹತೋಽಯಂ ? ವಿಸ್ಮಿತಾಃ ಸರ್ವೇ ಪುನಸ್ತ್ವಾಂ ಸಮುಪಾಗತಾಃ ।

---

ದೇಹದ ಭಾಗಗಳು ತಗುಲಿ ಅನೇಕ ಪ್ರಾಣಿಗಳು, ಪಕ್ಷಿಗಳು ಎಲ್ಲವೂ ತುಪು ತುಪು ನೆಲಕ್ಕೆ ಉದುರಿಬಿದ್ದವು. ॥೨೦॥

ದೈತ್ಯನು ಮಡಿದು ಹೀಗೆ ನೆಲಕ್ಕೆ ಬಿದ್ದುದನ್ನು ನೋಡಿದ ಕೂಡಲೇ ಗಣಪತಿಯ ಸಂಗಡಿಗರಾದ ಬಾಲಕರೆಲ್ಲ ಹೃಷ್ಟರಾಗಿ ಗಣಪತಿಯನ್ನು ಬಗೆಬಗೆಯಿಂದ ಹೀಗೆ ಸ್ತುತಿಸಲಾರಂಭಿಸಿದರು.

ಬಾಲಕರು :—

ಶಿವಾಪುತ್ರ, ಗಣಪತೇ ! ಸಾಧು, ಸಾಧು. ನಿನ್ನ ಶಕ್ತಿ-ಸಾಹಸಗಳಿಂದ ಮಹಾ ದೈತ್ಯನಾದ ಈ ಖಡ್ಗನು ಹತನಾಗಿ ನೆಲಕ್ಕೆ ಬಿದ್ದುಬಿಟ್ಟನು. ॥೨೦॥

ಗುಡ್ಡದಂತಹ ಗಡವ, ಈ ದೈತ್ಯನನ್ನು ಕಂಡು ನಾವೆಲ್ಲ ಹೆದರಿ ನಡುಗಿ ಓಡಿಹೋಗಿಬಿಟ್ಟಿದ್ದೆವು. ವಿಚಾರಮಾಡಿ ನೋಡಿದರೆ, ನೀನು ನಮ್ಮೆಲ್ಲರಿಗಿಂತಲೂ ವಯಸ್ಸಿನಲ್ಲಿ ಬಹಳ ಚಿಕ್ಕವನು. ಹೀಗಿದ್ದರೂ ಅಂತಹ ಭಾರಿ ಅಸುರನ ಮೇಲೆ ನಿನ್ನ ಬಲ–ಪೌರುಷಗಳನ್ನು ಹೇಗೆ ತೋರಿಸಿದೆ ? ಮತ್ತು ಅವನನ್ನು ಹೇಗೆ ಕೊಂದು ಬಿಸುಟಿದೆ ? ॥೨೧॥

ಇವನು ಸತ್ತು ನೆಲಕ್ಕೆ ಬಿದ್ದುದನ್ನು ಖಚಿತವಾಗಿ ತಿಳಿದ ಬಳಿಕ ನಮಗೆ ಇತ್ತ ಕಡೆಗೆ ಬರಲು ಉಸಿರು ಕೂಡಿಬಂದಿತು. ಇಲ್ಲವಾಗಿದ್ದರೆ ನಾವು ಇತ್ತ ಕಡೆಗೆ ತಿರುಗುತ್ತಲೇ ಇರಲಿಲ್ಲ.

ಕ ಉವಾಚ :—

ಇತ್ಯುಕ್ತ್ವಾ ತೇ ಪುನಃ ಕ್ರೀಡಾಂ ಚಕ್ರುಃ ಸರ್ವೇ ಯಥಾಪುರಾ ॥೨೩॥

ಕರ್ಷಯಂತೋಽಂಘ್ರಿಕಮಲೇ ಧೃತ್ವಾ ಕೇಚಿತ್ಪರಸ್ಪರಮ್ ।
ತತಸ್ತಸ್ಯ ಸಖಾ ಪ್ರಾಯಾನ್ಮೃತಪ್ರತಿಕೃತೀಚ್ಛಯಾ ॥೨೪॥

ಛಾಯಾರೂಪಂ ಸಮಾಸ್ಥಾಯ ಮಹಾಬಲ-ಪರಾಕ್ರಮಃ ।
ಪಾದಾಘಾತೇನ ತಸ್ಯಾಶು ಚಕಂಪೇ ಶೇಷವಿಗ್ರಹಃ ॥೨೫॥

ಬ್ರಹ್ಮ :—

ಹೀಗೆ ಹೇಳಿ ಮತ್ತೆ ಮೊದಲಿನಂತೆ ತಮ್ಮ ಆಟವನ್ನು ಮುಂದುವರೆಸಿದರು. ॥೨೩॥

ಎಲ್ಲರೂ ಸು-ಕುಮಾರ ದೇಹಿಗಳು. ಒಬ್ಬರ ಪಾದಕಮಲವನ್ನು ಮತ್ತೊಬ್ಬರು ಹಿಡಿದೆಳೆಯುವುದು. ಅವರನ್ನು ಬೀಳುವಂತೆ ಮಾಡುವುದು, ಒಬ್ಬರನ್ನೊಬ್ಬರು ಹಿಡಿದುಕೊಳ್ಳುವುದು. ಹೀಗೆ ಮನಸ್ವಿಯಾಗಿ ಆಡತೊಡಗಿದರು. ಇಷ್ಟರಲ್ಲಿ ಖಡ್ಗಾಸುರನು ಗಣಪತಿಯಿಂದ ಮೃತಿಯನ್ನೈದಿದ ಸಂಗತಿಯು ಅವನ ಪರಮಾಪ್ತಮಿತ್ರನಾದ ಮತ್ತೊಬ್ಬ ಅಸುರವೀರನಿಗೆ ತಿಳಿಯಿತು. ಅವನು ಮೃತನಾದ ತನ್ನ ಮಿತ್ರನ ಆತ್ಮಕ್ಕೆ ಚಿರಶಾಂತಿಯನ್ನು ಕೋರಲು ಪ್ರತೀಕಾರವನ್ನೇ ಸರಿಯಾದ ಮಾರ್ಗವನ್ನಾಗಿ ನಿಶ್ಚಯಿಸಿದನು. ಆದರಂತೆ ಈ ಹುಡುಗರು ಆಟವಾಡುತ್ತಲಿದ್ದ ಸ್ಥಳಕ್ಕೆ ಧಾವಿಸಿ ಬಂದನು. ॥೨೪॥

ತಾನು ಯಾವ ರೂಪದಿಂದ ಹುಡುಗರಿದ್ದಲ್ಲಿಗೆ ಹೋದರೂ ಗಣಪತಿಯು ತನ್ನನ್ನು ಕಂಡುಹಿಡಿದುಬಿಟ್ಟಾನೆಂದು ಈ ರಕ್ಕಸನು ನೆನೆಸಿ ಹೆದರಿಹೋದನು. ಆದುದರಿಂದ ನೆರಳಿನ ರೂಪವನ್ನು ತಳೆದೇ ಇವನು ಪ್ರವೇಶಿಸಿದನು. ಇವನು ತನ್ನ ರೂಪವನ್ನು ಹೇಗೆಬೇಕೋ ಹಾಗೆ ಬದಲಾಯಿಸಿಕೊಳ್ಳುವಷ್ಟು ಮಾಯಾ ಬಲ-ಪರಾಕ್ರಮಶಾಲಿಯಾಗಿದ್ದನು. ಅವನು ನಡೆದು ಬರುವಾಗ ಅವನ ಕಾಲ್ತುಳಿತಕ್ಕೆ ಇಡೀ

ವ್ಯೋಮಸ್ಪೃಙ್ಮಸ್ತಕೋ ದುಷ್ಟೋ ಗುಣೇಶಪೃಷ್ಠತೋ ಯಯೌ ।
ಛಾಯಾಯಾಂ ತದೀಯಾಯಾಮಾವಿಶ್ಯ ಪಾತಯಾಮಾಸ ತಂ ತದಾ ॥೨೬॥

ಇತರೇಷಾಮದೃಶ್ಯೋಽಸೌ ಮಾಯಾವೀ ಬಲವತ್ತರಃ ।
ಯಥಾ ಯಥಾ ನೃತ್ಯತೇ ಸ ತಥಾ ದೈತ್ಯೋಽಪಿ ನೃತ್ಯತಿ ॥೨೭॥

ತಂ ಪತಂತಂ ಗುಣೇಶಂ ತೇ ನಿರೀಕ್ಷ್ಯ ಮುನಿಬಾಲಕಾಃ ।
ಊಚುಸ್ತಂ ಭಾವಿತಾಃ ಕೇಚಿತ್ಕೇಚಿಚ್ಚ ದುಃಖಿತಾ ಭೃಶಮ್ ॥೨೮॥

ಭೂಮಿಯೇ ನಡುಗಿಹೋಯಿತು. ಆದಿಶೇಷನೂ ತಲೆಯನ್ನೊಮ್ಮೆ ಬಲವಾಗಿ ಕೊಡವಿಬಿಟ್ಟನು. ॥೨೫॥

ಇವನ ತಲೆಯೂ ಸಹ ನಭೋಮಂಡಲವನ್ನು ಮುಟ್ಟುತ್ತಲಿದ್ದಿತು. ಇಂತಹ ಬಲಿಷ್ಠನಾದ ಈ ಅಸುರನು ಗುಣೇಶನ ಬೆನ್ನು ಹಿಂದೆಯೇ ನಡೆಯುತ್ತ ಬಂದು, ಅವನ ನೆರಳು ನೆಲದ ಮೇಲೆ ಸ್ಪಷ್ಟವಾಗಿ ಮೂಡಿದಕೂಡಲೇ ಅದರಲ್ಲಿ ಪ್ರವೇಶಿಸಿ ಗಣಪತಿಯನ್ನು ಓಮ್ಮೆಲೆ ನೆಲಕ್ಕೆ ಕೆಡವಿಬಿಟ್ಟನು. ॥೨೬॥

ಇತರ ಬಾಲಕರಿಗೆ ಗಣಪತಿಯು ಬಿದ್ದುದು ಮಟ್ಟಿಗೆ ಕಂಡಿತೇ ಹೊರತು, ಇವನನ್ನು ಯಾರು ಕೆಡವಿದರೆಂಬುದು ಮಟ್ಟಿಗೆ ಯಾರಿಗೂ ಗೊತ್ತಾಗುವಂತಿರಲಿಲ್ಲ. ಮಹಾ ಮಾಯಾವಿಯಾಗಿದ್ದ ಈ ರಾಕ್ಷಸನು ತನ್ನ ಸುಳಿವು ಗೊತ್ತಾಗಬಾರದೆಂದೇ ಇವನು ಅದೃಶ್ಯನಾಗಿಯೇ ಅರ್ಥಾತ್ ಛಾಯಾರೂಪದಿಂದಲೇ ಬಂದಿದ್ದನು. ಆದುದರಿಂದ ಗಣಪತಿಯು ಹೇಗೆ ಹೇಗೆ ಕುಣಿಯುತ್ತಿದ್ದನೋ, ಅವನಂತೆಯೇ ಇವನೂ ಕುಣಿಯುತ್ತಿದ್ದುದರಿಂದ ಯಾರಿಗೂ, ಸ್ವತಃ ಗಣಪತಿಗೂ ಸಹ ಇವನ ಇರವು ಗೊತ್ತಾಗುವಂತಿರಲಿಲ್ಲ. ॥೨೭॥

ಗಣಪತಿಯು ಪದೇ ಪದೇ ಬೀಳುತ್ತಿರುವುದನ್ನು ಮುನಿಬಾಲಕರು ನೋಡಿದರು. ಯಾರಿಗೂ ಅದರ ಕಾರಣವೇ ಗೊತ್ತಾಗಲೊಲ್ಲದು. ‘ ಗಣಪತೇ ! ಏತಕ್ಕಾಗಿ ಹೀಗೆ ಬೀಳುತ್ತಿರುವೆ ? ’ ಎಂದು ಪ್ರಶ್ನಿಸಲಾರಂಭಿಸಿದರು.

ಬಾಲಕಾ ಊಚುಃ :—

ಕಥಂ ವಾ ಪತಸೇ ನಾಥ ! ಕ್ವ ಸಾಮರ್ಥ್ಯಂ ಗತಂ ತವ ?
ವಾರಂ ವಾರಂ ಸ್ಖಲಸಿ ಕಿಂ ? ಪ್ರಿಯೇಷು ಚ ಸಖಿಷ್ವಪಿ ॥೨೯॥

ಕ ಉವಾಚ :—

ತತೋ ಬಾಲೋ ದದರ್ಶಾಶು ದಶದಿಕ್ಷು ಸಮಂತತಃ ।
ಸಾಮರ್ಥ್ಯಾದಗ್ರತೋ ಯಾತುಮಿಯೇಷ ನಾಶಕಚ್ಚ ಸಃ ॥೩೦॥

ಪುನಶ್ಚ ಪ್ರಣಿಧಾನೇನ ಸಮಂತಾದವಲೋಕಯನ್ !
ಛಾಯೋಪ್ರವಿಷ್ಟಂ ತಂ ದೈತ್ಯಂ ಜ್ಞಾತವಾನ್ ಸ ಗುಣೇಶ್ವರಃ ॥೩೧॥

ಇದನ್ನು ನೋಡಿ ಕೆಲವು ಬಾಲಕರಿಗಂತೂ ಬಹಳ ವ್ಯಥೆಯಾಗತೊಡಗಿತು. ಆಗ ಬಾಲಕನನ್ನು ಕುರಿತು ಹೀಗೆ ಮಾತನಾಡಿದರು. ॥೨೮॥

ಬಾಲಕರು :—

ನಾಥ! ಇದೇಕೆ ಹೀಗೆ ಪದೇ ಪದೇ ಬೀಳುತ್ತಿರುವೆಯಪ್ಪ! ನಿನ್ನ ಸಾಮರ್ಥ್ಯ ಕಡಿಮೆಯೇ ದೇವ ! ನೀನು ಮೇಲೆ ಮೇಲೆ ಬೀಳುತ್ತಿರುವುದನ್ನು ನೋಡಿ ನಿನ್ನ ಪ್ರಿಯಮಿತ್ರರಾದ ನಮಗೆ ಬಹಳ ಸಂಕಟವಾಗುತ್ತಿದೆ. ಇದಕ್ಕೆ ಕಾರಣವೇನು ? ಎಂಬುದನ್ನು ಹೇಳು. ನಮ್ಮಲ್ಲೇಕೆ ಮರೆಮಾಚುತ್ತಲಿರುವೆ ? ॥೨೯॥

ಬ್ರಹ್ಮಾ :—

ಸ್ನೇಹಿತರ ಪ್ರಶ್ನೆಗಳನ್ನು ಕೇಳಿ ಗಣಪತಿಯು ಬಹಳ ರೊಚ್ಚಿಗೆದ್ದು ತನ್ನ ಪ್ರಭಾವವನ್ನು ಎಲ್ಲರಿಗೂ ತೋರಿಸುವ ಉದ್ದಿಶ್ಯದಿಂದ ಎಲ್ಲರಿಗಿಂತಲೂ ಮುಂದೆಯೇ ಓಡಿಬಿಡಬೇಕೆಂದು ಪ್ರಯತ್ನಿಸಿದನು. ದಿಕ್ಕು ದಿಕ್ಕುಗಳಿಗೂ ಓಡೋಡಿ ನೋಡಿದನು. ಆದರೆ ಅವನಿಂದ ಏಕೋ ಸಾಧ್ಯವಾಗಲೊಲ್ಲದು. ॥೩೦॥

ಇದಕ್ಕೆ ಕಾರಣವೇನೆಂಬುದನ್ನು ತಿಳಿಯಲು ಗಣಪತಿಯು ಎಷ್ಟೆಷ್ಟು ರೀತಿಯಿಂದ ಚಿಂತಿಸಿದರೂ ಅವನಿಗೆ ಹೊಳೆಯುಲೊಲ್ಲದು. ಆಗ ದೃಷ್ಟಿಯನ್ನು ಬಹಳ

**ಗಂಡಶೈಲಂ ಸಮಾದಾಯ ಪ್ರಾಕ್ಷಿಪಚ್ಚೋದರೇऽಸ್ಯ ಹ ।**
**ಉಪರಿಷ್ಟಾನ್ನನರ್ತಾಸೌ ಸ ವೃತಶ್ಚೂರ್ಣತಾಂ ಗತಃ ॥೩೨॥**

**ಅಂತಕಾಲೇ ಮಹದ್ರೂಪಂ ಸಮಾಸ್ಥಾಯ ನಿಜಂ ಖಲಃ ।**
**ಚೂರ್ಣಯಾಮಾಸ ವೃಕ್ಷಾನ್ ಸ ಪರ್ವತಾನ್ ಪ್ರಾಣಿಸಂಚಯಾನ್ ॥೩೩॥**

---

ಏಕಾಗ್ರಗೊಳಿಸಿ, ತನ್ನ ಹಾಗೂ ತನ್ನ ಸ್ನೇಹಿತರ ಸುತ್ತಲೂ ಸೂಕ್ಷ್ಮವಾಗಿ ನೋಡಿದನು. ರಾಕ್ಷಸನು ಇತರರ ದೃಷ್ಟಿಗಳಿಗೆ ಗೋಚರನಾಗದಂತೆ ಬೇಕಾದರೆ ತನ್ನ ರೂಪವನ್ನು ಬದಲಿಸಬಹುದಾಗಿದ್ದಿತೇ ಹೊರತು, ಮಾಯಾಧೀಶ್ವರನ ಎದುರು ಇವನ ಆಟ ನಡೆದೀತೇ ? ದೇವನಿಗೆ ಈ ದುಷ್ಟನ ಇರವು ಹಾಗೂ ದೌರ್ಮನಸ್ಯ ಎಲ್ಲವೂ ತಿಳಿದುಹೋಯಿತು. ॥೩೧॥

ಗುಡ್ಡದ ರೂಪಾದ ದೊಡ್ಡ ಕಲ್ಲೊಂದನ್ನು ತೆಗೆದುಕೊಂಡು ಆ ರಾಕ್ಷಸನ ನೆರಳಿಗೆ ಗುರಿ ಇಟ್ಟು ಹೃದಯ ಪ್ರದೇಶಕ್ಕೆ ಒಮ್ಮೆ ಬಲವಾಗಿ ಅಪ್ಪಳಿಸಿಬಿಟ್ಟನು ಮತ್ತು ಅವನ ಮೇಲೆ ನಿಂತುಕೊಂಡು ಮನಸ್ವಿಯಾಗಿ ಕುಣಿಯಲಾರಂಭಿಸಿದನು. ಕಲ್ಲಿನ ಹೊಡೆತದಿಂದ ಮೊದಲೇ ಝುರ್ಝುರಿತನಾಗಿ ಹೋಗಿದ್ದ ದೈತ್ಯನು ವಿಶ್ವಂಭರ ಮೂರ್ತಿಯ ಸ್ವೇಚ್ಛಾನರ್ತನದಿಂದ ಸಂಪೂರ್ಣವಾಗಿ ಅಸುಗೊಂಡು ಛಿನ್ನ-ಭಿನ್ನವಾಗಿ ಹೋದನು. ಪ್ರಾಣಗಳೂ ಒಡನೆಯೇ ಉತ್ಕ್ರಾಂತವಾದವು. ॥೩೨॥

ಕೃತ್ರಿಮರೂಪದಿಂದಲೇ ಸಾಯಲು ರಾಕ್ಷಸರಿಗೆ ಬರುವಂತಿರಲಿಲ್ಲವಾಗಿ ಅಂತ್ಯಕಾಲದಲ್ಲಿ ರಾಕ್ಷಸನು ತನ್ನ ಕರಾಳ ರೂಪವನ್ನು ತಳೆದು ನೆಲಕ್ಕೆ ಬಿದ್ದನು. ಆ ಖಲನ ದೇಹವು ನೆಲಕ್ಕೆ ಬೀಳುವಾಗ ತನ್ನ ಧನಿಯಾದ ಖಲ ; ದೈತ್ಯನ ದುಷ್ಟತನವನ್ನು ವ್ಯಕ್ತಗೊಳಿಸಲಿಕ್ಕಾಗಿಯೋ ಎಂಬಂತೆ ಅಲ್ಲಿದ್ದ ಪರ್ವತಗಳು, ಗಿಡ-ಮರ-ಬಳ್ಳಿಗಳು ಮತ್ತು ಅನೇಕ ಪ್ರಾಣಿಗಳ ಸಮುದಾಯ ಇವನ್ನೆಲ್ಲ ನಿಶ್ಶೇಷವಾಗಿ ಧ್ವಂಸಗೊಳಿಸಿತು. ॥೩೩॥

ತನ್ಮೇದಸಾ ಚ ರಕ್ತೇನ ಧರಣೀ ಚ ಗುಣೇಶ್ವರಃ ।
ರಕ್ತತಾಂ ಸಮನುಪ್ರಾಪ್ತೌ ವಸಂತೇ ಕಿಂಶುಕಾವಿವ ||೩೪||

ಏವಂ ತಂ ವಿನಿಹತ್ಯಾಶು ಗುಣೇಶೋ ಲೀಲಯಾರಮತ್ ।
ತತ ಏಕೋ ವೃಷಸ್ಕಂಧಃ ಸೂಕರಾಸ್ಯೋ ಗಜೋದರಃ

ಗಂಡಶೈಲಾ ರಜ ಇವ ಶ್ವಾಸಾದ್ಯಸ್ಯ ಚಲಂತಿ ಚ ।
'ಚಂಚಲಾ' ಖ್ಯೋ ಮಹಾದೈತ್ಯಃ ಬಾಲರೂಪಧರೋವಿಶತ್ ||೩೬||

---

ರಾಕ್ಷಸನ ಮೇದಸ್ಸು ಮತ್ತು ರಕ್ತ ಇವುಗಳಿಂದ ಭೂದೇವಿ, ಗುಣೇಶ್ವರ ಇವರಿಬ್ಬರೂ ಸರ್ವಾತ್ಮನಾ ನೆನೆದುಹೋದರು. ಇವರನ್ನು ನೋಡಿದರೆ, ವಸಂತಮಾಸದಲ್ಲಿ ಕೆಲವೊಂದು ಬಗೆಯ ವೃಕ್ಷಗಳು ಕೆಂಪು ಹೂವಿನಿಂದ (May-flowers) ತುಂಬಿರುವಂತೆ ಕಂಡುಬರುತ್ತಲಿದ್ದರು. ||೩೪||

ಕರ್ದಮಾಸುರನ ಪರಮಾಪ್ತಮಿತ್ರನಾದ ಹೆಸರಿಲ್ಲದ ಅಸುರನೊಬ್ಬನನ್ನು ಗಣಪತಿಯು ತನ್ನ ಚಾತುರ್ಯದಿಂದ ಬೇಗನೆ ಕೊಂದು ಮೊದಲಿನಂತೆ ಇತರ ಬಾಲಕರೊಡನೆ ವಿನೋದವಾಗಿ ಆಟವಾಡಲಾರಂಭಿಸಿದನು. ಅನಂತರ ಮತ್ತೊಬ್ಬ ರಕ್ಕಸನು ಅಲ್ಲಿಗೆ ಬಂದನು. ಅವನು ದೊಡ್ಡ ಗೂಳಿಯಂತೆ ವಿಸ್ತಾರವಾದ ಹೆಗಲುಳ್ಳವನು, ಮುಖವೋ ಕಾಡುಹಂದಿಯಂತೆ ವಿಕಾರವಾಗಿ ಇದ್ದಿತು. ಅವನದು ಆನೆಯಗಾತ್ರದ ಹೊಟ್ಟೆ ||೩೫||

ರಾಕ್ಷಸನೊಮ್ಮೆ ಸಾಧಾರಣವಾಗಿ ಉಸಿರನ್ನು ಬಿಟ್ಟರೂ ಸಾಕು, ಬೆಟ್ಟಗುಡ್ಡಗಳ ದೊಡ್ಡ ದೊಡ್ಡ ಬಂಡೆಗಳು ನೆಲದ ಮೇಲಿದ್ದ ಧೂಳು, ಹಾರಿ ಹಾರಿ ಬೀಳುತ್ತಲಿದ್ದವು. ಇವನ ಹೆಸರು 'ಚಂಚಲಾಸುರ' ಇವನೂ ಮಹಾ ಅಸುರರಂತೆ ಗಣನೆಯಲ್ಲಿ ಬರತಕ್ಕವನು. ಇವನು ಬರುವಾಗ ಮುನಿಬಾಲಕರಂತೆ ವೇಷ-ಭೂಷಣಗಳನ್ನು ಧರಿಸಿದ್ದನು. ||೩೬||

ತೇಷು ನಾನಾವಿಧಾಃ ಕ್ರೀಡಾ ದರ್ಶಯಾಮಾಸ ಲಾಘವಾತ್ ।
ಮಹಾಬಲೋ ಮಹಾಮಾಯಃ ಪ್ರೋಥಯಾಮಾಸ ಕಾಂಶ್ಚನ ॥೩೭॥

ಚರಣಂ ಕಸ್ಯಚಿದ್ಧೃತ್ವಾ ಚಕರ್ಷ ಮುನಿಬಾಲಕಮ್ ।
ಉಭೌ ಕರೌ ವಿಧೃತ್ಯೈವ ಕಸ್ಯಚಿನ್ಮಸ್ತಕೇಽಹನತ್ ॥೩೮॥

ಯಸ್ಯ ನೃತ್ಯೇ ಧರಾ ಸರ್ವಾ ಕಂಪತೇ ಸ್ಮ ಸಪರ್ವತಾ ॥
ತೇ ಘರ್ಮೇ ನೃತ್ತಿತಾಂ ಸರ್ವೇ ಚರ್ಚಯಂತಿ ಸ್ವವಿಗ್ರಹೇ ॥೩೯॥

ಮುನಿಬಾಲಕಸ್ವರೂಪಿಯಾದ ದೈತ್ಯನು ಆಟದಲ್ಲಿ ಬಹಳ ಚಮತ್ಕಾರವನ್ನೂ, ಚಾಪಲ್ಯವನ್ನೂ ತೋರಿಸಲಾರಂಭಿಸಿದನು. ಅವನು ಆಟವಾಡುತ್ತಿರುವ ಕ್ರಮವನ್ನು ನೋಡಿ ಈ ಬಾಲಕರೆಲ್ಲ ಮುಗ್ಧರಾಗಿ ಹೋದರು. ದೈತ್ಯನು ಮಹಾಬಲಿಷ್ಠನೂ, ಮಹಾಮಾಯಾವಿಯೂ ಆಗಿದ್ದನು. ತಾನು ಬಾಲಕರ ಸಮೀಪಕ್ಕೆ ಸಾಮಾನ್ಯ ಬಾಲಕನಂತೆ ಹೋಗಿದ್ದರೂ ತನ್ನ ಮಾಯಾಪ್ರಭಾವವನ್ನು ಬೀರಿ ಅದರಿಂದ ಅವರಲ್ಲಿ ಕೆಲವರನ್ನು ಎತ್ತಿ ಒಗೆದನು. ||೩೭||

ಒಬ್ಬ ಮುನಿಬಾಲಕನ ಕಾಲನ್ನು ಹಿಡಿದು ಸರಕ್ಕನೆ ಎಳೆದುಬಿಟ್ಟನು. ಅವನ ಎರಡೂ ಕೈಗಳನ್ನು ಹಿಡಿದುಕೊಂಡು ಎತ್ತಿ ಅವನನ್ನು ಮತ್ತೊಬ್ಬನ ತಲೆಯ ಮೇಲೆ ಬಲವಾಗಿ ಕುಕ್ಕಿದನು. ||೩೮||

ಇವನು ಹುಡುಗರೊಡನೆ ಕುಣಿದಾಡಿದಾಗಲೆಲ್ಲ ಮಹಾ ಮಹಾ ಪರ್ವತಗಳಿಂದೊಡಗೂಡಿದ ಇಡೀ ಭೂಮಿಯೂ ಗಡಗಡನೆ ನಡುಗಿ ಹೋಗುತ್ತಲಿದ್ದಿತು. ಇವನ ಕಾಟದಿಂದ ತಪ್ಪಿಸಿಕೊಳ್ಳಲು ಹುಡುಗರು ಓಡೋಡಿ ಬೆವರನ್ನು ಕಾರಲಾರಂಭಿಸಿದರು. ಅದನ್ನು ಒರೆಸಿಕೊಳ್ಳಲಿಕ್ಕೆ ಸಹ ಅವಕಾಶವಿಲ್ಲದೆ, ನೆಲದ ಧೂಳನ್ನೇ ತಮ್ಮ ಮೈಗೆಲ್ಲ ಎರಚಿಕೊಂಡರು. ||೩೯||

**ಸೋಽಪಿ ಚರ್ಚಯತೇ ಸ್ವಾಂಗಂ ಚಂದನೇನೇವ ಭಾಗ್ಯವಾನ್ !**
**ತತಸ್ತೇ ಕಂದುಕಂ ಕೃತ್ವಾ ತೇನ ಕ್ರೀಡಾಮಥಾರಭನ್ ||೪೦||**

**ಕಂದುಕೋ ವ್ಯೋಮಮಾರ್ಗಸ್ಥೋ ಬಾಲತ್ಯಕ್ತೋಽಸ್ಪೃಶೇತ್ಕರಮ್ ।**
**ಕೃತ್ವಾಶ್ವವಚ್ಚ ತಂ ಬಾಲಮಾರೋಹೇತ್ಸ ಸಕಂದುಕಃ ||೪೧||**

**ಆರೋಹಕೋ ಬಲಾದ್ಭೂಮೌ ನಿಕ್ಷಿಪೇತ್ತಂ ಚ ಕಂದುಕಮ್ ।**
**ಅಪರೋ ಧಾರಯೇದೂರ್ಧ್ವಮಾಗತಂ ಸೋಽಪಿ ವಾ ಪುನಃ ||೪೨||**

---

ರಾಕ್ಷಸನ ದೇಹದಿಂದಲೂ ಬೆವರು ಪ್ರವಾಹರೂಪವಾಗಿ ಹರಿಯುತ್ತಲಿದ್ದಿತು. ಶ್ರೀಮಂತರು ಸುಗಂಧ ದ್ರವ್ಯವನ್ನು ದೇಹಕ್ಕೆ ಲೇಪಿಸಿಕೊಳ್ಳುವಂತೆ ಅವನೂ ಸಹ ಮುನಿಬಾಲಕರ ಹಾಗೆ ಮಣ್ಣನ್ನು ಬಳಿದುಕೊಂಡನು. ರಾಕ್ಷಸನು ಈ ರೀತಿ ಎಲ್ಲ ವಿಧ ಪ್ರಬಲತರವಾದ ಆಟಗಳನ್ನಾಡುತ್ತಿದ್ದರೂ, ಆಟದಲ್ಲಿ ಮಗ್ನರಾಗಿದ್ದ ಮುನಿಬಾಲಕರಿಗೆ 'ಇವನು ಅತಿಮಾನುಷ' ಎಂಬ ಕಲ್ಪನೆಯು ಬರಲೇ ಇಲ್ಲ. ಆಗ ಅವರು ಮೊದಲಿನಂತೆ ಮಣ್ಣನ್ನು ಕಲೆಸಿ ಚಂಡುಗಳನ್ನು ಮಾಡಿ ತನ್ಮೂಲಕ ರಾಕ್ಷಸನೊಂದಿಗೆ ಸಾಹಸದಿಂದ ಆಟವಾಡಲು ಆರಂಭಿಸಿದರು. ||೪೦||

ಒಬ್ಬನು ಚಂಡನ್ನು ಮೇಲಕ್ಕೆ ಎಸೆದನೆಂದರೆ ಅದನ್ನು ನೆಲಕ್ಕೆ ಬೀಳಗೊಡದಂತೆ ಯಾರುತನ್ನ ಕೈಯಿಂದ ಹಿಡಿದುಕೊಳ್ಳುವರೋ, ಅವರು ಮೊದಲು ಚಂಡನ್ನೆಸೆದವನನ್ನು ಕುದುರೆಯಂತೆ ಮಾಡಿ ಅವನ ಮೇಲೆ ಸವಾರಿ ಮಾಡತಕ್ಕದ್ದು. ||೪೧||

ಅನಂತರ ಅವನು (ಸವಾರನಾದವನು) ತನ್ನ ಕೈಗೆ ಸಿಕ್ಕಿದ್ದ ಚಂಡನ್ನು ನೆಲಕ್ಕೆ ಬಿಸುಡತಕ್ಕದ್ದು. ಅದನ್ನು ಮತ್ತೊಬ್ಬ ಬಾಲಕನು ತೆಗೆದುಕೊಂಡು ಪುನಃ ಮೇಲಕ್ಕೆ ಎಸೆಯತಕ್ಕದ್ದು. ಅದನ್ನು ಯಾರು ಹಿಡಿಯುವರೋ ಅವರು ಎಸೆದವನನ್ನು ಕುದುರೆಯಾಗಿಸಿ ಸವಾರಿಮಾಡತಕ್ಕದ್ದು. ಮತ್ತೊಬ್ಬನು ಕುದುರೆಯಂತಾಗುವವರೆಗೂ ಮೊದಲು ಕುದುರೆಯಾದವನು ಮುಕ್ತನಾಗುವಂತಿಲ್ಲ. ||೪೨||

ಯುದ್ಧಸ್ತೇ ಕಂದುಕಸ್ತೋಽಥ ಬಾಲಮಾರುಹ್ಯ ತಂ ತ್ಯಜೇತ್ ।
ಭೂಮೌ ನಿಪತಿತಂ ಬಾಲಮಾದಾಯ ತೇನ ತಾಡಯೇತ್ ॥೪೩॥

ತೇಷು ಮಧ್ಯೇ ಪಲಾಯತ್ಸು ಯಸ್ಯ ಲಗ್ನಃ ಸ ಕಂದುಕಃ ।
ತೇನಾಪಿ ವ್ಯೋಮಮಾರ್ಗಸ್ಥಃ ಕಾರ್ಯೋ ಯಸ್ಯ ಕರಂ ಸ್ಪೃಶೇತ್
॥೪೪॥

ಹಸ್ತೇನಾಯಾತಿ ಚೇತ್ಸೋಽಪಿ ವ್ಯೋಮಗಂ ತಂ ತು ಕಾರಯೇತ್ ।
ಯೇನ ಹಸ್ತೇ ಧೃತಃ ಸೋಽಮುಮಾರುಹ್ಯ ಪೂರ್ವವತ್ಕ್ಷಿಪೇತ್॥೪೫॥

ಕದಾಚಿತ್ಕಂದುಕಃ ಕ್ಷಿಪ್ತೋ ಗುಣೇಶೇನ ಚ ವ್ಯೋಮನಿ ।

---

ಚಂಡನ್ನು ಹಿಡಿದು ಎಸೆದವನ ಮೇಲೆ ಎರಡನೆಯವರು ಸವಾರಿಮಾಡ ಲಾರಂಭಿಸಿದೊಡನೆ ಮೊದಲಿನ ಆರೋಹಿಯು ಕೆಳಕ್ಕಿದು ಪುನಃ ಆಟಕ್ಕೆ ಸೇರಿ ಕೊಳ್ಳತಕ್ಕದ್ದು. ಇದರಂತೆ ಮೊದಲು ಕುದುರೆಯಾಗಿದ್ದವನು, ಎಲ್ಲರೊಂದಿಗೆ ಪುನಃ ಆಟಕ್ಕೆ ಹೋಗಲು ಅರ್ಹನಾಗುವನು. ಆತ್ತ ಆ ಚಂಡನ್ನು ಹಿಡಿದವನು ಕುದುರೆಯಾದವನನ್ನು ನಡೆಸಿಕೊಂಡು ಹೋಗಿ ಇತರ ಬಾಲಕರಿಗೆ ಹೊಡೆಯು ವುದು. ॥೪೩॥

ಇತರ ಹುಡುಗರು ಈ ಚಂಡಿನ ಏಟನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಓಡ ತಕ್ಕದ್ದು. ಹೀಗೆ ಓಡುವಾಗ ಆ ಚಂಡಿನ ಹೊಡೆತ ಆಕಸ್ಮಾತ್ತಾಗಿ ಯಾರಿ ಗಾದರೂ ತಗುಲಿದರೆ ಅವನು ಅದನ್ನು ಕೈಗೆ ತೆಗೆದುಕೊಂಡು ಮತ್ತೆ ಮೇಲಕ್ಕೆ ಎಸೆಯುವುದು. ॥೪೪॥

ಈ ಚಂಡು ಮೇಲಿನಿಂದ ನೆಲಕ್ಕೆ ಬೀಳುವುದಕ್ಕೆ ಮೊದಲೇ ಯಾರ ಕೈಗಾ ದರೂ ಸಿಕ್ಕಿದರೆ, ಅವನು ಚಂಡನ್ನೆಸೆದವನ ಮೇಲೆ ಸವಾರನಂತೆ ಆರೋಹಿಯಾಗ ತಕ್ಕದ್ದು. ಮತ್ತೆ ಮೊದಲಿನಂತೆ ಅವರಿವರ ಮೇಲೆ ಚಂಡನ್ನು ಎಸೆಯತಕ್ಕದ್ದು. ಇವೇ ಮೊದಲಾದ ಆಟದ ನಿಯಮಗಳನ್ನು ಇವರೆಲ್ಲರೂ ಅಂಗೀಕರಿಸಿದ್ದರು.॥೪೫॥

ಆಟವು ರಂಗಿಗೇರಿದಾಗ ಒಮ್ಮೆ ಬಾಲಕ; ಗಣೇಶನು ಆ ಚಂಡಿನ ಪುಟ

ಚಂಚಲೇನ ಧೃತೋ ಹಸ್ತೇ ತವಾರೂಢಸ್ತದಾಸುರಃ ||೪೬||

ಭಾರೇಣಾಕ್ರಮ್ಯ ತಂ ದೇವಮುವಾಚ ದುಷ್ಟದಾನವಃ |

**ಚಂಚಲ ಉವಾಚ :—**

ಸಹಸ್ವ ಭಾರಂ ಮೇ ದುಷ್ಟ ? ವಲ್ಗಸೇಽರ್ಭಕಸಂಚಯೇ ||೪೭||

**ಕ ಉವಾಚ :—**

ತ್ಯಕ್ತಂ ತ್ಯಕ್ತಂ ಕಂದುಕಂ ಸ ಗೃಹ್ಣಾತಿ ಸ್ವ-ಕರೇ ಪುನಃ |

---

ವನ್ನು ಕೈಯಿಂದ ಹಿಡಿದು ಮೇಲಕ್ಕೆ ಎಸೆದನು. ಈ ಸಂಧಿಯನ್ನೇ ಕಾಯುತ್ತಲಿದ್ದ ದೈತ್ಯಾಧಮನು ಎಲ್ಲರಿಗಿಂತಲೂ ಮುಂಚೆಯೇ ಓಡಿ ಬಂದು, ಚೆಂಡು ನೆಲಕ್ಕೆ ಬೀಳದಂತೆ ಮೇಲಕ್ಕೆ ನೆಗೆದು ಅದನ್ನು ಕೈಗಳಿಂದ ಹಿಡಿದುಬಿಟ್ಟನು. ಆಟದ ನಿಯಮಕ್ಕನುಸರಿಸಿ ಗಣಪತಿಯು ಕುದುರೆಯಾಗಿ ಅಶ್ವಾರೋಹಿಯಾಗಬೇಕಾದ ಚಂಚಲನಿಗೆ ವಾಹನವಾಗಿ ಒಪ್ಪಿಕೊಳ್ಳುವ ಪ್ರಸಂಗ ಬಂದುಬಿಟ್ಟಿತು- ರಾಕ್ಷಸ ಕುಲಕ್ಕೆ ಅಂತಕನಾಗಿದ್ದ ಈ ಬಾಲಕನನ್ನು ಕೊಲ್ಲಲಿಕ್ಕೆ ಇದೇ ಸರಿಯಾದ ಸಮಯವೆಂದು ಚಂಚಲಾಸುರನು ನಿಶ್ಚಯಿಸಿ, ಒಮ್ಮೆಲೆ ನೆಗೆದು ಗಣಪತಿಯ ಮೇಲೆ ಹತ್ತಿ ಕುಳಿತು ಅವನನ್ನು ನೆಲಕ್ಕೆ ಅದುಮಲಾರಂಭಿಸಿದನು. ||೪೬||

ಬಾಲಕನ ಮೇಲೆ ಚಂಚಲನು ಊರಿದ ದೇಹದ ಭಾರವನ್ನು ವರ್ಣಿಸುವುದಕ್ಕೇ ಸಾಧ್ಯವಿರಲಿಲ್ಲ. ಇದರಿಂದಲೂ ತೃಪ್ತನಾಗದೇ ಆ ದುಷ್ಟ ದಾನವನು ಗಣಪತಿಯನ್ನು ಕುರಿತು ಕುಹಕ ಮಾತುಗಳಿಂದ ಹೀಗೆಂದು ಚುಚ್ಚಲಾರಂಭಿಸಿದನು.

ಚಂಚಲ :—

ಲೋ ದುಷ್ಟ ಬಾಲಕ ! ಆಗಿನಿಂದಲೂ ಪಾಪ, ಪಾಪ. ಈ ಮಕ್ಕಳೆದುರಿಗೆ ಏಕಪ್ರಕಾರವಾಗಿ ನಿನ್ನ ಪೌರುಷವನ್ನು ಕೊಚ್ಚಿಕೊಳ್ಳುತ್ತಲಿದ್ದೆಯಲ್ಲವೇ ? ಈಗ ನನ್ನ ಭಾರವನ್ನು ಸಹಿಸು, ನೋಡೋಣ ? ||೪೭||

ಬ್ರಹ್ಮಾ :—

ಹೀಗೆ ಮೂದಲಿಸುತ್ತ ಮತ್ತೆ ಮತ್ತೆ ಪ್ರಯತ್ನಿಸಿ ಚೆಂಡನ್ನು ತಾನೇ ಹಿಡಿದು

ಮುಹೂರ್ತದ್ವಯಮೇವಂ ಹಿ ಚಿಕ್ರೀಡೇ ದುಷ್ಟದಾನವಃ　　॥೪೮॥

ಪ್ರಾಹಸನ್ ಮುನಿಬಾಲಾಸ್ತೇ ಗುಣೇಶಂ ತಂ ತಥಾಗತಮ್ ।
ತತೋ ಗುಣೇಶೋ ದೈತ್ಯಂ ತಮಾರೂಢೋ ದೃಢವಿಕ್ರಮಃ　　॥೪೯॥

ಚಂಚಲಶ್ಚಂಚಲೋ ಜಾತೋ ನೇತುಂ ದೂರೇ ಮುದಾನ್ವಿತಃ ।
ವ್ಯೋಮಮಾರ್ಗೇಣ ಸಹಸಾ ಬಾಲಾ ಭೂಮಿಗತಾ ಯಯುಃ　　॥೫೦॥

ವಿಮಾನವತ್ಪಕ್ಷಿವಚ್ಚ ಸ ಜಗಾಮ ತ್ವರಾನ್ವಿತಃ ।

---

ಕೊಂಡು ಹುಡುಗರಿಗೆ ಹೊಡೆಯುತ್ತ ಗಣಪತಿಯನ್ನು ಹಿಂಸಿಸಲಾರಂಭಿಸಿದನು. ಈ ರೀತಿ ಎರಡು ಮುಹೂರ್ತಗಳವರೆಗೂ ದುಷ್ಟ ದಾನವ ಚಂಚಲನು ಗಣಪತಿಯ ಮೇಲೆ ಕುಳಿತು ಆಟವಾಡಿದನು. ॥೪೮॥

ಇದುವರೆಗೂ ಗಣಪತಿಗೆ ಕುದುರೆಯಂತಾಗಿ ಹಿಂಸೆಗೊಳಗಾಗಿದ್ದ ಮುನಿ ಬಾಲಕರು ಪ್ರಸ್ತುತ ಗಣಪತಿಯು ಕುದುರೆಯಾಗಿ ಒದೆದಾಡುತ್ತಿರುವುದನ್ನು ನೋಡಿ, ಅಟ್ಟಹಾಸದಿಂದ ನಗಲಾರಂಭಿಸಿದರು. ಅಷ್ಟರಲ್ಲಿ ಚಂಚಲನು ತೂರಿದ ಚಂಡು ದೈವಯೋಗದಿಂದ ಗಣಪತಿಯ ಕೈಗೆ ಸಿಕ್ಕಿಬಿಟ್ಟಿತು. ಕೇಳಬೇಕೇ ? ಗಣಪತಿಯ ಉತ್ಸಾಹವನ್ನು? ಆ ಕೂಡಲೇ ದೃಢವಿಕ್ರಮಿಯಾದ ಬಾಲಕ ಗಣಪನು ಚಂಚಲನ ಬೆನ್ನಿನ ಮೇಲೆ ನೆಗೆದು ಕುಳಿತನು. ॥೪೯॥

ಚಂಚಲನು ಆ ಕೂಡಲೇ ಬಹಳ ಚಾಂಚಲ್ಯವನ್ನು ತೋರಿಸಿ ಗಣಪತಿಯನು ಬಹುದೂರ ಎಳೆದುಕೊಂಡು ಹೋಗಿ ಕೊಂದು, ಇವನು ಸತ್ತ ಸಂಗತಿಯು ಸಹ ಯಾರಿಗೂ ತಿಳಿಯದಂತೆ ಮಾಡಿಬಿಡಬೇಕೆಂದು ಮನಸ್ಸಿನಲ್ಲಿ ನಿಶ್ಚಯಿಸಿದನು. ಮತ್ತು ಅದರಂತೆ ಅವನನ್ನು ಬೆನ್ನಿನ ಮೇಲೆ ಕೂರಿಸಿಕೊಂಡಿದ್ದಂತೆಯೇ ಅಂತರಿಕ್ಷಕ್ಕೆ ನೆಗೆದು ಹಾರಿಹೋಗಲಾರಂಭಿಸಿದನು. ಬಾಕಿ ಹುಡುಗರೆಲ್ಲ ನೆಲದ ಮೇಲೆಯೇ ಉಳಿದು ಬಿಟ್ಟರು. ॥೫೦॥

ವಿಮಾನ ಹಾಗೂ ಪಕ್ಷಿಗಳು ವೇಗವಾಗಿ ಹಾರಿ ಹೋಗುವಂತೆ ಚಂಚಲನು

ತತೋ ನಿವೃತ್ತಾಸ್ತೇ ಬಾಲಾಃ ಶೋಚಮಾನಾ ಯಯುರ್ಗೃಹಾನ್ ॥೫೦॥

ಸ್ಥಿತಾಸ್ತತ್ರೈವ ಕೇಚಿಚ್ಚ ಪ್ರತೀಕ್ಷಂತೋ ಗುಣೇಶ್ವರಮ್ ।
ತತೋ ಗುಣೇಶಸ್ತಂ ಜ್ಞಾತ್ವಾ ಮನಸಾ ದುಷ್ಟದಾನವಮ್ ॥೫೧॥

ಹಿಮವತ್ಸದೃಶಂ ಭಾರಂ ಚಕಾರ ಸಹಸಾ ವಿಭುಃ ।
ಭಾರೇಣ ಪತಿತೋ ದೈತ್ಯಃ ಪ್ರಾವದತ್ತಂ ಗುಣೇಶ್ವರಮ್ ॥೫೨॥

---

ಹಾರುತ್ತ ಕ್ಷಣಮಾತ್ರದಲ್ಲೇ ಬಹುದೂರ ಹೊರಟುಹೋದನು. ಬಾಲಕರು ಇದನ್ನು ನೋಡಿ ದಾನವನು ಹಾರುತ್ತಿರುವ ದಿಕ್ಕನ್ನು ಕುರಿತು ಬಹಳ ದೂರದ ವರೆಗೂ ಓಡುತ್ತ ಹೋದರು. ಕೊನೆಗೊಮ್ಮೆ ಆ ದೃಶ್ಯವೂ ಕಣ್ಮರೆಯಾಗಲು ನಿಟ್ಟುಸಿರನ್ನು ಬಿಡುತ್ತ ಹಿಂದಿರುಗಿ ಬಂದು ಈ ಆಕಸ್ಮಿಕ ಘಟನೆಗಾಗಿ ದುಃಖಿಸುತ್ತ ಮನೆಗಳಿಗೆ ಹೊರಟುಹೋದರು. ॥೫೦॥

ಆದರೆ ಗಣಪತಿಯ ಮೇಲೆ ಬಹಳ ಪ್ರೀತಿಯನ್ನಿಟ್ಟವರೂ, ಅವನ ಬಲ-ಪರಾಕ್ರಮಗಳ ವಿಷಯದಲ್ಲಿ ಅಚಲ ಶ್ರದ್ಧೆಯುಳ್ಳವರೂ ಮತ್ತು ಈ ರೀತಿಯ ಘಟನೆಗಳನ್ನು ಅನೇಕ ಸಾರಿ ನೋಡಿ ಪರಿಣಾಮವನ್ನರಿತವರೂ ಆದ ಕೆಲವು ಮುನಿತನಯರು 'ಎಷ್ಟೇ ದೂರ ಹೋಗಿರಲಿ, ಎಷ್ಟೇ ತಡವಾಗಲಿ ಗಣಪತಿಯು ಬಂದೇ ಬರುವನು' ಎಂದು ನಿರೀಕ್ಷಿಸುತ್ತ ಅಲ್ಲೇ ನಿಂತುಬಿಟ್ಟರು. ಚಂಚಲನ ವಿಷಯದಲ್ಲಿ ಮೊದಲೇ ಸಂಶಯಗೊಂಡಿದ್ದ ಗಣಪತಿಯು ಅವನು ಅಂತರಿಕ್ಷಕ್ಕೆ ಹಾರಿದೊಡನೆಯೇ ಅವನ ದುಷ್ಟಹೃದಯವನ್ನು ಮನಸ್ಸಿನಿಂದಲೇ ಅರಿತನು. ॥೫೧॥

ಹಿಮವತ್ಪರ್ವತಕ್ಕೆ ಸದೃಶವಾದಂತಹ ಭಾರವನ್ನು ತನ್ನ ದೇಹದಲ್ಲಿ ಕೇಂದ್ರೀಕರಿಸಿ ಒಮ್ಮೆಲೇ ಅವನ ಮೇಲೆ ಊರಿದನು. ವಿಭುವಿನ ಈ ಭಾರಕ್ಕೆ ಚಂಚಲನು ಚಲಿಸಿಹೋದನು. ಒಂದು ನಿಮಿಷ ಕಾಲ ಸಹ ದೇವನ ಭಾರವನ್ನು ಹೊತ್ತಿರಲಿಕ್ಕೆ ಅವನಿಂದ ಸಾಧ್ಯವಾಗಲಿಲ್ಲ. ಎಂದ ಮೇಲೆ ಹಾರುವ ಶಕ್ತಿ ಉಳಿದೀತೇ? ಝುಗ್ರನೇ ಜಾರುತ್ತ ನೆಲಕ್ಕೆ ಬೀಳಲಾರಂಭಿಸಿದನು. ಆಗ ತಾನು ಸತ್ತೇ ಹೋಗುವೆ

**ಚಂಚಲ ಉವಾಚ :—**

**ಉತ್ತರಸ್ವ ಮಹಾಭಾರಂ ಗಮಿಷ್ಯಂತಿ ಮಮಾಸವಃ ।**
**ದಯಾಂ ಕುರುಷ್ವ ದೀನೇ ತ್ವಂ ಪ್ರಪನ್ನೇ ಶರಣಂ ತವ ||೩೪||**

**ಕ ಉವಾಚ :—**

**ಏವಂ ವದನ್ಮೂರ್ಛಾಂ ಸೌ ತತೋ ಬಾಲೋ ದಧಾರ ತಮ್ ।**
**ಭ್ರಾಮಯಾಮಾಸ ಬಹುಶೋ ಗರುಡೋ ಭುಜಗಂ ಯಥಾ ||೩೫||**

**ತತ್ಯಾಜ ದೂರದೇಶೇ ತಂ ಚಂಚಲಂ ದುಷ್ಟದಾನವಮ್ ||೩೬||**

---

ನೆಂಬ ನಿಶ್ಚಯು ರಾಕ್ಷಸನಿಗೆ ಉಂಟಾಯಿತು. ಆದರೂ ತನ್ನ ಗುಟ್ಟನ್ನು ಬಿಟ್ಟು ಕೊಡದೇ ಗಣಪತಿಯನ್ನು ಕುರಿತು ಹೀಗೆಂದು ನುಡಿಯಲಾರಂಭಿಸಿದನು. ||೩೩||

ಚಂಚಲ : –

ಕೆಲಕ್ಕೆ ಇಳಿದು ಬಿಡಪ್ಪ. ನಾನು ನಿನ್ನ ಮೇಲೆ ಕುಳಿತಾಗ ಆಡಿದ ಅವ ಹೇಳನದ ಮಾತುಗಳನ್ನು ಮನಸ್ಸಿನಲ್ಲಿ ಹಿಡಿಯಬೇಡ. ನೀನು ಬಹಳ ಭಾರವನ್ನು ನನ್ನ ಮೇಲೆ ಊರಿರುವೆ. ನನ್ನ ಪ್ರಾಣಪಕ್ಷಿಗಳು ಹಾರಿಹೋಗುತ್ತಿವೆ. ನನ್ನನು ಕೊಲ್ಲಬೇಡ. ನಾನು ನಿನಗೆ ಶರಣು ಬಂದಿರುವೆನು, ಶರಣಾಗತರನ್ನು ಕೊಲ್ಲ ಬಾರದು. ನನ್ನ ಮೇಲೆ ದಯೆದೋರು, ನಾನು ಬಹಳ ದೈನ್ಯದಿಂದ ಬೇಡು ವೆನು. ||೩೪||

ಬ್ರಹ್ಮಾ :—

ಹೀಗೆ ಹೇಳುತ್ತಿರುವಾಗಲೇ ಚಂಚಲನಿಗೆ ಮೂರ್ಛೆ ಬಂದುಬಿಟ್ಟಿತು. ಆಗ ಗಣಪತಿಯು ಅವನನ್ನು ಭದ್ರವಾಗಿ ಹಿಡಿದುಕೊಂಡು ಗರಗರನೆ ಬಹಳ ಸಲ ತಿರುಗಿಸಿದನು. ಗರುಡನ ಕೈಗೆ ಹಾವು ಸಿಕ್ಕಿದಂತಾಯಿತು, ಚಂಚಲನ ಗತಿ. ||೩೫||

ಬಹಳ ಹೊತ್ತು ಹೀಗೆಯೇ ತಿರುಗಿಸುತ್ತಿದ್ದು ಒಮ್ಮೆಲೇ ಆ ದುಷ್ಟ ಚಂಚಲ

ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ 'ಚಂಚಲಾದಿ
ದೈತ್ಯವಧೋ' ನಾಮ ತ್ರಿ-ನವತಿತಮೋಽ-
ಧ್ಯಾಯಸ್ಸಮಾಪ್ತಃ

---

ದಾನವನನ್ನು ಬಹು ದೂರ ಹೋಗಿ ಬೀಳುವಂತೆ ಎಸೆದುಬಿಟ್ಟನು. ॥೫೬॥

ಇಲ್ಲಿಗೆ ಶ್ರೀ ಗಣೇಶ ಪುರಾಣ, ಉತ್ತರಖಂಡದಲ್ಲಿ 'ಚಂಚಲ ಮೊದಲಾದ ದೈತ್ಯರ ವಧೆ' ಎಂಬಲ್ಲಿಗೆ ತೊಂಭತ್ತಮೂರನೆಯ ಅಧ್ಯಾಯಾನುವಾದವು ಮುಗಿದುದು.



॥ ಶ್ರೀ ಗಣೇಶಾಯ ನಮಃ ॥

## ಅಥ ಚತುರ್ನವತಿತಮೋಽಧ್ಯಾಯಃ

**ಕ ಉವಾಚ :—**

**ತತೋ ಮುನಿಸುತಾಯಾತಾಃ ಪ್ರತೀಕ್ಷಂತಃ ಸ್ಥಿತಾಶ್ಚ ಯೇ ।**
**ತೇಷಾಂ ಜಯರವೈರ್ವ್ಯೋಮ ಗರ್ಜಿತಂ ಚ ದಿಗಂತರಮ್ ॥೧॥**

**ಚಿಕ್ರೀಡುಸ್ತೇ ಪುನಸ್ತತ್ರ ನಾನಾ ನೃತ್ಯೈಶ್ಚ ಗಾಯನೈಃ ।**
**ಏವಂ ರಮತ್ಸು ಬಾಲೇಷು ಸಾರ್ಧಯಾಮೋ ದಿವಾಕರೇ ॥೨॥**

---

,॥ ಶ್ರೀ ಗಣೇಶಾಯ ನಮಃ ॥

### ೯೪ ನೆಯ ಅಧ್ಯಾಯ.

ಬ್ರಹ್ಮ :—

ಚಂಚಲಾಸುರನು ಭೂಮಿಗೆ ಬಿದ್ದು ಮೃತನಾದುದನ್ನು ಕಂಡಕೂಡಲೇ ಇದುವರೆಗೂ ಗಣಪತಿಯನ್ನು ನಿರೀಕ್ಷಿಸುತ್ತ ನಿಂತಿದ್ದ ಮುನಿಬಾಲಕರೆಲ್ಲರೂ ಬಹಳ ಉತ್ಸಾಹಗೊಂಡು ಗಣಪತಿಯ ಸಮೀಪಕ್ಕೆ ಓಡಿ ಬಂದರು. ಪ್ರತಿಯೊಬ್ಬನೂ ದೇವನನ್ನು ಜಯಕಾರದಿಂದ ಹೊಗಳಿದನು. ಇವರ ಈ ಜಯಕಾರನಾದವು ದಿಕ್ಕು, ಅಂತರಿಕ್ಷ ಇವನ್ನೆಲ್ಲ ವ್ಯಾಪಿಸಿ, ಪ್ರತಿಧ್ವನಿಗೊಳಿಸಿತು. ।೧॥

ಹುಮ್ಮಸ್ಸು ಸ್ವಲ್ಪ ಕುಗ್ಗಿದ ಬಳಿಕ ಹುಡುಗರು ಮತ್ತೆ ಆಟವಾಡಲು ಆರಂಭಿಸಿದರು. ಇವರ ಆಟಗಳು ನಾನಾ ಬಗೆಯಾಗಿದ್ದವು. ಮನಸ್ವಿಯಾಗಿ ಕುಣಿದಾಡಿದರು, ಬಾಯಿಗೆ ಬಂದ ಪದಗಳನ್ನು ಸಂಗೀತಗಾರರಂತೆ ತಲೆ, ಕೈ.ಕಾಲುಗಳನ್ನೆಲ್ಲ ಕುಣಿಸುತ್ತ ಹಾಡಿದರು. ಈ ರೀತಿ ಇವರು ಆಟವಾಡುತ್ತಿರುವಂತೆಯೇ

ಪಿತರೌ ತಾನದೃಷ್ಟೈವ ಗ್ರಾಮಮಧ್ಯೇ ಕ್ವಚಿದ್ಗೃಹೇ ।
ಪ್ರತ್ಯೇಕಂ ಯಷ್ಟಿ ಮಾದಾಯ ಯಯುಃ ಸರ್ವೇ ಶಿಶೂನ್ ಪ್ರತಿ ॥೩॥

ರಮಂತೋ ವಿವಿಧಾಃಕ್ರೀಡಾ ಮಧ್ಯೇ ಕೃತ್ವಾ ಗುಣೇಶ್ವರಮ್ ।
ನೃತ್ಯಂತಂ ನರ್ತಯಂತಂ ಚ ತಂ ಚ ತೇ ನಿರಮರ್ತಸ್ಯಯುಃ ॥೪॥

ಪಿತರ ಊಚುಃ :—

ತ್ವಯಾ ವಿನಾ ನೋ ಬಾಲಾಶ್ಚ ನಾಚರನ್ ಸ್ನಾನ-ಭೋಜನೇ ।

ಹಗಲಿನ ಒಂದೂವರೆ ಯಾಮ ಕಳೆದು ಹೋಯಿತು. ಸೂರ್ಯನಾರಾಯಣನು ತನ್ನ ಪ್ರಖರ ಕಿರಣಗಳೊಂದಿಗೆ ನಡುನೆತ್ತಿಗೆ ಬರಲಾರಂಭಿಸಿದನು. ॥೨॥

ಅತ್ತ ಕಡೆ ಈ ಬಾಲಕರ ಮಾತಾ-ಪಿತೃಗಳಿಗೆ ತಮ್ಮ ಮಕ್ಕಳ ನೆನಪು ಉಂಟಾಗಿ ಊರೆಲ್ಲ ಹುಡುಕಿ ನೋಡಿದರು. ಮನೆ ಮನೆಯನ್ನೂ ಹೊಕ್ಕು ಹುಡುಕಿದರು. ಬಾಲಕರು ಅಲ್ಲಿಲ್ಲಾದರೂ ಇದ್ದರಷ್ಟೇ ಇವರಿಗೆ ಸಿಕ್ಕಬೇಕು ? ಎಲ್ಲೂ ಹುಡಗರು ಕಾಣದಾಗಲು ಅವರಿಗೆ ಬಹಳ ಕೋಪ, ಭಯ ಅಸಹನೆಗಳುಂಟಾದವು. ಪ್ರತಿಯೊಬ್ಬರೂ, ಒಂದೊಂದು ಕೋಲನ್ನು ಪ್ರತ್ಯೇಕ ಪ್ರತ್ಯೇಕವಾಗಿ ತೆಗೆದುಕೊಂಡು ಹುಡುಗರನ್ನು ಹುಡುಕಲು ಹೊರಟುಬಂದರು. ॥೩॥

ಇತ್ತ ಮೈದಾನದಲ್ಲಿ ನೆರೆದಿದ್ದ ಮುನಿಬಾಲಕರೆಲ್ಲ ಗಣಪತಿಯನ್ನು ನಡುವೆ ಕೂಡಿಸಿ ತಾವು ಅವನ ಸುತ್ತಲೂ ಕುಳಿತು, ಮನಸ್ಸಿಗೆ ತೋರಿದ ವಿವಿಧ ರೀತಿಯಲ್ಲಿ ಆಟಗಳನ್ನು ಆಡಲಾರಂಭಿಸಿದ್ದರು. ಗಣಪತಿಯು ಕೆಲವೊಮ್ಮೆ ಕುಣಿಯುತ್ತಲೂ ಮತ್ತೆ ಕೆಲವು ಸಲ ತಾನು ನಿರ್ದೇಶಕನಾಗಿ ನಿಂದು, ಆ ಬಾಲಕರನ್ನು ತನ್ನ ಇಚ್ಛೆಗನುಸರಿಸಿ ಕುಣಿಸುತ್ತಲೂ ಕುಳಿತಿದ್ದನು. ಇದೆಲ್ಲವನ್ನೂ ಮುನಿಗಳು ನೋಡಿದರು ಗಣಪತಿಯ ಬಗ್ಗೆ ಅವರು ಬಹಳ ಮಟ್ಟಿಗೆ ಮತ್ಸರಗೊಂಡರು. ಮತ್ತು ಅವನನ್ನು ಕುರಿತು ಗದುರಿಸಿ ಹೀಗೆಂದು ಮಾತನಾಡಿದರು. ॥೪॥

ಮುನಿಗಳು :-

ಗಣಪತೇ! ನೀನೊಬ್ಬನಿದ್ದರೆ ಸಾಕು, ನಮ್ಮ ಹುಡುಗರಿಗೆ ಯಾವುದೊಂದೂ

ಆಚಾರಾಧ್ಯಯನೇ ಚಾಪಿ ಬ್ರಾಹ್ಮಣ್ಯಂ ವಿನಯಂ ತಥಾ ||೫||

ಕ ಉವಾಚ :—

ತತಃ ಪರಸ್ಪರಂ ಪ್ರಾಹುರ್ಗತಕ್ರೋಧಾ ನಿರೀಕ್ಷ್ಯ ತಮ್ |

ಸರ್ವ ಊಚುಃ :—

ಏತಸ್ಯ ತಾಡನೇ ಬುದ್ಧಿರ್ಗತೈನಂ ವೀಕ್ಷ್ಯ ನಃ ಕುತಃ ? ||೬||

ಕಥಯಾವೋ ಯದಿ ಶಿವೌ ತಾವಸ್ಯ ಕಿಂ ಕರಿಷ್ಯತಃ ? |

---

ಬೇಕಾಗಿಯೇ ಇರುವುದಿಲ್ಲ. ನಿನ್ನನ್ನುಳಿದು ಸ್ನಾನ-ಭೋಜನಾದಿಗಳನ್ನೂ ಮಾಡ ಲಾರದವರಾಗಿ ಹೋಗಿದ್ದಾರೆ. ನಿನ್ನಿಂದಾಗಿ ಈ ಹುಡುಗರ ಸದಾಚಾರಪ್ರವೃತ್ತಿ, ವೇದಾಧ್ಯಯನ, ಬ್ರಾಹ್ಮಣ್ಯಪರಿಪಾಲನೆ ಹೆಚ್ಚೇಕೆ ? ಗುರು-ಹಿರಿಯರಾದ ಮಾತಾ-ಪಿತೃಗಳಲ್ಲಿರಬೇಕಾದ ಮರ್ಯಾದೆ ಇವು ಸಹ ಅವರಲ್ಲಿ ಸಂಪೂರ್ಣವಾಗಿ ಅಳಿಸಿ ಹೋಗಿವೆ. ||೫||

ಬ್ರಹ್ಮ :—

ಇಷ್ಟನ್ನೆಲ್ಲ ಬಡ ಬಡ ನುಡಿದ ಬಳಿಕ ತಮ್ಮಲ್ಲಿ ಆಕಸ್ಮಿಕವಾಗಿ ಉಂಟಾದ ಬದಲಾವಣೆಗೆ ಸಮಂಜಸವಾದ ಕಾರಣವೇನಾಗಿರಬಹುದೆಂಬುದನ್ನು ಕುರಿತು ತಮ್ಮೊಳಗೆ ಚರ್ಚೆಮಾಡಲಾರಂಭಿಸಿದರು.

ಸರ್ವರೂ :—

ಇದೇನಾಶ್ಚರ್ಯ ! ನಮ್ಮ ಹುಡುಗರ ಅನೀತಿ-ಅಶಿಕ್ಷೆಗಳಿಗೆ ಮೂಲಕಾರಣ ನಾದ ಈ ಗಣಪತಿಯನ್ನು ಹೊಡೆಯಬೇಕೆಂದಷ್ಟೇ, ನಾವು ಇಲ್ಲಿಗೆ ಬಂದಿದ್ದುದು ? ಆದರೆ, ಇವನ ಮುಖವನ್ನು ನೋಡಿದ ಕೂಡಲೇ ಆ ಸಂಕಲ್ಪವೇ ಹಾರಿ ಹೋಯಿ ತಲ್ಲ ? ಇದಕ್ಕೇನು ಕಾರಣವಿರಬಹುದು ? ||೬||

ಹೋಗಲಿ, ನಮಗಂತೂ ಗಣಪತಿಯನ್ನು ಹೊಡೆಯುವುದಕ್ಕೆ ಮನಸು

**ಅನೇಕೇ ನಿಹತಾ ದೈತ್ಯಾ ಬಾಲೇನೈವ ಮಹಾಬಲಾಃ ||೭||**

**ವಯಂ ದೇಶಾಂತರಂ ಯಾಮೋ ಭೀತ್ಯಾ ತವ ಗುಣೇಶ್ವರ ! ।**

ಒಡಂಬಡುವುದಿಲ್ಲ, 'ಇವನನ್ನು ಹದ್ದುಬಸ್ತಿನಲ್ಲಿಟ್ಟುಕೊಳ್ಳುವುದು ಅತ್ಯವಶ್ಯಕ' ಎಂದು ಪಾರ್ವತೀ–ಪರಮೇಶ್ವರರಿಗೆ ಹೇಳಿಬಿಡೋಣವೆಂದರೆ, ಪಾಪ ! ಅವರಾದರೂ ಏನನ್ನು ಮಾಡಬಲ್ಲರು ? ಅವರೂ ಬಹಳ ಕಾಲ ತಪಸ್ಸನ್ನು ಆಚರಿಸಿ ಇವನನ್ನು ಮಗನನ್ನಾಗಿ ಪಡೆದಿದ್ದಾರೆ. ಒಂದು ವೇಳೆ ನಮ್ಮೆಲ್ಲರ ಸಮಾಧಾನಕ್ಕಾಗಿ ಇವನಿಗೆ ನಾಲ್ಕು ಏಟುಗಳನ್ನು ಕೊಟ್ಟು ಹಿಂಸಿಸಬಹುದು. ಮಹಾಮಹಿಮ ಇಂತಹ ಮುದ್ದು ಮಗುವನ್ನು ಅವರಿಂದ ಹೊಡೆಸಿಸಿದರೆ ನಮಗೆ ಬರುವ ಭಾಗ್ಯವಾದರೂ ಯಾವುದು ? ಇವನೂ ಸಾಮಾನ್ಯನಾದವನೇನೂ ಅಲ್ಲ. ಎಷ್ಟೋ ಮಂದಿ ಬಲಿಷ್ಠರಾದ ಅಸುರ ವೀರರನ್ನು ಈ ವಯಸ್ಸಿನಲ್ಲೇ ಸದೆಬಡಿದುಬಿಟ್ಟಿರುವನು. ಇವನೆಷ್ಟು ಬಲಿಷ್ಠನಾಗಿದ್ದಾನೆ ? ||೭||

'ಏನಾದರಾಗಲಿ, ಸುಮ್ಮನೆ ಇದ್ದುಬಿಡೋಣ' ಎನ್ನೋಣವೇ ? ಗಣಪತಿಯಂತೂ ಮಹಾಮಹಿಮ, ಜಗನ್ಮಾತಾಪಿತೃಗಳೇ ಇವನಿಗೆ ಜನನೀ-ಜನಕರು. ಇವನು ಹೇಗೂ ಕೆಡುವುದೇ ಇಲ್ಲ, ಆದರೆ ನಮ್ಮ ಮಕ್ಕಳ ಗತಿ ಏನು ? ಇವನ ಸಹವಾಸದಿಂದ ಕೆಟ್ಟುಹೋಗುತ್ತಿರುವರಲ್ಲವೇ ? ಧರ್ಮಸಂಕಟದ ಈ ಕೆಲಸವೇ ನಮಗೆ ಬೇಕಿಲ್ಲ. ಗಣೇಶ ! ನಿನ್ನ ಈ ಕಾಟವನ್ನು ನಾವು ಸಹಿಸಲು ಸರ್ವಾತ್ಮನಾ ಸಾಧ್ಯವಾಗಲೊಲ್ಲದು.' ಆದುದರಿಂದ ನಮ್ಮ ಪಾಡಿಗೆ ನಾವು ದೇಶಾಂತರಕ್ಕಾದರೂ ಹೋಗಿ ಬಿಡುವೆವಪ್ಪ ! ಇಲ್ಲಿ ನಾವು ವಾಸವಾಗಿರುವಷ್ಟು ಕಾಲವೂ ನಿನ್ನ ಸಹವಾಸವನ್ನು ನಮ್ಮ ಹುಡುಗರು ಬಿಡುವುದಿಲ್ಲ. ಇದರಿಂದ ಅವರು ಸ್ವೇಚ್ಛಾಚಾರಿಗಳಾಗುವರು. ಅವರ ಪುರೋಽಭಿವೃದ್ಧಿಗೆ ಬಹಳ ಧಕ್ಕೆ ತಗುಲುವುದು ಎಂಬ ಭೀತಿ ನಮಗೆ ಇದ್ದೇ ಇರುವುದು.

ಕ ಉವಾಚ :—

ಏವಂ ವದತ್ಸು ಲೋಕೇಷು ಪಿದಧೇ ಸ ಗುಣೇಶ್ವರಃ ||೮||

ಆವಿರಾಸೀದ್ದೂರದೇಶೇ ತತೋ ಬಾಲಾ ವ್ಯಲೋಕಯರ್ನ್ |
ಧಾವಯಿತ್ವಾ ಪಿತೄಂಸ್ತ್ಯಕ್ತ್ವಾ ಗುಣೇಶಂ ತೇ ಯಯುಃ ಪುನಃ ||೯||

ಕ್ರೀಡಂತಸ್ತೇ ಯಯುಶ್ಶೀಘ್ರಂ ಗೌತಮಾಶ್ರಮಮುತ್ತಮಮ್ |
ಧ್ಯಾನಸ್ಥಂ ತಂ ಮುನಿಂ ವೀಕ್ಷ್ಯ ಪಚಕೀಂ ತತ್ಪ್ರಿಯಂ ಚ ತೇ ||೧೦||

ಬ್ರಹ್ಮಾ :—

ಜನರು ಬೇಸರಪಟ್ಟು ಹೀಗೆಲ್ಲ ಮಾತನಾಡಿಕೊಳ್ಳುತ್ತಿರುವಷ್ಟರಲ್ಲಿ ಭಗವಾನ್ ಗಣಪತಿಯು ಇದ್ದಕ್ಕಿದ್ದಂತೆಯೇ ಅಂತರ್ಹಿತನಾಗಿಬಿಟ್ಟನು. ||೮||

ಮತ್ತು ಬಹು ದೂರದಲ್ಲಿ ಪುನಃ ಆವಿರ್ಭವಿಸಿ ನಿಂದನು. ಬಾಲಕನು ಒನ್ಮೆಲೆ ಇಲ್ಲದಂತಾದುದನ್ನು ಕಂಡು ಗರಬಡಿದವರಂತಾಗಿದ್ದ ಮುನಿಬಾಲಕರು ಸುತ್ತಮುತ್ತಲೂ ಅವನನ್ನು ಹುಡುಕುತ್ತಿದ್ದರು. ಅಷ್ಟರಲ್ಲಿ ಗಣಪತಿಯು ಬಹಳ ದೂರ ಹೋಗಿ ನಿಂದಿರುವುದು ಅವರಿಗೆ ಕಂಡುಬಂದಿತು. ಆಗ ಬಾಲಕರಿಗೆ ತಮ್ಮ ತಂದೆ-ತಾಯಿಯರ ಪರಿವೆಯು ಸಹ ಉಳಿಯಲಿಲ್ಲ. ಇವರೆಲ್ಲರೂ ನೋಡುತ್ತಿರುವಂತೆಯೇ ಬಾಲಕರು ಗಣಪತಿಯು ನಿಂತಿದ್ದೆಡೆಗೆ ಓಡಿ ನಡೆದರು. ||೯||

ಮತ್ತೆ ಇವರ ಆಟಗಳು ಆರಂಭವಾದವು. ಇವರು ಆಟವಾಡುತ್ತಲೇ ಗೌತಮ ಮಹರ್ಷಿಯ ಆಶ್ರಮದ ವರೆಗೂ ನಡೆದುಬಿಟ್ಟರು. ಗೌತಮರ ಆಶ್ರಮವು ಫಲ-ಜಲ-ಪುಷ್ಪಭರಿತವಾಗಿದ್ದುದರಿಂದ ಅದೊಂದು ಉತ್ತಮ ದರ್ಜೆಯ ಆಶ್ರಮವೆಂದು ಪರಿಗಣಿತವಾಗಿದ್ದಿತು. ಆ ಆಶ್ರಮದಲ್ಲಿ ಇವರು ನುಗ್ಗಿ ನೋಡಿದರು. ಗೌತಮ ಮುನಿಯು ಧ್ಯಾನದಲ್ಲಿ ಮಗ್ನನಾಗಿ ಕುಳಿತಿದ್ದನು. ಅತ್ತ ತಿರುಗಿ ಇಡು

**ಗುಣೇಶೋಽಗಾನ್ಮಧ್ಯದೇಶಂ ಜಗ್ರಾಹೌದನಪಾತ್ರಕಮ್ ।**
**ದದೌ ತೇಭ್ಯೋ ವಿಭಜ್ಯಾನ್ನಂ ಪ್ರಾರ್ಥಯಾಮಾಸ ಸಾದರಮ್ ॥೧೧॥**

**ಗಣೇಶ ಉವಾಚ :—**

**ಮತ್ಸಂಗೇನ ಚಿರಂ ಕಾಲಂ ಯೂಯಂ ಸರ್ವೇ ಬುಭುಕ್ಷಿತಾಃ ।**
**ಸಾವಕಾಶಂ ಪ್ರಭುಂಜಧ್ವಂ ತತಃ ಕ್ರೀಡಾಮಹೇ ಪುನಃ ॥೧೨॥**

---

ಗೆಯ ಮನೆಯ ಕಡೆಗೆ ನೋಡಿದರು. ಮುನಿಪತ್ನಿ. ಅಹಲ್ಯೆಯು ಅಡುಗೆಯನ್ನು ಮಾಡುತ್ತ ಕುಳಿತಿದ್ದಳು. ॥೧೦॥

ಗಣಪತಿಯು ಈ ಸನ್ನಿವೇಶವನ್ನು ನೋಡಿ ಮೆಲ್ಲನೆ ಅಡುಗೆಯ ಮನೆಯ ನಡುಭಾಗಕ್ಕೆ ಬಂದನು. ಮತ್ತು ಅಲ್ಲಿ ಸಿದ್ಧಮಾಡಿರಿಸಿದ್ದ ಅನ್ನದ ತಪ್ಪಲೆಯನ್ನು ತೆಗೆದುಕೊಂಡು ಸದ್ದಿಲ್ಲದೇ ಈಚೆಗೆ ಬಂದುಬಿಟ್ಟನು. ಹೊರಕ್ಕೆ ಬಂದೊಡನೆಯೇ ಅದನ್ನು ತನ್ನ ಸಂಗಡಿಗರಿಗೆಲ್ಲ ಹಂಚಿಕೊಟ್ಟನು. ಮತ್ತು ಅತ್ಯಾದರದಿಂದ ಅವರನ್ನು ಈ ರೀತಿಯಾಗಿ ಪ್ರಾರ್ಥಿಸಿದನು. ॥೧೧॥

ಗಣೇಶ :—

ನೀವು ನನ್ನೊಡನೆ ಬಂದು ಬಿಟ್ಟಿದ್ದರಿಂದ ಬಹಳ ಮಟ್ಟಿಗೆ ದಣಿದುಹೋಗಿದ್ದೀರಿ. ನನ್ನೊಂದಿಗೆ ಬಾರದೇ ನಿಮ್ಮ ನಿಮ್ಮ ಮನೆಗಳಲ್ಲೇ ಇದ್ದಿದ್ದರೆ, ಕಾಲ ಕಾಲಕ್ಕೆ ಆಹಾರ-ಪಾನೀಯಗಳು ನಿಮಗೆ ದೊರಕುತ್ತಲಿದ್ದವು. ನೀವು ಹಸಿವಿನಿಂದ ಬಹಳ ಬಳಲಿದಂತಾಗಿದೆ. ಅವಸರಪಡಬೇಡಿ. ಸಾವಧಾನವಾಗಿ, ಹೊಟ್ಟೆ ತುಂಬುವ ವರೆಗೂ ಊಟವನ್ನು ಮಾಡಿರಿ. ಅನಂತರ ಮತ್ತೆ ಸ್ವೇಚ್ಛೆಯಾಗಿ ಆಟಗಳನ್ನಾಡೋಣವಂತೆ. ॥೧೨॥

ಕ ಉವಾಚ:

ಅಹಲ್ಯಾ ತಂ ಚುಕೋಪಾಶು

ಅಹಲ್ಯೋವಾಚ :—

ಮಮಾನ್ನಂ ಸ್ಪೃಷ್ಟವಾನ್ ಕಥಮ್ ? ।
ನ ಕೃತೋ ವೈಶ್ವದೇವೋ ವಾ ನೈವೇದ್ಯಶ್ಚ ಫಲಾರ್ಭಕ ! ॥೧೩॥

ಬ್ರಹ್ಮಾ :—

ಇಷ್ಟರಲ್ಲಿ ಅಹಲ್ಯೆಗೆ ಈ ಹುಡುಗರ ಗದ್ದಲ ಕೇಳಿಬಂದಿತು. 'ಇದೇನು ? ನಮ್ಮ ಆಶ್ರಮದಲ್ಲಿ ಮಕ್ಕಳ ಶಬ್ದ ಕೇಳಿಬರುತ್ತಲಿದೆ ?' ಎಂದು ಆಶ್ಚರಿಯಿಂದ ಈಚೆಗೆ ಬಂದು ನೋಡಿದಳು. ಹುಡುಗರಿಗೆ ಗಣಪತಿಯು ಬಡಿಸುತ್ತಿರುವುದೂ, ಅವರು ಸ್ವೇಚ್ಛೆಯಾಗಿ ಭುಜಿಸುತ್ತಿರುವುದೂ ಕಂಡಿತು. ತಾನು ಅನ್ನವನ್ನು ಮಾಡಿರಿಸಿದ್ದ ಪಾತ್ರೆಯು ಇವರ ಬಳಿ ಇದ್ದುದನ್ನು ನೋಡಿದೊಡನೆಯೇ ಅಹಲ್ಯೆಗೆ ಬಹಳ ಕೋಪ ಬಂದಿತು. ಏತಕ್ಕೆಂದರೆ ಆ ಅನ್ನವನ್ನು ದೇವರಿಗೆ ನಿವೇದನಕ್ಕಾಗಿ ಸಿದ್ಧಪಡಿಸಿಟ್ಟಿದ್ದಳು. ಈ ಹುಡುಗರು ಅದನ್ನು ಮುಟ್ಟಿ ಉಪಯೋಗಿಸಿ ಬಿಟ್ಟಿದ್ದರಿಂದ ಅದನ್ನು ದೇವರ ನಿವೇದನಕ್ಕಾಗಿ ಇಡುವಂತಿರಲಿಲ್ಲ. ಬೇರೆ ಅನ್ನವನ್ನು ಸಿದ್ಧಪಡಿಸೋಣವೆಂದರೆ, ಪರಮ ಕೋಪಿಷ್ಠನಾದ ಗೌತಮನು 'ನಿವೇದನಕ್ಕೆ ಅನ್ನವನ್ನು ತೆಗೆದುಕೊಂಡು ಬಾ' ಎಂದು ಕೂಗುವ ಸಮಯ ಸಮೀಪವಾದುದರಿಂದ ಅದಕ್ಕೂ ಅವಕಾಶವಿರಲಿಲ್ಲ. ಹೀಗಾಗಿ ಅಹಲ್ಯೆಯು ಬಹಳ ಇಕ್ಕಟ್ಟಿನಲ್ಲಿ ಸಿಕ್ಕುಬಿದ್ದಳು. ಆದುದರಿಂದಲೇ ಅವಳು ಕೋಪಗೊಂಡಳು. ಆಗ ಅಹಲ್ಯೆಯು ಗಣಪತಿಯನ್ನು ಕುರಿತು ಹೀಗೆ ಗದ್ದರಿಸಿದಳು.

ಅಹಲ್ಯೆ :—

ನಾನು ಮಡಿಯಲ್ಲಿ ಮಾಡಿರಿಸಿದ್ದ ಅನ್ನವನ್ನು ಏತಕ್ಕಾಗಿ ಮುಟ್ಟಿದೆ ?

---

ವಿವರಣೆಗೆ ಪರಿಶಿಷ್ಟವನ್ನು ನೋಡತಕ್ಕದ್ದು.

**ವಿಸೃಜ್ಯ ಧ್ಯಾನಂ ಕಿಂ ಕುರ್ಯಾದ್ಗೌತಮೋ ಮುನಿಸತ್ತಮಃ ।**

**ಕ ಉವಾಚ :—**

**ಉತ್ಥಾಪಯಾಮಾಸ ತದಾ ಧ್ಯಾನಸ್ಥಂ ಮುನಿಸತ್ತಮಮ್ ॥೧೪॥**

**ಸ ಉತ್ಥಾಯ ದದರ್ಶಾಥ ಗೌತಮಸ್ಸಕಲಾರ್ಭಕಾನ್ ।**
**ಜಕ್ಷತೋಽನ್ನಂ ಕ್ಷುಧಾಯುಕ್ತಾನ್ ಬಭಾಷೇ ಚ ಗುಣೇಶ್ವರಮ್ ॥೧೫॥**

ಇನ್ನೂ ವೈಶ್ವದೇವವಾಗಿಲ್ಲ, ದೇವರಿಗೆ ನಿವೇದಿಸಿಲ್ಲ, ನೀವು ಬಹಳ ಚಪಲರಾಗಿ ಬಿಟ್ಟಿರಿ. ಹುಡುಗರಿಗೆ ಮಡಿ, ಮೈಲಿಗೆ ಇವಾವೂ ತಿಳಿಯುವುದೇ ಇಲ್ಲ. ॥೧೩॥

ನನ್ನ ಪತಿದೇವ ; ಗೌತಮನು ಧ್ಯಾನವನ್ನು ಮುಗಿಸಿಕೊಂಡು ಬಂದೊಡನೆಯೇ ವೈಶ್ವದೇವಾದಿಗಳಿಗೆ ಸಿದ್ಧತೆ ಇರದಿದ್ದರೆ ನನ್ನ ಮೇಲೆ ಎಷ್ಟು ಕೋಪಿಸಿಕೊಳ್ಳುವನೋ ಏನೋ, ಅವನ ಕೋಪ ಸಾಮಾನ್ಯವಾದುದೇ ? ಎಂತಹ ಕೆಲಸವನ್ನು ಮಾಡಿಬಿಟ್ಟೆ ?

ಬ್ರಹ್ಮ :—

ಎಂದು ಒಟಗುಟ್ಟುತ್ತ 'ಪಾಕ ಇನ್ನೂ ವಿಲಂಬವಿದೆ, ಅವಸರಪಡಿಸಬೇಡ, ಮಾಡಿಟ್ಟ ಅಡುಗೆಯನ್ನು ಹುಡುಗರು ಮುಟ್ಟಿಬಿಟ್ಟರು ' ಎಂಬುದನ್ನು ತಿಳಿಸಿಬಿಡೋಣ ಎಂದು ನಿಶ್ಚಯಿಸಿ, ಗೌತಮನು ಧ್ಯಾನಾಸಕ್ತನಾಗಿ ಕುಳಿತಿದ್ದ ಸ್ಥಳಕ್ಕೆ ಹೋಗಿ, ಅವನನ್ನು ಬಹಿರ್ಮುಖನನ್ನಾಗಿ ಮಾಡಿ ಬಾಲಕರ ಚೇಷ್ಟೆಯನ್ನೆಲ್ಲ ತಿಳಿಸಿದಳು. ॥೧೪॥

ಅವನೂ ಎದ್ದು ಈಚೆಗೆ ಬಂದು ನೋಡಿದನು. ಬಾಲಕರು ಸ್ವಲ್ಪವೂ ಅವಸರ ಪಡದೇ ಆನಂದದಿಂದ ಭುಜಿಸುತ್ತಿದ್ದರು. ಗಣಪತಿಯು ಮೇಲ್ನಿಂತು ಎಲ್ಲರಿಗೂ ಆಥ್ಯತೆಯಿಂದ ಬಡಿಸುತ್ತಲಿದ್ದನು. ಆಗ ಗೌತಮನು ಗಣಪತಿಯನ್ನು ಕುರಿತು ಹೀಗೆಂದು ನುಡಿದನು. ॥೧೫॥

ಗೌತಮ ಉವಾಚ :—

ಮಹತೋಃ ಪುತ್ರತಾಂ ಪ್ರಾಪ್ಯ ಕಥಮನ್ಯಾಯಕೃದ್ಭವಾನ್ ? ।
ಅತ್ಯದ್ಭುತಾನಿ ಕರ್ಮಾಣಿ ಶ್ರುತ್ವಾ ತೇ ತ್ವಾಂ ವಯಂ ಪುರಾ　　॥೧೬॥

ಪರಾತ್ಪರತರಂ ದೇವಂ ಪರಬ್ರಹ್ಮಸ್ವರೂಪಿಣಮ್ ।
ಮನ್ಯಾಮಹೇ ಬಾಲಭಾವಂ ಕುರುಷೇ ತ್ವಂ ಗುಣೇಶ್ವರ !　　॥೧೭॥

ಕ ಉವಾಚ :—

ಧೃತ್ವಾ ಕರಂ ಸ ಚ ಮುನಿಃ ಪಾರ್ವತ್ಯಾ ಗೃಹಮಾಗಮತ್ ॥

---

ಗೌತಮ :—

ಮಹನೀಯರಾದ ಪಾರ್ವತೀ-ಪರಮೇಶ್ವರರ ಉದರದಲ್ಲಿ ಜನ್ಮವನ್ನೆತ್ತಿದ್ದರೂ ನೀನು ಈ ರೀತಿ ಅನಾಚಾರದ ಕೆಲಸವನ್ನು ಮಾಡಬಹುದೇ ? ನೀನು ಬರಬರುತ್ತ ಏಕೆ ಹೀಗಾಗಿಬಿಟ್ಟೆ? ಹಿಂದೆ ನೀನು ಪರಮಾದ್ಭುತವಾದ ಕಾರ್ಯಗಳನ್ನೆಲ್ಲ ಮಾಡಿರುವೆ ಎಂಬುದನ್ನು ಕೇಳಿ, ನಾವು ನಿನ್ನನ್ನು ಸಾಕ್ಷಾತ್ಪರವಸ್ತುವಾದ 'ದೇವ' ಎಂದು ನಂಬಿದ್ದೆವು. ॥೧೬॥

ಯಾವ ಪರಬ್ರಹ್ಮಸ್ವರೂಪವನ್ನು ತತ್ತ್ವತಃ ತಿಳಿಯಲು ವ್ರತ-ನಿಯಮೋಪವಾಸಗಳನ್ನಾಚರಿಸಿ ಶ್ರಮಪಡುತ್ತಿರುವೆವೋ, ಆ ವಸ್ತುವೆನಿಸಿದ ನೀನು ಈ ರೀತಿ ಆಚಾರಹೀನನಾಗಿ ವರ್ತಿಸಲಾರಂಭಿಸಿದರೆ, ನಮ್ಮಂಥವರಿಗೆ ವೇದ-ಶಾಸ್ತ್ರಗಳಲ್ಲಿ ನಂಬುಗೆಯಾದರೂ ಹೇಗೆ ಉಳಿಯಬಲ್ಲುದು ? ಹೇಳು ನೋಡೋಣ. ಇರಲಾರದು, ನೀನು ಖಂಡಿತವಾಗಿಯೂ ಪರವಸ್ತುವಾಗಿರಲಾರೆ. ಒಂದು ವೇಳೆ ನೀನು ಪರಮಪುರುಷನೇ ಆಗಿದ್ದರೆ, ಅಜ್ಞಾನಿ ಪ್ರಾಕೃತ ಬಾಲಕನಂತೆ ಗುಣೇಶ್ವರ ! ಹೀಗೆಲ್ಲ ವ್ಯವಹಾರಗಳನ್ನು ಏಕಾರಿ ನಡೆಯುತ್ತಲಿದ್ದೀಯ ? ॥೧೭॥

ಬ್ರಹ್ಮಾ :—

ಹೀಗೆ ನುಡಿಯುತ್ತ ಗಣಪತಿಯ ಕೈಯನ್ನು ಹಿಡಿದುಕೊಂಡು ಪಾರ್ವತಿಯ

ಕರೇ ಧೃತ್ವಾನ್ನಸಹಿತಂ ತತ್ಪಾತ್ರಂ ನಿಜಮಂದಿರಾತ್ ||೧೪||

ಉವಾಚ

ಗೌತಮ ಉವಾಚ :—

ಮಾತಸ್ತೇ ಬಾಲೋ ನಿತ್ಯಮನ್ಯಾಯಕೃನ್ಮಮ |
ಅದ್ಯ ತ್ವಾಂ ಕಥಿತುಂ ಯಾತಃ ಕಿಂ ಕಾರ್ಯಂ ಗೌರ್ಯತಃ ಪರಮ್ ?
||೧೯||

ಇತೋ ವಾ ಗಮನಂ ದೂರೇ ಮನ್ಯಸೇ ಯದಿ, ತದ್ವದ |

---

ಮಂದಿರಕ್ಕೆ ಅವನನ್ನು ಕರೆದುಕೊಂಡು ನಡೆದನು. ಹೋಗುವಾಗ ಬಾಲಕನು ಮುಟ್ಟಿದ್ದ ಅನ್ನದ ಪಾತ್ರೆಯನ್ನೂ ಸಂಗಡಲೇ ತೆಗೆದುಕೊಂಡು ಹೋದನು.
||೧೪||

ಗಣಪತಿಯು ಪ್ರತಿದಿವಸ ತನ್ನ ಆಶ್ರಮಕ್ಕೆ ಬಂದು ದೇವರ ನಿವೇದನಕ್ಕಾಗಿ ಇರಿಸುತ್ತಲಿದ್ದ ಅನ್ನವನ್ನು ಮುಟ್ಟಿ ತನ್ನ ಹೆಂಡತಿಯನ್ನು ಹಿಂಸೆ ಪಡಿಸುತ್ತಿರುವನೆಂದೂ, ಇದನ್ನು ಅನುಭವಿಸಿ ಬೇಸತ್ತ ಅಹಲ್ಯೆಯು ಇಂದು ತನ್ನೆದುರಿಗೆ ಈ ಸಂಗತಿಯನ್ನು ತಿಳಿಸಿರುವಳೆಂದೂ ಗಡಿಬಿಡಿಗೊಂಡ ಗೌತಮನಿಗೆ ಕಲ್ಪನೆಯುಂಟಾಗಿದ್ದಿತು. ಆದುದರಿಂದ ದೇವಿಯನ್ನು ಕುರಿತು ಹೀಗೆ ನುಡಿದನು.

ಗೌತಮ :—

ನಿನ್ನ ಮಗ ಗಣಪತಿಯು ಪ್ರತಿ ದಿವಸ ನಮ್ಮ ಆಶ್ರಮಕ್ಕೆ ಬಂದು ದೇವತಾದ್ಯರ್ಚನೆಗೂ ಅಡಚಣೆಯಾಗುವಂತೆ ಅನ್ಯಾಯವನ್ನು ಮಾಡುತ್ತಲಿದ್ದಾನೆ. ಇದನ್ನು ಸಹಿಸಿ ಸಹಿಸಿ ನಮಗೂ ಬೇಸರವಾಗಿ ಹೋಗಿದೆ. ಕೊನೆಗೆ ತಡೆಯಲಾರದೇ ಇಂದು ನಿನ್ನ ಬಳಿಗೆ ಬಂದು ಹೇಳುವ ಪ್ರಸಂಗ ಬಂದಿತು. ದೇವಿ, ಗೌರಿ! ಮುಂದೆ ಹೇಗೆ ನಡೆದುಕೊಳ್ಳೋಣ ? ಅದನ್ನು ಹೇಳು. ||೧೯||

ಹುಡುಗನನ್ನು ಶಿಕ್ಷಿಸಿ ಮಾರ್ಗಕ್ಕೆ ತರಲು ಸಾಧ್ಯವಿಲ್ಲದಿದ್ದರೆ ಕೊನೆಗೆ

ಕ ಉವಾಚ :—

ತತೋ ರುಷಾ ಸಮಾಯುಕ್ತಾ ಶ್ರುತ್ವಾ ವಾಕ್ಯಂ ಮುನೀರಿತಮ್ ||೨೦||

ತಾಡಯಾಮಾಸ ಯಷ್ಟ್ಯಾ ತಂ ವಮಂತೀ ನೇತ್ರತೋಽನಲಮ್ ।
ಉವಾಚ ಚ ಮುನಿಂ ಗೌರೀ ಪ್ರಣತಾ ಕ್ರೋಧಸಂಯುತಾ ||೨೧||

ಗೌರ್ಯುವಾಚ :—

ಮಮಾಪಿ ಚ ಮುನೇ ! ತ್ರಾಸೋ ಜಾಯತೇ ಜನ್ಮತೋಽಸ್ಯ ಹ ।

ನಾವೇ ಈ ಪ್ರದೇಶವನ್ನು ಬಿಟ್ಟು ದೂರ ಹೊರಟು ಹೋಗುವುದೇ ಯೋಗ್ಯ ವಾದುದು ಎಂದು ಭಾವಿಸುವೆಯ ? ಅದನ್ನಾದರೂ ಸ್ಪಷ್ಟವಾಗಿ ಹೇಳಿ ಬಿಡು. ಅದರಂತೆಯೇ ನಾವೂ ನಡೆದು ಕೊಳ್ಳುತ್ತೇವೆ.

ಬ್ರಹ್ಮ :—

ಗೌತಮನಂತಹ ಉಪಶಾಂತನೂ ತಪೋನಿರತನೂ ಆದ ಮಹರ್ಷಿಯು ಇಷ್ಟು ಕಟುವಾಗಿ ಮಾತನಾಡಿದ್ದುದನ್ನು ಕೇಳಿ ಪಾರ್ವತಿಗೆ ತನ್ನ ಮಗನ ಮೇಲೆ ಬಹಳ ಕೋಪ ಉಂಟಾಯಿತು. ||೨೦||

ಗೌರಿಯು ಕೈಗೊಂದು ಕೋಲನ್ನು ತೆಗೆದುಕೊಂಡಳು. ಕ್ಷಣಕಾಲ ಅವಳಿಗೆ ' ತಾನು ಏನನ್ನು ಮಾಡುತ್ತಿರುವೆನು ? ಇದರ ಪರಿಣಾಮವೇನಾದೀತು ? ಎಂಬುದು ಸಹ ಇವಳ ಕಲ್ಪನೆಗೆ ಬರಲಿಲ್ಲ. ಹಿಂದೆ ಇವನನ್ನು ದಂಡಿಸಿದ್ದರಿಂದ ಉಂಟಾದ ಅನಾಹುತದ ಸ್ಮರಣೆ ಇದ್ದರೂ ವಿಧಿ ಇಲ್ಲದೇ ಕಣ್ಣುಗಳನ್ನು ಕೆಂಪಗೆ ಮಾಡಿದಳು. ಬಾಯಿಯಿಂದ ಬೈಗಳ ಸುರಿ ಮಳೆಯನ್ನು ಕರೆದಳು. ಹಾಗೆಯೇ ಗುಡುಗುವ ಧ್ವನಿಯಿಂದ ಮುನಿಯನ್ನು ಕುರಿತು ಹೀಗೆಂದು ನುಡಿದಳು. ||೨೧||

ಗೌರೀ :—

ಗೌತಮ ಮಹರ್ಷೇ ! ಇವನ ಕಾಟ ನಿನಗೆ ಮಾತ್ರ ಎಂದು ಭಾವಿಸಬೇಡ.

ದೃಷ್ಟ್ವಾ ರಾಕ್ಷಸಕೃತಾಃ ಕಿಯಂತೋ ವಿಘ್ನಸಂಚಯಾಃ ॥೨೨॥

ಸ್ತ್ರಿಯಃ ಪ್ರವಕ್ತುಂ ಕುತ್ರಾಪಿ ನಾಯಾಂತಿ ಮುನಿಪುಂಗವಾಃ ।
ಅಯಂ ತು ಸರ್ವತೋ ದುಷ್ಟೋ ಮುನಿಪುತ್ರವಿಭೇದಕಃ ॥೨೩॥

ಇವನಿಂದ ನನಗೆ ಎಷ್ಟು ತ್ರಾಸ ಉಂಟಾಗಿದೆ, ಬಲ್ಲೆಯ ? ಇವನು ಹುಟ್ಟಿದಂದಿನಿಂದ ಈ ಕ್ಷಣದ ವರೆಗೂ ಎಷ್ಟು ಮಂದಿ ರಾಕ್ಷಸರು ನಮ್ಮ ಮನೆಗೆ ಬಂದಿದ್ದರೋ, ಹೇಳಲಿಕ್ಕೇ ಸಾಧ್ಯವಿಲ್ಲ. ಇವನೇನೋ ಮಹಾಬಲಶಾಲಿಯೇ ಸರಿ. ಆದುದರಿಂದಲೇ ಎಲ್ಲರನ್ನೂ ಬಡಿದು ಬಡಿದು ಓಡಿಸಿ ಬಿಟ್ಟನು. ಆದರೆ, ಇವನ ಚೇಷ್ಟೆಯಲ್ಲಿ ನಾನು ಎಷ್ಟರ ಮಟ್ಟಿಗೆ ಕುದಿದುಹೋದೆ, ಗೊತ್ತೇ ? ಇದರಿಂದ ನನ್ನ ಸ್ಥಿತಿ ಏನಾಗಿ ಹೋಗಿದೆ ನೋಡು ? ಇವನು ಸ್ವಾಭಾವಿಕವಾಗಿಯೇ ನಕ್ಕರೂ ಚಮತ್ಕಾರವಾಗಿ ಆಟಪಾಡಿದರೂ 'ಇದೇನೋ ರಾಕ್ಷಸರ ಕಾಟವೇ ಆಗಿರಬಹುದು' ಎಂದು ಭ್ರಮಿಸಿ ಹೃದಯ ನಡುಗುವುದು. ಹೀಗಾಗಿಹೋಗಿದೆ ನನ್ನ ಗತಿ. ವಿಘ್ನಗಳಂತೂ ಪರಂಪರೆಯಾಗಿ ಬಂದೊದಗುತ್ತಲೇ ಇವೆ. ಇದಾವ ಪಾಪದ ಫಲವೋ, ನನಗಂತೂ ಗೊತ್ತಾಗಲೊಲ್ಲದು. ॥೨೨॥

ಎಂದ ಮಾತ್ರಕ್ಕೆ ಈ ಬಾಲಕನ ದುಷ್ಟತನವನ್ನು ಮರೆಮಾಚುವೆನೆಂದು ಭಾವಿಸಬೇಡ. ಇವನಂತಹ ದುಷ್ಟನು ಮತ್ತೊಬ್ಬನಿರುವುದಿಲ್ಲ. ಇದನ್ನು ನಾನೂ ಬಲ್ಲೆ. ಪ್ರತಿಯೊಬ್ಬರಿಗೂ ಇವನು ಹಿಂಸೆಯನ್ನು ಕೊಡುತ್ತಲೇ ಇದ್ದಾನೆ. ಇಷ್ಟು ತುಂಟನಾದರೂ ಪ್ರತಿಯೊಬ್ಬ ಸ್ತ್ರೀಯೂ ಇವನ ಮುದ್ದು ಮುಖ-ಮಾತು-ಚೇಷ್ಟೆಗಳಿಗೆ ಮರುಳಾಗಿ ಇವನ ದುಷ್ಟತನವನ್ನೆಲ್ಲ ಸಹಿಸಿಬಿಡುತ್ತಲಿದ್ದಾರೆ. ಆದುದುರಿಂದಲೇ ಯಾರೊಬ್ಬರೂ ನನ್ನೆಡೆಗೆ ಇದುವರೆಗೂ ಇವನ ಮೇಲೆ ಒಮ್ಮೆಯಾದರೂ ದೂರನ್ನು ಹೇಳಿದವರೇ ಇಲ್ಲ. ಹೋಗಲಿ, ಮುನಿಗಳಾದರೂ ಬಂದು ಹೇಳುವರು ಎನ್ನುವಿಯ ? ಅವರೂ ಸುಮ್ಮನೆ ಇದ್ದಾರೆ. ಇವನು ತಾನು ಮಾತ್ರ ದುಷ್ಟತನವನ್ನು ಮಾಡುವುದು ಸಾಲದೇ, ಇತರ ಮುನಿಬಾಲಕರನ್ನೂ ಪುಂಡರನ್ನಾಗಿ ಮಾಡಿ ಕೆಡಿಸುತ್ತಲಿದ್ದಾನೆ. ॥೨೩॥

'ಮಮಾತ್ಮಜ' ಇತಿ ಜನೋ ನೈನಂ ಶಾಪಂ ಪ್ರಯುಚ್ಛತಿ ।

ಕ ಉವಾಚ :—

ಬದ್ಧ್ವೈನಂ ಹಸ್ತ-ಪಾದೇಷು ತತ್ಸಮಕ್ಷಂ ಶಿವಾ ಸುತಮ್ ॥೨೪॥

ಗೃಹಮಧ್ಯೇ ತು ಸಂಸ್ಥಾಪ್ಯ ತದ್ಗೃಹಂ ಪಿದಧೇ ದೃಢಮ್ ।
'ಮೈವಂ, ಮೈವಂ' ವದನ್ ಯಾತೋ ಗೌತಮಃ ಸ್ವಾಶ್ರಮಂ ಪ್ರತಿ ॥೨೫॥

ತತಸ್ತೇ ಬಾಲಕಾಸ್ಸರ್ವೇ ಶೋಚಂತಸ್ತಂ ಗುಹೇಶ್ವರಮ್ ।

ಮುನಿಗಳು ತಪಸ್ಸಿದ್ಧರಾದವರು. ಅವರು ಇವನ ಚೇಷ್ಟೆಗಳನ್ನು ಸಹಿಸ ಲಾರದೇ ಎಂದೋ ಇವನಿಗೆ ಶಾಪವನ್ನು ಕೊಟ್ಟುಬಿಡಬಹುದಾಗಿದ್ದಿತು. ಆದರೆ' ' ಇವನು ನನ್ನ ಮಗ ' ಎಂಬ ದಾಕ್ಷಿಣ್ಯದಿಂದ ಸುಮ್ಮನೆ ಇದ್ದಾರೆ. ಇದೇ ಕಾರಣ ದಿಂದಲೇ ಇತರ ಜನರು ಸಹ ಇವನ ಮೇಲೆ ಕೈ ಮಾಡಲು ಹೋಗುತ್ತಿಲ್ಲ,

ಬ್ರಹ್ಮಾ :-

ಹೀಗೆ ಹೇಳಿ ಗೌತಮನ ಎದುರಿಗೇ ಗಣಪತಿಯ ಕೈ-ಕಾಲುಗಳನ್ನು ಭದ್ರ ವಾಗಿ ಕಟ್ಟಿದಳು. ॥೨೪॥

ಮತ್ತು ಅವನನ್ನು ದರ ದರ ಎಳೆದುಕೊಂಡು ಹೋಗಿ ಒಂದು ಕೋಣೆಯ ನಡುವೆ ಕೂಡಿ ಹಾಕಿ, ಅವನು ಈಚೆಗೆ ಬರದಂತೆ ಬಾಗಿಲನ್ನು ಭದ್ರಪಡಿಸಿದಳು. ತಾನು ಹೇಳಿದ ದೂರು ಇಷ್ಟು ದೀರ್ಘಕ್ಕೆ ಹೋಗಿ ಗಣಪತಿಯನ್ನು ಪಾರ್ವತಿಯು ಬಂಧನದಲ್ಲಿರಿಸಬಹುದೆಂದು ಗೌತಮನು ಎಂದೂ ಎಣಿಸಿರಲಿಲ್ಲ. ಕಾರ್ಯವೇನೋ ಮಿಂಚಿ ಹೋಯಿತು. ಮನಸ್ಸು ಬಹಳ ವ್ಯಗ್ರವಾಯಿತು. 'ಹೀಗೆಲ್ಲ ಮಗುವನ್ನು ಹೊಡೆಯಬೇಡ. ಬಂಧನಗೊಳಿಸಬೇಡ. ಹೀಗಾಗಬಾರದಿದ್ದಿತು.' ಎಂದು ನುಡಿ ಯುತ್ತಲೇ ಅಲ್ಲಿ ನಿಲ್ಲಲಾರದೇ ತನ್ನ ಆಶ್ರಮವನ್ನು ಕುರಿತು ಹೊರಟು ಹೋದನು. ॥೨೫॥

ಗೌತಮನ ಚಾಪಲ್ಯದ ಫಲವಾಗಿ ತಮ್ಮ ಮಿತ್ರನಿಗೆ ಏಟುಗಳು ಬಿದ್ದು

**ಬಾಲಕಾ ಊಚುಃ ;—**

**ಕಥಂ ನೋ ದರ್ಶನಂ ಚಾಸ್ಯ ಭವಿಷ್ಯತಿ ? ಕದಾನು ವಾ ? ॥೨೬॥**

**ದ್ವಾರಂ ದತ್ವಾ ದೃಢಂ ಮಧ್ಯೇ ಸ್ಥಾಪಿತೋ ಗಿರಿಕನ್ಯಯಾ ।**

**ಕ ಉವಾಚ ;—**

**ಏವಂ ತೇಷು ವದತ್ಸ್ವೇವ ತನ್ಮಧ್ಯೇ ಸ ಯಯೌ ಕ್ಷಣಾತ್ ॥೨೭॥**

**ಜನನ್ಯಾಃ ಕಟಿದೇಶೇಽಪಿ ದೃಶ್ಯತೇ, ತದ್ಗೃಹೇಽಪಿ ಚ ।**

---

ದನ್ನೂ, ಅವನು ಬಂಧನಕ್ಕೊಳಗಾದುದನ್ನೂ ತಿಳಿದು ಬಾಲಕರು ಹೀಗೆ ಪರಸ್ಪರ ನುಡಿದರು.

ಬಾಲಕರು :—

ಗಣಪತಿಯ ದರ್ಶನ ನಮಗುಂಟಾಗುವುದು ಹೇಗೆ ? ಮತ್ತು ಎಂದಿಗೆ ? ॥೨೬॥

ಜಗಜ್ಜನನಿಯಾದ ಗಿರಿಜೆಯೂ ಇಷ್ಟರಮಟ್ಟಿಗೆ ನಿರ್ದಯಳಾದಳೇಕೆ ? ಇಷ್ಟು ಪುಟ್ಟ ಕೂಸನ್ನು ಒಂಟಿಯಾಗಿರುವಂತೆ ಕೋಣೆಯ ನಡುವೆ ಕೂಡಿ ಹಾಕಿ, ಬಾಗಿಲನ್ನು ಭದ್ರಪಡಿಸಬಹುದೇ ? ಇದೆಂತಹ ಅನ್ಯಾಯ ?

ಬ್ರಹ್ಮ :—

ಈ ರೀತಿ ಬಾಲಕರು ಪರಸ್ಪರವಾಗಿ ಮಾತನಾಡಿಕೊಳ್ಳುತ್ತ ದುಃಖಿಸ ಲಾರಂಭಿಸಿದರು. ವ್ಯಾಸ ! ಆಗ ಎಂತಹ ಚಮತ್ಕಾರ ನಡೆಯಿತು, ಗೊತ್ತೇ ? ಒಂದು ಕ್ಷಣದೊಳಗಾಗಿಯೇ ಬಾಲಕನು ಬಾಗಿಲಿನ ನಡುವಿನಿಂದ ಬಾಗಿಲು ಮುಚ್ಚಿದ್ದಂತೆಯೇ ಯಾರಿಗೂ ಗೊತ್ತಾಗದ ಹಾಗೆ ಹೊರಕ್ಕೆ ಬಂದುಬಿಟ್ಟನು. ॥೨೭॥

ಆಗ ಬಾಲಕರು ಹರ್ಷೋದ್ರಿಕ್ತರಾಗಿ ಗೌರಿಯನ್ನು ಕುರಿತು ಹೀಗೆಂದು ನುಡಿದರು.

ಊಚುಸ್ತಾಂ

**ಬಾಲಕಾ ಊಚುಃ ;—**

**ಗೌರಿ ! ಪುತ್ರಸ್ತೇ ನಿಃಸೃತೋ ಗೃಹಮಧ್ಯತಃ ॥೨೮॥**

**ಕ ಉವಾಚ : –**

**ಪಶ್ಯತಿ ಸ್ಮ ಗೇಹಮಧ್ಯೇ ಬದ್ಧಮೇವ ಗುಣೇಶ್ವರಮ್ ।**
**ಬಹಿಸ್ತಾನ್ ಮುನಿಪುತ್ರಾನ್ ಸಾ ತತ್ಸ್ವರೂಪಾನಪಶ್ಯತ ॥೨೯॥**

---

ಬಾಲಕರು :—

ತಾಯೇ ಗೌರೀದೇವಿ ! ನೀನು ನಿನ್ನ ಮಗನನ್ನು ಕೋಣೆಯೊಳಕ್ಕೆ ಕೂಡಿ ಕಟ್ಟಿಹಾಕಿದ್ದೆಯಷ್ಟೇ ? ಬಾಗಿಲಿಗೆ ಹಾಕಿದ ಮುದ್ರೆಯು ಹಾಗೆಯೇ ಇದೆ ಇದೋ ನೋಡು. ನಿನ್ನ ಮಗನು ಈಚೆಗೆ ಬಂದುಬಿಟ್ಟನಲ್ಲ ? ಈಗೇನನ್ನು ಮಾಡುವೆ ?

ಬ್ರಹ್ಮ:—

ಈ ಮಾತುಗಳನ್ನು ಕೇಳಿದ ಕೂಡಲೇ ದೇವಿಗೆ ಒಂದು ಬಗೆಯ ವಿಚಿತ್ರರೀತಿಯ ಅನುಭವ ಉಂಟಾಯಿತು. ಇದ್ದಕ್ಕಿದ್ದಂತೆ ಗೌರೀದೇವಿಗೆ ಎಡದ ಸೊಂಟದಲ್ಲಿ ಏನೋ ಭಾರವಾಗಿ ಕುಳಿತಿದ್ದಂತೆ ತೋರಲು, ಅವಳು ಚಕಿತಳಾಗಿ ತಿರುಗಿ ನೋಡುತ್ತಾಳೆ, ಗಣಪತಿಯು ಅವಳ ಸೊಂಟದಲ್ಲೇ ಕುಳಿತಿದ್ದಾನೆ. ಇದೇನು ಚಮತ್ಕಾರ? ನಾನು ಈಗ ತಾನೆ ಇವನನ್ನು ಕೋಣೆಯೊಳಗೆ ಕೂಡಿಹಾಕಿ ಬಾಗಿಲನ್ನು ಭದ್ರಪಡಿಸಿಕೊಂಡು ಬಂದಿದ್ದೇನೆ. ಹೀಗಿರುವಾಗ ನನ್ನ ಸೊಂಟದಲ್ಲಿ ಹೇಗೆ ಬಂದು ಕುಳಿತನು? ಎಂದು ಸೋಜಿಗಪಟ್ಟು, ಕೋಣೆಯ ಬಾಗಿಲನ್ನು ತೆರೆದು ನೋಡಿದಳು. ಇವಳು ಹೇಗೆ ಕಟ್ಟಿ ಕುಳ್ಳಿರಿಸಿದ್ದಳೋ, ಅದರಂತೆಯೇ ಇದ್ದನು. ಇದೇನಾಶ್ಚರ್ಯವೆಂದು ಮುನಿಪುತ್ರರ ಕಡೆಗೆ ತಿರುಗಿ ನೋಡಿದಳು. ಅವಳ ಕಣ್ಣುಗಳಿಗೆ ಎಲ್ಲ ಬಾಲಕರೂ ಗಣಪತಿಯಂತೆಯೇ ತೋರಿ ಬರಲಾರಂಭಿಸಿದರು. ॥೨೯॥

ಯಂ ಕಂಚಿತ್ಸ್ತನಪಾನಾಯ ಜುಹಾವ ವಿಹ್ವಲಾ ಶಿವಾ ।
ನಿಷಿದ್ಧಾ ಸಾ ಸುತೈಸ್ತೈಸ್ತು

ಬಾಲಕಾ ಊಚುಃ :—

ಗೃಹಮಧ್ಯೇ! ಶಿವೇ ಸ್ಥಿತಃ ॥೩೦॥

ಕ ಉವಾಚ :—

ಉದ್ಘಾಟ್ಯ ದ್ವಾರಂ ಸಾ ಬಾಲಂ ಮುಕ್ತ್ವಾ ಸ್ತನ್ಯಂ ದದೌ ಮುದಾ ।
ಗೌತಮಃ ಸ್ವಾಶ್ರಮಂ ಯಾತೋ ದೇವತಾರ್ಚನಮಾರಭತ್ ॥೩೧॥

ಈಗ ಮಾತ್ರ ಗೌರೀದೇವಿಗೆ ನಿಜವಾಗಿಯೂ ಹುಚ್ಚೇ ಹಿಡಿದುಹೋಯಿತು. ಬಹಳ ಘಾಬರಿಗೊಂಡಳು. ಎದುರಿಗಿದ್ದ ಗಣಪತಿಯಂತಹ ಹುಡುಗರ ಪೈಕಿ ಯಾರನ್ನಾದರೂ ಎತ್ತಿಕೊಂಡು ಸ್ತನ್ಯವನ್ನು ಪಾನ ಮಾಡಿಸಲಿಕ್ಕೆ ಹೋಗುವಳು. ಅವನು ಅವಳನ್ನು ನಿಷೇಧಿಸುತ್ತ ಹೀಗೆ ನುಡಿಯುವನು.

ಬಾಲಕ :—

ತಾಯಿ, ಶಿವೆ ! ನಿನ್ನ ಮಗನು ಈ ಕೋಣೆಯೊಳಗೆ ಇರುವನಲ್ಲವೇ ? ॥೩೦॥

ಬ್ರಹ್ಮಾ :—

ಹುಡುಗರು ಹೀಗೆ ನಿಷೇಧಿಸಿದುದನ್ನು ನೋಡಿದ ಮೇಲಂತೂ ಗೌರಿಗೆ ದಿಕ್ಕೇ ತೋರದಂತಾಯಿತು. ಕೂಡಲೇ ಬಾಲಕನನ್ನು ಬಂಧಿಸಿದ್ದ ಕೋಣೆಯ ಬಳಿಗೆ ಓಡಿ ಹೋಗಿ ಬಾಗಿಲನ್ನು ಭಡಾರೆಂದು ತೆಗೆದುಬಿಟ್ಟಳು. ಮತ್ತು ಬಾಲಕನ ಕಟ್ಟುಗಳನ್ನು ಬಿಚ್ಚಿ ಎತ್ತಿಕೊಂಡು ಅವನಿಗೆ ಸ್ತನ್ಯವನ್ನು ಪಾನಮಾಡಿಸಿದಳು. ಈಗಲಾದರೂ ಮಗನು ದೊರೆತನಲ್ಲ, ಎಂದು ಬಹಳ ಸಂತೋಷಪಟ್ಟಳು. ಅತ್ತ ಪರಮ ಸಾತ್ತ್ವಿಕ ಶಿರೋಮಣಿಯಾದ ಗೌತಮ ಮಹರ್ಷಿಯು 'ಇದೇನು? ಹೀಗಾಗಿ ಹೋಯಿತಲ್ಲ ? ' ಎಂದು ಚಿಂತಿಸುತ್ತಲೇ ತನ್ನ ಆಶ್ರಮಕ್ಕೆ ಹೋಗಿ ಯಾಂತ್ರಿಕವಾಗಿ ದೇವತಾರ್ಚನೆಯನ್ನು ಆರಂಭಿಸಿದನು. ॥೩೧॥

ಗುಣೇಶರೂಪಾನ್ ಸೋಽಪಶ್ಯತ್ತೃಪ್ತಾನ್ ದೇವಾಂಸ್ತಥಾಖಿಲಾನ್ ।
ಪುರಃ ಪ್ರಕೀರ್ಣಮನ್ನಂ ಚ ತತೋ ವಿಸ್ಮಿತಮಾನಸಃ ॥೩೨॥

ಚಿಂತಯಾಮಾಸ ಮನಸಿ

ಗೌತಮ ಉವಾಚ :—

ದುರ್ಬುದ್ಧಿಸ್ತು ಕೃತಾ ಮಯಾ ।
ಉಪಾಯ್ಯೈ ಕಥಿತಂ ಸರ್ವಮನ್ನಪಾತ್ರಂ ಪ್ರದರ್ಶಿತಮ್ ॥೩೩॥

---

ನಿತ್ಯಾರ್ಚನೆಗಾಗಿ ಅವನು ಇರಿಸಿಕೊಂಡಿದ್ದ ದೇವತಾ ವಿಗ್ರಹಗಳೆಲ್ಲವೂ ಗಣಪತಿಯಂತೆಯೇ ಕಾಣತೊಡಗಿದುದು ಮಾತ್ರವಲ್ಲದೇ, ಎಲ್ಲ ವಿಗ್ರಹಗಳೂ ನಿವೇದನಾದಿ ಸತ್ಕಾರಗಳಿಂದ ತೃಪ್ತವಾಗಿದ್ದಂತೆ ತೋರಿ ಬಂದವು. ಸುತ್ತಲೂ ದೃಷ್ಟಿಸಿ ನೋಡಿದನು. ಯಾವ ಅನ್ನವನ್ನು ಗಣಪತಿಯು ತನ್ನ ಸಂಗಡಿಗರಾದ ಮುನಿಬಾಲಕರಿಗೆ ಬಡಿಸಿದ್ದನೋ ಆ ಅನ್ನವೆಲ್ಲ ತನ್ನೆದುರಿಗೇ ಇಟ್ಟದ್ದುದು ಸಹ ಕಂಡುಬಂದಿತು. ಅದನ್ನು ನೋಡಿದ ಮೇಲಂತೂ ಅವನ ಮನಸ್ಸು ಮತ್ತಷ್ಟು ವಿಸ್ಮಯಗೊಂಡಿತು. ॥೩೨॥

'ಇದೇನಿರಬಹುದು,' ಎಂದು ಮನಸ್ಸಿನಲ್ಲೇ ಚಿಂತಿಸಿ ನೋಡಿದನು. ಅವನ ಕಣ್ಣುಗಳ ಅಂಧ್ಯ (ಅಜ್ಞಾನ) ವು ಸ್ವಲ್ಪ ಸ್ವಲ್ಪವಾಗಿ ಮರೆಯಾಗ ತೊಡಗಿತು. ಆಗ ತನ್ನೊಳಗೆ ಹೀಗೆಂದು ಮಾತನಾಡಿಕೊಂಡನು.

ಗೌತಮ :—

ನಾನು ಎಂತಹ ಅವಿವೇಕದ ಕೆಲಸವನ್ನು ಮಾಡಿಬಿಟ್ಟೆನಲ್ಲ? ದೇವತಾರ್ಚನೆಗಾಗಿ ಸಿದ್ಧಪಡಿಸಿದ್ದ ಅನ್ನವೆಲ್ಲ ಇಲ್ಲಿಯೇ ಇದೆ. ಇದನ್ನು ಗಮನಿಸದೆ ಯಾವುದೋ, ಬರಿದಾದ ಪಾತ್ರೆಯೊಂದನ್ನು ತೆಗೆದುಕೊಂಡು ಹೋಗಿ ಉಮೆಗೆ ತೋರಿಸಿ ಅಷ್ಟೆಲ್ಲ ಅನಾಹುತವನ್ನು ಮಾಡಿಬಿಟ್ಟೆನಲ್ಲ? ॥೩೩॥

ತಯಾ ಸ ತಾಡಿತೋ ಬದ್ಧೋಽವ್ಯಕ್ತೋಽವ್ಯಕ್ತಸ್ಯ ಕಾರಣಮ್ ।
ಪರಾತ್ಪರತರೋ ದೇವೋ ಯಸ್ಮಿಂಸ್ತೃಪ್ತೇ ಮಹಾಫಲಮ್ ॥೩೪॥

ಆಗತ್ಯ ಬುಭುಜೇ ಬಾಲೈಃ ಸಾರ್ಧಂ ತು ಮುನಿಸಂಭವೈಃ ।
ಮೋಹಿತೋ ಮಾಯಯಾ ಚಾಸ್ಯ ಪೂರ್ವಮಜ್ಞಾಸಿಷಂ ನ ತಮ್ ॥೩೫॥

ಕ ಉವಾಚ :—

ಅಹಲ್ಯಾಪಿ ಪುನಃ ಪಾಕಂ ಚಕಾರಾದ್ಭುತಮಾನಸಾ ।

---

ದೇವಿಯು ನನ್ನ ಚಾಡಿಯ್ಮಾತುಗಳಿಂದ ಕ್ರುದ್ಧಳಾಗಿ ನನ್ನ ಧ್ಯೇಯ ವಸ್ತುವನ್ನು ನನ್ನ ಕಣ್ಣುಗಳೆದುರಿಗೇ ಧಬ ಧಬನೆ ಹೊಡೆದು ಬಿಟ್ಟಳಲ್ಲ? ಕೋಣೆಯಲ್ಲಿ ಕೂಡಿ ಹಾಕಿ ಬಿಟ್ಟಳಲ್ಲ? ಅಶರೀರಿಯಾದ ಆ ದೇವನು ವ್ಯಕ್ತವಾದ ಈ ಪ್ರಪಂಚಕ್ಕೆ ಕಾರಣವೆನಿಸಿದ ಅವ್ಯಕ್ತಕ್ಕೂ ಕಾರಣನಾದವನಲ್ಲವೇ? ಯಾವ ಪರಾತ್ಪರ ವಸ್ತುವಿನ ತೃಪ್ತಿಗಾಗಿ ಹೀಗೆಲ್ಲ ಶ್ರಮಿಸಿ ನಾವು ತಪಿಸುತ್ತಿರುವೆವೋ, ಮತ್ತು ಯಾವ ದೇವನು ತೃಪ್ತನಾದರೆ ಮಹತ್ಫಲಗಳು ತಾವಾಗಿಯೇ ಹಸ್ತಗತವಾಗುವುವೋ, ॥೩೪॥

ಆ ಪುರಾಣ ಪುರುಷನೇ ಗಣಪತಿಯ ರೂಪದಿಂದ ಸಾಕ್ಷಾತ್ತಾಗಿ ನನ್ನ ಈ ಮುರುಕು ರ್ಝೋಪಡಿಯವರೆಗೂ ದಯೆಮಾಡಿ, ಮುನಿಬಾಲಕರೊಂದಿಗೆ ಈ ಕದನ್ನವನ್ನು ಭುಜಿಸಿ ತೃಪ್ತನಾದನಲ್ಲವೇ? ಅಯ್ಯೋ! ನನಗೆ ಇದಾವುದೂ ಮೊದಲೇ ತಿಳಿಯದೇ ಹೋಯಿತಲ್ಲ? ನಾನು ಎಂತಹ ವ್ಯಾಮೋಹಕ್ಕೆ ಒಳಗಾಗಿ ಬಿಟ್ಟಿನಲ್ಲ? ಕೆಟ್ಟೆ. ಕೆಟ್ಟು ಹೋದೆ? ದೈವೀಮಾಯೆಯು ಬಹಳ ಗಹನವಾದುದು. ನನ್ನ ದಡ್ಡತನ. ಏನನ್ನು ಮಾಡಲಿ? ಎಲ್ಲಿಗೆ ಹೋಗಲಿ? ಯಾರು ಈ ನಷ್ಟವನ್ನು ಕಟ್ಟಿಕೊಟ್ಟಾರು? ಈ ಅಜ್ಞಾನವು ನನ್ನನ್ನಾವರಿಸದಿದ್ದಿದ್ದರೆ ಎಂದಿಗಾದರೂ ನಾನು ಹೀಗೆ ಮೋಸ ಹೋಗುತ್ತಲಿದ್ದೆನೇ? ॥೩೫॥

ಬ್ರಹ್ಮ:-

ಎಂದು ಹಲುಬುತ್ತ ವಿಲಿ ವಿಲಿ ಒದೆದಾಡಿ ಹೋದನು. ಸಾತ್ತ್ವಿಕರ

ಸೋಽಪಿ ಧ್ಯಾನಸ್ಥಿತೋ ಭೂತ್ವಾ ನಿತ್ಯಕರ್ಮ ಸಮಾಪಯತ್ ॥೩೬॥

ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ ' ವಿಶ್ವರೂಪ
ಪ್ರದರ್ಶನಂ ' ನಾಮ ಚತುರ್ನವತಿತಮೋಽ-
ಧ್ಯಾಯಸ್ಸಮಾಪ್ತಃ

---

ಹೀಗೆ. ಅವನಿಗೆ ಯಾವುದೂ ಬೇಡವಾಯಿತು. ಸುಮ್ಮನೆ ಧ್ಯಾನಮಾಡುವುದಕ್ಕಾಗಿ ಹೊರಟು ಹೋದನು. ಇವನು ಬಹಳ ವ್ಯಗ್ರ ಮನಸ್ಕನಾಗಿದ್ದರೂ, ನಿತ್ಯಾನುಷ್ಠಾನಗಳು ಮಟ್ಟಿಗೆ ಅಭ್ಯಾಸ ವಿಶೇಷದಿಂದ ಯಾಂತ್ರಿಕವಾಗಿ ನಡೆಯಲಾರಂಭಿಸಿದವು. ಮನಸ್ಸಿದ್ದೋ, ಮನಸ್ಸಿಲ್ಲದೆಯೋ ಅಂತೂ, ತನ್ನ ನಿತ್ಯ ಕರ್ಮಾನುಷ್ಠಾನವನ್ನು ಒಮ್ಮೆ ಮುಗಿಸಿದನು. ಅತ್ತ ಅಹಲ್ಯೆಯ ಪರಿಸ್ಥಿತಿ ಏನಾಯಿತು. ಗೊತ್ತೇ ? ಅವಳಿಗೆ ಈ ಎಲ್ಲ ಘಟನೆಗಳೂ ಅತ್ಯದ್ಭುತವಾಗಿಯೇ ತೋರಲಾರಂಭಿಸಿದವು. ತಾನೊಂದನ್ನು ಮಾಡಲು ಹೋದರೆ, ಏನೇನೋ ನಡೆದು ಹೋಯಿತು ವಿಚಾರ ಮಾಡಿ ಮಾಡಿದಂತೆಲ್ಲ ಮೆದುಳು ಮಂಕಾಗತೊಡಗಿತು. ಅಡುಗೆಯ ಮನೆಯೊಳಕ್ಕೆ ಹೋಗಿ ಪುನಃ ಪಾಕವನ್ನು ಮಾಡಲಾರಂಭಿಸಿದಳು. ॥೩೬॥

ಇಲ್ಲಿಗೆ ಶ್ರೀ ಗಣೇಶ ಪುರಾಣ, ಉತ್ತರಖಂಡದಲ್ಲಿ ' ವಿಶ್ವರೂಪ ಪ್ರದರ್ಶನ'
ಎಂಬಲ್ಲಿಗೆ ತೊಂಭತ್ತುನಾಲ್ಕನೆಯ ಅಧ್ಯಾಯಾನುವಾದವು
ಮುಗಿದುದು.



|| ಶ್ರೀ ಗಣೇಶಾಯ ನಮಃ ||

## ಅಥ ಪಂಚನವತಿತಮೋಽಧ್ಯಾಯಃ

**ಕ ಉವಾಚ :—**

**ಷಷ್ಠೇ ವರ್ಷೇ ಪ್ರವೃತ್ತೇ ತು ಕ್ವಚಿದ್ಯಾತೋ ಬಹಿಃ ಶಿಶುಃ |**
**ಉಮಾಯಾ ಬಾಲಕೈಃ ಸಾರ್ಧಂ ಚಿಕ್ರೀಡಾನೇಕಧಾ ಪುನಃ ||೧||**

**ತಂ ದಿದೃಕ್ಷು[1]ರ್ವಿಶ್ವಕರ್ಮಾ ಯಯಾವಂತರ್ಗೃಹಂ ಪ್ರತಿ |**
**ಪಾರ್ವತೀ ಬಹಿರಾಗತ್ಯ ಮಾನಯಾಮಾಸ ತಂ ಬಹು ||೨||**

---

|| ಶ್ರೀ ಗಣೇಶಾಯ ನಮಃ ||

### ೯೫ ನೆಯ ಅಧ್ಯಾಯ.

ಬ್ರಹ್ಮ :—

ಗಣಪತಿಗೆ ಆರನೆಯ ವರ್ಷ ನಡೆಯಲಾರಂಭಿಸಿತು. ಗಣೇಶನು ತನ್ನ ಸಂಗಡಿಗರಾದ ಮುನಿಬಾಲಕರಿಂದೊಡಗೂಡಿ ತಾಯಿಯ ಎದುರಿಗೆ ಅನೇಕ ಬಗೆಯ ಆಟಗಳನ್ನು ಆಡುತ್ತ ಎಲ್ಲರನ್ನೂ ವಿಸ್ಮಯಗ್ರಸ್ತರನ್ನಾಗಿ ಮಾಡುತಲಿದ್ದನು. ಹೀಗಿರುವಾಗ ಒಂದು ದಿವಸ ಗಣಪತಿಯು ತನ್ನ ಜೊತೆಗಾರರನ್ನು ಕರೆದುಕೊಂಡು ಆಟಕ್ಕಾಗಿ ಹೊರಕ್ಕೆ ಎಲ್ಲಿಗೋ ಹೋದನು. ||೧||

ಆ ಸಮಯಕ್ಕೆ ಸರಿಯಾಗಿ ದೇವಬಡಗಿಯಾದ ವಿಶ್ವಕರ್ಮಪ್ರಜಾಪತಿಗೆ ಗಣಪತಿಯನ್ನು ಸಂದರ್ಶಿಸಬೇಕೆಂಬ ಉತ್ಕಟೇಚ್ಛೆ ಉಂಟಾಯಿತು. ಒಡನೆಯೇ ಹೊರಟು ಮಹಾದೇವಿಯ ಮನೆಯ ಒಳಭಾಗಕ್ಕೆ ಬಂದನು. ಅಕಸ್ಮಾತ್ತಾಗಿ ವಿಶ್ವಕರ್ಮನು ತನ್ನ ಮನೆಗೆ ಬಂದುದನ್ನು ಕಂಡ ಪಾರ್ವತೀದೇವಿಯು ಲಗು-ಬಗೆಯಿಂದ ಹೊರಕ್ಕೆ ಬಂದು ಅವನನ್ನು ಸ್ವಾಗತಿಸಿದಳು. ಮತ್ತು ಕ್ಷೇಮಸಮಾಚಾರವನ್ನು

---

ಈತನ ಪರಿಚಯವನ್ನು ಪರಿಶಿಷ್ಟದಿಂದ ತಿಳಿಯಬಹುದು.

[1] ಚಿತ್ರಾಸನೇ ಸಮಾವೇಶ್ಯ ಪೂಜಯಾಮಾಸ ಸಾದರಮ್ |
ಪ್ರಕ್ಷಾಲ್ಯ ಚರಣೌ ಪ್ರಾದಾದ್ಗಂಧ-ತಾಂಬೂಲಮೇವ ಚ ||೩||

ತತಸ್ತದಾದರಂ ದೃಷ್ಟ್ವಾ ವಿಶ್ವಕರ್ಮಾ ತುತೋಷ ಹ |
ತುಷ್ಟಾವ ಪರಯಾ ಭಕ್ತ್ಯಾ ಪ್ರಣಿಪತ್ಯ ಶಿವಾಂ ಮುದಾ ||೪||

ವಿಶ್ವಕರ್ಮೋವಾಚ :—

ನಮಾಮಿ ವಿಶ್ವೇಶ್ವರಿ, ವಿಶ್ವರೂಪೇ ! ಬ್ರಹ್ಮೇಂದ್ರರುದ್ರಾರ್ಯಮ
ವಿಷ್ಣುರೂಪೇ ! |

---

ವಿಚಾರಿಸಿ ಬಹಳವಾಗಿ ಆದರಿಸಿದಳು. ||೨||

ಗೃಹಸ್ಥಧರ್ಮವಾದ ಅತಿಥಿ ಸೇವೆಯಲ್ಲಿ ಅಗಜೆಯು ಅಗ್ರಗಣ್ಯಳಾದವಳು. ಆದುದರಿಂದ ವಿಶ್ವಕರ್ಮನನ್ನು ಚಿತ್ರಾಸನದಲ್ಲಿ ಕುಳ್ಳಿರಿಸಿ ಅವನ ಚರಣಗಳನ್ನು ತೊಳೆದಳು. ಗಂಧ, ಪುಷ್ಪ, ತಾಂಬೂಲ ಮೊದಲಾದ ಔಪಚಾರಿಕ ವಸ್ತುಗಳನ್ನಿತ್ತು ಬಹಳ ಆದರದಿಂದ ಅವನನ್ನು ಅರ್ಚಿಸಿದಳು. ||೩||

ದೇವಿ ಏನೋ ‘ ಅತಿಥಿಯೇ ಭಗವಂತ ’ ಎಂಬ ಅತ್ಯುಚ್ಚ ಭಾವನೆಯಿಂದ ಆರಾಧಿಸಿದಳು. ಆದರೆ, ದೇವತಾ ಗಣನೆಯಲ್ಲಿ ವಿಶ್ವಕರ್ಮನು ಎಷ್ಟೋ ಕಡಿಮೆ ಸ್ಥಾನದ ದೇವತೆ, ಹೀಗಿರುವಾಗ ಜಗನ್ಮಾತೆ, ಪರಮೇಶ್ವರಿಯು ತನ್ನನ್ನು ಈ ಬಗೆಯ ಸತ್ಕಾರಗಳಿಂದ ಪೂಜಿಸಿದುದನ್ನೂ, ಅವಳ ಸರಳತನವನ್ನೂ ಕಂಡು ಮಹಾತ್ಮರ ಸಾಮ್ಯ ಮನೋಭಾವನೆಗೆ ವಿಶ್ವಕರ್ಮನು ಬಹಳ ಮಟ್ಟಿಗೆ ಮೆಚ್ಚಿ ಸಂತೋಷಿಸಿದನು. ಅವನ ಹೃದಯದಲ್ಲಿ ದೇವಿಯ ವಿಷಯವಾಗಿ ಭಕ್ತಿರಸವು ಉಕ್ಕಿ ಹರಿಯಿತು. ದೇವಿಗೆ ನಮಸ್ಕರಿಸಿದನು. ಸಂತೋಷದಿಂದ ಈರೀತಿ ಅವಳನ್ನು ಸ್ತುತಿಸಲಾರಂಭಿಸಿದನು. ||೪||

ವಿಶ್ವಕರ್ಮಾ :—

ವಿಶ್ವಕ್ಕೆಲ್ಲ ಒಡೆಯಳೇ ಸಾಕ್ಷಾದ್ವಿಶ್ವಸ್ವರೂಪಿಣಿಯೇ, ! ನೀನು ಬ್ರಹ್ಮಾ, ಇಂದ್ರ, ರುದ್ರ, ಸೂರ್ಯ ಮತ್ತು ಮಹಾವಿಷ್ಣು ಮೊದಲಾದ ಜಗನ್ನಾಯಕರ

---

1 ವಿವರಣೆಗೆ ಪರಿಶಿಷ್ಟವನ್ನು ನೋಡತಕ್ಕದ್ದು.

ತ್ವಯಾ ತತಂ ವಿಶ್ವಮನಂತಶಕ್ತೇ! ಬ್ರಹ್ಮಾದಿದೇವೈರಭಿನಂದ್ಯ-
ರೂಪೇ! ॥೫॥

ತ್ವಮೇವ ವಿಶ್ವಂ ರಜಸಾ ವಿಧತ್ಸೇ, ಸತ್ತ್ವೇನ ಮಾತಃ! ಪರಿಪಾಸಿ ತಚ್ಚ।
ತ್ವಮೇವ ಸರ್ವಂ ತಮಸಾ ಚ ಹಂಸಿ, ತ್ರೈಗುಣ್ಯಮೇತತ್ತವ
ನಿತ್ಯರೂಪಮ್ ॥೬॥

ತ್ವಯಾ ಹತಾ ದೈತ್ಯಗಣಾ ವಿಮುಕ್ತಿಂ ಬ್ರಹ್ಮರ್ಷಯೋ ಜ್ಞಾನ ಬಲಾ-
ತ್ಪ್ರಪನ್ನಾಃ।

---

ಸ್ವರೂಪಳು. ನಿನ್ನಿಂ(ಮಾಯೆಯಿಂ)ದ ಇಡೀ ಈ ವಿಶ್ವವು ವ್ಯಾಪ್ತವಾಗಿ ಹೋಗಿದೆ. ನೀನು ವಿವಿಧ ಶಕ್ತಿಸಂಪನ್ನಳು. ಆದಿಮಾಯಾಸ್ವರೂಪಳಾದ ನಿನ್ನ ರೂಪವನ್ನು ಬ್ರಹ್ಮನೇ ಮೊದಲಾದ ಸಮಸ್ತ ದೇವೋತ್ತಮರೂ ಅಭಿನಂದಿಸುತ್ತಿರುವರು. ದೇವಿ! ನಿನಗೆ ವಂದಿಸುವೆನು. ॥೫॥

ತ್ರಿಗುಣಾತ್ಮಿಕೇ! ನಿನ್ನ ಗುಣಗಳಲ್ಲಿ ಒಂದಾದ ರಜಸ್ಸನ್ನು ಪ್ರಚುರಗೊಳಿಸಿ, ತನ್ಮೂಲಕ ಈ ಪ್ರಪಂಚವನ್ನು ಸೃಜಿಸುವೆ, ತಾಯೇ! ಸತ್ತ್ವಗುಣಪ್ರಧಾನಳಾಗಿ ಸೃಜಿಸಿದ ಈ ವಿಶ್ವವನ್ನು ನೀನೇ ಸಂರಕ್ಷಿಸುವೆ. ಪ್ರಾಣಿಗಳ ಪ್ರಾರಬ್ಧಕರ್ಮಾನುಭವ ಕಾಲ ಒಂದು ರೀತಿಯಿಂದ ಮುಗಿದುಬಂದಾಗ ನೀನು ತಾಮಸಗುಣದಿಂದ ಕೂಡಿದ ಮೂರ್ತಿಯಾಗಿ ಅವತರಿಸಿ, ಪ್ರಪಂಚವನ್ನೆಲ್ಲ ಧ್ವಂಸಗೊಳಿಸಿಬಿಡುವೆ. ತ್ರಿಗುಣಗಳ ಸಾಮ್ಯಾವಸ್ಥೆಯೇ ನಿನ್ನ ತಾತ್ತ್ವಿಕವಾದ ಸ್ವರೂಪವಾಗಿದೆ. ॥೬॥

ಜನರು ಯಾವ ರೀತಿಯಿಂದಲೇ ಆಗಲಿ, ನಿನ್ನನ್ನು ಆಶ್ರಯಿಸಿದರೆಂದರೆ ಮುಕ್ತಿಯನ್ನೇ ಹೊಂದುತ್ತಾರೆ. ಎಂದರೆ ತಾಯಿಯಾದವಳು ಮಕ್ಕಳು ದುಷ್ಟರಾಗಿರಲಿ ಅಥವಾ ಸಾಧುಗಳಾಗಿರಲಿ ಅವರವರ ಸ್ವಭಾವಗಳಿಗನುಸರಿಸಿ ಅವರನ್ನುಪೋಷಿಸುತ್ತ ಸನ್ಮಾರ್ಗಕ್ಕೆತರಲುಪ್ರಯತ್ನಿಸುವಂತೆ ದುಷ್ಟಮನೋವೃತ್ತಿಯವರಾದ ದೈತ್ಯ ವರ್ಗದವರನ್ನು ಕೊಂದು ಅವರನ್ನು ಮುಕ್ತಗೊಳಿಸುವೆ. ಅದರಂತೆ ಸಾಧು-ಸತ್ಪುರುಷರಾದ ಬ್ರಹ್ಮರ್ಷಿಗಳನ್ನು ಜ್ಞಾನಿಗಳನ್ನಾಗಿಮಾಡಿ ಮುಕ್ತಿಸಾಮ್ರಾಜ್ಯದಲ್ಲಿ ಅಭಿಷಿಕ

ತ್ವಮೇವ ವಿಷ್ಣೋರತುಲಾಸಿ ಶಕ್ತಿಸ್ಸರ್ವಸ್ಯ ಹೇತುಃ ಪರಮಾಸಿ
ಮಾಯಯಾ ||೭||

ಸತೋಽಸತೋ ಯಾಸಿ ಪರಾಸಿ ಶಕ್ತಿಶ್ಚರಾಚರಂ ತ್ವಂ ವಿದಧಾಸಿ
ವಿಶ್ವಮ್ ।
ಸಮ್ಮೋಹ್ಯ ಲೋಕಾನ್ ಸಕಲಾನ್ ಸುರೇಶಾನ್ ಕಾಷ್ಠಾಕಲಾಭಿಶ್ಚ ದದಾಸಿ
ಭೋಗಮ್ ||೮||

---

ರನ್ನಾಗಿ ಮಾಡುವೆ. ಪರಮ ಪುರುಷನಾದ ಶ್ರೀಮನ್ನಾರಾಯಣನ ಮನಶ್ಶಕ್ತಿಯೇ ನೀನಾಗಿರುವೆ. ಆದುದರಿಂದಲೇ ನಿನ್ನನ್ನು 'ನಾರಾಯಣೀ' ಎಂದು ತತ್ತ್ವಜ್ಞರು ಕರೆಯುವರು. ಸಕಲಕ್ಕೂ ಕಾರಣಳಾದವಳು ನೀನು. ಮೂಲಮಾಯೆ ಎಂದರೆ ನೀನಲ್ಲದೆ ಮತ್ತೆ ಬೇರೆ ಯಾರೂ ಇಲ್ಲ. ||೭||

ನೀನು ಸದಸದ್ರೂಪಳಾಗಿ ತೋರಿಬರತಕ್ಕವಳು. ಎಂದರೆ ಮುತ್ತಿನ ಚಿಪ್ಪು ಬೆಳ್ಳಿಯಂತೆ ತೋರುವುದೂ ನಿನ್ನ ಪ್ರಭಾವದಿಂದಲೇ. ಘಟಪಟಾದಿ ವ್ಯಾವಹಾರಿಕ ವಸ್ತುಗಳಾಗಿಯೂ ತೋರುವೆ. ಮನೋರೂಪವಾಗಿ ಮಾರ್ಪಟ್ಟು ನೀನು ನಿನ್ನಲ್ಲಿ ಪರಚೈತನ್ಯವನ್ನು ಪ್ರತಿಬಿಂಬಿಸುವಂತೆ ಮಾಡುವವಳೂ ನೀನಲ್ಲದೆ ಮತ್ತಾರಿದ್ದಾರೆ? ಚರಾಚರವಾದ ಈ ವಿಚಿತ್ರ ಪ್ರಪಂಚವನ್ನು ಒಂದು ಬಗೆಯಿಂದ ನೀನು ರೂಪಗೊಳಿಸುವೆ- ಪ್ರಾಣಿಗಳ ಪ್ರಾಕ್ಕರ್ಮಾನುಗುಣವಾಗಿ ಅವರ ಮೆದುಳಿನ ಮೇಲೆಲ್ಲ ನಿನ್ನ ಪ್ರಭಾವವನ್ನು ಬೀರಿ, ಅವನ್ನು ವ್ಯಾಮೋಹಗೊಳಿಸುವೆ. ಎಂದರೆ ಅವು ನಿನ್ನ ಪ್ರಭಾವಕ್ಕೆ ಒಳಪಟ್ಟು ವಸ್ತುತಃ ಯಾವುದು(ದೇಹೇಂದ್ರಿಯಾದ್ಯುಪಾಧಿಗಳು) ತನ್ನದಲ್ಲವೋ ,ಅದನ್ನು ತನ್ನದೆಂಬುದಾಗಿಯೂ (ಅವೇ ತಾನು ಎಂಬ ದೃಢ ನಿಶ್ಚಯದಿಂದಲೂ) ಯಾವ ಸಚ್ಚಿದಾನಂದ ಸ್ವರೂಪವಾದ ಆತ್ಮಚೈತನ್ಯವು ನಿಜವಾಗಿಯೂ ತಾನೋ,ಅದನ್ನು 'ತಾನಲ್ಲ' ಎಂಬುದಾಗಿಯೂ ತಿಳಿಯುವಷ್ಟು ಮುಗ್ಧವನ್ನಾಗಿ ಮಾಡುವೆ. ಬ್ರಹ್ಮಾದಿ ಸ್ತಂಬಪರ್ಯಂತವಾದ ಪ್ರತಿಯೊಂದು ಪ್ರಾಣಿಯೂ ನಿನ್ನ ಮಾಯಾ ಜಾಲಕ್ಕೆ ಒಳಪಟ್ಟುವೇ ಆಗಿವೆ. ಅವರವರ ಕರ್ಮಗಳಿಗನುಸರಿಸಿ, ಸುಖ-ದುಃಖಾತ್ಮಕ ಆಯಾ ವಿಶಿಷ್ಟಭೋಗಗಳನ್ನು ನೀನು ಅವರವರಿಗೆ

**ಯೇ ತ್ವಾಂ ಪ್ರಪನ್ನಾ ನ ಭಯಂ ತು ತೇಷಾಂ ಮೃತ್ಯೋಸ್ತಥಾ ದೈತ್ಯ-**
**ಕೃತಂ ಕದಾಚಿತ್ ।**
**ತ್ವಮೇವ ಲಕ್ಷ್ಮೀಃ ಸುಕೃತಾಮಲಕ್ಷ್ಮೀಃ ದುಷ್ಟಾತ್ಮನಾಂ ತ್ವಂ**
**ಪ್ರಮದಾಸ್ವರೂಪಾ ॥೯॥**

**ವಿದ್ಯಾಸ್ವರೂಪಾಸಿ ಜಗತ್ತ್ರಯೇ ತ್ವಂ ಪ್ರಭಾಸ್ವರೂಪಾ ಶಶಿ-ಸೂರ್ಯ-**
**ಯೋಸ್ತ್ವಮ್ ।**
**ಯ ಆಶ್ರಿತಾಸ್ತೇ ಜಗದಾಶ್ರಯಾಸ್ತೇ ವಿಪತ್ತಿಲೇಶೋ ನ ಚ ತೇಷು**
**ಮಾತಃ! ॥೧೦॥**

ಇಷ್ಟವಿರಲಿ ಅಥವಾ ಇಲ್ಲದಿರಲಿ ಆಯಾ ಕಾಲಕ್ಕೆ ಸರಿಯಾಗಿ ಒದಗಿಸುವೆ. ಅವನ್ನು ಆ ಪ್ರಾಣಿಗಳು ಉಪಭೋಗಿಸುವಾಗ 'ಬಹು ದೀರ್ಘಾನುಭವ' ಎಂದು ಭಾವಿಸಿದಾಗ್ಯೂ ನಿನ್ನ ದೃಷ್ಟಿಯಲ್ಲಿ ಒಂದು ಕಾಷ್ಠವೋ ಅಥವಾ ಕಲೆಯೋ ಅಷ್ಟು ಅಲ್ಪವಾದ ಕಾಲ ಎನಿಸಿಕೊಂಡಿದೆ. ॥೮॥

ನಿನ್ನನ್ನು ಭಕ್ತಿಯಿಂದ, ಯಾರೇ ಭಜಿಸಲಿ, ಅವರು ನಿಷ್ಕಲ್ಮಷರಾಗಿದ್ದರೆ ಸರಿ, ಅಂಥವರು ಯಾವ ದುರ್ದಶೆಗೂ ಸಿಲುಕಿ ನರಳುವುದಿಲ್ಲ. ಅವರಿಗೆ ಮೃತ್ಯುವಿನಿಂದಲಾಗಲೀ ಅಥವಾ ರಾಕ್ಷಸರಿಂದಲಾಗಲೀ ಯಾವ ವಿಧವಾದ ಭೀತಿಯೂ ಬರುವುದಿಲ್ಲ. ಸತ್ಕರ್ಮವಮಾಡಿ ಪುಣ್ಯಗಳಿಸಿದ ಭಾಗ್ಯಶಾಲಿಗಳಿಗೆ ನೀನು 'ಮಹಾಲಕ್ಷ್ಮಿ'ಯಾಗಿ ಒಲಿಯುವೆ. ಪಾಪಿಷ್ಠರಿಗೆ ಅದೇ ನೀನು 'ಜ್ಯೇಷ್ಠಾಲಕ್ಷ್ಮಿ'ಯಾಗಿ ಪರಿಣಮಿಸಿ ಅವರನ್ನು ಸರ್ವಾತ್ಮನಾ ತುಳಿದುಬಿಡುವೆ. ॥೯॥

ಮೂರು ಲೋಕಗಳಲ್ಲೂ ಒಂದಿಲ್ಲ ಒಂದು ರೀತಿಯಲ್ಲಿ ಹರಡಿರುವ ವಿದ್ಯೆಯು ನಿನ್ನ ಸ್ವರೂಪವಾಗಿದೆ, ಎಂದರೆ ವೇದ-ಶಾಸ್ತ್ರಗಳಾಗಲೀ ಕುಶಲ, ಕೈಗಾರಿಕೆಗಳಾಗಲೀ, ಲಲಿತಕಲೆಗಳಾಗಲೀ ಹಾಗೂಮಾಯಾ ಮಾಟಗಳಾಗಲೀ ಇವೆಲ್ಲವೂ ನಿನ್ನಸ್ವರೂಪವೇ ಆಗಿವೆ. ಚಂದ್ರ-ಸೂರ್ಯರಲ್ಲಿ ನೀನು ಪ್ರಭಾರೂಪದಿಂದ ಬೆಳಗುವೆ.

ತ್ವಮೇವ ವಿಶ್ವೇಶ್ವರಿ ! ವಿಶ್ವಮೇತದ್ಧರಸ್ಯಥಾಪ್ಯಾಯಸಿ ವಾರಿರೂಪಾ ।
ಅನಾದಿಮಧ್ಯಾನಿಧನಾಪ್ಯಗಮ್ಯಾ ಹರೀಶ,ಲೋಕೇಶ,ಸುರೇ–
ಶ್ವರಾಣಾಮ್ ॥೧೧॥

ತೇಽನುಗ್ರಹಾತ್ತ್ವಾಂ ಪ್ರಭಜಂತಿ ಭಕ್ತಾ ಆನಂದರೂಪಾ ನಿವಸಂತಿ
ನಾಕೇ ।
ಅಭಕ್ತಕಾಮಾನ್ವಿನಿಹಂಸಿ ರುಷ್ಟಾ ತ್ವಾಮೇವ ಮಾತಃ! ಶರಣಂ ಪ್ರಪನ್ನಃ
॥೧೨॥

ನಿನ್ನೊಬ್ಬಳನ್ನು ಆಶ್ರಯಿಸಿದನೆಂದರೆ, ಅಂಥವನು ಇಡೀ ಜಗತ್ತನ್ನೇ ಸ್ವಾಧೀನ ಪಡಿಸಿ ಕೊಂಡಂತಾಗುವುದು. ತಾಯೇ ! ಅಂಥವನಿಗೆ ವಿಪತ್ತಿನ ಲವವು ಸಹ ಅಂಟುವುದಿಲ್ಲ. ॥೧೦॥

ವಿಶ್ವೇಶ್ವರಿ ! ನೀನು ಭೂಮಿಯ ರೂಪವನ್ನು ಧರಿಸಿ ಈ ಪ್ರಪಂಚಕ್ಕೆಲ್ಲ ಆಧಾರವಾಗಿ ನಿಂದಿರುವೆ. ಅದೇ ನೀನು ಜಲರೂಪಳಾಗಿ ಪ್ರವಹಿಸಿ, ಪ್ರಪಂಚವನ್ನು ರಸಭರಿತವನ್ನಾಗಿ ಮಾಡುವೆ. ನೀನು ಆದಿ, ಮಧ್ಯಾನ್ತ ರಹಿತಳಾದವಳು. ನಿನ್ನ ಸ್ವರೂಪವನ್ನು ತತ್ತ್ವತಃ ತಿಳಿಯಲಿಕ್ಕೆ ಸುರೇಶ್ವರರೆನಿಸಿದ ಹರಿ, ಹರ, ಬ್ರಹ್ಮೇಂ–ದ್ರಾದಿಗಳಿಗೂ ಸಹ ಸರ್ವಾತ್ಮನಾ ಸಾಧ್ಯವಿಲ್ಲ. ॥೧೧॥

ನಿನ್ನ ಮೂಲರೂಪವನ್ನು ತಿಳಿದು ತತ್ತ್ವತಃ ಸ್ತುತಿಗೈಯ್ಯಲಿಕ್ಕೂ ನಿನ್ನ ಅನುಗ್ರಹವೇ ಆವಶ್ಯಕ. ಆದ್ದರಿಂದಲೇ ಪರಮೈಕಾಂತ ಭಕ್ತರು ಮಾತ್ರ ನಿನ್ನನ್ನು ಸರ್ವದಾ ಸ್ತುತಿಸುತ್ತಿರುವರು. ನಿನ್ನ ಕೃಪಾವಿಶೇಷದಿಂದ ಅವರು ದೇಹಾವಸಾನವಾದ ನಂತರ ಸ್ವರ್ಗಕ್ಕೇರಿ ನಿರತಿಶಯಾನಂದವನ್ನು ಸರ್ವದಾ ಅನುಭವಿಸುತ್ತ ಯಾರ ಆತಂಕವೂ ಇಲ್ಲದೇ, ಇಂದಿಗೂ ವಿರಾಜಮಾನರಾಗಿದ್ದಾರೆ. ಮುಂದೆ ಸಹ ಹೀಗೆಯೇ ಇರುವರು. ನಿನ್ನ ವಿಷಯದಲ್ಲಿ ಯಾರು ಅನಾದರ-ಅವಿಶ್ವಾಸಗಳನ್ನು ತೋರಿಸಿ, ಭಕ್ತರಾದ ಇತರರನ್ನೂ ಅಡ್ಡದಾರಿಗೆಳೆಯುತ್ತ ಕಾಲವನ್ನು ಕಳೆಯುತ್ತಿರುವರೋ, ಅಂಥವರ ವಿಷಯದಲ್ಲಿ ನೀನು ಬಹಳ ರುಷ್ಟಳಾಗುವೆ. ಮತ್ತು ಅವರು

**ಧನ್ಯೇ ಮನ್ಯೇತೇ ನಯನೇಽಥ ವಿದ್ಯಾ ಜನುಶ್ಚ ಮಾತಾ-ಪಿತೃವಂಶ ಏವ ।**
**ಕುಲಂ ಚ ಧನ್ಯಂ ಚರಣೌ ತ್ವದೀಯೌ ದೃಷ್ಟ್ವಾ ಯತಸ್ತೇ ಜಗದಂಬಿಕೇ! ಮಯಾ ॥೧೩॥**

**ಕ ಉವಾಚ: —**

**ಏವಂ ಸ್ತುತಾ ಜಗನ್ಮಾತಾ ವರಮಸ್ಮೈ ನ್ಯವೇದಯತ್ ।**
**ಸ ವವ್ರೇ ಪರಮಾಂ ಭಕ್ತಿಂ ಸಾ 'ತಥೇ'ತಿ ತಮಬ್ರವೀತ್ ॥೧೪॥**

ಸುಖಜೀವನಕ್ಕಾಗಿ ಮಾಡುತ್ತಿರುವ ಪ್ರಯತ್ನಗಳನ್ನೆಲ್ಲ ವಿಫಲಗೊಳಿಸಿ ಹಿಂಸಿಸುವೆ. ತಾಯೇ! ಇಂತಹ ಪರಾಶಕ್ತಿಯಾದ ನಿನ್ನನ್ನು ನಾನು ಶರಣು ಬಂದಿದ್ದೇನೆ. ॥೧೨॥

ಜನನಿ ! ಭುವನ ಮನೋಹರವೂ, ದೇವೋತ್ತಮರಿಗೆ ಸಹ ಅಗಮ್ಯವೂ ಆದ ನಿನ್ನ ಈ ಸಾಕಾರಮೂರ್ತಿಯನ್ನು ನಾನು ನನ್ನ ಚರ್ಮಚಕ್ಷುಗಳಿಂದ ಇಂದು ನೋಡುವಂತಾಗಿದ್ದೇನೆ. ನನ್ನ ಕಣ್ಣುಗಳು ಇಂದು ಸಾರ್ಥಕವಾದವು. ನಾನು ಕಲಿತ ವಿದ್ಯೆ ಸಾಧಿಷ್ಠವಾಯಿತು. ನನಗೆ ಜನ್ಮವನ್ನಿತ್ತ ಮಾತಾ-ಪಿತೃಗಳು, ನಮ್ಮ ವಂಶ, ಇಷ್ಟೇ ಏಕೆ ? ಇಡೀ ನನ್ನ ಕುಲ ಧನ್ಯವಾಗಿ ಹೋಯಿತು. ಜಗದಂಬಿಕೆ ! ನಿನ್ನ ಚರಣಕಮಲಗಳ ದರ್ಶನವು ಭಾಗ್ಯಹೀನನಾದವನಿಗೆ ಸರ್ವಥಾ ದೊರೆಯುವುದಿಲ್ಲ. ॥೧೩॥

ಬ್ರಹ್ಮ :—

ವಿಶ್ವಕರ್ಮನು ಪರವಶನಾಗಿ ಮಹಾದೇವಿಯನ್ನು ಈ ಪರಿಯಿಂದ ಸ್ತುತಿಸುತ್ತಿರಲು ಹೃಷ್ಟಾಂತರಂಗಳಾದ ದೇವಿಯು 'ವರವನ್ನು ಬೇಡು, ಕೊಡುವೆನು' ಎಂದು ವಾತ್ಸಲ್ಯದಿಂದ ಸೂಚಿಸಿದಳು. ವಿಶ್ವಕರ್ಮನು ದೇವತೆಗಳಲ್ಲಿ ಗಣ್ಯನಾದವನು. ಅಮೃತರಸದ ಸವಿಯನ್ನು ಆಸ್ವಾದಿಸಿದವನು. ನಿತ್ಯಾನಿತ್ಯ ವಸ್ತುಗಳನ್ನು ನಿಷ್ಕೃಷ್ಟವಾಗಿ ವಿವೇಚಿಸಬಲ್ಲವನು. ಎಂದ ಮೇಲೆ ಇಂಥವನು ಪ್ರಾಪಂಚಿಕ ಕಾಮನೆಗಳನ್ನು

ಇದಂ ಸ್ತೋತ್ರಂ ಪಠೇದ್ಯಸ್ತು ಸರ್ವಾನ್ ಕಾಮಾನ್ ಲಭೇಚ್ಚ ಸಃ ।
ಸರ್ವತ್ರ ವಿಜಯಂ ಪುಷ್ಟಿಂ ವಿದ್ಯಾಮಾಯುಃ ಸುಖಂ ಶಿವಮ್ ॥೧೫॥

ಶಿವೋವಾಚ :—

ವಿಶ್ವಕರ್ಮನ್ ! ಮಹಾಬುದ್ಧೇ, ಜ್ಞಾನವಾನಸಿ ಸರ್ವತಃ ।
ಯಚ್ಚಶ್ರುತಂ ಶಿವವಾಕ್ಯೇನ ದೃಷ್ಟಂ ತತ್ಸಕಲಂ ತ್ವಯಿ ॥೧೬॥

---

ವರವಾಗಿ ಬೇಡಿಯಾನೇ ? ' ಏಕಾಗ್ರವಾದ ಭಕ್ತಿಯು ನಿನ್ನಲ್ಲಿ ನೆಲೆಗೊಳ್ಳುವಂತೆ ನನ್ನನ್ನು ಅನುಗ್ರಹಿಸು ' ಎಂದೇ ವರವನ್ನು ಯಾಚಿಸಿದನು. ದೇವಿಗೆ ಅವನ ನಿಷ್ಕಲ್ಮಷ ಹೃದಯವನ್ನು ಕಂಡು ಬಹಳ ಹರ್ಷವಾಯಿತು. ' ಹಾಗೆಯೇ ಆಗುವುದು ' ಎಂದು ಮಾರು ನುಡಿದಳು. ॥೧೪।

ವಿಶ್ವಕರ್ಮನು ರಚಿಸಿ,ಪಠಿಸಿದ ಪರಮಪಾವನವಾದ ಈ ಸ್ತೋತ್ರವನ್ನು ಯಾರು ಭಕ್ತಿ-ಶ್ರದ್ಧೆಗಳಿಂದ ಅನುದಿನವೂ ಪಠಿಸುವರೋ, ಅವರು ಸಕಲ ಕಾಮಿತಗಳನ್ನೂ ಪಡೆಯುವರು. ಅವರು ಎಂತಹ ಕಠಿಣವಾದ ಕೆಲಸಕ್ಕೇ ಕೈ ಹಾಕಲಿ, ಅವರಿಗೆ ಅದರಲ್ಲಿ ವಿಜಯ ದೊರೆಯುವುದು. ಅವರ ಮನೆಯು ಸಕಲ ಭೋಗ್ಯ ವಸ್ತುಗಳಿಂದಲೂ ಸರ್ವದಾ ತುಂಬಿರುವುದು. ಅಂತಹ ಪುಣ್ಯಶಾಲಿಯಾದವನ ವಂಶಜರೂ ವಿದ್ಯಾವಂತರಾಗಿ ಬಾಳುವರು. ಯಾರೂ ಅಲ್ಪಾಯುಷಿಗಳಾಗುವುದಿಲ್ಲ. ಎಲ್ಲರೂ ಸುಖವನ್ನು ಅನುಭವಿಸುವರು. ಅವರ ಗೃಹಗಳಲ್ಲಿ ಸದಾ ಮಂಗಳ ಕಾರ್ಯ ನಡೆಯುತ್ತಲೇ ಇರುವುದು. ಅನಂತರ ಪಾರ್ವತಿಯು ವಿಶ್ವಕರ್ಮನನ್ನು ಕುರಿತು ಹೀಗೆಂದಳು. ॥೧೫॥

ಪಾರ್ವತೀ :—

ವಿಶ್ವಕರ್ಮನ್, ನೀನು ಮಹಾ ಮತಿವಂತನು. ವಸ್ತುಗಳ ಸಾರಾಸಾರ ವಿವೇಚನೆಯು ನಿನ್ನಲ್ಲಿ ನೆಲೆಗೊಂಡಿದೆ. ನಿನ್ನ ಈ ಸದ್ಗುಣಗಳನ್ನು ಕುರಿತು ನನ್ನ ಪತಿದೇವ, ಪರಶಿವನು ಆಗಾಗ್ಗೆ ನನ್ನೆದುರು ಹೇಳುತ್ತಲೇ ಇದ್ದನು. ಅವೆಲ್ಲವನ್ನೂ ಇಂದು ನಾನು ನಿನ್ನಲ್ಲಿ ಕಂಡೆನು. ಬಹಳ ಹರ್ಷವಾಯಿತು. ॥೧೬॥

ಸಿಂಧುನಾ ಪೀಡಿತಾ ದೇವಾಃ ಸರ್ವೇ ಕಾರಾಗೃಹೇ ಸ್ಥಿತಾಃ ।
ಶಿವಶ್ಚಾತ್ರ ಸಮಾಯಾತಃ ಕೈಲಾಸೇ ತು ಗೃತೇ ಸತಿ ॥೧೭॥

ದಂಡಕಾರಣ್ಯದೇಶೇಽತ್ರ ಕೋಽಪ್ಯಾಪ್ತೋ ನ ಹಿ ದೃಶ್ಯತೇ ।
ತ್ವಂ ತು ಸಮ್ಯಕ್ಸಮಾಯಾತೋ ಬಹುಕಾಲೇನ ದರ್ಶನಮ್ ॥೧೮॥

ವಿಶ್ವಕರ್ಮೋವಾಚ :—

ಕಿಮಾಶ್ಚರ್ಯಂ ಜಗನ್ಮಾತಃ ! ಬಾಲೋ ಮಾತರಮಾವ್ರಜೇತ್ ? ।

---

ವಿಶ್ವಕರ್ಮ ! ಕಾಲಪರಿಸ್ಥಿತಿಯು ಎಷ್ಟು ಬದಲಿಸಿ ವಿಕೋಪಗೊಂಡಿದೆ ನೋಡು? ದೇವತೆಗಳೆಂದರೇನು ಸಾಮಾನ್ಯರಾದವರೇ ? ಈ ಸಿಂಧುದೈತ್ಯನು ಅಂಥವರನ್ನೆಲ್ಲ ಸದೆಬಡಿದು ಬಂಧನದಲ್ಲಿರಿಸಿ ಬಿಟ್ಟಿದ್ದಾನಲ್ಲ ? ಅದು ಹೇಗೇ ಇರಲಿ, ದೇವೋತ್ತಮನೆನಿಸಿದ ಪರಶಿವನು ಸಹ ಕೈಲಾಸಗಿರಿಯನ್ನು ಬಿಟ್ಟು ಈ ಗೊಂಡಾರಣ್ಯದಲ್ಲಿ ಬಂದು ನೆಲೆಸುವಂತಾಗಬಹುದೇ? ಏನೋ, ದಿಕ್ಕಿಲ್ಲದವರಾದರೆ, ವಿಧಿ ಇಲ್ಲದೇ ಕಾಡಿಗೆ ಬರಲೇಬೇಕು. ತ್ರಿಭುವನಾಧೀಶ್ವರನಿಗೆ ತನ್ನ ಮನೆಯಲ್ಲಿ ವಾಸಿಸಲಿಕ್ಕೆ ಅವಕಾಶವಿಲ್ಲವೆಂದರೆ ಇದೆಂತಹ ವಿಷಮ ಕಾಲ ? ॥೧೭॥

ಹೋಗಲಿ, ಇಲ್ಲಿಗೆ ಬಂದ ಮೇಲಾದರೂ ಮನಸ್ಸಿಗೆ ನೆಮ್ಮದಿ ಇದೆ ಎಂದು ಭಾವಿಸಿದ್ದೀಯಾ ? ಅದೂ ಇಲ್ಲ. ಇಲ್ಲಿರುವ ಗಿಡ ಮರಗಳೇ ನನ್ನ ಒಡನಾಡಿಗಳು. ಅವೂ ಸಹ ಒಮ್ಮೊಮ್ಮೆ ರಾಕ್ಷಸರಾಗಿಬಿಡುವುವು. ಆಪ್ತರಾದವರಾರೂ ಇಲ್ಲವೇ ಇಲ್ಲದಂತಾಗಿದೆ. ಯಾರೆದುರು ನನ್ನ ಕಷ್ಟಗಳನ್ನು ಮನಬಿಚ್ಚಿ ಹೇಳಿಕೊಳ್ಳಲಿ ? ದೈವಯೋಗದಿಂದ ನಿನ್ನಂತಹ ಪರಮಾಪ್ತನು ಇಂದು ಇಲ್ಲಿಗೆ ಬಂದಿರುವೆ. ಬಹಳ ಒಳ್ಳೆಯದಾಯಿತು. ‘ ನಮ್ಮವರು ’ ಎಂಬುವವರನ್ನು ಕಂಡು ಎಷ್ಟೋ ಯುಗಗಳು ಕಳೆದುಹೋದವು. ॥೧೮॥

ವಿಶ್ವಕರ್ಮ :—

ಏನು ತಾಯೇ ! ಹೀಗೆ ಮಾತನಾಡುವೆ. ಮಕ್ಕಳು ತಾಯಿಯ ಬಳಿಗೆ

ದ್ರಷ್ಟುಂ ದೇವಂ ಮಹಾಭಕ್ತೋ ವಿದ್ಯಾಕಾಮೋ ಗುರುಂ ಶಿವೇ !
||೧೯||

ಪುತ್ರಸ್ಯ ತೇ ಶ್ರುತೋ ಮಾತರ್ಮಹಿಮಾ ಪರಮಾದ್ಭುತಃ |
ತಮಹಂ ದ್ರಷ್ಟುಮಾಯಾತೋ ಯುವಯೋರ್ದರ್ಶನೋತ್ಸುಕಃ
||೨೦||

ಗೌರ್ಯುವಾಚ :—

ಏವಂ ತಯೋಸ್ತು ವದತೋಃಗತೋಽಸೌ ವಿನಾಯಕಃ |
ಅಸಂಖ್ಯಶಶಿಸಂಕಾಶೋ ರಜಸಾರುಣವಿಗ್ರಹಃ ||೨೧||

---

ಬಾರವೆ ಮತ್ತೆಲ್ಲಿಗೆ ಹೋದಾರು? ಅವರಿಗೆ ಎಲ್ಲಿಗೆ ಹೋದರೆ ತಾನೆ ಸುಖ-ಶಾಂತಿಗಳು ದೊರೆತಾವು ? ಜಗನ್ಮಾತೇ ! ನನಗಂತೂ ಜಗನ್ಮಾತಾಪಿತೃಗಳಾದ ನಿಮ್ಮಿಬ್ಬರನ್ನೂ ನೋಡಬೇಕೆಂದರೆ, ಬಹಳ ಕುತೂಹಲ. ನಿಮ್ಮ ವಿಷಯದಲ್ಲಿ ನನಗಿರುವ ಭಕ್ತಿಯನ್ನು ನಾನಾಗಿಯೇ ವರ್ಣಿಸಿಕೊಳ್ಳಲಾರೆ. ವಿದ್ಯೆ ದೊರೆಯಬೇಕೆಂದು ಆತುರಗೊಂಡವನು ಸದ್ಗುರುವನ್ನು ಅರೆಸಿ ಬರುವಂತೆ, ಜಗಜ್ಜನನೀ-ಜನಕರಾದ ನಿಮ್ಮನ್ನು ಸಂದರ್ಶಿಸಲಿಕ್ಕಾಗಿ ಓಡಿ ಬಂದಿರುವೆನು. ||೧೯||

ಅಮ್ಮ ! ನಿನ್ನ ಸುಕುಮಾರ ಗಣಪತಿಯ ಮಹಿಮೆಯು ಎಲ್ಲೆಲ್ಲೂ ಹರಡಿ ಹೋಗಿರುವುದು. ಅದನ್ನು ನಾನೂ ಕಿವಿಯಾರ ಕೇಳಿರುವೆನು. ಅವನು ಪರಮಾದ್ಭುತ ಕಾರ್ಯಗಳನ್ನು ಮಾಡುತ್ತಿರುವನಂತಲ್ಲ ! ನಿಜವೇ ತಾಯಿ ? ನಿಮ್ಮಿಬ್ಬರ ದರ್ಶನೋತ್ಸುಕಿಯಾದ ನಾನು ಗಣಪತಿಯನ್ನೂ ನೋಡುವಂತಾಗುವುದೆಂದು ಇದ್ದಕ್ಕಿದ್ದಂತೆಯೇ ಹೊರಟು ಬಂದಿರುವೆನು. ||೨೦||

ಬ್ರಹ್ಮಾ :—

ಪರಮೇಶ್ವರಿ, ವಿಶ್ವಕರ್ಮಾ ಇವರಿಬ್ಬರೂ ಪರಸ್ಪರ ಯೋಗಕ್ಷೇಮವನ್ನು ಕುರಿತು ಹೀಗೆ ಮಾತನಾಡುತ್ತಿರುವಷ್ಟರಲ್ಲಿ ಹುಡುಗರೊಡನೆ ಆಟಕ್ಕಾಗಿ ಹೊರಕ್ಕೆ

ಪ್ರಸನ್ನವದನೋ ಬಾಲಸಮೂಹಪರಿವಾರಿತಃ ।
ತನ್ಮಧ್ಯೇ ಶೋಭತೇ ಸ್ಮಾಸೌ ಮರುನ್ಮಧ್ಯೇ ಯಥಾ ಹರಿಃ ॥೨೨॥

ತಂ ದೃಷ್ಟ್ವಾ ಪ್ರಣಿಪತ್ಯಾಸೌ ಕೃತಾಂಜಲಿಪುಟಃ ಸ್ಥಿತಃ ।
ತುಷ್ಟಾವ ಪರಮಾತ್ಮಾನಂ ಜ್ಞಾತ್ವಾ ತಂ ಗಿರಿಜಾಸುತಮ್ ॥೨೩॥

---

ಹೋಗಿದ್ದ ಹೇರಂಬನು ಇವರಿದ್ದೆಡೆಗೆ ಬಂದನು. ಗಣಪತಿಯ ದೇಹದ ಕಾಂತಿ ಆಗ ಹೇಗೆ ಕಂಡಿತು, ಬಲ್ಲೆಯ ವ್ಯಾಸ! ಅಸಂಖ್ಯಾತರಾದ ಚಂದ್ರರು ಒಮ್ಮೆಲೇ ಉದಿಸಿದರೆ ಎಂತಹ ನಯನಾಹ್ಲಾದಕರಕಾಂತಿ ಬೀಳಬಹುದು ನೋಡು, ಹಾಗಿದ್ದಿತು, ದೇವನ ದೇಹದ ಕಾಂತಿ. ಮುನಿಬಾಲಕರೊಡನೆ ಧೂಳಿನಲ್ಲಿ ಮನಸ್ವೀ ಆಟವಾಡಿ ಗಣಪತಿಯು ಬಂದಿದ್ದನಾದುದರಿಂದ ಮೈಗೆಲ್ಲ ಮಣ್ಣು ಮೆತ್ತಿಕೊಂಡಿದ್ದಿತು. ಇದರಿಂದ ಕೆಮ್ಮಣ್ಣಿನ ವಿಗ್ರಹವೋ ಎಂಬಂತೆ ಕಾಣುತ್ತಲಿದ್ದನು. ॥೨೧॥

ಪ್ರಸನ್ನಗಂಭೀರವಾಗಿದ್ದಿತು, ಗಣಪತಿಯ ಮುಖಕಮಲ. ಒಳಕ್ಕೆ ಬರುವಾಗಲೂ ಇವನ ಸಂಗಡಿಗರು 'ಬಸವನ ಹಿಂದೆ ಬಾಲ' ಎಂಬಂತೆ ಸಂಗಡಲೇ ಬಂದಿದ್ದರು. ಇವರ ನಡುವೆ ಮಾಟವಾಗಿ ನಿಂದಿದ್ದ ದೇವ; ಗಣಪತಿಯು ಪಾರ್ವತೀ,ವಿಶ್ವಕರ್ಮರಿಗೆ ಹೇಗೆ ಕಂಡ ಗೊತ್ತೇ? ವ್ಯಾಸ! ದೇವತೆಗಳಿಂದ ಪರಿವೃತನಾದ ಪರಮ ಪುರುಷ: ಶ್ರೀಮನ್ನಾರಾಯಣನು ನಿಂದಿದ್ದಂತೆ ತೋರಿಬಂದಿತು. ॥೨೨॥

ಗಣಪತಿಯು ಒಳಕ್ಕೆ ಬಂದುದನ್ನು ಕಂಡು ವಿಶ್ವಕರ್ಮನು ಗಡಿಬಿಡಿಸಿ ಎದ್ದು ನಿಂತನು. ಸಾಷ್ಟಾಂಗವೆರಗಿದನು. ಕೈಗಳನ್ನು ಜೋಡಿಸಿಕೊಂಡು ಬಹಳ ವಿನಯದಿಂದ ಬಾಗಿ ದೂರಸರಿದು, ಒಂದೆಡೆ ನಿಂತನು. ಅವನ ಹೃದಯದಲ್ಲಿ ಭಕ್ತಿಯ ಬುಗ್ಗೆಯು ಉಕ್ಕಿ ಹರಿಯಿತು. 'ಗಿರಿಜಾತನಯನಾಗಿ ನನಗೆ ಕಂಡುಬರುತ್ತಿರುವ ಈ ವಸ್ತು ಸಾಕ್ಷಾತ್ಪರಮಾತ್ಮನೇ ಸರಿ' ಎಂಬುದು ಅವನಿಗೆ ಮನದಟ್ಟಾಗಿ ಹೋಯಿತು. ಆಗ ಅವನು ಪರವಶನಾಗಿಹೋಗಿ ಹೀಗೆಂದು ಅವನನ್ನು ಸ್ತುತಿಸಲಾರಂಭಿಸಿದನು. ॥೨೩॥

ವಿಶ್ವಕರ್ಮೋವಾಚ: —

**ನಮಾಮಿ ಪರಮಾತ್ಮಾನಂ ಸಚ್ಚಿದಾನಂದವಿಗ್ರಹಮ್ ।**
**ಚರಾಚರಗುರುಂ ಸರ್ವಕಾರಣಾನಾಂ ಚ ಕಾರಣಮ್ ॥೨೪॥**

**ಗುಣೇಶಂ ಚ ಗುಣಾತೀತಂ ಸೃಷ್ಟಿ-ಸ್ಥಿತ್ಯಂತಕಾರಿಣಮ್ ।**
**ಸರ್ವವ್ಯಾಪಿನಮೀಶಾನಂ ವ್ಯಕ್ತಾವ್ಯಕ್ತಸ್ವರೂಪಿಣಮ್ ॥೨೫॥**

**ಅಗಮ್ಯಂ ಸರ್ವದೇವಾನಾಂ ಮುನಿಹೃತ್ಪದ್ಮವಾಸಿನಮ್ ।**
**ಸಿದ್ಧಿ-ಬುದ್ಧಿಪತಿಂ ನಾನಾಭಕ್ತಸಿದ್ಧಿಪ್ರದಂ ವಿಭುಮ್ ॥೨೬॥**

ವಿಶ್ವಕರ್ಮ :—

ಪರಮೇಶ್ವರ ! ನೀನು ಸಚ್ಚಿದಾನಂದವಿಗ್ರಹನು. ಚರಾಚರವೆನಿಸಿದ ಸಕಲ ಪ್ರಪಂಚಕ್ಕೂ ಪ್ರಚೋದಕನಾದ ಪರಮ ಗುರುವಾಗಿರುವೆ. ಕಾರಣಗಳೆನಿಸಿದ ಎಲ್ಲ ಕಾರಣ ವಸ್ತುಗಳಿಗೂ ನೀನು ಪರಮ ಮೂಲಕಾರಣನಾಗಿರುವೆ. ಇದೋ, ನಿನ್ನ ಈ ಚರಣ ಕಮಲಗಳಿಗೆ ಅತ್ಯಲ್ಪನಾದ ನಾನು ನಮಸ್ಕರಿಸುವೆನು. ॥೨೪॥

ನೀನು ಸತ್ತ್ವ-ರಜಸ್ತಮೋಗುಣಗಳನ್ನು ವಿಭಜಿಸಿದವನು. ಆದುದರಿಂದಲೇ ಗುಣಗಳ ಆಡಳಿತಕ್ಕೆ ನೀನು ಸಿಲುಕಿದವನಲ್ಲ. ಸೃಷ್ಟಿ, ಸ್ಥಿತಿ ಹಾಗೂ ನಾಶಗಳನ್ನು ನೀನು ಮಾಡತಕ್ಕವನು. ನೀನು ನಿರಾಕಾರನಾದುದರಿಂದ ಸರ್ವತ್ರ ವ್ಯಾಪಿಸಿರುವೆ. ಎಲ್ಲಕ್ಕೂ ಅಂತರ್ಯಾಮಿಯಾದುದರಿಂದ ಎಲ್ಲವನ್ನೂ ನಿಯಮನಗೊಳಿಸುವೆ. ವ್ಯಕ್ತ (ಕಾರ್ಯ) ಸ್ವರೂಪನಾಗಿರುವವನೂ ನೀನೇ, ಇದರಂತೆ ಅವ್ಯಕ್ತ (ಕಾರಣ) ಸ್ವರೂಪನಾಗಿಯೂ ಇರುವೆ. ಇಂತಹ ನಿನಗೆ ವಂದನೆಗಳು. ॥೨೫॥

ದೇವತೆಗಳೆನಿಸುವ ಜನಾಂಗದವರು ಅತೀಂದ್ರಿಯವಸ್ತುಗಳನ್ನು ತಿಳಿಯಬಲ್ಲವರಾದರೂ ನಿನ್ನನ್ನುಮಟ್ಟಿಗೆ ಅರಿಯಲಾರರು. ಏಕಾಗ್ರನಿಷ್ಠೆಯಿಂದ ತಪಸ್ಸನ್ನಾಚರಿಸುವ

ಅಭಕ್ತಕಾಮದಹನಂ ಸಹಸ್ರರವಿಸನ್ನಿಭಮ್ ।
ಅನೇಕಶಕ್ತಿಸಂಯುಕ್ತಂ ದೈತ್ಯ-ದಾನವಮರ್ದನಮ್ ॥೨೭॥

ಅನಾದಿಮವ್ಯಯಂ ಶಾಂತಂ ಜರಾ-ಮರಣವರ್ಜಿತಮ್ ।
ತ್ರಿ-ತನುಂ ಚ ತ್ರಯೀಮೂಲಂ ಬ್ರಹ್ಮ-ವಿಷ್ಣು-ಶಿವಾತ್ಮಕಮ್ ॥೨೮॥

ಮುನಿವರ್ಯರ ಹೃದಯಾಂತರ್ಗುಹೆಯಲ್ಲಿ ನೀನು ಸರ್ವದಾ ವಾಸಿಸತಕ್ಕವನು. ಸಿದ್ಧಿ-ಬುದ್ಧ್ಯಭಿಮಾನಿ ಬ್ರಹ್ಮಮಾನಸಪುತ್ರಿಯರನ್ನು ಧರ್ಮಪತ್ನಿಯರನ್ನಾಗಿ ಪರಿಗ್ರಹಿಸಿದವನು. ನೀನು ವಿಭುವಾ (ಸರ್ವವ್ಯಾಪಿಯಾ) ದುದರಿಂದ ಜಗತೀತಲಾಂತರ್ಗತ ಸಕಲ ಭಕ್ತರ ಮನೋಽಭಿಲಷಿತಗಳನ್ನೆಲ್ಲ ತಿಳಿದು, ಅವು ಅವರಿಗೆ ಲಭಿಸುವಂತೆ ಅನುಗ್ರಹಿಸತಕ್ಕ ದಾತನು. ॥೨೬॥

ಭಕ್ತರಲ್ಲದವರ ಮನೋಗತಗಳು ಈಡೇರದಂತೆ ನೀನು ತಡೆ ಮಾಡತಕ್ಕವನು. ಸಾಸಿರಾರು ರವಿಬಿಂಬಗಳು ಒಮ್ಮೆಲೆ ಉದಿಸಿದರೆ ಉಂಟಾಗುವಂತಹ ಪ್ರಭೆಯುಳ್ಳವನು. ಲೆಖ್ಖಕ್ಕೆ ಸಿಕ್ಕದಷ್ಟು ಶಕ್ತಿ(ಆಯುಧ, ತದಭಿಮಾನಿ ದೇವತೆ)ಗಳನ್ನು ಸ್ವಾಧೀನಪಡಿಸಿಕೊಂಡು ಸರ್ವದಾ ಅವನ್ನು ಸಂಗಡಲೇ ಇಟ್ಟುಕೊಂಡವನು. ದೈತ್ಯ, ದಾನವರ ಕುಲವನ್ನೆಲ್ಲ ಸಂಪೂರ್ಣವಾಗಿ ವಿಮರ್ದಿಸತಕ್ಕವನು. ॥೨೭॥

ನಿನಗೆ ಆದಿ ಇರುವುದಿಲ್ಲ. ಇದರಂತೆ ಅಂತ್ಯವೂ ಇರುವುದಿಲ್ಲ. ನೀನು ಎಂದೆಂದಿಗೂ ಉದ್ವೇಗಗೊಂಡವನಲ್ಲ. ಮುಪ್ಪು-ಸಾವುಗಳೆಂಬ ವಿಕಾರಗಳ ಭಯ ನಿನಗಿರುವುದಿಲ್ಲ. ಸತ್ತ್ವ, ರಜಸ್ತಮೋಗುಣಗುಂಫಿತವಾದ ಒಂದೇ ದೇಹದಲ್ಲಿ 'ದತ್ತಾತ್ರೇಯ' ರೂಪದಿಂದ ತೋರಿಬರುವೆ. ಅನಾದಿ ಜ್ಞಾನಭಂಡಾರವಾದ ವೇದರಾಶಿಗೂ ನೀನು ಮೂಲನಾಗಿರುವೆ. (ಈ ಪದಕ್ಕೆ 'ವೇದವೇದ್ಯ' ಎಂಬುದಾಗಿಯೂ ಅರ್ಥವನ್ನು ಹೇಳಬಹುದಾಗಿದೆ.) ಬ್ರಹ್ಮಾ, ವಿಷ್ಣು ಮತ್ತು ಶಿವ ಈ ರೀತಿ ತ್ರಿಮೂರ್ತಿಗಳ ವ್ಯಷ್ಟಿರೂಪದಿಂದಲೂ ನೀನು ಆವಿರ್ಭವಿಸಬಲ್ಲವನಾಗಿರುವೆ. ಪರೇಶ! ನಿನ್ನನ್ನು ವಂದಿಸುವೆನು. ॥೨೮॥

**ಕ ಉವಾಚ :—**

**ಏವಂ ಸ್ತುತಿಂ ಸಮಾಕರ್ಣ್ಯ ಸಂತುಷ್ಟಃ ಸ ಗುಣೇಶ್ವರಃ ।**
**ಸ್ವಾಸನೇ ತಮುಪಾವಿಶ್ಯ ಪೂಜಯಾಮಾಸ ಸಾದರಮ್ ॥೨೯॥**

**ಪ್ರಕ್ಷಾಲ್ಯ ಚರಣೌ ಗಂಧಮಕ್ಷತಾನ್ ಪುಷ್ಪಮೇವ ಚ ।**
**ಧೂಪಂ ದೀಪಂ ಚ ನೈವೇದ್ಯಂ ನಿವೇದ್ಯ ತಮಥಾಬ್ರವೀತ್ ॥೩೦॥**

**ಗುಣೇಶ ಉವಾಚ :—**

**ವಿಶ್ವಕರ್ಮನ್ನಾಗತೋಽಸಿ ಮಮ ದರ್ಶನಕಾಂಕ್ಷಯಾ ।**
**ಕಿಮಾನೀತಂ ಮಮ ಮುದೇಹ್ಯುಪಾಯನಮನುತ್ತಮಮ್ ॥೩೧॥**

ಬ್ರಹ್ಮಾ :—

ವಿಶ್ವಕರ್ಮನು ಮಃಪೂರ್ವಕವಾಗಿ ಈ ರೀತಿ ಸ್ತುತಿಸಿದುದನ್ನು ಕೇಳಿ ಗಣಪತಿಯು ಹೃಷ್ಟನಾದನು. ಇದುವರೆಗೂ ವಿಶ್ವಕರ್ಮನು ಎದ್ದು ನಿಂತೇ ಸ್ತುತಿಸುತ್ತಿದ್ದನು. ಆಗ ಗಣಪತಿಯು ಅವನನ್ನು ಆಸನದಲ್ಲಿ ಕುಳ್ಳಿರಿಸಿ ಅತ್ಯಾದರದಿಂದ ಅರ್ಚಿಸಿದನು. ॥೨೯॥

ವಿಶ್ವಕರ್ಮನ ಚರಣಗಳನ್ನು ಚಿನ್ನದ ಹರಿವಾಣದಲ್ಲಿರಿಸಿ ಶುದ್ಧೋದಕದಿಂದ ತೊಳೆದನು. ಗಂಧ, ಅಕ್ಷತೆ, ಪುಷ್ಪ ಇವನ್ನೂ ಪೂಜಿಸಿದನು. ಸುಗಂಧ ಧೂಪ ಏಕಾರ್ತಿಕ್ಯ ದೀಪ, ವಿವಿಧ ಪಕ್ವಾನ್ನಗಳ ನಿವೇದನ, ಫಲ-ತಾಂಬೂಲ ಇತ್ಯಾದಿಗಳಿಂದ ಸತ್ಕರಿಸಿದ ಬಳಿಕ ಅವನನ್ನು ಕುರಿತು ಹೀಗೆಂದು ನುಡಿದನು. ॥೩೦॥

ಗಣೇಶ:—

ಮಹಾಮಹಿಮನಾದ ವಿಶ್ವಕರ್ಮನ್ ! ನೀನು ನನ್ನನ್ನು ಸಂದರ್ಶಿಸಬೇಕೆಂಬ ಅಭಿಲಾಷೆಯಿಂದಷ್ಟೇ ಇಲ್ಲಿಯವರೆಗೂ ಬಂದವನು. ಬರುವಾಗ ನನ್ನ ಸಂತೋಷ

ವಿಶ್ವಕರ್ಮೋವಾಚ :—

ನಿಜಸ್ವಾನಂದಪೂರ್ಣಾನಾಂ ಪರಮಾಂಭಾವಿಧಾಯಿನಾಮ್ ।
ನಿಃಸ್ಪೃಹಾಣಾಂ ಸರ್ವಕೃತಾಂ ಸರ್ವಶಕ್ತಿಮತಾಮಪಿ ॥೩೨॥

ಸಮಲೋಷ್ಟಾಶ್ಮ-ಹೇಮ್ನಾಂ ಚ ಕಲ್ಪವೃಕ್ಷಾಧರೀಕೃತಾಮ್ ।
ಕರ್ತುಮಕರ್ತುಂ ಶಕ್ತಾನಾಮನ್ಯಥಾಕರ್ತುಮೇವ ಚ ॥೩೩॥

ಸ್ವಾಧೀನಾನಾಂ ಚ ತುಷ್ಟಾನಾಂ ಸ್ವ-ಸತ್ತಾವರ್ತಿನಾಮಪಿ ।
ಪರಾಧೀನೈರಶಕ್ತೈಶ್ಚಾಕಿಂಚನೈರ್ಮರ್ತ್ಯಧರ್ಮಭಿಃ ॥೩೪॥

ಕ್ಕಾಗಿ ಯಾವುದಾದರೂ ಅಪೂರ್ವ ವಸ್ತುವನ್ನು ತಂದಿರುವೆಯ ? ಹೇಳು. ಮತ್ತು ಅದನ್ನು ನನಗೆ ಕಾಣಿಕೆಯಾಗಿ ಈಗಲೇ ಕೊಡು. ॥೩೧॥

ವಿಶ್ವಕರ್ಮ :—

ಭಗವನ್ ! ನನ್ನೊಡನೆ ವಿನೋದಮಾಡುವಿರಾ ? ನೀವು ಪರಿಪೂರ್ಣಾನಂದ ಸ್ವರೂಪರು. ಆನಂದದಾಯಕ ವಸ್ತುಗಳನ್ನು ಇತರರಿಗೆ ಅನುಗ್ರಹಿಸತಕ್ಕವರು. ಸಮಸ್ತ ಆಶೆಗಳನ್ನೂ ಸರ್ವಾತ್ಮನಾ ತೊರೆದವರು. ಯಾವುದನ್ನು ಬೇಕಾದರೂ ಮಾಡಬಲ್ಲವರು. ಸಕಲ ವಿಧ ಶಕ್ತಿಸಂಪನ್ನರು. ॥೩೨॥

ಕಲ್ಲು, ರತ್ನ ಮತ್ತು ಸುವರ್ಣಗಳೆನ್ನೆಲ್ಲ ಒಂದೇ ದೃಷ್ಟಿಯಿಂದ ನೋಡತಕ್ಕಂತಹ ಸಮಭಾವನೆಯುಳ್ಳವರು. ಪ್ರಾಣಿಗಳ ಸಕಲ ಇಷ್ಟಾರ್ಥಗಳನ್ನೂ ಕ್ಷಣಮಾತ್ರದಲ್ಲೇ ಒದಗಿಸಿಕೊಡಬಲ್ಲ 'ಕಲ್ಪವೃಕ್ಷ'ವನ್ನೂ ಮೀರಿಸಿದ ಉದಾರಿಗಳು ಕರ್ತುಮಕರ್ತುಮನ್ಯಥಾ ವಾ ಕರ್ತುಂ ಶಕ್ತರಾದವರು. ॥೩೩॥

ನೀವು ಯಾವುದೊಂದಕ್ಕೂ ಅಧೀನರಾದವರಲ್ಲ. ಸರ್ವದಾ ತೃಪ್ತರಾದವರು. ಆತ್ಮಚೈತನ್ಯದಿಂದಲೇ ಎಲ್ಲವನ್ನೂ ಬೆಳಗತಕ್ಕವರು. ಆದುದರಿಂದಲೇ, ನಿಮ್ಮನ್ನು ವೇದವಾಣಿಯು 'ನ ತತ್ರ ಸೂರ್ಯೋ ಭಾತಿ ನ ಚಂದ್ರ-ತಾರಕಂ,

**ಕಿಂ ದೇಯಂ ಪರಿತೋಷಾಯ ಸ್ವ-ಶಕ್ತ್ಯಾ ಕಿಂಚಿದಾಹೃತಮ್ ।**

**ಕ ಉವಾಚ :—**

**ಏವಮುಕ್ತ್ವಾ ವಿಶ್ವಕರ್ಮಾಸ್ಥಾಪಯತ್ಪುರತಃ ಸೃಣಿಮ್ ॥೩೫॥**

ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ ॥ ತಮೇವ ಭಾಂತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ' ಎಂದರೆ ತೇಜೋಧಾತುಗಳೆನಿಸಿದ ಸೂರ್ಯ-ಚಂದ್ರವುರಾಗಲೀ, ನಕ್ಷತ್ರ-ವಿದ್ಯುಲ್ಲತೆಗಳಾಗಲೀ ಪರಮಾತ್ಮನನ್ನು ಬೆಳಗಲಾರವು. ಎಂದ ಬಳಿಕ ಲೌಕಿಕವಾಗಿ ಕಾಣ್ಬರುವ ಈ ಅಗ್ನಿಯು ಆತನನ್ನು ಬೆಳಗಬಲ್ಲನೇ? ಕಬ್ಬಿಣಕ್ಕೆ ಸ್ವತಃ ಸುಡುವ ಸಾಮರ್ಥ್ಯವಿಲ್ಲವಾದರೂ ಬೆಂಕಿಯ ಸಂಪರ್ಕದಿಂದ ಅದು ಕಾದು ಕೆಂಡದಂತೆಯೇ ಆಗಿ ಮುಟ್ಟುವವರನ್ನು ಹೇಗೆ ಸುಡುವುದೋ, ಅವರಂತೆ ಸ್ವಯಂ ಸುಡಲು ಹಾಗೂ ಪ್ರಕಾಶಿಸಲು ಅಸಮರ್ಥಗಳಾದ ಈ ತೇಜೋಧಾತುಗಳು ಭಗವನ್! ನಿಮ್ಮ ಹಿನ್ನೆಲೆಯನ್ನನುಸರಿಸಿಯೇ ಬೆಳಗುವುವು.' ಎಂದು ನಿಮ್ಮ ತೇಜೋಮಹಿಮೆಯನ್ನು ಸಾರಿ ಸಾರಿ ವರ್ಣಿಸುತ್ತಲಿದೆ. ನಾವೋ ನಿಮ್ಮ ಬಲದಿಂದ ಉಸಿರಾಡತಕ್ಕವರು, ನಿಮ್ಮ ಬೆಳಕಿನಲ್ಲಿ ಓಡಿಯಾಡತಕ್ಕವರು' ನಿಮ್ಮ ವೈಭವದಿಂದಲೇ ಮೆರೆಯುತಕ್ಕವರು, ನಮ್ಮದೆಂಬ ವಸ್ತುವೇ ಇಲ್ಲದವರು. ಮತ್ತು ನಾವು ಮರ್ತ್ಯರಂತೆ ಜನನ-ಮರಣಗಳ ಸಿಲುಕಿಗೆ ಸಿಕ್ಕುವರು. ॥೩೪॥

ಪರಮೇಶ್ವರ ! ಇಂತಹ ಕ್ಷುದ್ರನಾದ ನಾನು ತಮಗೆ ಯಾವ ವಸ್ತುವನ್ನು ಅರ್ಪಿಸಿ ಸಂತೋಷಪಡಿಸಿಯೇನು ? ಹೇಳಲಿಕ್ಕೆ ನನಗೆ ಬಹಳ ಸಂಕೋಚವೆನಿಸುತ್ತಿದೆ, ನನಗೆ ಶಕ್ತಿ ಇದ್ದಷ್ಟನ್ನು ನಾನು ತಮಗೆ ಒಪ್ಪಿಸಲು ತಂದಿದ್ದೇನೆ.

ಬ್ರಹ್ಮಾ :—

ಹೀಗೆ ನುಡಿದು ವಿಶ್ವಕರ್ಮನು ದೇವರದೇವನಿಗೆ ಸಮರ್ಪಿಸಬೇಕೆಂದು ತಂದಿದ್ದ ಸೃಣಿಯ [ಅಂಕುಶವ] ನ್ನು ಬಹಳ ವಿನಯ-ಸಂಕೋಚಗಳಿಂದ ದೇವನೆದುರಿಗೆ ಇರಿಸಿದನು. ॥೩೫॥

ಪದ್ಮಂ ಚ ಪರಶುಂ ಪಾಶಂ ಸಹಸ್ರಾದಿತ್ಯಸನ್ನಿಭಮ್ ।
ಸರ್ವಶತ್ರುಹರಂ ತೀಕ್ಷ್ಣಂ ದಧಾರ ಸ ಗುಣೇಶ್ವರಃ ॥೩೬॥

ಉವಾಚ ವಿಶ್ವಕರ್ಮಾಣಂ

ಗಣೇಶ ಉವಾಚ :—

ಕುತ ಏತಾನಿ ? ವಿಶ್ವಕೃತ್ ! ।
ಆನೀತಾನಿ ಮಮ ಪ್ರೀತ್ಯೈ ತದ್ವದಸ್ವಾಧುನಾನಘ ! ॥೩೭॥

---

ಅದರೊಡನೆ ಪಾಶ, ಪದ್ಮ, ಪರಶುಗಳೂ ಇದ್ದವು. ಆ ಆಯುಧಗಳು ಸಹಸ್ರಾರು ಸೂರ್ಯರಂತೆ ಫಳ ಫಳ ಹೊಳೆಯುತ್ತಲಿದ್ದವು. ಎಷ್ಟು ಜನ ಶತ್ರುಗಳು ಒಮ್ಮೆಲೇ ಬೇಕಾದರೂ ಬರಲಿ, ಅವರನ್ನು ಕ್ಷಣಮಾತ್ರದಲ್ಲಿ ತುಂಡರಿಸಿ ಚೆಲ್ಲುವಂತಿದ್ದವು. ಅವನ್ನು ನೋಡಿ ಗಣಪತಿಯು ಸಂತೋಷದಿಂದ ತನ್ನ ಕೈಗಳಲ್ಲಿ ಧರಿಸಿದನು. ॥೩೬॥

ಆ ಆಯುಧಗಳನ್ನು ನೋಡಿ ನೋಡಿದಂತೆಲ್ಲ ದೇವನ ಉತ್ಸಾಹವು ಶತಗುಣಿತವಾಗಲಾರಂಭಿಸಿತು. ಆಗ ಇದರ ಬಗ್ಗೆ ವಿಶೇಷಾಂಶವನ್ನು ಅರಿಯಬೇಕೆಂಬ ಅಭಿಲಾಷೆಯುಂಟಾಗಲು, ವಿಶ್ವಕರ್ಮನನ್ನು ಕುರಿತು ದೇವನು ಹೀಗೆಂದು ನುಡಿದನು.

ದೇವ :—

ವಿಶ್ವಕರ್ಮ ! ಈ ಆಯುಧಗಳನ್ನು ನೀನು ಎಲ್ಲಿಂದ ಸಂಗ್ರಹಿಸಿ ತಂದೆ ? ಇದನ್ನು ತಿಳಿಯಬೇಕೆಂದು ನಾನು ಅತಿಯಾಗಿ ಕುತೂಹಲಿಯಾಗಿದ್ದೇನೆ. ಪುಣ್ಯಶಾಲಿಯೇ ! ಈಗಲೇ ನನಗೆ ಆ ಸಂಗತಿಯನ್ನು ವಿವರಿಸಿ ಹೇಳು. ॥೩೭॥

ವಿಶ್ವಕರ್ಮೋವಾಚ :—

'ಸಂಜ್ಞಾ' ನಾಮೇತಿ ನಾಮ್ನಾ ಮೇ ಕನ್ಯಾ ಚಾರುಸ್ವರೂಪಿಣೀ
ಲಜ್ಜಿತೋ ಯನ್ಮುಖಂ ವೀಕ್ಷ್ಯ ಸಹಸಾ ಶಶಲಾಂಛನಃ ॥೩೬॥

ರಮಾ [1]ಶಚೀ ಚ [2]ಸಾವಿತ್ರೀ ಶಾರದಾ[3]ರುಂಧತೀ [4]ರತಿಃ!
ತ್ರಿಲೋಕ್ಯಾಂ ನ ಸಮಾ ಕಾಪಿ ಪರಂ ಯಸ್ಯಾ ಗುಣೇಶ್ವರ! ॥೩೯॥

ಸಾ ಮಯಾ ರಮಯೇ ದತ್ತಾ ತ್ರಿವೇದಾಯ ತ್ರಿ-ರೂಪಿಣೇ ।

ವಿಶ್ವಕರ್ಮ :—

ದೇವರ ದೇವ ! ತಮಗೆ ತಿಳಿಯದಂತಹ ಸಂಗತಿ ಯಾವುದಿದೆ ? ಹೇಳೋ ಣವಾಗಲಿ, ನನ್ನ ಬಾಯಿಯಿಂದಲೇ ಇದನ್ನು ಹೇಳಿಸಬೇಕೆಂಬ ಇಚ್ಛೆ ತಮಗಿದ್ದರೆ, ಅವಶ್ಯವಾಗಿ ವಿವರಿಸುವೆನು. ನನಗೊಬ್ಬ ಮಗಳಿದ್ದಾಳೆ. 'ಸಂಜ್ಞೆ' ಎಂದು ಅವಳ ಹೆಸರು. ನಮ್ಮ ಮಕ್ಕಳನ್ನು ನಾವೇ ವರ್ಣಿಸಿಕೊಳ್ಳಬಾರದಾದರೂ, ತಮ್ಮ ಅಪ್ಪಣೆಯನ್ನು ಪಡೆದು ವಾಸ್ತವ ಸಂಗತಿಯನ್ನು ಅರುಹುವೆನು. ಸಂಜ್ಞೆಯು ಬಹಳ ಸುಂದರ ರೂಪವುಳ್ಳವಳು. ಇವಳ ಮುಖಸೌಂದರ್ಯವನ್ನು ನೋಡಿ ಅಮೃತ ಕಿರಣನಾದ ತಾರಾನಾಥನೂ ನಾಚಿ ಹೋಗಿದ್ದಾನೆ. ॥೩೮॥

ಭಗವನ್, ಗುಣೇಶ್ವರ ! ಪರಮಸುಂದರಿಯರೂ, ಶೀಲ ಸ್ವಭಾವ ಉಳ್ಳವರೂ ಎನಿಸಿದ, ಮಹಾಲಕ್ಷ್ಮೀ, ಇಂದ್ರಾಣಿ (ಶಚೀದೇವಿ) ಸಾವಿತ್ರೀ, ಸಾಕ್ಷಾತ್ಸರಸ್ವತೀ, ವಸಿಷ್ಠಪತ್ನಿಯಾದ ಅರುಂಧತೀದೇವಿ, ಹಾಗೂ ಮದನನ ರಾಣಿಯಾದ ರತೀದೇವಿ ಇವರ ಪೈಕಿ ಯಾರೂ ಸೌಂದರ್ಯದಲ್ಲಿ ಸಂಜ್ಞೆಯನ್ನು ಮೀರಿಸಿದವರಲ್ಲ. ಇವಳಿಗೆ ಸರಿಯಾದ ರೂಪ, ಗುಣ, ಶೀಲ ಉಳ್ಳ ಸ್ತ್ರೀಯರು ಗುಣೇಶ್ವರ ! ತ್ರಿಭುವನದಲ್ಲೇ ಯಾರೂ ಇರುವುದಿಲ್ಲ. ಅಂತಹ ಪರಮಸುಂದರಿಯಾದವಳು ನನ್ನ ಮಗಳು. ॥೩೯॥

ಋಗ್ಯಜುಸ್ಸಾಮಸ್ವರೂಪನೂ, ಬ್ರಹ್ಮ, ವಿಷ್ಣು-ಶಿವಾತ್ಮಕನೂ ಆದ ಸೂರ್ಯ-

---

[1-4] ವಿವರಣೆಗೆ ಪರಿಶಿಷ್ಟವನ್ನು ನೋಡತಕ್ಕದ್ದು.

ಆಗತೇಷು ತ್ರಿಲೋಕೇಷು ಸಾಂಗೋಪಾಂಗೇಷು ಸರ್ವಶಃ ||೪೦||

ಮಹೋತ್ಸವೋ ಮಹಾನಾಸೀದ್ದಿನಾಷ್ಟಕಮಹರ್ನಿಶಮ್ |
ಯಾಂ ದೃಷ್ಟ್ವಾ ಸ್ಖಲಿತಾ ದೇವಾ ಲಜ್ಜಯಾಧೋಮುಖಾ ಗತಾಃ ||೪೧||

ಸವಿತಾ ತಾಮಥಾದಾಯ ಯಯೌ ಸ್ವ-ಸ್ಥಾನಮುತ್ತಮಮ್ |
ತೇಜಸಾ ತಸ್ಯ ತಪ್ತಾ ಮೇ ಕನ್ಯಕಾ ಕೃಶತಾಮಗಾತ್ ||೪೨||

---

ನಾರಾಯಣನಿಗೆ ನನ್ನ ಮಗಳು, ಸಂಜ್ಞೆಯನ್ನು ಪತ್ನಿಯನ್ನಾಗಿ ಕೊಟ್ಟೆ. ಇದಕ್ಕೆ ಒಂದು ಸನ್ನಿವೇಶವೂ ಒದಗಿತು. ದೇವ ? ಒಮ್ಮೆ ಇಂದ್ರಾದಿ ಸಮಸ್ತ ದೇವತೆಗಳು ತಮ್ಮ ತಮ್ಮ ಪರಿವಾರದೊಂದಿಗೆ ಬಂದು ಸೇರಿದ್ದರು. ||೪೦||

ಆಗ ಒಂದು ಮಹೋತ್ಸವ ನಡೆಯುತ್ತಲಿದ್ದಿತು. ಆ ಉತ್ಸವವು ಎಂಟು ದಿವಸಗಳ ವರೆಗೂ ಹಗಲು, ರಾತ್ರಿ ಎನ್ನದೇ ಅಖಂಡವಾಗಿ ನಡೆಯಿತು, ಆ ಸಮಯದಲ್ಲಿ ನಾನೂ ಸಹ ನನ್ನ ಪರಿವಾರದೊಂದಿಗೆ ಆ ಉತ್ಸವದಲ್ಲಿ ಭಾಗಿಯಾಗಿದ್ದೆನು. ಉತ್ಸವದಲ್ಲಿ ಭಾಗವಹಿಸಿದ ಸ್ತ್ರೀ-ಪುರುಷರ ದೃಷ್ಟಿ ಎಲ್ಲ ನನ್ನ ಮಗಳ ಮೇಲೆಯೇ ಊರಿತು. ಅನೇಕ ಪುರುಷರಿಗೆ ಅವಳನ್ನು ಕಂಡೊಡನೆಯೇ ಕಾಮೋದ್ರೇಕ ಉಂಟಾಗಿ, ಇಂದ್ರಿಯ ಸ್ಖಲನವಾಯಿತು. ಅಂಥವರು ನಾಚಿಕೆಯಿಂದ ತಲೆ ತಗ್ಗಿಸಿಕೊಂಡು ಅಲ್ಲಿ ನಿಲ್ಲಲಾರದೇ ತಮ್ಮ ನಾಡಿಗೆ ತಾವು ಹೊರಟು ಹೋದರು. ||೪೧||

ಆಗ ಸೂರ್ಯನಾರಾಯಣನು ಧೈರ್ಯದಿಂದ ಮುಂದಕ್ಕೆ ಬಂದನು. ನನ್ನ ಮಗಳ ಕರಕಮಲವನ್ನು ಹಿಡಿದನು. ನನ್ನ ಹಾಗೂ ಎಲ್ಲರ ಅನುಮತಿಯಂತೆ ಅವಳನ್ನು ಪತ್ನಿಯನ್ನಾಗಿ ಸ್ವೀಕರಿಸಿದನು. ಆರಬ್ಧವಾದ ಮಹೋತ್ಸವವು ಸಾಂಗೋಪಾಂಗವಾಗಿ ನೆರವೇರಿದ ಬಳಿಕ ನೂತನ ಪತ್ನಿಯಾದ ಸಂಜ್ಞೆ, ತನ್ನ ಇತರ ಪರಿವಾರದೊಂದಿಗೆ ಉತ್ತಮವಾದ ತನ್ನ ಸ್ಥಾನಕ್ಕೆ ತೆರಳಿದನು. ನನ್ನ ಮಗಳು ಮಲ್ಲಿಗೆಯ ಹೂವಿನಂತೆ ಸು-ಕೋಮಲ ಶರೀರವುಳ್ಳವಳು ಎಂದು ಮೊದಲೇ ತಿಳಿಸಿದ್ದೇನೆ ಪ್ರಭೋ! ಇಂಥವಳು ತೇಜೋಮೂರ್ತಿಯಾದ ಸೂರ್ಯನಾರಾಯಣನ ಪ್ರಖರ ಕರಗಳ ತಾಪವನ್ನು ಹೇಗೆ ಸಹಿಸಿಯಾಳು ? ಅತ್ಯಲ್ಪ ಕಾಲದಲ್ಲೇ ಅವಳ ದೇಹ

**ಸಾ ತತೋ ನಿರ್ಗಮೋ ಛಾಯಾಂ ಸಂಜ್ಞಾ ತು ಸ್ವ-ಪ್ರಭಾವತಃ ।**
**ಸರ್ವಂ ತಸ್ಯೈ ನಿವೇದ್ಯೈವ ಸದ್ಮೋ ಮಮ ಗೃಹಂ ಗತಾ　　॥೪೩॥**

**ಗತೇ ಕಿಯತಿ ಕಾಲೇ ಸಾ ಛಾಯಾ ಜ್ಞಾತಾ ತು ಭಾನುನಾ ।**
**'ನೇಯಂ ಸಂಜ್ಞೇ'ತಿ ಸ ಪ್ರಾಯಾದ್ಗೃಹಂ ಸದ್ಮೋ ಮಮಾರ್ಯಮಾ**
**॥೪೪॥**

---

ವೆಲ್ಲ ಔಷ್ಣ್ಯದಿಂದ ತಪ್ತವಾಯಿತು, ಬಾಡಿಹೋದಳು. ದಿನ-ದಿನಕ್ಕೂ, ನಿಮಿಷ-ನಿಮಿಷಕ್ಕೂ ಕೃಶಳಾಗತೊಡಗಿದಳು. ॥೪೨॥

ಆಗ ಸಹನಾತೀತವಾದ ಈ ತಾಪವನ್ನು ಅವಳಿಂದ ತಡೆಯುವುದಕ್ಕಾಗಲಿಲ್ಲ. ಅವಳೂ ವ್ರತ-ನಿಯಮೋಪವಾಸಗಳನ್ನು ಬಹಳ ಕಠಿಣವಾಗಿ ಆಚರಿಸಿ ಪ್ರಭಾವವನ್ನು ಗಳಿಸಿದವಳು. ಆದುದರಿಂದ ತನ್ನಂತೆಯೇ ಇರುವ ಛಾಯಾ ಸ್ತ್ರೀಯೊಬ್ಬಳನ್ನು ತನ್ನ ಮಂತ್ರಶಕ್ತಿಯ ಮೂಲಕ ನಿರ್ಮಿಸಿದಳು. ಅವಳಿಗೆ ಸೂರ್ಯನ ಶಕ್ತಿ-ಸಾಮರ್ಥ್ಯಗಳನ್ನು ತಡೆದುಕೊಳ್ಳುವಂತಹ ಅರ್ಹತೆಯನ್ನು ಅನುಗ್ರಹಿಸಿಕೊಟ್ಟಳು. ಪತಿಯ ಸ್ವಭಾವ, ಅವನೊಡನೆ ತಾನು ಇದುವರೆಗೂ ಇದ್ದಂತೆ ಇರಬೇಕಾದ ರೀತಿ-ನೀತಿ ಇವೆಲ್ಲವನ್ನೂ ಉಪದೇಶಿಸಿದಳು. 'ಇವಳು ಛಾಯೆ' ಎಂಬ ಕಲ್ಪನೆಯು ಸಹ ಸೂರ್ಯನಿಗೆ ಬರದಂತೆ ವರ್ತಿಸಬೇಕೆಂದು ಆಜ್ಞಾಪಿಸಿ, ತತ್ಕ್ಷಣವೇ ತಾನು ಅಲ್ಲಿಂದ ಹೊರಟು ನನ್ನ ಮನೆಗೆ ಬಂದು ಸೇರಿಕೊಂಡಳು. ॥೪೩॥

ಹೀಗೆಯೇ ಕೆಲವು ಕಾಲ ಕಳೆದು ಹೋಯಿತು. ಪ್ರಪಂಚದ ಎಲ್ಲ ಆಗು-ಹೋಗುಗಳಿಗೂ ಹೊಣೆಯಾದ ಹರ್ಯಶ್ವ(ಸೂರ್ಯ)ನು ತನ್ನ ದೈನಂದಿನ ಕೆಲಸಗಳ ಗಡಿಬಿಡಿಯಲ್ಲಿ ಸಂಜ್ಞೆಯು ಹೊರಟು ಹೋಗಿ ತತ್ಸ್ಥಾನದಲ್ಲಿ ಅವಳ ಛಾಯಾ ಸ್ತ್ರೀಯು ಮಾತ್ರ ಉಳಿದಿರುವುದು ಭಾಸವಾಗಲಿಲ್ಲ. ಅಕಸ್ಮಾತ್ ಒಂದು ದಿವಸ ಭೋಗ ಕಾಲದಲ್ಲಿ ಸಂಶಯ ಉಂಟಾಗಲು ಸೂಕ್ಷ್ಮದೃಷ್ಟಿಯಿಂದೊಮ್ಮೆ ಇವಳನ್ನು ನೋಡಿ 'ಇವಳು ಸಂಜ್ಞಾ ದೇವಿಯಲ್ಲ' ಎಂಬುದನ್ನು ಅರಿತು ಬಿಟ್ಟನು.

ತತೋ ಭೀತಾ ಪುನಃ ಸಂಜ್ಞಾ ಮಾಮುವಾಚ

ಸಂಜ್ಞೋವಾಚ : –

ನ ಮಾಂ ಪಿತಃ ! ।

ನಿವೇದಯ ರವೇರ್ಹಸ್ತೇ ತೇಜೋಽಹಂ ನ ಕ್ಷಮೋಽಸ್ಯ ಹ ॥೪೫॥

ವಿಶ್ವಕರ್ಮೋವಾಚ —:

ತತಃ ಪಿತ್ರಾ ಧಿಕ್ಕೃತಾ ಸಾ ಬಹಿರೇವ ಯಯೌ ಕಿಲ ।
ಅಶ್ವಿನೀರೂಪಮಾಸ್ಥಾಯ ಗುಪ್ತರೂಪಾ ವನೇಽವಸತ್ ॥೪೬॥

'ಸಂಜ್ಞೆ ಏನಾಗಿದ್ದಾಳು?' ಎಂಬ ಅಂಶವನ್ನು ಮನಃಪ್ರಣಿಧಾನದ ಮೂಲಕ ಕಂಡು ಹಿಡಿದನು. ಒಡನೆಯೇ ಹೆಂಡತಿಯನ್ನರಸಿಕೊಂಡು ನನ್ನ ಮನೆಗೆ ಬಂದು ಬಿಟ್ಟನು. ॥೪೪॥

ಅರ್ಯಮನು ಬಂದುದನ್ನರಿತು ಸಂಜ್ಞೆಯು ಸಂಜ್ಞಾಹೀನಳಾಗುವಷ್ಟು ಸಂತ್ರಸ್ತಳಾದಳು. ಆಗ ನನ್ನ ಬಳಿಗೆ ಓಡಿಬಂದು ನನ್ನನ್ನು ಹೀಗೆಂದು ಬೇಡಿಕೊಂಡಳು.

ಸಂಜ್ಞೆ :—

ತಂದೆಯೇ ! ನಾನು ಇಲ್ಲಿರುವ ಸಂಗತಿಯನ್ನು ರವಿರಾಯನಿಗೆ ಅರುಹಬೇಡ. ನಾನು ಅವನ ಪ್ರಖರ ತೇಜಸ್ಸನ್ನು ಸ್ವಲ್ಪವೂ ಸಹಿಸಲಾರದವಳಾಗಿರುವೆನು. ನನ್ನ ಸ್ಥಿತಿಯನ್ನು ನೀನೇ ನೋಡು. ಮತ್ತು ಈ ಸಮಯದಲ್ಲಿ ನನ್ನನ್ನು ಕಾಪಾಡು. ॥೪೫॥

ವಿಶ್ವಕರ್ಮ :—

ಎಂದೇನೋ ಅಂಗಲಾಚಿಯೇ ಬೇಡಿದಳು. ಆಗ ನನಗೆ ವಾಸ್ತವಾಂಶ ಅರಿವಾಗಲಿಲ್ಲ. ಪತಿ ಪತ್ನಿಯರ ಆಂತರಿಕ ವೈಮನಸ್ಯವೇ ಇವಳ ಈ ಬೇಡಿಕೆಗೆ ಕಾರಣವಿರಬಹುದೆಂದೂ, ಅದನ್ನು ವ್ಯಕ್ತಪಡಿಸದೇ, ಸಂಜ್ಞೆಯು ಈ ನೆಪವನ್ನು ಮುಂದೆ ಮಾಡುತ್ತಿರುವಳೆಂದೂ, ಇದಕ್ಕೆನಾನು ಸ್ವಲ್ಪವೇನಾದರೂ ಮನಸೋತರೆ,

ತತಸ್ತು ವಿಶ್ವಕರ್ಮಾ ತಾಮನವೇಕ್ಷ್ಯ ಕ್ವಚಿದ್ಗೃಹೇ ।
ಪ್ರೋವಾಚಾರ್ಯಮಣಂ ಸೋಽಥ 'ತೇಜಸ್ತೇ ಸೋಢುಮಕ್ಷಮಾ ||೪೭||

ಕ್ವ ಗತಾ ನ ಚ ಜಾನೇ ತಾಮುಪಾಯಂ ತೇ ಬ್ರವೀಮಿ ಚ ।
ಯದಿ ತೇ ತೇಜಸೋ ಭಾಗೋ ನ್ಯೂನಃ ಕಿಂಚಿದ್ಭವಿಷ್ಯತಿ ||೪೮||

---

ಲೋಪಹಾರ ದೋಷವೂ, ದಾಂಪತ್ಯ ವಿಘಟನ ಪಾತಕವೂ ನನ್ನನ್ನಾವರಿಸಿ ಬಿಟ್ಟೀತೆಂದೂ ಹೆದರಿಕೆಯುಂಟಾಯಿತಾಗಿ ನಾನು ಅವಳನ್ನು ಗದ್ದರಿಸಿಬಿಟ್ಟೆನು. ತಂದೆಯಾದ ನನ್ನಿಂದಲೂ ತಿರಸ್ಕೃತಳಾದ ಬಳಿಕ ಸಂಜ್ಞೆಯು ಜೀವನದಲ್ಲೇ ಬೇಸರಗೊಂಡು ನನ್ನ ಮನೆಯನ್ನೂ ತ್ಯಜಿಸಿ ಎಲ್ಲಿಗೋ ಹೋಗಿ ಬಿಟ್ಟಳು. ಅವಳು ತಾನು ಮಾನವ ದೇಹದೊಡನೆ ಇದ್ದರೆ ಎಂದಾದರೊಂದು ದಿನ ಸೂರ್ಯನ ಅಥವಾ ನಮ್ಮ ಕೈಗೆ ಸಿಕ್ಕು ಬಿದ್ದು ಬಿಡಬಹುದು ಎಂದು ಹೆದರಿ, ಹೆಣ್ಣು ಕುದುರೆಯ ರೂಪವನ್ನು ತಳೆದು ವನ್ಯ ವಸ್ತುಗಳಿಂದಲೇ ಉದರವನ್ನು ತಣಿಸುತ್ತ ವನದಲ್ಲಿಯೇ ಕಾಲವನ್ನು ಕಳೆಯಲಾರಂಭಿಸಿದಳು. ||೪೬||

ಸಂಜ್ಞೆಯು ಮನೆಯನ್ನು ತ್ಯಜಿಸಿ ಹೊರಟು ಹೋದ ಸಂಗತಿಯು ಅವಳನ್ನು ಎಲ್ಲೆಡೆಯೂ ಕೂಲಂಕಷವಾಗಿ ಹುಡುಕಿದ ಬಳಿಕ ನನಗೆ ಗೊತ್ತಾಯಿತು. 'ಎಲ್ಲಿಗೆ ಹೋಗಿರಬಹುದು ? ' ಎಂದು ಮನಸ್ಸನ್ನು ಏಕಾಗ್ರಗೊಳಿಸಿ ನೋಡಿದೆನು. ಆದರೂ ವಿಷಯ ತಿಳಿಯಲಿಲ್ಲ. ಆಗ ಅನಿವಾರ್ಯವಾಗಿ ವಾಸ್ತವ ವಿಷಯವನ್ನು ಸೂರ್ಯನಿಗೆ ತಿಳಿಸಲೇಬೇಕಾಗಿಬಂದಿತು. ಅರ್ಯಮನನ್ನು ಸಮೀಪಕ್ಕೆ ಕರೆದು ಸಮಾಧಾನದಿಂದ ಹೀಗೆಂದು ವಿಷಯವನ್ನು ತಿಳಿಸಿದೆನು. 'ಭಾಸ್ಕರ ! ನೀನು ಮನಸ್ಸಿಗೆ ಬೇಸರ ಪಟ್ಟುಕೊಳ್ಳಬೇಡ. ಸಂಜ್ಞೆಯು ನನ್ನೆದುರು ಬಹಳ ದೈನ್ಯದಿಂದ ಹೇಳಿಕೊಂಡಿದ್ದಾಳೆ. ಅವಳಿಗೆ ನಿನ್ನ ತೇಜಸ್ಸನ್ನು ಸಹಿಸುವುದಕ್ಕೆ ಸಾಧ್ಯವೇ ಇಲ್ಲವಂತೆ. ||೪೭||

ಅವಳ ಈ ಮಾತನ್ನು ಕೇಳಿದ ಕೂಡಲೇ ಮೊದಮೊದಲು ನಾನು ಬಹಳ ಗದ್ದರಿಸಿ ನೋಡಿದೆ. ಆಗ ನನ್ನೆದುರು ಯಾವ ಮಾತನ್ನೂ ಆಡದೇ ಸುಮ್ಮನಿದ್ದಳಾದರೂ ಅನಂ

ತದಾ ಸಾ ಪ್ರಕಟೀಭೂಯಾದ್ವಿಹರಸ್ವ ತತಸ್ತಯಾ ।

ರವಿರುವಾಚ :—

ಯಥಾ ತವ ಭವೇಚ್ಛೇತಸ್ತಥಾ ಕರ್ತುಂ ತ್ವಮರ್ಹಸಿ ॥೪೯॥

ವಿಶ್ವಕರ್ಮೋವಾಚ :—

ವಿಶ್ವಕರ್ಮಾ ತತಶ್ಚೈನಂ ಯಂತ್ರೇ ಸ್ಥಾಪ್ಯೋಲ್ಲಿಲೇಖ ಹ ।
ತೇಜೋಹ್ರಾಸಂ ಚಕಾರಾಶು ಕಿಂಚಿತ್ಸ್ವೈರ್ಯ್ಯೋಽಭವಚ್ಚ ಸಃ ॥೫೦॥

---

ತರ, ಎಲ್ಲಿಗೋ ಹೋಗಿಬಿಟ್ಟಿದ್ದಾಳೆ. ನನಗೂ ಅವಳನ್ನು ಹುಡುಕಿ ಹುಡುಕಿ ಸಾಕಾಗಿ ಹೋಯಿತು. ಅವಳು ದೊರೆಯಲಿಲ್ಲ. ನಿನ್ನನ್ನು ಅವಳು ಅನುಸರಿಸಿಕೊಂಡಿರುವಂತೆ ಮಾಡುವುದಕ್ಕೆ ಒಂದು ಉಪಾಯವನ್ನು ಹೇಳುವೆನು, ಕೇಳು. ನಿನ್ನ ತೇಜಸ್ಸಿನ ಭಾಗವನ್ನು ಸ್ವಲ್ಪ ಮಟ್ಟಿಗಾದರೂ ಕಡಿಮೆ ಮಾಡಿಕೊಳ್ಳಲಿಕ್ಕೆ ಬಗುವಂತಿದ್ದರೆ, ಅದನ್ನು ನೀನೂ ಒಪ್ಪುವಿಯಾದರೆ, ॥೪೮॥

ಆಗ ಸಂಜ್ಞೆಯು ನಿನಗೆ ಗೋಚರಳಾಗಬಹುದು. ಅನಂತರ ನೀನು ಅವಳೊಂದಿಗೆ ಸ್ವೇಚ್ಛೆಯಾಗಿ ವಿಹರಿಸಲೂ ಬಹುದು. ಎಂದು ಸೂಕ್ತ ಸಲಹೆಯನ್ನು ಕೊಟ್ಟೆನು. ಅದಕ್ಕೆ ರವಿಯು.

ಸೂರ್ಯ :—

ಆಗಬಹುದು. ನಿನ್ನ ಮನಸ್ಸಿಗೆ ಯಾವುದು ಸಮಂಜಸವೆಂದು ತೋರುವುದೋ, ಮತ್ತು ಎಷ್ಟರ ಮಟ್ಟಿಗೆ ತೇಜಸ್ಸನ್ನು ಹ್ರಾಸಮಾಡಿದರೆ ಸಂಜ್ಞೆಯು ತಡೆದುಕೊಳ್ಳಬಲ್ಲಳೋ, ಅದರಂತೆಯೇ ನೀನು ನನ್ನ ತೇಜಸ್ಸನ್ನು ಕಡಿಮೆಮಾಡಬಹುದು. ಇದಕ್ಕೆ ನನ್ನ ಅಭ್ಯಂತರವೇನೂ ಇಲ್ಲ. ॥೪೯॥

ವಿಶ್ವಕರ್ಮ :—

ಎಂದು ಹೇಳಿ ತೇಜಸ್ಸನ್ನು ಕಡಿಮೆಮಾಡಿಕೊಳ್ಳಲು ತನ್ನ ಅನುಮತಿಯನ್ನು

ಯತ್ರ ಗುಪ್ತಾ ಭವತ್ಸಂಜ್ಞಾ ತತ್ರ ಯಾತೋಽರ್ಯಮಾ ವಿಭುಃ ।
ಅಶ್ವೋ ಭೂತ್ವಾ ತಯಾ ರೇಮೇ ಸಾ [1]ನಾಸತ್ಯಾವಸೂತ ಚ ॥೫೦॥

ತಾಮಾದಾಯಾರ್ಯಮಾ ಲೋಕಂ ನಿಜಂ ಹರ್ಷಯುತೋಽಗಮತ್ ।
ತೇಜಶ್ಶೇಷೇಣ ತಸ್ಯಾಥ ಪ್ರಬಲೇನ ಗುಣೇಶ್ವರ ! ॥೫೧॥

---

ನಿರ್ವಾಹವಿಲ್ಲದೇ ಕೊಟ್ಟುಬಿಟ್ಟನು. ಆಗ ಸಾಣೆಹಿಡಿಯುವ ನನ್ನ ಯಂತ್ರ ವಿರುವ ಸ್ಥಳಕ್ಕೆ ನಾನು ಅವನನ್ನು ಕರೆದೊಯ್ದು ಅದರ ಬಳಿ ನಿಲ್ಲಿಸಿ, ಯಂತ್ರದ ಸಹಾಯದಿಂದ ಅವನ ತೇಜಸ್ಸನ್ನು ಬಹು ಬೇಗನೆ ಕತ್ತರಿಸಿದೆನು. ಆಗ ಸೂರ್ಯನ ತೇಜಸ್ಸು ಸ್ವಲ್ಪ ಮಟ್ಟಿಗೆ ಕಡಿಮೆಯಾಯಿತು. ॥೫೦॥

ಅನಂತರ ವಿಭುವಾದ ವಿಭಾವಸು ಸ್ವಲ್ಪವೂ ತಡಮಾಡದೇ ಸಂಜ್ಞೆಯು ಅಶ್ವ ರೂಪದಿಂದ ಯಾರಿಗೂ ಅರಿವಾಗದಂತೆ ಯಾವ ವನಪ್ರದೇಶದಲ್ಲಿ ವಿಹರಿಸುತ್ತ ಲಿದ್ದಳೋ, ಅಲ್ಲಿಗೆ ಧಾವಿಸಿ ನಡೆದನು. ಮತ್ತು ಅಶ್ವರೂಪದಿಂದಿರುವ ಪತ್ನಿಯನ್ನು ನೋಡಿ ತಾನೂ ಪುರುಷಾಶ್ವದಂತಾ (ಗಂಡು ಕುದುರೆಯಾ) ಗಿ ಸಂಜ್ಞೆಯೊಡನೆ ಯಥೇಷ್ಟವಾಗಿ ಕಾಮಸುಖವನ್ನನುಭವಿಸಿದನು. ಅಶ್ವರೂಪಿಣಿಯಾದ ಸಂಜ್ಞೆಯು ಆ ಕೂಡಲೇ ಗರ್ಭವನ್ನು ಧರಿಸಿ, ಅವಳಿಮಕ್ಕಳನ್ನು ಪ್ರಸವಿಸಿದಳು. ಅವರೇ ಅಶ್ವಿನೀ ದೇವತೆಗಳು. ॥೫೦॥

ಸೂರ್ಯನಿಗೆ ಸಂಜ್ಞೆಯೊಡನೆ ಅನುಭವಿಸಿದ ರತಿಸುಖದಿಂದಲೂ, ಒಡ ನೆಯೇ ಪುತ್ರರಿಬ್ಬರನ್ನು ಪಡೆಯುವಂತಾದುದರಿಂದಲೂ ಮನಸ್ಸಿಗೆ ಬಹಳ ಹರ್ಷ ಉಂಟಾಯಿತು. ಅನಂತರ ಸಂಜ್ಞೆಯನ್ನು ಸಂಗಡ ಕರೆದುಕೊಂಡು ತನ್ನ ಲೋಕಕ್ಕೆ ಹೊರಟು ಹೋದನು. ಸೂರ್ಯನ ತೇಜಸ್ಸನ್ನು ಕಡಿಮೆಮಾಡುವಾಗ ಯಂತ್ರದ ಅಲುಗಿಗೆ ಸಿಕ್ಕಿ ಅವನ ದೇಹದ ಕೆಲವು ಚೂರುಗಳು ನನ್ನ ಯಂತ್ರಾಗಾರದಲ್ಲೇ ಉಳಿದಿದ್ದುವು. ಅವನ್ನು ಪರೀಕ್ಷಿಸಿ ನೋಡಲು ವಜ್ರದಂತೆ ಕಠೋರವಾಗಿಯೂ, ಹರಿತವಾಗಿಯೂ ತೋರಿಬಂದವು. ಅವನ್ನು ಹೇಗಾದರೂ ಮಾಡಿ ಉಪಯೋ ಗಕ್ಕೆ ಬರುವಂತೆ ರೂಪಗೊಳಿಸಬೇಕೆಂಬ ಬಯಕೆ ಗುಣೇಶ್ವರ ! ನನಗೆ ಉಂಟಾ ಯಿತು. ॥೫೧॥

ನಿರ್ಮಿತಾನ್ಯಾಯುಧಾನ್ಯಾಶು ತ್ವದರ್ಥೇ ಜಗದೀಶ್ವರಃ ।
ಅತಿತೀಕ್ಷ್ಣಾನಿ ಕಾಲಸ್ಯ ಸದಾ ಜಯಕರಾಣ್ಯಪಿ ||೫೩||

ಚತ್ವಾರಿ ತೇ ಪ್ರದತ್ತಾನಿ ದತ್ತೇ ಚಕ್ರ-ಗದೇ ಹರೇಃ ।
ತ್ರಿಶೂಲಃ ಶಂಭವೇ ದತ್ತಃ ಸರ್ವಶತ್ರುನಿಬರ್ಹಣಃ

**ಗಣೇಶ ಉವಾಚ :—**

ಸಮ್ಯಕ್ಕೃತಂ ವಿಶ್ವಕರ್ಮನ್ನಾಯುಧಾನಿ ಶುಭಾನಿ ಮೇ ।
ದತ್ತಾನಿ ದೈತ್ಯನಾಶಾಯ ಪರೋಪಕೃತಯೇ ಸತಾಮ್

---

ಅವು ಆರುವುದರ ಒಳಗಾಗಿಯೇ ಕೆಲವೊಂದು ಆಯುಧಗಳನ್ನು ನಿರ್ಮಿಸಿದೆನು. ಜಗದೀಶ್ವರ! ಅವನ್ನು ನಿಮಗೆ ಅರ್ಪಿಸಲು ಸಂಗಡ ತೆಗೆದುಕೊಂಡು ಬಂದಿರುವೆನು. ಅವು ಬಹಳ ತೀಕ್ಷ್ಣಧಾರೆಯುಳ್ಳವಾಗಿವೆ. ಈಗಿನ ಕಾಲಕ್ಕೆ ಅವು ಬಹುಮಟ್ಟಿಗೆ ಉಪಯೋಗಕ್ಕೆ ಬೀಳಬಹುದು. ಎಷ್ಟು ಸಾರೆ ಅವನ್ನು ಪ್ರಯೋಗಿಸಿದರೂ, ಸ್ವಲ್ಪವೂ ಮುಕ್ಕಾಗುವುದಿಲ್ಲ. ಇಷ್ಟೇ ಅಲ್ಲದೇ, ಉಪಯೋಗಿಸಿದಂತೆಲ್ಲ ಹರಿತವಾಗುತ್ತಲೇ ಇರುವುವು. ||೫೩||

ನಾನು ನಿರ್ಮಿಸಿದ ಆಯುಧಗಳ ಪೈಕಿ ತಮ್ಮ ಸನ್ನಿಧಿಗೆ ಈ ನಾಲ್ಕನ್ನು ಸಮರ್ಪಿಸಿದ್ದೇನೆ. ಭಗವಾನ್ ಶ್ರೀಮನ್ನಾರಾಯಣನಿಗೆ ಚಕ್ರ, ಗದೆ ಎಂಬ ಎರಡು ಆಯುಧಗಳನ್ನು ಒಪ್ಪಿಸಿದೆ. ಲೋಕಾಂತಕನಾದ ಅಂತಕಾಂತಕ; ಉಮಾಕಾಂತನಿಗೆ ತ್ರಿಶೂಲ ಎಂಬ ಆಯುಧವನ್ನು ಅರ್ಪಿಸಿದೆನು. ಈ ಆಯುಧಗಳು ಸಕಲ ಶತ್ರುಗಳನ್ನೂ ನಿಗ್ರಹಿಸತಕ್ಕುವಾಗಿವೆ. ||೫೪||

**ಗಣಪತಿ :—**

ವಿಶ್ವಕರ್ಮನ್! ಬಹಳ ಒಳ್ಳೆಯ ಕೆಲಸವನ್ನೇ ಮಾಡಿದೆ. ನೀನು ನನಗೆ ಕಾಣಿಕೆಯಾಗಿ ಸಮರ್ಪಿಸಿರುವ ಈ ನಾಲ್ಕು ಆಯುಧಗಳೂ ಅತ್ಯಮೋಘವಾದುವು. ನನ್ನ ಮನಸ್ಸಿಗಂತೂ ಬಹಳ ಒಪ್ಪಿಗೆಯಾಗಿವೆ. ನೀನು ಇವನ್ನು ಸಮರ್ಪಿಸಿದ್ದ

ಕ ಉವಾಚ :—

ಏವಮುಕ್ತ್ವಾಽಽಯುಧಾನ್ಯಾಶು ದಧಾರ ಚ ದುಧಾವ ಚ ।
ತದಾ ಚಂಕಪೇ ಪೃಥಿವೀ ಪರ್ವತಾಶ್ಚ ವನಾನಿ ಚ ॥೩೬॥

ಶುಶುಭೇ ಸೋಽಪಿ ತೈಃ ಶಸ್ತ್ರೈಃ ಕೋಟಿಸೂರ್ಯನಿಭೈರ್ವಿಭುಃ ।
ವಿಶ್ವಕರ್ಮಾ ನಮಸ್ಕೃತ್ಯ ಯಯೌ ಸ್ವ-ಸ್ಥಾನಮಾಜ್ಞಯಾ ॥೩೭॥

ರಿಂದ ದುಷ್ಟ ದಾನವರ ನಿಗ್ರಹ, ತನ್ಮೂಲಕ ಸಾಧು ಜನರ ಸಂರಕ್ಷಣೆ ಎಂಬ ನನ್ನ ಈ ಅವತಾರಿಕ ಕರ್ತವ್ಯಗಳನ್ನು ಸೂಚಿಸಿದಂತಾಯಿತು. ಇವನ್ನು ಅತ್ಯವಶ್ಯವಾಗಿ ಅದಕ್ಕಾಗಿಯೇ ಉಪಯೋಗಿಸುವೆನು. ॥೩೫॥

ಬ್ರಹ್ಮ :—

ಹೀಗೆ ವಿಶ್ವಕರ್ಮನಿಗೆ ಆಶ್ವಾಸನವನ್ನಿತ್ತು ಆಯುಧಗಳನ್ನೆಲ್ಲ ಧರಿಸಿ ಕೂಡಲೇ ಒಮ್ಮೇ ನೆಗೆದನು ಆಯುಧಹಸ್ತನಾದ ಮಹಾಗಣಪತಿಯ ಕಾಲ್ತುಳಿತಕ್ಕೆ ಭೂಮಿಯು ಗಡಗಡನೆ ನಡುಗಿದಳು. ಪರ್ವತಗಳು ಶಿಥಿಲಾವಯವಗಳಾಗಿ ಉರುಳುರುಳಿ ಬಿದ್ದವು. ಉಪವನ; ಅರಣ್ಯಗಳಲ್ಲಿ ಬೆಳೆದು ನಿಂದಿದ್ದ ಗಗನಚುಂಬಿ ವೃಕ್ಷಗಳು ಬೇರು ಸಹಿತ ಮೇಲೆದ್ದು ನೆಲಕ್ಕೆ ಧೊಪ್ಪನೆ ಬಿದ್ದು ಆಯಾ ಭಾಗಗಳ ಸೌಂದರ್ಯವನ್ನೆಲ್ಲ ನಾಶಮಾಡಿದವು. ॥೩೬॥

ದೇವರ ದೇವ; ಗಣಪತಿಯು ಮೊದಲೇ ಭುವನ ಮನೋಹರ ಮೂರ್ತಿ. ಈಗಂತೂ ಕೈಗಳಲ್ಲಿ ಥಳ ಥಳ ಹೊಳೆವ ಶಸ್ತ್ರಗಳನ್ನು ಧರಿಸಿದ್ದಾನೆ. ಕೋಟಿಗಟ್ಟಲೆ ಸೂರ್ಯರು ಒಮ್ಮೆಲೇ ಉದಿಸಿದಷ್ಟು ಉಜ್ವಲನಾಗಿ ಕಂಡುಬಂದನು. ಆಗ ವಿಶ್ವಕರ್ಮನು ' ತಾನು ಬಂದ ಕೆಲಸ ನಿರ್ವಿಘ್ನವಾಗಿ ನೆರವೇರಿತು ' ಎಂದುಕೊಂಡು ಗಣಪತಿಯನ್ನು ಅಭಿವಾದಿಸಿ, ಅವನ ಹಾಗೂ ಉಮಾದೇವಿಯ ಅನುಮತಿಯನ್ನು ಪಡೆದು ತನ್ನ ಆಲಯಕ್ಕೆ ತೆರಳಿದನು. ॥೩೭॥

ಉಮಾತ್ಮಜೋಽಪಿ ಚಿಕ್ರೀಡ, ಮುನಿಬಾಲೈರ್ವೃತಃ ಪುನಃ ।
ತತ್ಪ್ರಯಯೌ 'ವೃಕೋ' ನಾಮ ಮಹಾನ್ ದುಷ್ಟತಮೋಽಸುರಃ ॥೫೮॥

ಭಯಂಕರಾನನೋ ಮತ್ತೋ ಗ್ರಸನ್ನಿವ ಮಹಾಬಲೀ ।
ಪುಚ್ಛಾಘಾತೇನ ಚ ಭುವಂ ಕಂಪಯನ್ ಹಲದಂತವಾನ್ ॥೫೯॥

ದೃಷ್ಟ್ವಾ ಭಯಂಕರಂ ದೈತ್ಯಂ ಮುನಿಪುತ್ರಾಃ ಪಲಾಯಿತಾಃ ।
ಸ ಆಯುಧಾನಿ ಗೃಹ್ಯಾಶು ತಂ ವೃಕಂ ಸಮತಾಡಯತ್ ॥೬೦॥

ಅಂಕುಶಾಘಾತಮಾತ್ರೇಣ ಪತಿತೋ ಭುವಿ ಸೋಽಸುರಃ ।

ಇತ್ತ ಗಣಪತಿಯು ಮುನಿಬಾಲಕರೊಂದಿಗೆ ಆಟವಾಡಲು ಮತ್ತೆ ಹೊರಕ್ಕೆ ಹೊರಟು ಹೋದನು. ಹುಡುಗರು ಆಟವಾಡುತ್ತಲಿದ್ದ ಪ್ರದೇಶಕ್ಕೆ ಒಬ್ಬ ದುಷ್ಟ ರಾಕ್ಷಸನು ಬಂದನು. ಅವನ ಹೆಸರು ' ವೃಕಾಸುರ '. ಅವನ ಆಕೃತಿಯೂ ತೋಳ ದಂತೆಯೇ ಇದ್ದಿತು. ಆ ಅಸುರನು ಬಹಳ ಕೊಬ್ಬಿದ್ದನು. ॥೫೮॥

ಅವನ ಕರಾಳ ವದನವು ಎಂತಹ ಧೈರ್ಯಶಾಲಿಯಾದವನ ಎದೆಯನ್ನೂ ನಡುಗಿಸುತ್ತಲಿದ್ದಿತು. ಅವನ ಬಲವನ್ನು ಇಷ್ಟೆಂದು ಹೇಳಲಿಕ್ಕೆ ಬರುವಂತಿರ ಲಿಲ್ಲ. ಎಲ್ಲವನ್ನೂ ಒಮ್ಮೆಲೇ ನುಂಗಿಬಿಡಬಲ್ಲನೋ, ಎಂಬಂತೆ ತೋರುತ್ತ ಲಿದ್ದನು. ಅವನಷ್ಟು ಉನ್ಮತ್ತರು ಮತ್ತಾರೂ ಇರಲೇ ಇಲ್ಲ. ಜೊಂಡಿನ ಕಂತೆ ಯಂತಹ ತನ್ನ ಬಾಲವನ್ನು ಬಲವಾಗಿ ಕೊಡವಿ, ಇಡೀ ಭುವನವನ್ನೇ ನಡುಗಿಸುತ್ತ ಲಿದ್ದನು. ಅವನ ಹಲ್ಲುಗಳು ನೇಗಿಲಿನಂತೆ ಮೊನಚಾಗಿ ಚಾಗಿದ್ದವು. ॥೫೯॥

ಇಂತಹ ವಿಚಿತ್ರಜಾತಿಯ ಭಯಂಕರವಾದ ತೋಳದ ರೂಪೀದಾನವನನ್ನು ನೋಡಿದೊಡನೆಯೇ ಮುನಿಬಾಲಕರು ಹೆದರಿ ನಡುಗುತ್ತ ಓಡಿಹೋದರು. ಆದರೆ ಗಣಪತಿಯು ಮಟ್ಟಿಗೆ ಅತ್ತಿತ್ತ ಚಲಿಸದೇ, ತನಗೆ ಆಗಿನ್ನೂ ವಿಶ್ವಕರ್ಮನು ಕೊಟ್ಟು ಹೋಗಿದ್ದ ಆಯುಧಗಳ ಪೈಕಿ ಒಂದರಿಂದ ಅದನ್ನು ಬಲವಾಗಿ ಹೊಡೆದನು. ॥೬೦॥

ಅಂಕುಶದ ಹೊಡೆತ ಬಿದ್ದೊಡನೆಯೇ ಆ ವೃಕಾಸುರನು ಕತ್ತರಿಸಿ ನೆಲಕ್ಕೆ

ವಮನ್ರಕ್ತಂ ನಿಜಂ ರೂಪಮಾಸ್ಥಿತಶ್ಚೂರ್ಣಯನ್ ದ್ರುಮಾನ್ ||೬೧||

ಸಂಹರನ್ ಜೀವಸಂಘಾತಾನ್ ದಶಯೋಜನವಿಸ್ತೃತಃ।
ಸ ತತೋಽಸ್ತಮಿತೇ ಸೂರ್ಯೇ ಯಯೌ ಬಾಲಯುತೋ ಗೃಹಮ್
||೬೨||

ಬಾಲಾಃ ಪ್ರಾಹುರುಮಾಯೈ ತೇ

ಬಾಲಾ ಊಚುಃ :—

ಽನೇನಾದ್ಯ ನಿಹತೋಽಸುರಃ।

---

ಉರುಳಿ ಬಿದ್ದುಬಿಟ್ಟನು. ಬಿದ್ದ ಹೊಡೆತಕ್ಕೆ ಅವನ ಹೃದಯವು ಒಡೆದು ಹೋಯಿತು. ನೀರುತುಂಬಿದ ಪಾತ್ರೆಯನ್ನು ಬಗ್ಗಿಸಿದಕೂಡಲೆ ಅದರಲ್ಲಿದ್ದ ಜಲವೆಲ್ಲ ಹೇಗೆ ಸುರಿದುಹೋಗುವುದೋ, ಅದರಂತೆ ರಾಕ್ಷಸನು ಬಿದ್ದೊಡನೆಯೇ ಅವನ ಹೃತ್ಕುಂಭದಿಂದ ರಕ್ತವೆಲ್ಲವೂ ಅವನ ಬಾಯಿಯ ಮೂಲಕ ಸುರಿದುಹೋಯಿತು. ಆಗ ವೃಕದೇಹವನ್ನು ಬಿಸುಟು ತನ್ನ ಭಯಂಕರವಾದ ರೂಪವನ್ನು ತಳೆದು ನೆಲಕ್ಕುರುಳಿದನು. ಬೀಳುವಾಗ ಅನೇಕ ಮಹಾ ಮಹಾ ವೃಕ್ಷಗಳನ್ನೂ ಕೆಡಹಿದನು. ||೬೧||

ದೈತ್ಯನ ದೇಹ ಹತ್ತು ಯೋಜನಗಳಷ್ಟು ವಿಸ್ತೃತವಾಗಿದ್ದಿತು. ಇದರ ಅಡಿಗೆ ಸಿಲುಕಿದ ಅನೇಕ ಸಜೀವ ಪ್ರಾಣಿಗಳು ನಸುಗಿ ನಿರ್ಜೀವವಾಗಿಹೋದವು. ಅನಂತರ ಹುಡುಗರು ಮತ್ತೆ ಆಟಗಳನ್ನಾಡಿದರು. ಸೂರ್ಯನು ಅಸ್ತಾಚಲಶಿಖರವನ್ನೇರಿದ ಬಳಿಕ ಹುಡುಗರೆಲ್ಲರೂ ಅಂದಿನ ಆಟವನ್ನು ಅಷ್ಟಕ್ಕೆ ನಿಲ್ಲಿಸಿ ತಮ್ಮ ತಮ್ಮ ಮನೆಗಳಿಗೆ ಹಿಂದಿರುಗಿ ನಡೆದರು. ಇದರಂತೆ ಗಣಪತಿಯು ಸಹ ತನ್ನ ಪರಿವಾರದೊಂದಿಗೆ ಮನೆಗೆ ಹಿಂದಿರುಗಿ ಬಂದನು. ||೬೨||

ಬಾಲಕರ ಬಾಯಿ ಸುಮ್ಮನಿರುವುದೇ? ಮನೆಗೆ ಬಂದೊಡನೆಯೇ **ಗಿರಿಜೆ**ಯನ್ನು ಸಂಧಿಸಿ ಆ ದಿನ ನಡೆದ ಹೊಸ ಸಂಗತಿಯನ್ನು ಈ ರೀತಿ ಹೇಳಿದರು.

ಬಾಲಕರು :—

ತಾಯೇ! ನಮ್ಮನ್ನೆಲ್ಲ ಅಟ್ಟಿಕೊಂಡು ಬಂದಿದ್ದ ವೃಕಾಸುರನನ್ನು

ವೃಕೋ ನಃ ಮಾಂಕುಶಾಘಾತಾದ್ದಶಯೋಜನಮಾಯತಃ ||೬೩||

ಕ ಉವಾಚ :—

ತಾನುವಾಚಾದ್ರಿಜಾ ರೋಷಾತ್

ಗೌರ್ಯುವಾಚ :—

ವ್ರಜಂತು ನಿಜಮಂದಿರಮ್ ।

ಕ ಉವಾಚ :—

ತತಸ್ತದ್ವಾಕ್ಯಮಾಕರ್ಣ್ಯ ತೇ ಬಾಲಾಸ್ಸ್ವಾಲಯಾನ್ ಯಯುಃ ||೬೪||

ನಮ್ಮ ಗಣಪತಿಯು ತನ್ನ ಕೈಯ್ಯಲ್ಲಿದ್ದ ಅಂಕುಶಾಯುಧದಿಂದ ಈಗಿನ್ನೂ ಹೊಡೆದು ಕೊಂದುಬಿಟ್ಟನು. ದೈತ್ಯನೆಂತಹ ಧಡಿಯನಾಗಿದ್ದನು? ಹತ್ತು ಯೋಜನಗಳಷ್ಟು ಜಾಗವೇ ಅವನ ಬಿದ್ದ ದೇಹಕ್ಕೆ ಬೇಕಾಯಿತು. ||೬೩||

ಬ್ರಹ್ಮ :—

ರಾಕ್ಷಸರು, ಅವರೊಡನೆ ಯುದ್ಧ ಇವೇ ಮೊದಲಾದ ಸಂಗತಿಗಳನ್ನು ಕೇಳಿ ಕೇಳಿ ಬೇಸತ್ತು ಹೋಗಿದ್ದ ಗೌರಿಯು ಬಾಲಕರ ಈ ಮಾತುಗಳನ್ನು ಅಷ್ಟಕ್ಕೆ ತಡೆಗಟ್ಟಿ ಕೋಪದಿಂದ

ಗೌರೀ :—

ನಡೆಯಿರೋ, ನಿಮ್ಮ ಮನೆಗಳಿಗೆ. ಕತ್ತಲಾಗಲಿಲ್ಲವೇ ?

ಬ್ರಹ್ಮ :—

ಎಂದು ಗದ್ದರಿಸಿಬಿಟ್ಟಳು. ಗೌರಿಯ ಗದ್ದರಿಕೆಯ ಮಾತುಗಳನ್ನು ಕೇಳಿ ಮುಗ್ಧರಾದ ಬಾಲಕರು ಒಬ್ಬರ ಮುಖವನ್ನು ಮತ್ತೊಬ್ಬರು ನೋಡುತ್ತ ಸುಮ್ಮನೆ ತಮ್ಮ ತಮ್ಮ ಆಲಯಗಳಿಗೆ ಹೊರಟುಹೋದರು. ||೬೪||

ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ 'ಆಯುಧಪ್ರಾಪ್ತಿ
ರ್ವೃಕಾಸುರವಧಶ್ಚೇ'ತಿ ಪಂಚ ನವತಿತಮೋಽ-
ಧ್ಯಾಯಸ್ಸಮಾಪ್ತಃ

—

ಇಲ್ಲಿಗೆ ಶ್ರೀ ಗಣೇಶ ಪುರಾಣ, ಉತ್ತರಖಂಡದಲ್ಲಿ 'ಆಯುಧ ಪ್ರಾಪ್ತಿ, ಹಾಗೂ ವೃಕಾಸುರ ವಧೆ' ಎಂಬಲ್ಲಿಗೆ ತೊಂಭತ್ತೈದನೆಯ ಅಧ್ಯಾಯಾನುವಾದವು ಮುಗಿದುದು.



॥ ಶ್ರೀ ಗಣೇಶಾಯ ನಮಃ ॥

## ಅಥ ಷಣ್ಣವತಿತಮೋಽಧ್ಯಾಯಃ

**ಕ ಉವಾಚ :—**

**ತತಃ ಕದಾಚಿದ್ಗಿರಿಜಾ ಪ್ರಸನ್ನಂ ಪ್ರಾಹ ಶಂಕರಮ್ ।**

**ಶಿವೋವಾಚ :—**

**ದೇವೇಶ! ಸಪ್ತಮಂ ವರ್ಷಂ ಪ್ರವೃತ್ತಂ ಸಾಂಪ್ರತಂ ಶಿಶೋಃ ॥೧॥**

**ಕ್ರಿಯತಾಂ [1]ವ್ರತಬಂಧೋಽಸ್ಯ ಸು-ಮುಹೂರ್ತೇ ಮಹೋತ್ಸವಾತ್ ।**

---

॥ ಶ್ರೀ ಗಣೇಶಾಯ ನಮಃ ॥

### ೯೬ ನೆಯ ಅಧ್ಯಾಯ.

ಬ್ರಹ್ಮ :—

ಹೀಗೆಯೇ ಕೆಲವು ಕಾಲ ಕಳೆಯಿತು. ಜಗತ್ತಿಗೆ ತಂದೆ-ತಾಯಿಯರಾದ ಪಾರ್ವತೀ–ಪರಮೇಶ್ವರರು ಒಂದು ದಿವಸ ವಿನೋದವಾಗಿ ಮಾತನಾಡುತ್ತ ಕುಳಿತಿದ್ದರು. ಮಹಾದೇವನ ಮನಸ್ಸು ಸು–ಪ್ರಸನ್ನವಾಗಿದ್ದ ಆ ಸಮಯದಲ್ಲಿ ಪರ್ವತರಾಜಪುತ್ರಿಯು ಪತಿಯನ್ನು ಕುರಿತು ಹೀಗೆ ಮಾತನಾಡಿದಳು.

ಪಾರ್ವತೀ: —

ಲೋಕಶಂಕರ! ನಮ್ಮ ಶಿಶು, ಗಣಪತಿಗೆ ಆರು ವರ್ಷಗಳು ತುಂಬಿ, ಏಳನೆಯ ವರ್ಷ ಆರಂಭವಾಯಿತಲ್ಲವೇ? ಎಂದರೆ ಇದನ್ನೇ ಗರ್ಭಾಷ್ಟಮ ವತ್ಸರವೆನ್ನುವರು. ॥೧॥

---

[1] ಇದು ವ್ರತಬಂಧ(ಉಪನಯನ)ಸಂಸ್ಕಾರಕ್ಕೆ ಸಕಾಲವಾಗಿರುವುದು, ವಿಶೇಷಾಂಶವನ್ನು ಪರಿಶಿಷ್ಟದಿಂದ ತಿಳಿಯಬಹುದು.

ಶಿವ ಉವಾಚ :—

**ಸಮ್ಯಗುಕ್ತಂ ತ್ವಯಾ ಭದ್ರೇ ! ಜ್ಞಾತ್ವಾ ಚೇತೋಗತಂ ಮಮ ॥೨॥**

**ಸಂಪಾದಯಿಷ್ಯೇ ಸಾಧ್ವಸ್ಯ ವ್ರತಬಂಧಂ ಯಥಾವಿಧಿ ।**

ಕ ಉವಾಚ :—

**ಇತ್ಯುಕ್ತ್ವಾ ಗಿರಿಜಾಂ ದೇವಃ ಸಮಾಕಾರ್ಯ ಚ ಗೌತಮಮ್ ॥೩॥**

**ವಿಚಾರ್ಯ ಸು-ದಿನೇ ಲಗ್ನಂ ಸಾಮಗ್ರೀಂ ಸಮಪಾದಯತ್ ।**

ಆದುದರಿಂದ ಸರಿಯಾದ ಒಂದು ಮುಹೂರ್ತವನ್ನು ನೋಡಿ ಇವನಿಗೆ ಉಪನಯನವನ್ನು ಮಾಡು ಈ ಉಪನಯನವು ಬಹಳ ವಿಜೃಂಭಣೆಯಿಂದ ನಡೆಯಲಿ,

ಶಿವ :-

ರಾಣಿ ! ಸರಿಯಾದ ಸಲಹೆಯನ್ನಿತ್ತಿರುವೆ. ಅವಶ್ಯವಾಗಿ ವ್ರತಬಂಧವನ್ನು ನಡೆಸುವೆನು. ಈಗಿನ್ನೂ ಈ ವಿಚಾರ ನನ್ನ ಮನಸ್ಸಿಗೆ ಬಂದಿದ್ದಿತು. ಅದನ್ನು ಸರ್ವಮಂಗಳೇ ? ಅರಿತು ನೀನೂ ಹೇಳಿರುವೆ. ಬಹಳ ಒಳ್ಳೆಯದೇ ಆಯಿತು.

ಈ ಉಪನಯನ ಸಂಸ್ಕಾರವನ್ನು ಯಥಾ ವಿಧಿಯಾಗಿ ಬಹಳ ವೈಭವದಿಂದಲೇ ನಡೆಸುವೆನು.

ಬ್ರಹ್ಮ :—

ಹೀಗೆ ಹೇಳಿ ಗಿರಿಜೆಯನ್ನು ಸಮಾಧಾನಪಡಿಸಿದನು. ಮತ್ತು ದೂತರ ಮೂಲಕ ತಮ್ಮಿಬ್ಬರ ಈ ಸಂಕಲ್ಪವನ್ನು ಹೇಳಿ ಕಳಿಸಿ ಮಹರ್ಷಿ ; ಗೌತಮನನ್ನು ತನ್ನ ಸಮೀಪಕ್ಕೆ ಬರಮಾಡಿಕೊಂಡನು. ॥೩॥

ದೇವನ ಅಪ್ಪಣೆಯನ್ನು ಕೇಳಿದೊಡನೆಯೇ ತಪೋಽನುಷ್ಠಾನವನ್ನು ಸಹ

ಮಂಡಪಂ ಚ ಸು-ವಿಸ್ತೀರ್ಣಂ ಸರ್ವಾನ್ ಋಷಿಗಣಾನ್ ಮುನೀನ್ ॥೪॥

ಆಕಾರ್ಯ ಪರಿಪೂಜ್ಯೈತಾಂಸ್ತದಾಜ್ಞಾವಶಗೋ ಹರಃ ।
ಯಥಾವಿಧಿ ಚಕಾರಾಸ್ಯ ವ್ರತಬಂಧಂ ಮುದಾ ತದಾ ॥೫॥

ಉಪಾಯನಾನಿ ಸರ್ವೇ ತೇ ಶಿವಯೋರ್ಬಾಲಕಸ್ಯ ಚ ।
ಅಷ್ಟಾಶೀತಿಸಹಸ್ರೇಭ್ಯೋ ನಮಸ್ಕೃತ್ಯ ಹರೋಽಪಿ ಚ ॥೬॥

---

ಅಲ್ಲಲ್ಲಿಗೇ ನಿಲ್ಲಿಸಿ, ಮುನಿಯು ದೇವನ ಸನ್ನಿಧಿಗೆ ಸರ ಸರ ಬಂದನು. ಪರಶಿವನು ಗೌತಮುನಿಗೆ ತತ್ಕಾಲೋಚಿತ ಸತ್ಕರ-ಗೌರವಗಳನ್ನು ಸಲ್ಲಿಸಿ, ತನ್ನ ಮಗನಿಗೆ ವ್ರತ ಬಂಧ ಸಂಸ್ಕಾರವನ್ನು ನಡೆಸಲು ಸು-ಮುಹೂರ್ತ ಒಂದನ್ನು ಸೂಚಿಸಬೇಕೆಂದು ಪ್ರಶ್ನಿಸಿ ಅದನ್ನು ನಿಷ್ಕರ್ಷಿಸಿದನು. ಮತ್ತು ಈ ಮಹೋತ್ಸವಕ್ಕೆ ಬೇಕಾದ ಸಾಧನ ಸಾಮಗ್ರಿಗಳನ್ನೆಲ್ಲ ಕೂಡಲೇ ಸಿದ್ಧಪಡಿಸಿರೆಂದು ಪ್ರಮಥಗಣಕ್ಕೆ ಆಜ್ಞೆಯನ್ನಿತ್ತು ಬಹಳ ವಿಸ್ತೃತವೂ, ಸುಂದರವೂ ಆದ ಮಂಡಪ ಒಂದನ್ನು ರಚಿಸಿ ಸಿದ್ಧಪಡಿಸಿದ ನಂತರ ಋಷಿವರ್ಯರನ್ನೆಲ್ಲ ಈ ಮಹೋತ್ಸವಕ್ಕೆ ಆಹ್ವಾನಿಸಿ ತನ್ನಲ್ಲಿಗೆ ಬರಮಾಡಿ ಕೊಂಡನು. ದೇವರ್ಷಿಗಳೊಂದಿಗೆ ಭೂಲೋಕದ ಮುನಿಗಳೂ ಅಲ್ಲಿಗೆ ಬಂದು ಸೇರಿದರು. ॥೪॥

ಮುನಿವೃಂದ ಬಂದೊಡನೆಯೇ ಮೊದಲು ಎಲ್ಲರನ್ನೂ ಆತ್ಯಾದರದಿಂದ ಅರ್ಚಿಸಿದನು. 'ನಿಮ್ಮೆಲ್ಲರ ಅನುಮತಿಯಂತೆಯೇ ಈ ಮಹೋತ್ಸವವನ್ನು ನಡೆಸುವೆನು' ಎಂದು ಹೇಳಿ ಅವರ ಆಜ್ಞೆಯಂತೆ ಹರನು ನಡೆಯಲು ಸಿದ್ಧನಾದನು. ಮತ್ತು ಅವರು ಮಂತ್ರಗಳನ್ನುಚ್ಚರಿಸಿ ನಿರ್ದೇಶಿಸಿದಂತೆಲ್ಲ ಉಪನಯನಾಂಗ ಪೂರ್ವ ಕರ್ತವ್ಯಗಳನ್ನು ಬಹಳ ಸಂತೋಷದಿಂದ ನಡೆಸತೊಡಗಿದನು. ॥೫॥

ಮಹೋತ್ಸವದ ಈ ಸಂದರ್ಭದಲ್ಲಿ ಭಾಗವಹಿಸಿದ್ದವರೆಲ್ಲ ಶಿವ–ಪಾರ್ವತಿಯರಿಗೂ, ವಟುವಾದ ಗಣಪತಿಗೂ ತಮ್ಮ ತಮ್ಮ ಸ್ಥಾನ–ಮಾನಗಳಿಗನುಸರಿಸಿ ತಂದಿದ್ದ ವಸ್ತ್ರಾ-ಭರಣಾದ್ಯಪೂರ್ವ ವಸ್ತುಗಳನ್ನು ಉಡುಗೊರೆಯಾಗಿ ಕೊಟ್ಟರು. ಆಗ ಪರಮೇಶ್ವರನು ಇವನ್ನೆಲ್ಲ ಸ್ವೀಕರಿಸಿ ಅಲ್ಲಿ ನೆರೆದಿದ್ದ ಎಂಭತ್ತೆಂಟು ಸಹಸ್ರ

ಸಂಪೂಜ್ಯ ವಿಧಿವತ್ಪ್ರಾಯಾನ್ನಾನೋಪಾಯನಸಂಚಯಾನ್ ।
ತ್ರಿಂಶತ್ತ್ರಿಕೋಟಿದೇವೇಭ್ಯೋ ಯಕ್ಷೇಭ್ಯೋಽಪಿ ತಥೈವ ಚ ॥೭॥

ಕಿನ್ನರೇಭ್ಯಶ್ಚಾರಣೇಭ್ಯೋ ವಾದ್ಯಘೋಷೇ ನದತ್ಯಪಿ ।
ಗಾಯತ್ಸು ಕಿನ್ನರೇಷ್ವಾಶು ನರ್ತಕೀನಾಂ ಗಣೇಷು ಚ ॥೮॥

ನೃತ್ಯತ್ಸು ಸರ್ವಲೋಕೇಷು ಪಶ್ಯತ್ಸು ಸುಮಹೋತ್ಸವಮ್ ।
ಉಪಾಯನಾನಿ ದಾನಾನಿ ದದೌ ಹರ್ಷಾತ್ಸದಾಶಿವಃ ॥೯॥

---

ಜನ ಮುನೀಶ್ವರರಿಗೂ ಆದರದಿಂದ ವಂದಿಸಿದನು. ॥೬॥

ವಿಧಿವಿಹಿತವಾದ ರೀತಿಯಿಂದ ಅರ್ಘ್ಯಪಾದ್ಯಾಚಮನೀಯ, ವಸ್ತ್ರಾಲಂಕಾರಗಳನ್ನು ಕೊಟ್ಟು ಅವರನ್ನೆಲ್ಲ ಸತ್ಕರಿಸಿದನು. ಪ್ರತಿಯೊಬ್ಬ ಮುನಿಗೂ ಬಂದ ಉಪಾಯನಗಳನ್ನು ಲೆಕ್ಕಮಾಡುವುದಕ್ಕೇ ಸಾಧ್ಯವಿರಲಿಲ್ಲ- ಇದರಂತೆ ಉತ್ಸವಕ್ಕೆ ಬಂದಿದ್ದ ಮೂವತ್ತು ಮೂರು ಕೋಟಿ ದೇವತೆಗಳಿಗೂ, ಯಕ್ಷರಿಗೂ ಉಡುಗೊರೆಗಳನ್ನು ಕೊಟ್ಟು ಗೌರವಿಸಿದನು. ॥೭॥

ಕಿನ್ನರರು,ಚಾರಣರು ಇವರಾರನ್ನೂ ದೇವನು ಮರೆಯಲಿಲ್ಲ. ಅವರಿಗೂ ಯಥೋಚಿತವಾಗಿ ಮರ್ಯಾದೆಯು ಸಂದಿತು. ಆ ಸಮಯದಲ್ಲಿ ಮಂಗಲವಾದ್ಯಗಳು ಮೊಳಗುತ್ತಲಿದ್ದವು, ಕಿನ್ನರರು ತಮ್ಮ ತಮ್ಮ ಸಹಾಯ ಗಾಯಕರೊಡನೆ ಕೂಡಿಕೊಂಡು ಶ್ರುತಿಮಧುರವಾಗಿ ಗಾಯನವನ್ನು ಮಾಡುತ್ತಿದ್ದರು. ಅಪ್ಸರರಮಣಿಯರು ಗುಂಪು-ಗುಂಪಾಗಿ ಸೇರಿಕೊಂಡು ಚಿತ್ರ-ವಿಚಿತ್ರರೀತಿಯಲ್ಲಿ ಶಾಸ್ತ್ರೋಕ್ತವಾದ ನೃತ್ಯವನ್ನು ಪ್ರದರ್ಶಿಸುತ್ತಲಿದ್ದರು. ॥೮॥

ನರ್ತಕಿಯರ ಹಾವ-ಭಾವ-ವಿಲಾಸ ವಿಭ್ರಮಪರಿಪೂರ್ಣ ನೃತ್ಯವನ್ನೂ, ಮಹೋತ್ಸವದ ಇತರ ವೈಭವಗಳನ್ನೂ ನೋಡುತ್ತ ಪ್ರೇಕ್ಷಕವರ್ಗವು ಚಿತ್ರಾರ್ಪಿತ ಪ್ರತಿಮೆಗಳಂತೆ ಕುಳಿತಿದ್ದಿತು. ಉನ್ನತರಾದವರಿಗೆ ಉಡುಗೆರೆಗಳನ್ನೂ, ಶ್ರೋತ್ರಿಯರಿಗೆ ದಾನಗಳನ್ನೂ, ಸೇವಕವರ್ಗಕ್ಕೆ ಬಹುಮಾನಗಳನ್ನೂ, ಇತರರಿಗೆ ಭೂರಿದಕ್ಷಿಣೆಯನ್ನೂ ಭಗವಾನ್ ಸದಾಶಿವನು ಸಂತೋಷಾತಿಶಯದಿಂದ ಕೊಟ್ಟನು. ॥೯॥

ದೇವತಾಸ್ಥಾಪನಂ ಕೃತ್ವಾ ಭೋಜಯಾಮಾಸ ಚಾಖಿಲಾನ್ ।
ಪ್ರಾತಃಕಾಲೇ ವಟುಂ ಸ್ನಾಪ್ಯ ಚೌಲಕರ್ಮ ಸಮಾಪ್ಯ ಚ ||೧೦||

ಚತುರ್ಭಿರ್ಬ್ರಾಹ್ಮಣೈಃ ಸಾರ್ಧಂ ಭೋಜ್ಯ ಸಂಸ್ನಾಪ್ಯ ವೈ ಪುನಃ ।
ವೇದಿಕಾಯಾಮಂತರಾ ತು ಧೃತ್ವಾ ಪಟಮನುತ್ತಮಮ್ ||೧೧

ಮುಹೂರ್ತಂ ಸಾಧಯಾಮಾಸ ಮುನಿಭಿರ್ಮಂತ್ರವಾದಿಭಿಃ ।
ಏತಸ್ಮಿನ್ನಂತರೇ ದೈತ್ಯೌ 'ಕೃತಾಂತ-ಕಾಲ' ಸಂಜ್ಞಕೌ ||೧೨||

---

ಸತ್ಸಂಪ್ರದಾಯಕ್ಕನುಸರಿಸಿ ದೇವತಾಸ್ಥಾಪನೆಯಾಯಿತು. ಅಂದು ಎಲ್ಲರಿಗೂ ಭೂರಿ ಭೋಜನವೂ ನಡೆಯಿತು. ಭೋಜನಕ್ಕಾಗಿ ಬಂದವರನ್ನು ಯಾರೂ ಯಾವ ರೀತಿಯಿಂದಲೂ ಆತಂಕ ಪಡಿಸಲಿಲ್ಲ. ಅಲ್ಲದೇ ಅವರನ್ನು ಅತ್ಯಾದರದಿಂದ ಬರಮಾಡಿಕೊಂಡು ದಿವ್ಯ ಪಕ್ವಾನ್ನಗಳಿಂದ ತೃಪ್ತಿಪಡಿಸಿದರು. ಮಾರನೆಯ ದಿವಸ ಪ್ರಭಾತಕಾಲದಲ್ಲಿ ಹರನು ವಟುವಾದ ಗಣಪತಿಗೆ ಮಂಗಲಸ್ನಾನವನ್ನು ಮಾಡಿಸಿ, ಚೌಲಕರ್ಮವನ್ನು ಯಥಾವಿಧಿಯಾಗಿ ನಡೆಸಿದನು. ||೧೦||

ಅನಂತರ ವಟುವನ್ನು ನಾಲ್ಕು ಮಂದಿ ವೇದವಿದ್ಬ್ರಾಹ್ಮಣರೊಡನೆ ಕುಳ್ಳಿರಿಸಿ ಭೋಜನ ಮಾಡಿಸಿದನು. (ಇದನ್ನೇ 'ಚೌಲಪಙ್ಕ್ತಿ' ಎಂದು ಕರೆಯುತ್ತಾರೆ.) ಭೋಜನವಾದ ಬಳಿಕ ಶಿಶುವಿಗೆ ಪುನಃ ಮಂಗಲ ಸ್ನಾನವನ್ನು ಮಾಡಿಸಿದನು ಅನಂತರ ಹಸೆ ಜಗುಲಿಯ ಮೇಲೆ ಗಣಪತಿಯನ್ನು ಪೂರ್ವಾಭಿಮುಖವಾಗಿ ಕುಳ್ಳಿರಿಸಿ ಗಾಯತ್ರೀ ಮಹಾಮಂತ್ರೋಪದೇಷ್ಟೃವಾದ ತನಗೂ, ಗಣಪತಿಗೂ ನಡುವೆ ಅತ್ಯುತ್ತಮವಾದ ದಿವ್ಯ ಪೀತಾಂಬರವನ್ನು ಮರೆಗಾಗಿ ಹಿಡಿಸಿದನು. (ಇದನ್ನು 'ಅಂತಃಪಟ' ಎಂಬುದಾಗಿ ಕರೆಯುತ್ತಾರೆ. ಇದರ ಬಗ್ಗೆ ವಿವರಣೆಯನ್ನು ತಿಳಿಯಲಪೇಕ್ಷೆಯುಳ್ಳವರು, ಈ ಸಂಪುಟದ ಕೊನೆಯಲ್ಲಿ ಕೊಟ್ಟಿರುವ 'ಪರಿಶಿಷ್ಟ' ಎಂಬ ಭಾಗವನ್ನು ನೋಡಬಹುದು.) ||೧೧||

ಯಾವ ಕಾಲ ವಿಶೇಷದಲ್ಲಿ ಈ ಸಂಸ್ಕಾರವನ್ನು ಮಾಡಬೇಕೆಂದು ಗೌತಮ ಮುನಿಯು ನಿರ್ದೇಶಿಸಿದ್ದನೋ, ಹರನು ಅದನ್ನು ಸಾಧಿಸಿದನು. ವೇದರಾಶಿಯೇ

**ಗಜರೂಪಧರೌ ಮತ್ತೌ ಮದೋದಸ್ರಾವಿಣೌ ದೃಢೌ ।**
**ತೀಕ್ಷ್ಣದಂತೌ ದೀರ್ಘಶುಂಡೌ ಗಗನಸ್ಪರ್ಧಿಪುಷ್ಕರೌ ॥೧೩॥**

**ಚೀತ್ಕಾರಭೀಷಿತಜನೌ ಸಿಂದೂರಾರುಣಮಸ್ತಕೌ ।**
**ಕಂಪತೇ ಪಾದಘಾತೇನ ಯಯೋರಾಶು ವಸುಂಧರಾ ॥೧೪॥**

---

ಪಾಕಾರವನ್ನು ತಳೆದು ಬಂದಿದೆಯೋ ಎಂಬಂತೆ ತೋರಿಬರುತ್ತಲಿದ್ದ ಋಷಿಗಳು ಮತ್ತು ಇತರ ವೇದವೇತ್ತರು 'ಉಪನಯನ ಸಂಸ್ಕಾರಕ್ಕೆ ಸಂಬಂಧಿಸಿದ ಮಹಾ ಮಂತ್ರಗಳನ್ನು ಅತ್ಯುಚ್ಚ, ಶ್ರಾವ್ಯ ಸು-ಸ್ವರದಿಂದ ಘೋಷಿಸುತ್ತಲಿದ್ದರು.' ಈ ಸಮಯಕ್ಕೆ ಸರಿಯಾಗಿ ಮಂಗಲಮಹೋತ್ಸವದ ಆ ಮಂಟಪಕ್ಕೆ ಮದೋನ್ಮತ್ತರಾದ ರಾಕ್ಷಸರಿಬ್ಬರು ನುಗ್ಗಿ ಬಂದರು. ಈ ಪೈಕಿ ಒಬ್ಬನ ಹೆಸರು 'ಕೃತಾಂತ' ಮತ್ತೊಬ್ಬನದು ಕಾಲ' ॥೧೨॥

ಕ್ರವ್ಯಾದರು ಕಾಮರೂಪಿಗಳಾದುದರಿಂದ ತಮ್ಮ ಸ್ವರೂಪವು ಸಹಸಾ ಯಾರಿಗೂ ತಿಳಿಯದಿರಲೆಂದು ಚಿಂತಿಸಿ ಮತ್ತಗಜರೂಪಗಳನ್ನು ಧರಿಸಿ ಅಲ್ಲಿಗೆ ಬಂದರು. ಹೀಗೆ ಬಂದ ಗಜಗಳು ಪರ್ವತಾಕಾರದ ತಮ್ಮ ಕುಂಭಸ್ಥಳಗಳಿಂದ ಮದಜಲವನ್ನು ಧಾರಾಕಾರವಾಗಿ ಸುರಿಸುತ್ತಲಿದ್ದವು. ಮತ್ತು ಅವು ಬಹಳ ದೃಢವಾಗಿಯೂ ಇದ್ದವು. ಈ ಗಜಗಳ ಕೋರೆಯ ಹಲ್ಲುಗಳು ಬಹಳ ನೀಳವಾಗಿಯೂ, ಮೊನಚಾಗಿಯೂ ಇದ್ದವು. ಗಗನದೊಂದಿಗೆ ಸ್ಪರ್ಧಿಸುವಂತೆ ಬಹು ದೀರ್ಘವೂ, ದೃಢವೂ ಆದ ಶುಂಡಾದಂಡವುಳ್ಳವಾಗಿದ್ದವು. ॥೧೩॥

ಅವು ತಮ್ಮ 'ಚೀಂ'ಕಾರದ ಭಯಂಕರ ರವದಿಂದ ಜನರನ್ನೆಲ್ಲ ಹೆದರಿಸಿ ದಿಕ್ಕುಪಾಲು ಮಾಡುತ್ತಿದ್ದವು. 'ಮದೋದಕವು ಹೆಪ್ಪುಗಟ್ಟಿ ಹೋದುದರಿಂದ ಸಿಂದೂರಲಿಪ್ತವಾದಂತೆ ಕಂಡುಬರುವ ಕುಂಭಸ್ಥಳ ಉಳ್ಳವು. ಅವು ಓಡುತ್ತ ಬರುವಾಗ ಒಂದೊಂದು ಹೆಜ್ಜೆಯನ್ನಿರಿಸಿದಾಗಲೂ ಭೂಮಿಯು ಗಡಗಡನೆ ನಡುಗುತ್ತಲಿದ್ದಿತು. ॥೧೪॥

ದಂತಾಘಾತೇನ ಯುದ್ಧ್ಯಂತೌ ರಜಸಾಚ್ಛಾದ್ಯ ರೋದಸೀ ।
ಸಭಾದ್ವಾರಗತಂ [1] ಶಕ್ರಕರಿಣಂ ಸಮುಪಾಗತೌ ॥೧೫॥

ದಂತಪ್ರಹಾರೈಸ್ತದ್ಗಂಡಂ ಭಿಂದಂತೌ ಬಲವತ್ತರಮ್ ।
ಸ್ರವದ್ರಕ್ತಃ ಪಪಾತೋರ್ವ್ಯಾಂ ಮೂರ್ಛಿತೋ ಗಜರಾಟ್ ಕ್ಷಣಾತ್ ॥೧೬॥

ಐರಾವತಃ ಪಪಾಲಾಶು ಮುಹೂರ್ತಾತ್ಪ್ರಾಪ್ಯ ಚೇತನಾಮ್ ।
ಕರಿಣೌ ಪೃಷ್ಠಲಗ್ನೌ ತೌ ದಂತಾಘಾತೈರ್ನಿಜಘ್ನತುಃ ॥೧೭॥

---

ಒಂದರ ಮೇಲೊಂದು ಎರಗಿ ಕಲಿತನದಿಂದ ಗುದ್ದಾಡುತ್ತಲೇ ಇವು ಮಂಡಪವಿರುವ ಕಡೆಗೆ ಬಂದವು. ಒಂದನ್ನೊಂದು ತಮ್ಮ ಕೊಂಬುಗಳಿಂದ ತಿವಿಯುವುವು. ಕೃತ್ರಿಮ ಗಜಗಳ ಈ ಓಡಾಟದಿಂದ ಭೂಮಿಯ ಧೂಳೆಲ್ಲ ಮೇಲೆದ್ದು ದಿಗ್ದಿದಿಕ್ಕುಗಳನ್ನು ಮುಚ್ಚಿಬಿಟ್ಟಿತು. ಇವು ಸಭೆಯ ಮಹಾದ್ವಾರಕ್ಕೆ ಬಂದಕೂಡಲೇ ಅಲ್ಲಿ ನಿಂತಿದ್ದ ಮಹೇಂದ್ರನ ವಾಹನ ಐರಾವತದ ಸಮೀಪವನ್ನು ಸೇರಿದವು. ॥೧೫॥

ತಮ್ಮ ಕೊಂಬುಗಳಿಂದ ಪದೇ ಪದೇ ಬಲವಾಗಿ ತಿವಿಯುತ್ತ ಐರಾವತದ ಸೊಂಡಿಲನ್ನು ಸೀಳತೊಡಗಿದವು. ಇದರಿಂದ ರಕ್ತದ ಪ್ರವಾಹವೇ ಹರಿಯಿತು. ಈ ಪರಿಯ ತಿವಿತದಿಂದಲೂ, ದೇಹಸಾರವಾದ ರಕ್ತವು ವಿಶೇಷವಾಗಿ ಸ್ರವಿಸಿದುದರಿಂದಲೂ ಐರಾವತವು ನಿರ್ವಿಣ್ಣವಾಯಿತು. ಗಜರಾಜನೆನಿಸಿದ ಅದಕ್ಕೂ ಸಹ ಬವಳಿ ಬಂದು ಐರಾವತವು ನೆಲಕ್ಕೆ ಉರುಳಿತು. ॥೧೬॥

ಕೆಲವೊಂದು ಮುಹೂರ್ತಗಳ ವರೆಗೂ ಅದಕ್ಕೆ ಸ್ಮೃತಿಯೇ ಇರಲಿಲ್ಲ. ಎಚ್ಚರವಾದೊಡನೆಯೇ ಅಲ್ಲಿ ನಿಲ್ಲಲಾರದೇ ಭಯದಿಂದ ಓಡಿ ನಡೆಯಿತು. ಆದರೂ ಈ ಎರಡು ಕೃತ್ರಿಮ ಗಜಗಳು ಅದನ್ನು ಅಷ್ಟಕ್ಕೇ ಬಿಡಲಿಲ್ಲ. ಬೆನ್ನು ಹತ್ತಿ ತಮ್ಮ ಕೊಂಬುಗಳಿಂದ ಮತ್ತೆ ಮತ್ತೆ ಅದನ್ನು ತಿವಿಯಲಾರಂಭಿಸಿದವು. ॥೧೭॥

---

1 ಇದರ ಪರಿಚಯವನ್ನು ಪರಿಶಿಷ್ಟದಿಂದ ಪಡೆಯಿರಿ.

ತತಸ್ತೌ ಮತ್ತಮಾತಂಗೌ ಸಭಾಮಧ್ಯಂ ಸಮಾಯಯತುಃ |
ಶುಂಡಾಭ್ಯಾಂ ಮಂಡಪಂ ತೌ ತು ತಾಡಯಾಮಾಸತುಸ್ತದಾ ||೧೮

ಉತ್ತಸ್ಥುಸ್ಸರ್ವಲೋಕಾಸ್ತೇ ಶ್ರುತ್ವಾ ಕೋಲಾಹಲಂ ತಯೋಃ |
ಯತೋ ಯತೋ ಗಚ್ಛತಃ ಸ್ಮ ತತೋ ದೇವಾಃ ಪಲಾಯಿತಾಃ ||೧೯||

ಮುನಯಶ್ಚ ತಯೋರ್ಭೀತ್ಯಾ ದಶ ದಿಕ್ಷು ಪಲಾಯಿತಾಃ |
ಶಿವಂ ತತ್ರ ಸಮಾಚಖ್ಯುಃ

---

ಐರಾವತವನ್ನು ಪರಿ ಪರಿಯಿಂದ ಪೀಡಿಸಿ ಬಹು ದೂರದವರೆಗೂ ಓಡಿಸಿದ ಬಳಿಕ ಸಭೆಯ ಮಧ್ಯಪ್ರದೇಶಕ್ಕೆ ನುಗ್ಗಿ ಬಂದವು. ಮದಿಸಿದ ಈ ಮಾತಂಗಗಳ ಕಾಲಡಿಗೆ ಸಿಕ್ಕು ಲೆಕ್ಕಕ್ಕೇ ಸಿಲುಕದಷ್ಟು ಮಂದಿ ನಸುಗಿ ಹೋಗಿರಬಹುದು. ಇರಲಿ, ಇವು ನೀಳವಾದ ತಮ್ಮ ಸೊಂಡಿಲನ್ನೆತ್ತಿ ಮಂಗಲ ಮಂಡಪವನ್ನು ಹೊಡೆಯಲಾರಂಭಿಸಿದವು. ||೧೮||

ಅಕಲ್ಪಿತವಾಗಿ ಇವು ಹೀಗೆ ನುಗ್ಗಿದ್ದನ್ನು ಕಂಡ ಕೂಡಲೇ ಸಭೆಯ ಮುಂಭಾಗದಲ್ಲಿ ಕುಳಿತಿದ್ದ ಪ್ರೇಕ್ಷಕರೆಲ್ಲರೂ ದಡಬಡಿಸಿ ಎದ್ದು ನಿಂತರು. ಈ ಎರಡು ಆನೆಗಳ ಗರ್ಜನೆ, ಇವುಗಳ ತುಳಿತಕ್ಕೆ ಸಿಕ್ಕು ನಸುಗಲಾರಂಭಿಸಿದ ಜನರ ಆಕ್ರಂದನ, ಜನರ ನುಗ್ಗಾಟ ಇತ್ಯಾದಿಗಳಿಂದ ಯಾರಿಗೂ ಯಾರ ಮಾತೂ ಕೇಳಿಸದಷ್ಟು ಗದ್ದಲವೆದ್ದಿತು. ಇವೆರಡೂ ಸಭೆಯಲ್ಲಿ ಯಾವ ಯಾವ ಭಾಗಕ್ಕೆ ನುಗ್ಗಿ ಬಂದವೋ, ಅಲ್ಲಲ್ಲಿ ಕುಳಿತಿದ್ದ ದೇವತೆಗಳೆಲ್ಲ ಒಬ್ಬರ ಮೇಲೆ ಮತ್ತೊಬ್ಬರು ಬೀಳುವುದನ್ನೂ ಗಮನಿಸದೇ ಎದ್ದೆದ್ದು ಓಡಿ ಹೋದರು. ||೧೯||

ಮುನಿಗಳ ಪಾಡಂತೂ ಹೇಳಲಿಕ್ಕೇ ಬರುವಂತಿರಲಿಲ್ಲ. ಈ ಆನೆಗಳೆರಡಕ್ಕೆ ಹೆದರಿ ಮುನಿಗಳು ಹತ್ತು ದಿಕ್ಕುಗಳಿಗೂ ಅಭಿಮುಖರಾಗಿ ಓಡಿ ಹೋದರು. ಓಡಿ ಹೋಗುತ್ತಿರುವ ಜನರನ್ನೂ, ಮುನಿಗಳನ್ನೂ ನೋಡಿ ಪ್ರಮಥಗಣಗಳು ಯಜಮಾನನಾದ ಪರಶಿವನನ್ನು ಕುರಿತು ಘಾಬರಿಯಿಂದ ಹೀಗೆ ಹೇಳಿದವು.

ಗಣಾ ಊಚುಃ :—

ವಿಘ್ನಮೇತದುಪಸ್ಥಿತಮ್ ||೨೦||

ಸೇಂದ್ರಾ ಸಭಾ ಮುನಿಯುತಾ ವಿಧ್ವಸ್ತಾ ಗಜಭೀತಿತಃ |

ಕ ಉವಾಚ :—

ತತಃ ಪಲಾಯಿತಾ ಗೌರೀ ಸಖೀಭಿರ್ಗೃಹಮಾಗತಾ ||೨೦||

ಬಾಲಸ್ತತೋ ನಿರೀಕ್ಷ್ಯೈತೌ ದಂತಿನೌ ಬಲವತ್ತರೌ |
ಜಗರ್ಜ ಘನವಚ್ಛೀಘ್ರಂ ತಯೋಃ ಶುಂಡೇ ದಧಾರ ಹ ||೨೨||

---

ಗಣಗಳು :—

ದೇವ ! ಇದೊಂದು ದೊಡ್ಡ ವಿಪತ್ತು ಬಂದು ಬಿಟ್ಟಿತಲ್ಲ ? ಮುಂದೇನು ಗತಿ ? ||೨೦||

ಇಂದ್ರ ಮೊದಲಾದ ದೇವತೆಗಳಿಂದಲೂ, ಮುನಿವರ್ಯರಿಂದಲೂ ತುಂಬಿ ಹೋಗಿದ್ದ ಉಪನಯದ ಸಭೆಯು ಈ ಗಜಗಳ ಹಾವಳಿಗೆ ಚದುರಿ ಧ್ವಂಸವಾಗಿ ಹೋಯಿತು.

ಬ್ರಹ್ಮಾ :—

ಗಣಗಳು ಘಾಬರಿಗೊಂಡು ನಡೆದ ಅನಾಹುತ ಪ್ರಸಂಗವನ್ನು ಈ ರೀತಿ ತಿಳಿಸಿದೊಡನೆಯೇ, ದೇವನ ಸಮೀಪದಲ್ಲೇ ಇದ್ದ ಪಾರ್ವತೀ ದೇವಿಯು ಇದನ್ನು ಕೇಳಿ, ತನ್ನ ಸಖೀಜನರನ್ನು ಸಂಗಡ ಕರೆದುಕೊಂಡು ಓಡೋಡುತ್ತ ತನ್ನ ಮಂದಿರ ವನ್ನು ಸೇರಿಕೊಂಡಳು. ||೨೧||

ಅತ್ತ ಬಾಲವಟು, ಗಣಪತಿಯು ಗಜರೂಪಿಗಳಾದ ಈ ರಾಕ್ಷಸರಿಬ್ಬರನ್ನೂ ನೋಡಿದನು. ಐರಾವತವನ್ನೂ ಸೋಲಿಸಿದುದರಿಂದ 'ಇವು ನಿಜವಾದ ಗಜ ಗಳಲ್ಲ.' ಎಂಬುದನ್ನು ಕೂಡಲೇ ಅರಿತು ಬಿಟ್ಟನು. ಬಹಳ ಕೋಪ ಉಂಟಾ

ಉಭಾಭ್ಯಾಮಪಿ ಹಸ್ತಾಭ್ಯಾಂ ಚೀತ್ಕಾರಂ ತೌ ಪ್ರಚಕ್ರತುಃ ।
ಭ್ರಾಮಯಿತ್ವಾಸ್ಫಾಲಯಿತ್ವಾ ಏಕಸ್ಮಿನ್ನಪರಂ ಗಜವಪುಃ ॥೨೩॥

ಉಭೌ ತೌ ಶತಧಾ ಜಾತೌ ಪತಿತೌ ಧರಣೀತಲೇ ।
ಧರಾ ಚಕಂಪೇ ವೃಕ್ಷಾಶ್ಚ ನಿಪೇತುಶ್ಚೂರ್ಣಿತಾ ಭುವಿ ॥೨೪॥

ತತಃ ಖಂಡಾನಿ ತಾನ್ಯಾಶು ದೂರತಶ್ಚಿಕ್ಷಿಪುರ್ಗಣಾಃ ।
ವಟುಂ ಜಗ್ರಾಹ ಜನನೀ ಶೀಘ್ರಮಾಗತ್ಯ ಸ್ವೇ ಕಟೌ ॥೨೫॥

ಯಿತು. ಚತುರ್ದಶ ಭುವನಗಳೂ ಒಮ್ಮೆಲೇ ನಡುಗಿಹೋಗುವಂತೆ ಗರ್ಜಿಸಿದನು. ಮತ್ತು ಓಡಿಹೋಗಿ ಆವೆರಡರ ದಂಡಾಕಾರದ ಸೊಂಡಗಳನ್ನು ತನ್ನ ಪುಟ್ಟ ಪುಟ್ಟ ಕೈಗಳಿಂದ ಭದ್ರವಾಗಿ ಹಿಡಿದು ಬಿಟ್ಟನು. ॥೨೨॥

ಗಣಪತಿಯ ಹಿಡಿತಕ್ಕೆ ಸಿಕ್ಕು ಗಜರೂಪೀ ರಾಕ್ಷಸರಿಬ್ಬರೂ ನಡುಗಿ ಹೋದರು. ಹಿಡಿತದ ಈ ಬಿಗಿತವನ್ನು ಸಹಿಸಲಾರದೇ ಏಕಪ್ರಕಾರವಾಗಿ ಚೀರಲಾರಂಭಿಸಿದವು. ಆಗ ಗಣಪತಿಯು ಆವೆರಡನ್ನೂ ಗರಗರ ತಿರುಗಿಸಿ ಒಂದು ಆನೆಯಿಂದ ಮತ್ತೊಂದು ಆನೆಯನ್ನು ಬಡಿದು ಬಿಟ್ಟನು. ॥೨೩॥

ಗಾಜಿನ ಎರಡು ಬುರುಡೆಗಳನ್ನು ಕೈಗೆ ತೆಗೆದುಕೊಂಡು ಒಂದು ಬುರುಡೆಯಿಂದ ಮತ್ತೊಂದು ಬುರುಡೆಗೆ ಬಲವಾಗಿ ಹೊಡೆದರೆ ಒಮ್ಮೆಲೇ ಅವೆರಡೂ ಚೂರು-ಚೂರಾಗಿ ಕೆಳಕ್ಕೆ ಬೀಳುವಂತೆ ಇವರಿಬ್ಬರೂ ನೂರಾರು ಹೋಳುಗಳಾಗಿ ನೆಲಕ್ಕೆ ಬಿದ್ದುಬಿಟ್ಟರು. ದೇಹದ ಚೂರುಗಳು ನೆಲಕ್ಕೆ ಬಿದ್ದುದರಿಂದ ನೆಲ ನಡುಗಿತು. ನೆಲದ ಮೇಲೆ ಬೆಳೆದು ಅದನ್ನೇ ಅವಲಂಬಿಸಿ ನಿಂದಿದ್ದ ಮಹಾಮಹಾ ವೃಕ್ಷಗಳೆಲ್ಲ ಬುಡಸಹಿತ ಮೇಲಕ್ಕೆದ್ದು ಗಜರೂಪೀ ರಾಕ್ಷಸರ ದೇಹದ ಚೂರುಗಳ ಅಡಿಗೆ ಸಿಕ್ಕು ಚೂರು ಚೂರಾದವು. ॥೨೪॥

ಸರಿ, ಪ್ರಮಥಗಣಗಳಿಗೆ ಸ್ವಲ್ಪ ಕಾಲದಿಂದೀಚೆಗೆ ತಪ್ಪಿದಂತಾಗಿದ್ದ ಶವನಿರ್ವಹಣ ಕಾರ್ಯವು ಮತ್ತೆ ಪ್ರಾಪ್ತವಾಯಿತು. ಅವರೂ ಸಹ ಬಹಳ ಸಾಹಸವನ್ನು

'ಸರ್ವೇ ಪಲಾಯಿತಾ ದೇವಾ ಮುನಯೋಽನೇನ ದಾನವೌ ।
ಬಾಲೇನ ನಿಹತೌ ಶೀಘ್ರಮಿ'ತ್ಯುವಾಚ ಶಿವಾಂ ಸಖೀ ॥೨೬॥

ತತಸ್ತೇ ಮಿಲಿತಾ ದೇವಾ ಇಂದ್ರಾದ್ಯಾ ಮುನಯೋಽಪಿ ಚ ।
ಊಚುರ್ಗಣೇಶಂ ತೇ ಸರ್ವೇ

ವ್ಯಕ್ತಪಡಿಸುತ್ತ ರಾಕ್ಷಸರ ದೇಹಗಳ ಚೂರು, ಮುರಿದ ವೃಕ್ಷಗಳು ಎಲ್ಲವನ್ನೂ ಸರ ಸರ ಎತ್ತಿಕೊಂಡು ಹೋಗಿ ಅವನ್ನು ಬಹು ದೂರ ಬಿಸುಟು ಬಂದರು. ಪ್ರಕ್ಷುಭಿತವಾಗಿದ್ದ ವಾತಾವರಣವು ಒಂದು ರೀತಿಯಿಂದ ಸಮಾಧಾನಕ್ಕೆ ಬಂದೊಡನೆಯೇ ಪಾರ್ವತಿಯು ಓಡುತ್ತ ಬಂದು ವಟು, ಗಣಪತಿಯನ್ನು ಎತ್ತಿಕೊಂಡು ತನ್ನ ಸೊಂಟದಲ್ಲಿ ಕುಳ್ಳಿರಿಸಿಕೊಂಡಳು. ॥೨೫॥

ರಾಕ್ಷಸರ ಈ ಧಾಂದಲೆಗೆ ಹೆದರಿ ದೇವತೆಗಳೂ, ಮುನಿಗಳೂ ಎಲ್ಲರೂ ಎಲ್ಲೆಲ್ಲೋ ಓಡಿಬಿಟ್ಟಿದ್ದರು. ಆಗ ದೇವಿಯ ಸಖಿಯರಲ್ಲೊಬ್ಬಳು ಪಾರ್ವತಿಯ ಸಮೀಪಕ್ಕೆ ಬಂದು 'ತಾಯೇ! ನೋಡಿದೆಯ, ನಮ್ಮ ಬಾಲಕನ ಪೌರುಷವನ್ನು? ಮದಿಸಿದ ಗಜಗಳಾಗಿ ಬಂದಿದ್ದ ಆ ದೈತ್ಯವೀರರಿಬ್ಬರನ್ನೂ ತಾನೊಬ್ಬನೇ ಎದುರಿಸಿ, ಒಂದು ಕ್ಷಣದೊಳಗಾಗಿಯೇ ಕೊಂದು ಬಿಸುಟಿರುವನು' ಎಂದು ಬಹಳ ಸಡಗರದಿಂದ ನುಡಿದಳು. ॥೨೬॥

ರಾಕ್ಷಸರೂಪೀ ಗಜಗಳಿಗಾಗಿ ಹೆದರಿ ಬಹು ದೂರ ಓಡಿ ಹೋಗಿ 'ಏನು ನಡೆಯುವುದೋ' ಎಂಬುದನ್ನು ಮರೆಯಲ್ಲಿ ನಿಂದು ನೋಡುತ್ತಲಿದ್ದ ಇಂದ್ರಾದಿ ದೇವತೆಗಳು ದೈತ್ಯರು ಮೃತಿಯನ್ನೈದುದನ್ನು ನೋಡಿ ಸ್ವಲ್ಪಮಟ್ಟಿಗೆ ಉಸಿರಾಡಿಸುವಂತಾದರು. ಮತ್ತು ತಾವು ಅಡಗಿ ಕುಳಿತಿದ್ದ ಸ್ಥಳದಿಂದ ಒಬ್ಬೊಬ್ಬರಾಗಿ ಈಚೆಗೆ ಬಂದರು. ಅವರ ಸಂಗಡ ಮುನಿಗಳೂ ಇದ್ದರು. ಗಣಪತಿ, ಗಿರಿಜೆ ಸಖಿ, ಗಣಗಳು ಮಾತ್ರ ಇರುವುದನ್ನೂ ಮತ್ತಾವ ಹೊಸ ವ್ಯಕ್ತಿಯು ಇಲ್ಲದಿರುವುದನ್ನೂ ನೋಡಿ, ಅವರಿಗೆ ಸಂಪೂರ್ಣವಾಗಿ ಧೈರ್ಯ ಬಂದಿತು. ಆಗ ಗಣಪತಿಯನ್ನು ಸ್ತುತಿಸುತ್ತ ಹೀಗೆಂದು ಮಾತನಾಡಿದರು.

ದೇವಾ ಊಚುಃ :—

ಸ್ವಾಮಿನ್ಸರ್ವಗುಣಾಕರ ! ॥೨೭॥

ಸರ್ವಪ್ರಾಣಹರೌ ದೈತ್ಯೌ ಕಾಪಟ್ಯಾದ್ಗಜರೂಪಿಣೌ ।
ನಿಹತೌ ಲೀಲಯಾ ದೇವ ! ಮಾಯಿನೌ ಬಲವತ್ತರೌ ॥೨೮॥

ಕ ಉವಾಚ :—

ಇತ್ಯುಕ್ತ್ವಾ ಶಕ್ರ-ಮುನಯೋ ದೇವಾಶ್ಚ ವಿವಿಶುಸ್ಸಭಾಮ್ ।
ಉಪವಿಷ್ಟೇಷು ಸರ್ವೇಷು ನನೃತುಶ್ಚಾಪ್ಸರೋಗಣಾಃ ॥೨೯॥

ದೇವತೆಗಳು :—

ಭಗವನ್, ಸಕಲ ಸದ್ಗುಣನಿಧೆ !

ಈಗ ಬಂದಿದ್ದ ದೈತ್ಯರೆಂದರೆ ಸಾಮಾನ್ಯರಾದವರೇ ? ದೇವ ! ಮಹಾ ದುಷ್ಟಾತ್ಮರು. ಬಹಳ ಕಪಟಿಗಳು. ಅಲ್ಲದೇ ಎಲ್ಲರ ಪ್ರಾಣಗಳನ್ನೂ ಒಮ್ಮೆಲೇ ಹರಣಮಾಡಿಬಿಡುವಷ್ಟು ಬಲಿಷ್ಠರೂ ಹೌದು. ಅವರನ್ನು ಕಂಡು ನಮ್ಮಂಥವರು ಸಹ ಹೆದರಿ ಓಡಿಹೋದೆವಲ್ಲವೇ ? ಹೀಗಿರುವಾಗ ನೀನೊಬ್ಬನೇ ಆ ಮಾಯಾವಿ ದೈತ್ಯರಿಬ್ಬರನ್ನೂ ಕ್ಷಣಮಾತ್ರದಲ್ಲಿ ಲೀಲೆಯಿಂದಲೇ ನಿಗ್ರಹಿಸಿಬಿಟ್ಟೆಯಲ್ಲ ? ಬಹಳ ಆಶ್ಚರ್ಯ. ॥೨೮॥

ಬ್ರಹ್ಮ :—

ಇಂದ್ರಾದಿದೇವತೆಗಳೂ, ಮುನಿಗಳೂ ಹೀಗೆ ಹೇಳಿ ಸಭೆಯ ಮಧ್ಯಭಾಗವನ್ನು ಪುನಃ ಪ್ರವೇಶಿಸಿದರು. ದೇವತೆಗಳು ಸಭೆಗೆ ಬಂದೊಡನೆ ಇತರರೆಲ್ಲರೂ ಮತ್ತೆ ಸಭೆಗೆ ಬಂದರು. ಎಲ್ಲರೂ ತಮ್ಮ ತಮ್ಮ ಆಸನಗಳಲ್ಲಿ ಕುಳಿತ ಬಳಿಕ ದೇವನರ್ತಕಿಯರಾದ ಅಪ್ಸರಸ್ತ್ರೀಯರು ನರ್ತಿಸಲಾರಂಭಿಸಿದರು. ॥೨೯॥

ತತೋ ವಾದ್ಯಾನ್ಯವಾದಂತ ಬ್ರಹ್ಮಾ ರುದ್ರಸಮೀಪಗಃ ।
ದತ್ವಾ ಪರಸ್ಪರಂ ಪ್ರೈಷಂ ಬಬಂಧ ಮೇಖಲಾಂ ಶಿಶೋಃ ||೩೦||

ಯಜ್ಞೋಪವೀತಮಜಿನಂ ಹೋಮಂ ಚ ಸಮಿಧಾಮಪಿ ।
ಕಾರಯಾಮಾಸ ವಿಧಿವತ್ಸಾವಿತ್ರೀವಾಚನಂ ತತಃ ||೩೦||

ತತೋ ಮಾತಾ ದದೌ ಭಿಕ್ಷಾಮಂಶುಕೇ ಭೂಷಣಾನಿ ಚ ।
ಉತ್ತರೀಯಂ ಚ ರತ್ನಾನಿ ಮುಕ್ತಾಫಲಯುತಾನಿ ಚ ||೩೨||

ಅತ್ತ ಮಂಗಲವಾದ್ಯಗಳು ಮೊದಲಿನಂತೆ ಮತ್ತೆ ಮೊಳಗತೊಡಗಿದವು. ಉಪನಯನ ಮಂಗಲ ಮಹೋತ್ಸವವು ಪುನಃ ಮುಂದುವರೆಯಿತು. ಆಗ ಬ್ರಹ್ಮದೇವನು ಪರಶಿವನ ಸಮೀಪಕ್ಕೆ ಬಂದನು. ಒಬ್ಬರನ್ನೊಬ್ಬರು ಸಂಬೋಧಿಸಿ ತಾನು ಮುಂದುವರಿದು ಶಿಶುವಿಗೆ ಮೇಖಲೆ (ಇದನ್ನು 'ಮೌಂಜೀ' ಎಂದು ಕರೆಯುತ್ತಾರೆ) ಯನ್ನು ಮಂತ್ರೋಕ್ತರೀತ್ಯಾ ಕಟ್ಟಿದನು. ||೩೦||

ಯಜ್ಞೋಪವೀತಧಾರಣ, ಅದಕ್ಕೆ ಅಜಿನಬಂಧನ, ಅಗ್ನಿಕಾರ್ಯ ಇವನ್ನೆಲ್ಲ ಬ್ರಹ್ಮದೇವನು ವಿಧಿಪೂರ್ವಕವಾಗಿ ವಟುವಿನ ಮೂಲಕ ಮಾಡಿಸಿದನು. ಇಷ್ಟೆಲ್ಲ ಕ್ರಿಯೆಗಳು ಸಾಂಗೋಪಾಂಗವಾಗಿ ನೆರವೇರಿದ ಬಳಿಕ 'ಗಾಯತ್ರೀ' ಮಹಾಮಂತ್ರೋಪದೇಶವು ನಡೆಯಿತು. ||೩೧||

ಅನಂತರ ಜಗದ್ಧಾತ್ರಿಯಾದ ಅನ್ನಪೂರ್ಣೆಯು ಇತರ ಸುಮಂಗಲಿಯರೊಡನೆ ಮುಂದೆ ಬಂದು ಶಿಶುವಿಗೆ 'ಮಾತೃಭಿಕ್ಷೆ'ಯನ್ನು ತುಂಬು ಹೃದಯದಿಂದ ನೀಡಿದಳು. ದಿವ್ಯವಾದ ವಸ್ತ್ರಯುಗ್ಮವನ್ನು ಕೊಟ್ಟಳು. ರತ್ನಮಯವಾದ ಅನೇಕ ದಿವ್ಯಾಭರಣಗಳನ್ನು ಬಾಲಕನಿಗೆ ತೊಡಿಸಿದಳು, ಮೇಲ್ಹೊದ್ದಿಕೆಯನ್ನು ಹೊದಿಸಿದಳು. ವಟುವಿನ ಭಿಕ್ಷಾಪಾತ್ರೆಯಲ್ಲಿ ಮುತ್ತು, ರತ್ನ ಮೊದಲಾದ ಅನರ್ಘ್ಯವಸ್ತುಗಳನ್ನು ತನ್ನ ಅಮೃತಪೂರ್ಣ ಬೊಗಸೆಯಿಂದ ಭಿಕ್ಷೆ ಕೊಟ್ಟಳು. ||೩೨||

ಲಡ್ಡುಕಾನ್ ಭಕ್ಷ್ಯ-ಖಾದ್ಯಾನಿ, ತ್ರಿಶೂಲಂ ಶಶಿನಂ ಶಿವಃ |
ದದೌ ನಾಮ ಚಕಾರಾಸ್ಯ 'ಭಾಲಚಂದ್ರ' ಇತಿ ಸ್ಫುಟಮ್ ||೩೩||

'ಶೂಲಪಾಣಿ'ರಿತಿ ಪರಂ ತತಶ್ಚಕ್ರಂ ಹರಿರ್ದದೌ |
[1]'ಶೋಚಿಷ್ಕೇಶೇ'ತಿ ನಾಮಾಸ್ಯ ಚಕ್ರೇ ಸದ್ಯೋ ಮಹಾತ್ಮನಃ ||೩೪||

ತತಃ ಪುರಂದರಃ ಪೂಜ್ಯ ಕಂಠೇ [2]ಚಿಂತಾಮಣಿಂ ದದೌ |
ನಾಮ 'ಚಿಂತಾಮಣಿ'ರಿತಿ ಚಕ್ರೇ ಸರ್ವಾರ್ಥದಂ ಶುಭಮ್

---

ಅನೇಕ ಬಗೆಯ ಮಧುರ ಲಡ್ಡು (ಇದನ್ನು 'ಲಾಡು' ಎಂದು ಕರೆಯುತ್ತಾರೆ) ಗಳನ್ನೂ ಇತರ ಸು-ಪಕ್ವ ದಿವ್ಯ ಭಕ್ಷ್ಯ-ಖಾದ್ಯಗಳನ್ನೂ ದೇವನ ಉಡಿಯಲ್ಲಿ ಹಾಕಿದಳು. ಅನಂತರ ಪರಶಿವನು ಮುಂದೆ ಬಂದು ತನ್ನ ಶೇಖರದಲ್ಲಿದ್ದ ಶಶಿ (ಚಂದ್ರ) ಯನ್ನೂ, ಕೈಯ್ಯಲ್ಲಿದ್ದ ತ್ರಿಶೂಲಾಯುಧವನ್ನೂ ಮಗನಿಗೆ ಪ್ರೀತಿಯಿಂದ ಕೊಟ್ಟನು. ಮಗನ ಮುದ್ದು ಮುಖವನ್ನು ನೋಡಿದೊಡನೆಯೇ ಮಹಾದೇವನ ಮನಸ್ಸು ತುಂಬಿಬಂದಿತು. ಆಗ ಅವನನ್ನು 'ಭಾಲಚಂದ್ರ' ಎಂಬ ಸುಂದರವಾದ ಹೆಸರಿನಿಂದ ಕರೆದನು. ಇದು ಎಲ್ಲರಿಗೂ ಸ್ಪಷ್ಟವಾಗಿ ಕೇಳಿಸಿತು. ||೩೩||

ಹರನಿಗೆ ಮತ್ತೇನು ತೋರಿತೋ, ಕಾಣೆ ಬಾಲಕನನ್ನು ತಿರುಗಿ ನೋಡಿ 'ಶೂಲಪಾಣೇ' ಎಂದೂ ಕರೆದನು. ಅನಂತರ ಜಗದ್ರಕ್ಷಕ ಗೌರ್ಯಗ್ರಜ; ಅಧೋಕ್ಷಜನು ಬಾಲಕನ ಬಳಿಗೆ ಬಂದು ತನ್ನ ಸೋದರಳಿಯ; ಗಣಪತಿಗೆ 'ಸುದರ್ಶನ'ವನ್ನಿತ್ತನು. ಮತ್ತು ಮಹಾತ್ಮನಾದ ಗಣಪತಿಯನ್ನು 'ಶೋಚಿಷ್ಕೇಶ' ಎಂದು ಕರೆದನು. ||೩೪||

ಅನಂತರ ಪುರಂದರನ ಸವಾರಿಯು ಮುಂದಕ್ಕೆ ಬಂದಿತು. ಇಂದ್ರನು ಭಕ್ತಿಯಿಂದ ಗಣಪತಿಯನ್ನು ಪೂಜಿಸಿದನು. ಚಿಂತಿತವಸ್ತುಗಳನ್ನೆಲ್ಲ ತಡೆ ಇಲ್ಲದೇ ಕೊಡಬಲ್ಲ 'ಚಿಂತಾಮಣಿ' ಎಂಬ ಅತ್ಯಮೋಘ ರತ್ನವನ್ನು ದೇವನಿಗೆ ಅರ್ಪಿಸಿದನು. ಮತ್ತು ಮಹಾಗಣೇಶನನ್ನು 'ಚಿಂತಾಮಣಿ' ಎಂಬ ಅನ್ವರ್ಥವಾದ ಶುಭ ನಾಮದಿಂದ ಕರೆದನು. ||೩೫||

---

ಸಂಖ್ಯಾಚಿಹ್ನಿತ ಪದಗಳ ಪರಿಚಯವನ್ನು ಪರಿಶಿಷ್ಟದಿಂದ ಪಡೆಯಿರಿ.

ದನೌ ತದ್ವೈವ ಕಮಲಮಭ್ಯರ್ಚ್ಯ ಕಮಲಾಸನಃ ।
'ವಿಧಾತೇ' ತಿ ಚ ನಾಮಾಸ್ಯ ಸ್ಥಾಪಯಾಮಾಸ ಸಂಸದಿ ॥೩೬॥

ತತಸ್ಸರ್ವೇ ಸುರಗಣಾ ಸಮಭ್ಯರ್ಚ್ಯ ಗುಣೇಶ್ವರಮ್ ।
ನಾನಾವಿಧಾನಿ ನಾಮಾನಿ ಚಕ್ರುಸ್ಸ್ವಸ್ವೇಚ್ಛಯಾ ಸುರಾಃ ॥೩೭॥

ಅದಿತಿಃ ಕಶ್ಯಪಶ್ಚಾಥ ತಂ ಪುಪೂಜತುರಾದರಾತ್ ।
ದರ್ಶಯಾಮಾಸ ದೇವೋಽಪಿ ಪೂರ್ವರೂಪಂ ತಯೋಃ ಸ್ವಭವಮ್
॥೩೮॥

---

ಮುಂದಿನವನೇ ನಾನು. ನಾನೂ ಮುಂದಕ್ಕೆ ಹೋಗಿ ನಿಂತೆನು. ವಿಕಸಿತ ಕಮಲಪುಷ್ಪಗಳಿಂದ ಕಮನೀಯ ಕಾಯನಾದ ಕಾಮಾಕ್ಷಿಯ ಕುಮಾರನನ್ನು ಅರ್ಚಿಸಿದೆನು. ಸಕಲ ಜಗದ್ರಕ್ಷಕನಾದ ಅವನನ್ನು 'ವಿಧಾತಾ' ಎಂಬ ಸ್ವ-ನಾಮದಿಂದಲೇ ಕರೆದುಬಿಟ್ಟೆನು. ॥೩೬॥

ಇಷ್ಟಾದ ಬಳಿಕ ಇತರ ದೇವತೆಗಳೆಲ್ಲ ಗುಂಪು-ಗುಂಪಾಗಿ ಗಣಪತಿಯ ಎದುರಿಗೆ ಬಂದು ನಿಂದರು. ಗುಣೇಶ್ವರನನ್ನು ಭಕ್ತಿಯಿಂದಲೂ, ಆನಂದ ದಿಂದಲೂ ಅರ್ಚಿಸಿದರು. ಯಾರು ಯಾರಿಗೆ ಹೇಗೆ ಹೇಗೆ ಗಣಪತಿಯನ್ನು ಸಂಬೋಧಿಸಿ ಕರೆಯಬೇಕೆಂಬ ಇಚ್ಛೆಯುಂಟಾಯಿತೋ, ಆಯಾ ಹೆಸರುಗಳನ್ನು ಇರಿಸಿ ಕರೆದರು. ಮತ್ತು ಇದರಿಂದ ತುಂಬ ತೃಪ್ತಿಯನ್ನು ಪಡೆದರು. ॥೩೭॥

ಅತ್ತ ಕಡೆ ಸ್ತ್ರೀವರ್ಗದಲ್ಲಿ ಅಗ್ರಗಣ್ಯಳಾಗಿ ಕುಳಿತಿದ್ದ ಕಶ್ಯಪಭಾರ್ಯೆ ಅದಿತೀದೇವಿಯು ತನ್ನ ಪತಿದೇವ ಕಶ್ಯಪ ಬ್ರಹ್ಮನೊಡನೆ ಮುಂದೆ ಬಂದಳು. ದಂಪತಿಗಳಿಬ್ಬರೂ ವಟುವನ್ನು ಪರಮಾದರದಿಂದ ಪೂಜಿಸಿದರು. ಆಗ ದೇವ ದೇವ ಗಜಾನನನು ತನ್ನ ಹಿಂದಿನ ಅವತಾರಕ್ಕೆ ಜನ್ಮದಾತೃಗಳಾಗಿದ್ದ ಅದಿತಿ-ಕಶ್ಯಪರನ್ನು ನೋಡಿದನು. ಆ ಅವತಾರದ ಕೊನೆಯ ಘಳಿಗೆಯಲ್ಲಿ ಅದಿತೀದೇವಿಗೆ ತಾನು ಇತ್ತ ಆಶ್ವಾಸನ ವಚನವು ಥಟ್ಟನೆ ಸ್ಮರಣೆಗೆ ಬಂದಿತು. ತನ್ನ ಅಭಿವಚನವನ್ನು ನಡೆಸಲಿಕ್ಕೆ ಇದೇ ಸರಿಯಾದ ಸಮಯವೆಂದು ನಿಶ್ಚಯಿಸಿ ಅವರ ಮಗನಾಗಿ ಅವತರಿಸಿದಾಗಿದ್ದ ಮಂಗಲರೂಪವನ್ನು ಈಗ ಅವರಿಗೆ ತೋರಿಸಿದನು. ॥೩೮॥

ಭಾಲಚಂದ್ರಂ ದಶಭುಜಂ ಮುಕುಟೇನ ವಿರಾಜಿತಮ್ ।
ದಿವ್ಯಾಂಬರಂ ದಿವ್ಯಗಂಧಂ ದಿವ್ಯಾಭರಣಭೂಷಿತಮ್ ॥೩೯॥

ಸಿಂಹಾರೂಢಂ ವಿರಾಜಂತಮುರಗೋದರಬಂಧನಮ್ ।
ದೃಷ್ಟ್ವೇತ್ಥಮದಿತಿರ್ಹೃಷ್ಟಾ ಲಿಲಿಂಗ ಸ್ನೇಹನಿರ್ಭರಾ ॥೪೦॥

ರೋಮಾಂಚಿತಶರೀರಾ ಸಾ ಪ್ರೇಮಗದ್ಗದನಿಃಸ್ವನಾ ।
ವಿಸ್ಮಯಂ ಪರಮಂ ಪ್ರಾಪ್ತಾ ಸ್ರವದಶ್ರುಜಲಾವಿಲಾ ॥೪೧॥

---

ಅದಿತಿ–ಕಶ್ಯಪರು ಕಂಡ ಸುಂದರಮೂರ್ತಿ ವ್ಯಾಸ! ಹೇಗಿದ್ದಿತು, ಬಲ್ಲೆಯ? ಫಾಲಪ್ರದೇಶದಲ್ಲಿ ಚಂದ್ರನನ್ನು ಧರಿಸಿದ್ದನು. ಆ ಮೂರ್ತಿಗೆ ಹತ್ತು ಭುಜಗಳಿದ್ದವು. ದಿವ್ಯವಾದ ಮಣಿಮಯ ಕಿರೀಟವನ್ನು ತನ್ನ ಉತ್ತಮಾಂಗದಲ್ಲಿ ಧರಿಸಿದ್ದನು. ದಿವ್ಯ ಪೀತಾಂಬರವನ್ನು ಉಟ್ಟು, ಹೊದೆದಿದ್ದನು. ಸುಗಂಧಿ ದಿವ್ಯ ಗಂಧವನ್ನು ದೇಹಕ್ಕೆಲ್ಲ ಲೇಪಿಸಿಕೊಂಡಿದ್ದನು. ಅವನು ತನ್ನ ದೇಹಕ್ಕೆ ಅಲಂಕಾರಾರ್ಥವಾಗಿ ಧರಿಸಿದ್ದ ರತ್ನಾಭರಣಗಳು ದಿವ್ಯವಾದುವು. ॥೩೯॥

ಆ ಅವತಾರದಲ್ಲಿ ವಾಹನವನ್ನಾಗಿ ಅಂಗೀಕರಿಸಿದ್ದ ಮೃಗರಾಜನನ್ನು ಏರಿ ಕುಳಿತಿದ್ದನು. ಫಟಸರ್ಪವನ್ನು ತನ್ನ ಉದರಕ್ಕೆ ಮೇಖಲೆಯಂತೆ ಬಿಗಿದಿದ್ದನು. ಹೀಗೆ ಅತ್ಯದ್ಭುತ ಸೌಂದರ್ಯದಿಂದ ವಿರಾಜಿಸುವ ದೇವನನ್ನು ನೋಡಿದೊಡನೆಯೇ ಅದಿತಿಯು ಹರ್ಷೋದ್ರೇಕದಿಂದ ಪರವಶಳಾಗಿಹೋಗಿ ಗಣಪತಿಯನ್ನು ಒಮ್ಮೆಲೇ ದೃಢವಾಗಿ ಆಲಿಂಗಿಸಿದಳು. ಆಗ ಅದಿತಿಯ ದೇಹದ ಪ್ರತ್ಯವಯವವೂ ಸ್ನೇಹಮಯವಾಯಿತು. ॥೪೦॥

ರೋಮಾಂಚಾಂಚಿತಗಾತ್ರಳಾದ ಅದಿತೀದೇವಿಯು ಪ್ರೇಮರಸರುದ್ಧಕಂಠಳಾದಳು. ಸ್ಪಷ್ಟವಾಗಿ ಮಾತನಾಡಲು ಸಹ ಬಾರದಷ್ಟು ಅವಳ ಧ್ವನಿಯು ಗದ್ಗದಿತವಾಯಿತು. ‘ಈ ಮೂರ್ತಿಯನ್ನು ನಾನು ಯಾವ ಯುಗದಲ್ಲಿ ನೋಡಿದ್ದೆ? ಈಗ ಯಾವ ಯುಗ ನಡೆಯುತ್ತಿದೆ? ಆ ಮೂರ್ತಿಯು ಅಂದೇ ಸ್ವಧಾಮಕ್ಕೆ

**ಪರಮಾನಂದಮಗ್ನಾಭೂತ್ಸ್ನೇಹಸ್ರುತಪಯೋಧರಾ ।**
**ತಥೈವ ಕಶ್ಯಪೋ ದೇಹಭಾವಂ ತತ್ಯಾಜ ತತ್ಕ್ಷಣಾತ್ ॥೪೨॥**

**ಊಚತುಸ್ತೌ ಸುತಸ್ನೇಹಾತ್**

ತೆರಳಲಿಲ್ಲವೇ ? ಪುನಃ ಆ ರೂಪ ಈಗೆಲ್ಲಿಂದ ಬಂದಿತು ? ಹಿಂದೆ ನಡೆದುದು ಕನಸೇ ? ಈಗ ನಾನು ಜಾಗ್ರದವಸ್ಥೆಯಲ್ಲಿರುವೆನೇ ? ಏವಮಾದಿ ಕಲ್ಪನೆಗಳು ಅವಳ ಮೆದುಳನ್ನಾವರಿಸಿ ಅವಳನ್ನು ಆಶ್ಚರ್ಯಚಕಿತಳನ್ನಾಗಿ ಮಾಡಿದವು. 'ಇದು ಸ್ವಪ್ನವೇ ಆಗಿರಲೊಲ್ಲದೇಕೆ, ಎಚ್ಚರವಾಗುವುದೇ ಬೇಡ,' ಎಂದು ಸಹ ಅದಿತಿಯು ಭಾವಿಸಿರಬಹುದಲ್ಲವೇ ? ವ್ಯಾಸ ! ಸ್ನೇಹವು ಮಿತಿಮೀರಿ ಕಣ್ಣೀರಾಗಿ ಹರಿಯಿತು. ಘಟ್ಟಿಯಾಗಿ ಒಮ್ಮೆ ಅತ್ತುಬಿಟ್ಟಳು, ॥೪೧॥

ಆವೇಗ ಸ್ವಲ್ಪ ಕಡಿಮೆಯಾದೊಡನೆಯೇ ಮತ್ತೆ ಕಣ್ಣುಗಳನ್ನರಳಿಸಿ ಭಗವಂತನನ್ನು ನೋಡಿದಳು. ಗಣಪತಿಯು ವಿನಾಯಕನ ರೂಪದಿಂದಲೇ ತೋರಿದನು. ಆನಂದಮಯಳಾದಳು. ಎದೆ ತುಂಬಿ ಬಂದು ಸ್ತನ್ಯವು ಧಾರಾಕಾರವಾಗಿ ಹರಿಯಿತು. ಇತ್ತ ಕಶ್ಯಪನ ಸ್ಥಿತಿಯೂ ಒಂದು ಬಗೆಯಾಯಿತು. ಪುತ್ರವ್ಯಾಮೋಹವು ಅವನ ರೋಮ-ರೋಮಗಳಲ್ಲೂ ವ್ಯಾಪ್ತವಾಯಿತು. ಕೆಲವೊಂದು ಕಾಲ ಅವನಿಗೆ ದೇಹದ ಮೇಲೆ ಭಾವವು ಸಹ ಇರಲಿಲ್ಲ. ॥೪೨॥

ಅದಿತಿ-ಕಶ್ಯಪರು ಸಾಮಾನ್ಯರಾದವರೇನೂ ಅಲ್ಲ. ಮಹಾ ಜ್ಞಾನಿಗಳು ಏನಾದರೇನು ? ಬಹು ಕಷ್ಟ ಪಟ್ಟು ಭಗವಂತನನ್ನು ಪುತ್ರನನ್ನಾಗಿ ಪಡೆದುಕೊಂಡಿದ್ದರೂ, ಹೆಚ್ಚು ಕಾಲ ಅವನೊಡನೆ ಇರಲಾರದಂತಾದ ಅವರ ಪರಿಸ್ಥಿತಿ ಶೋಚನೀಯವಾಗಿರಲಿಕ್ಕಿಲ್ಲವೇ ? ಮತ್ತು ಎಷ್ಟೋ ಕಾಲ ಕಳೆದು ಹೋದ ಬಳಿಕ ಅದೇ ಸು-ಪುತ್ರ ಪುನಃ ದೃಗ್ಗೋಚರನಾದರೆ, ಪುತ್ರಪ್ರೇಮವು ಉದ್ಭವಿಸಿ ತದೇಕ ಚಿತ್ತರಾಗಿದ್ದ ಅವರ ಮೆದುಳನ್ನು ವ್ಯಾಮೋಹಗೊಳಿಸಲಾರದೇ? 'ಇರಲಿ, 'ಇವನು ನಮ್ಮ ಮಗ ' ಎಂಬ ಸ್ನೇಹದಿಂದಲೂ, ಸಲಿಗೆಯಿಂದಲೂ ಅವನನ್ನು ಸಮೀಪಿಸಿ ಇದುವರೆಗೂ ವಿಯೋಗದಿಂದ ತಾವು ಅನುಭವಿಸಿದ ಪುತ್ರವಿರಹ ದುಃಖವನ್ನು ಅವನೆದುರು ಹೀಗೆಂದು ತೋಡಿಕೊಂಡರು.

**ದಂಪತೀ ಊಚತುಃ :—**

**ವತ್ಸವಾಂ ತೇ ವಿಯೋಗತಃ ।**
**ಕೃಶತಾಂಗವಿತೌ ತೇಽದ್ಯ ದರ್ಶನಾತ್ಪುಷ್ಟತಾಂ ಗತೌ ॥೪೩॥**
**ನಾವಾಂ ತ್ಯಜ ಸುತೇದಾನೀಂ ದೀನೌ ತ್ವಚ್ಚರಣೇ ರತೌ ।**

**ಗಜಾನನ ಉವಾಚ:—**

**ಪ್ರತಿಶ್ರುತಂ ಮಯಾ ಮಾತರ್ದಾಸ್ಯೇ ದರ್ಶನಮೇಕದಾ ॥೪೪॥**
**ತದಿದಾನೀಂ ಮಯಾ ದತ್ತಂ ನ ಶೋಕಂ ಕರ್ತುಮರ್ಹಸಿ ।**

---

ದಂಪತಿಗಳು :—

ವತ್ಸ, ವಿನಾಯಕ! ನಿನ್ನ ವಿಯೋಗದಿಂದ ನಾವು ಎಂತಹ ದುಃಖಕ್ಕೆ ಈಡಾದೆವೋ ಗೊತ್ತೇ ? ಇದೋ, ನಮ್ಮ ದೇಹಗಳನ್ನು ನೋಡು, ಎಷ್ಟು ಕೃಶವಾಗಿ ಹೋಗಿವೆ ? ಕಳೆದುದನ್ನೇಕೆ ಈಗ ಚಿಂತಿಸೋಣ. ಈಗ ನಿನ್ನ ದರ್ಶನವಾಗಿದೆ. ನಾವು ಮತ್ತೆ ಮೊದಲಿನಂತೆ ಪುಷ್ಟರಾಗಿ ಬಿಡುತ್ತೇವೆ. ಮಾತಾ-ಪಿತೃಗಳಿಗೆ ಮಕ್ಕಳಿಗಿಂತ ಮಹತ್ತ್ವದ ಭಾಗ್ಯ, ಸುಖ-ಸಂತೋಷಗಳು ಮತ್ತಾವುವಿವೆ, ದೇವ! ॥೪೩॥

ಪ್ರಿಯಪುತ್ರ ! ಇನ್ನು ಮಾತ್ರ ನಮ್ಮನ್ನು ತ್ಯಜಿಸಬೇಡ. ನಾವು ಬಹಳ ದೀನರಾಗಿ ಹೋಗಿದ್ದೇವೆ. ನಿನ್ನ ಚರಣ ಕಮಲಧ್ಯಾನದಲ್ಲಿಯೇ ಆಸಕ್ತರಾಗಿದ್ದೇವೆ.

ಗಜಾನನ :—

ಜನನಿ ! ಹಿಂದೆ ನಾನು ಸ್ವಧಾಮಕ್ಕೆ ಹೊರಟು ನಿಂತಾಗ ' ಇದೇ ರೂಪದಿಂದ ಪುನಃ ದರ್ಶನವನ್ನು ಕೊಡುವೆನೆಂದು ಆಶ್ವಾಸನವನ್ನು ಕೊಟ್ಟಿದ್ದೆ. ಅದು ನಿಮಗೆ ಜ್ಞಾಪಕವಿರಬಹುದು. ॥೪೪॥

ಇದೋ, ಅದಕ್ಕೆ ಕಾಲ ಈಗ ಒದಗಿತು. ನನ್ನ ವಚನದಂತೆ ನಾನು

ಸರ್ವಾಂತರ್ಯಾಮಿಣೋ ಮೇ ವೈ ವಿಯೋಗೋ ನ ಕದಾಚನ ॥೪೫॥

ಕ ಉವಾಚ :—

ಏವಂ ತು ವದತೋಽೇವ ಪಾರ್ವತೀ ಸ ಮುಪಾಗತಾ ।
ಉವಾಚ ಪರಮಪ್ರೀತಾ ದೃಷ್ಟ್ವಾ ಸ್ನೇಹಂ ತಯೋಃ ಶಿಶೌ ॥೪೬॥

---

ದರ್ಶನವನ್ನು ಕೊಟ್ಟಿದ್ದೇನೆ. ಆದುದರಿಂದ ನೀನು ದುಃಖಪಡಬೇಡ. ವ್ಯಾಮೋಹಕ್ಕೆ ಒಳಗಾಗಿ ದುಃಖವನ್ನು ಪಡಲೂ ಬಾರದು. ಇದೇನು, ಕೇವಲ ಪಾಮರರಂತೆ ಮಾತನಾಡುತ್ತಿರುವಿರಲ್ಲ ? ನಾನು 'ಸರ್ವಾಂತರ್ಯಾಮಿ' ಎಂಬುದು ನಿಮಗೆ ತಿಳಿಯದೇ ? ಮತ್ತು ನಾನು ಸರ್ವದಾ ನಿಮ್ಮ ಹೃದಯದಲ್ಲೇ ಇಲ್ಲವೇ ? ಹೀಗಿದ್ದರೂ ತಾಯೇ ! ಮತ್ತೇಕೆ ವ್ಯಥೆ ಪಡುವೆ ? ನನ್ನ ವಿಯೋಗ ನಿಮಗೆ ಎಂದೆಂದಿಗೂ ಉಂಟಾಗುವುದಿಲ್ಲ. ಇದನ್ನು ದೃಢವಾಗಿ ನಂಬಿ. ॥೪೫॥

ಬ್ರಹ್ಮ :—

ಗಣಪತಿಯೊಡನೆ ಅದಿತಿ-ಕಶ್ಯಪರು ಈ ರೀತಿ ಮಾತನಾಡುತ್ತಿರುವಷ್ಟರಲ್ಲಿ ಪಾರ್ವತಿಯು ಇವರಿದ್ದ ಸ್ಥಳಕ್ಕೆ ಬಂದು ನೋಡಿದಳು. ಕಶ್ಯಪ ದಂಪತಿಗಳು ಈ ಪರಿಯಿಂದ ತನ್ನ ಮಗನನ್ನು ಮುದ್ದಾಡುತ್ತಿರುವುದು ತಿಳಿದೊಡನೆಯೇ ತನ್ನ ಹಾಗೂ ತನ್ನ ಸು-ಕುಮಾರನ ಬಗ್ಗೆ ಬಹಳ ಅಭಿಮಾನವೆನಿಸಿತು. ಆಕರಾಳ ವಿಕರಾಳ ಸ್ವರೂಪರಾದ ನಮ್ಮಂಥವರ ಮಕ್ಕಳನ್ನು ಇತರರು ಇಷ್ಟವಿದ್ದೋ, ಇಲ್ಲದೆಯೋ ಭಿಡೆಗೆ ಬಿದ್ದೋ ಅವನ್ನು ಸ್ವಲ್ಪ ಮಾತನಾಡಿಸಿದರೇ ಸಾಕು, ಪಾಮರರು ಎಷ್ಟೆಷ್ಟೋ ಹೆಮ್ಮೆಪಟ್ಟು, ಮಗುವಿಗೆ ಮಾತನಾಡಲಿಕ್ಕೆ ಬಾರದಿದ್ದರೂ 'ನಮ್ಮ ಕೂಸು ಹೀಗೆ ಮಾತನಾಡುತ್ತದೆ. ಬಹಳ ಚುರುಕಾಗಿದೆ' ಇವೇ ಮೊದಲಾದ ಇಲ್ಲದ ಗುಣಗಳನ್ನು ತಮ್ಮ ಕೂಸೆನಿಸಿದ ; ಜಡಮೂರ್ತಿಯಲ್ಲಿ ಆರೋಪಿಸಿ ಹೊಗಳಿಕೊಳ್ಳುತ್ತಾರೆ. ಯಾರಾದರೂ ಸ್ಪಷ್ಟವಾದಿಗಳು 'ಇದೇನು ಹೀಗೆ ಹೊಗಳಿಕೊಳ್ಳುವೆ ?' ಎಂದು ನುಡಿದರೆ, ಅವನು ಎಂತಹ ಆಪ್ತನೇ ಆಗಿರಲಿ, ಅವನನ್ನು ನುಂಗಿಯೇ ಬಿಡುವಂತೆ ಆರ್ಭಟಿಸಿ "ನಿನಗೇನು ನಷ್ಟ ? ಹೆತ್ತವರಿಗೆ ಹೆಗ್ಗಣವೇ ಮುದ್ದು' ಎಂದು ಅಧಿಕ್ಷೇಪಿಸುವರು. ಹೀಗಿರುವಾಗ ಸುಂದರ ಗುಣಕ್ಕೇ ಸೌಂದರ್ಯದ ಮೆರುಗನ್ನು ಕೊಡಬಲ್ಲ

ಗೌರ್ಯುವಾಚ :—

ಅದಿತೇ ! ದೇಹಿ ಮೇ ಪುತ್ರಂ ಗೃಹೀತಂ ಚಿರಕಾಲತಃ ।

ಅದಿತಿರುವಾಚ :—

ನಾಯಂ ತವ ಸುತಸ್ಸುಭ್ರು, ಪಶ್ಯೈತತ್ ಶುಚಿಸ್ಮಿತೇ ! ॥೪೭॥

ಕ ಉವಾಚ :—

ಸಾಪಶ್ಯತ್ಪುನರೇವೈನಂ ಸ್ವಸ್ಯೈವ ತನಯಂ ವಿಭುಮ್ ।

ಲೋಕೈಕ ಸುಂದರಮೂರ್ತಿ, ಸರ್ವಶಕ್ತ ; ಸರ್ವೇಶ್ವರನಾದ ಗಣಪತಿಯ ಬಗ್ಗೆ ಪಾರ್ವತಿಯು ಅಭಿಮಾನ ಪಟ್ಟಿದ್ದೇನೂ ಹೆಚ್ಚಿನದಲ್ಲ. ಇರಲಿ, ಗೌರಿಯು ಸಂತುಷ್ಟಳಾಗಿ ಅದಿತಿ-ಕಶ್ಯಪರನ್ನು ಸಂಬೋಧಿಸಿ ಹೀಗೆಂದು ಮಾತನಾಡಿದಳು. ॥೪೬॥

ಗೌರೀ :—

ಅದಿತೀದೇವಿ ! ಬಹಳ ಹೊತ್ತಿನಿಂದ ಮಗುವನ್ನು ಎತ್ತಿಕೊಂಡೇ ನಿಂದಿರುವೆ. ಕೈಗಳು ನೊಂದಾವು. ನನ್ನ ಮಗನನ್ನು ಇಲ್ಲಿ ಕೊಡು. ನಾನು ಎತ್ತಿಕೊಳ್ಳುತ್ತೇನೆ.

ಅದಿತಿ :—

ಮಂಗಳಹಾಸಿನಿ, ಸುಭ್ರು ! ನನ್ನ ಮಗನು ನನಗೆಂದಾದರೂ ಭಾರವೆನಿಸಿಯಾನೇ ? ಅದಿರಲಿ, 'ನನ್ನ ಮಗ'ನೆಂದು ನೀನು ಹೇಳಿದೆಯಲ್ಲವೇ ? ಇಲ್ಲಮ್ಮ ! ನಿನ್ನ ಮಗನನ್ನು ನಾನು ಎತ್ತಿಕೊಂಡೇ ಇಲ್ಲ. ಇವನು ನಿನ್ನ ಮಗನಲ್ಲ. ನನ್ನ ಮಗ, ವಿನಾಯಕ. ಹೀಗೇಕೆ ಭ್ರಮೆಪಡುವೆ ? ಬೇಕಾದರೆ ಇವನಾರೆಂಬುದನ್ನು ಚನ್ನಾಗಿ ನೋಡು. ॥೪೭॥

ಬ್ರಹ್ಮಾ :—

ಗಣಪತಿಯು ಇಷ್ಟು ರೀತಿಯಿಂದ ತಿಳಿ ಹೇಳಿದ್ದರೂ, ಹಿಂದಿನ ಸಂಗತಿ ಎಲ್ಲ

ಅದಿತಿರುವಾಚ :—

ಪ್ರಸೋಇವ ಗೌರಿ ! ಪಶ್ಯಾಶು ತನಯಂ ಮೇ ಪುರಃ ಸ್ಥಿತಮ್ ॥೪೮॥

ಕ ಉವಾಚ ;—

ಸಾಪಶ್ಯತ್ಪುನರೇವೈನಂ ಗುಣೇಶಂ ತನಯಂ ಸ್ವಕಮ್ ॥
ಅದಿತಿಸ್ತಾಂ 'ಮಮೇ' ತ್ಯಾಹ ಪಾರ್ವತೀ ತಾಂ 'ಮಮೇ' ತಿ ಚ॥೪೯॥

---

ಜ್ಞಾಪಕದಲ್ಲಿದ್ದರೂ 'ಇವನೇ ವಿನಾಯಕ. ನನ್ನ ಮಗ.' ಎಂಬ ವ್ಯಾಮೋಹವು ಅದಿತಿಯ ಮೆದುಳಿನಿಂದ ಅಳಿಸಿ ಹೋಗಿಯೇ ಇರಲಿಲ್ಲ. ಅಲ್ಲದೇ ಗಣಪತಿಯು ಅವಳ ಕಣ್ಣುಗಳಿಗೆ 'ವಿನಾಯಕ' ನಂತೆಯೇ ಕಾಣುತ್ತಲಿದ್ದನು. ಅದಿತಿಯ ಮಾತನ್ನು ಕೇಳಿ ಗೌರಿಯು ಘಾಬರಿಗೊಂಡು ಕಣ್ಣರಳಿಸಿ ಮತ್ತೊಮ್ಮೆ ಶಿಶುವನ್ನು ನೋಡಿದಳು. ಅವಳ ದೃಷ್ಟಿಗೆ ಗಣಪತಿಯಾಗಿಯೇ ಕಾಣ್ಬಂದನು ಆಗ ಗೌರಿಯು 'ಇವನು ತನ್ನ ಮಗನೆ'ಂದು ಪ್ರತಿಭಟಿಸಿದಳು. ಇದನ್ನು ಕೇಳಿದ ಅದಿತಿಯು ದೇವಿಯನ್ನು ಕುರಿತು ಮತ್ತೆ ಹೀಗೆಂದು ಮಾತನಾಡಿದಳು.

ಅದಿತಿ :—

ಗೌರಿ ! ಸುಳ್ಳನ್ನಾಡಲಿಕ್ಕೆ ನನಗೇನು ಹುಚ್ಚೇ ? ಜಗನ್ಮಾತೃವಾದ ನಿನ್ನ ವಿಷಯದಲ್ಲಿ ವಿನೋದವನ್ನು ಮಾಡುವ ಯೋಗ್ಯತೆಯಾದರೂ ನನಗಿರುವುದೇ ? ಇನ್ನೊಮ್ಮೆ ನೋಡು, ಮತ್ತಾರನ್ನು ಬೇಕಾದರೂ ಕೇಳು, ನಮ್ಮಿಬ್ಬರ ಎದುರಿಗೆ ನಿಂದಿರುವವನು. 'ಯಾರು' ಎಂಬುದನ್ನು? ನಮ್ಮಿಬ್ಬರ ಪೈಕಿ ಯಾರು ಇವನಿಗೆ 'ತಾಯಿ' ಎಂಬುದು ಆಗಲಾದರೂ ಗೊತ್ತಾಗಿ ಹೋಗುವುದು. ಇಷ್ಟಕ್ಕಾಗಿ ನಾವಿಬ್ಬರೂ ಏಕೆ ವಾಗ್ವಾದವನ್ನು ಮಾಡಬೇಕು ? ॥೪೮॥

ಬ್ರಹ್ಮಾ :—

ಆದರೂ ದೇವಿಯು ಗುಣೇಶನನ್ನು ಗಮನವಿಟ್ಟು ನೋಡಿದಳು. ಅವಳಿಗೆ ಅವನು ಗಣಪತಿಯಾಗಿಯೇ ಕಂಡುಬಂದನು. ಆಗ ದೇವಿಯು ನಿಶ್ಚಯ ವಾಣಿಯಿಂದ 'ಇವನು ನನ್ನ ಮಗ' ಎಂದು ನುಡಿದಳು. ಇದನ್ನು ಕೇಳಿ ಅದಿತಿಯೂ ಸುಮ್ಮನೆ ಇರಲಿಲ್ಲ. 'ಇವನು ನನ್ನ ಮಗ' ಎಂದು ಗೌರಿಯಷ್ಟೇ ನಿಶ್ಚಯಧ್ವನಿಯಿಂದ ನುಡಿದಳು. ॥೪೯॥

ಏವಂ ವಿವದಮಾನೇ ತು ಪ್ರಾಹುರ್ದೇವಾಸ್ಸು-ವಿಸ್ಮಿತಾಃ ।

ದೇವಾ ಊಚುಃ :—

ಅನಾದಿನಿಧನೋ ದೇವಃ ಸೃಷ್ಟಿ-ಸ್ಥಿತ್ಯಂತಕಾರಕಃ ॥೫೦॥

ಅನಂತರೂಪೋಽನಂತಶ್ರೀರನೇಕಶಕ್ತಿಸಂಯುತಃ ।
ಕಸ್ಯಾ ಅಯಂ ಭವೇತ್ಪುತ್ರ ಉಭೇ ಭ್ರಾಂತೇಽಸ್ಯ ಮಾಯಯಾ ॥೫೧॥

ತೇ ಊಚತುಃ :—

ಯಸ್ಯಾ ಅಯಂ ಭವೇತ್ಪುತ್ರಸ್ತಸ್ಯಾ ಹಸ್ತೇ ಪ್ರದೀಯತಾಮ್ ।

---

'ಇವನು ತನ್ನ ಮಗ, ತನ್ನ ಮಗ' ಎಂದು ಇವರಿಬ್ಬರೂ ಈ ರೀತಿ ಸ್ಪರ್ಧೆಯಿಂದ ವಿವದಿಸಲಾರಂಭಿಸಿದುದನ್ನು ನೋಡಿ ದೇವತೆಗಳೆಲ್ಲ ಅತಿಯಾಗಿ ವಿಸ್ಮಯಗೊಂಡರು 'ಇದೇನು ? ಇವರು ಹೀಗೆ ವಾದವನ್ನು ಹೂಡಿರುವರಲ್ಲ ?' ಎಂದು ಚಿಂತಿಸಿ ಅದನ್ನು ಬಗೆಹರಿಸಲಿಕ್ಕಾಗಿ ಅವರೊಡನೆ ಹೀಗೆ ಮಾತನಾಡಿದರು.

ದೇವತೆಗಳು :—

ದೇವಿಯರೇ ! ಇದೇನು; ನೀವು ಹೀಗೆ ಜಗಳವನ್ನಾಡಲಾರಂಭಿಸಿದಿರಿ? ಸೃಷ್ಟಿ-ಸ್ಥಿತ್ಯಂತಗಳಿಗೆಲ್ಲ ಪರಮ ಮೂಲ ಕಾರಣನಾದ ಪರಮಾತ್ಮನಿಗೆ ಜನನ-ಮರಣಗಳ ಸಂಪರ್ಕ ಎಂದಿಗಾದರೂ ಉಂಟಾದೀತೇ ? ॥೫೦॥

ದೇವನು ಸ್ವಭಾವತಃ ಅರೂಪನು, ಬೇಕೆನಿಸಿದರೆ ನಾನಾರೂಪಗಳಿಂದಲೂ ತೋರಿಬರಬಲ್ಲವನು. ಅನೇಕ ಮಹಿಮೆಯುಳ್ಳವನು. ಅಂತೆಯೇ ಅಚಿಂತ್ಯಾದ್ಭುತ ಶಕ್ತಿಸಂಪನ್ನನು. ಆದ್ಯಂತರಹಿತನಾದ ಜಗನ್ನಿವಾಸ ಪ್ರಭು ; ಯಾರಿಗೆ ಮಗನಾಗಬಲ್ಲನು ? ನೀವೇ ಹೇಳಿ. ದೇವನ ಯೋಗಮಾಯಾ ಪ್ರಭಾವದಿಂದ ನೀವಿಬ್ಬರೂ ಭ್ರಮಿಷ್ಠರಾಗಿ ಹೋಗಿದ್ದೀರಿ. ಆದುದರಿಂದಲೇ 'ನನ್ನ ಮಗ, ತನ್ನ ಮಗ' ಎಂದು ಪ್ರಾಕೃತಸ್ತ್ರೀಯರಂತೆ ಕಚ್ಚಾಡುತ್ತಲಿದ್ದೀರಿ. ॥೫೧॥

ಅದಿತಿ-ಪಾರ್ವತಿಯರು :—

ನಾವಿಬ್ಬರೂ ಭ್ರಮಿಷ್ಠರೆಂದೇ ಒಪ್ಪಿಕೊಳ್ಳುತ್ತೇವೆ. ನೀವಾದರೂ ಶಾಸ್ತ್ರೀಯ

**ಕ ಉವಾಚ :—**

**ತತೋ ದೇವಾ ನಿರೀಕ್ಷ್ಯೈವಂ ನಾನಾರೂಪಿಣಮೀಶ್ವರಮ್ ||೫೨||**

**ಕಶ್ಚಿದಾಹ ' ವಿಧಾತಾಯಂ ' ಕಶ್ಚಿ ' ದ್ವಿಷ್ಣುಂ ಚತುರ್ಭುಜಮ್ '**

**' ಕಶ್ಚಿತ್ತ್ರಿಲೋಚನಂ ' ಪ್ರಾಹ ' ವರುಣಂ ' ವಿಸ್ಮಿತಾಸ್ಸುರಾಃ ||೫೩||**

---

ಶವನ್ನು ತಿಳಿಯಬಲ್ಲವರಷ್ಟೇ ? ನೀವೇ ಮಧ್ಯಸ್ಥರಾಗಿರಿ. ಈ ಶಿಶು ಯಾರದೋ ನಿಷ್ಪಕ್ಷಪಾತ ನಿರ್ಣಯದಿಂದ ಅವರಿಗೆ ಕೊಟ್ಟುಬಿಡಿ. ಇದಕ್ಕೆ ನಮ್ಮಿಬ್ಬರ ಸಮ್ಮತಿಯೂ ಇರುವುದು.

ಬ್ರಹ್ಮಾ:—

ನಾರೀಮಣಿಯರಿಬ್ಬರ ಈ ಮಾತುಗಳನ್ನು ಕೇಳಿ ದೇವತೆಗಳು ದಂಗು ಬಡಿದರು. ಆಕಸ್ಮಿಕವಾಗಿ ಈ ಪ್ರಸಂಗ ತಮ್ಮ ಮೇಲೆ ಬಂದುದನ್ನು ನೋಡಿ ಅವರಿಗೂ ಕಷ್ಟಕ್ಕೇ ಇಟ್ಟುಕೊಂಡಿತು. ಯಾರೊಬ್ಬರ ಪರವಾಗಿಯೂ ನಿರ್ಣಯವನ್ನು ಕೊಡುವಂತಿರಲಿಲ್ಲ. ಇಬ್ಬರೂ ಮಹಾಮಹಿಮೆಯರು, ಶಾಪಾನುಗ್ರಹಸಾಮರ್ಥ್ಯ ಉಳ್ಳವರು. ಆದುದರಿಂದ ಬಹಳ ಜಾಗರೂಕತೆಯಿಂದಲೇ ವಿಚಾರಮಾಡಬೇಕಾಗಿ ಬಂದಿತು. ಆಗ ನಿರ್ವಾಹವಿಲ್ಲದೇ ಗಣಪತಿಯನ್ನು ಸೂಕ್ಷ್ಮವಾಗಿ ನಿರೀಕ್ಷಿಸಿದರು. ಅವರು ಹೇಳಿದ ಮಂತ್ರ ಅವರಿಗೇ ತಿರುಗಿತು. ದೇವನು ಒಬ್ಬೊಬ್ಬರ ದೃಷ್ಟಿಗೆ ಒಂದೊಂದು ರೂಪದಿಂದ ಕಾಣತೊಡಗಿದನು. ||೫೨||

ಗಣಪತಿಯನ್ನು ನಿರೀಕ್ಷಿಸಿದವರ ಪೈಕಿ ಒಬ್ಬನು ' ಇವನು ಚತುರ್ಮುಖ ಬ್ರಹ್ಮಾ ' ಎಂದು ಹೇಳಿದನು. ಮತ್ತೊಬ್ಬನು ' ನಿನಗೇನು ಗೊತ್ತು ? ನಿನಗೆ ವಯಸ್ಸು ಮೀರಿಹೋದ್ದರಿಂದ ಕಣ್ಣು ಕಂಡಿರಲಿಕ್ಕಿಲ್ಲ. ಇವನು ಶಂಖ, ಚಕ್ರ ಗದಾಧಾರಿಯಾದ ಶ್ರೀಮನ್ನಾರಾಯಣನೇ ಸರಿ ' ಇದೋ, ಕಣ್ಣು ತೆರೆದು ನೋಡಿ, ' ಸ್ಪಷ್ಟವಾಗಿ ಕಾಣುತ್ತದೆ, ಎಂದರು. ಇವನು ' ತ್ರಿಲೋಚನನಾದ ಪರಮೇ

**ಊಚುಸ್ತೇ**

**ದೇವಾ ಊಚುಃ :—**

**ನಿಶ್ಚಯೋಽಸ್ಮಾಭಿರ್ವಿಧಾತುಂ ನೈವ ಶಕ್ಯತೇ ।**
**ಭವತೀಭ್ಯಾಂ ವಿವೇಕೇನ ಗ್ರಾಹ್ಯೋಽಯಂ ಪರಮಃ ಪುಮಾನ್ ॥೫೪॥**

**ಕ ಉವಾಚ :—**

**ತತೋ ಗೌರೀ ಗೃಹೀತ್ವಾಶು ತಂ ವಿಭುಂ ತನಯಂ ಸ್ವಕಮ್ ।**
**ಸ್ತನಪಾನಂ ದದೌ ಸ್ನೇಹಾದದಿತಿರ್ನೀರಸಾಭವತ್ ॥೫೫॥**

---

ಶ್ವರ' ಎಂದು ಮೊದಲಿನವರಿಬ್ಬರ ಬಾಯಿಯನ್ನೂ ಬಡಿದನು ಮಗುದೊಬ್ಬನು ಹೂಂಕರಿಸಿ ಎದ್ದು 'ಇವನು ಜಲಾಧಿಪನಾದ ವರುಣ' ಎಂದು ವಿಜೃಂಭಿಸಿದನು. 'ಇದೇನು ?' ಎಂಬುದಂತೂ ಯಾರಿಗೂ ಹೊಳೆಯಲೇ ಇಲ್ಲ ಆಶ್ಚರ್ಯದಿಂದ ಒಬ್ಬರ ಮುಖವನ್ನೊಬ್ಬರು ನೋಡತೊಡಗಿದರು. ॥೫೩॥

ಮತ್ತು ಸ್ವಲ್ಪವೂ ಸಂಕೋಚಪಡದೇ ಹೀಗೆ ನುಡಿದು ಬಿಟ್ಟರು.

ದೇವತೆಗಳು :—

ನಿಮ್ಮನ್ನೇನೋ ಭ್ರಮಿಷ್ಠರೆಂದು ನಾವು ಕರೆದೆವು, ನಿಜ. ಈಗ ವಿಚಾರ ಮಾಡುತ್ತಿರಲಾಗಿ ನಾವೂ ಭ್ರಮಿಷ್ಠರೇ ಸರಿ. 'ಇವನಾರು' ಎಂದು ನಿರ್ಣಯಿಸಲಿಕ್ಕೆ ನಮಗೂ ಶಕ್ತಿಸಾಲದು. ತಾಯಂದಿರೇ! ನೀವು ನಿಮ್ಮ-ನಿಮ್ಮಲ್ಲೇ ವಿವೇಚನೆಯನ್ನು ತಂದುಕೊಳ್ಳಿರಿ. ಒಟ್ಟಿನ ಮೇಲೆ ಹೇಳುವುದಾದರೆ, ಇವನು ಪರಮ ಪುರುಷನೇ ಸರಿ. ॥೫೪॥

ಬ್ರಹ್ಮಾ :—

ಅನಂತರ ಗೌರಿಯು ಥಟಕ್ಕನೆ ಮುಂದೆ ಬಂದು ತನ್ನ ಮಗ ; ವಿಭುವನ್ನು

ಅದಿತಿರುವಾಚ :—

ಮಮ ಚೇದ್ಬಾಲಕೋಽಯಂ ಸ್ಯಾತ್ಕಥಂ ಯಾಯಾತ್ಪರಾಂ ಪ್ರತಿ ? ।
ಅಹಂ ಭ್ರಾಂತ್ಯಾಭವಂ ಸಕ್ತಾ ಪರಸ್ಯ ತನಯೇ ವೃಥಾ ||೫೬||

ಕ ಉವಾಚ :—

ಮುನಯಃ ಕಶ್ಯಪಶ್ಚೈನಂ ಪುಪೂಜುಸ್ತೇ ಗುಣೇಶ್ವರಮ್ ।
ನಮಸ್ಕೃತ್ಯಾಭ್ಯನುಜ್ಞಾಪ್ಯ ಯಯುಸ್ಸ್ವಂ ಸ್ವಂ ನಿವೇಶನಮ್ ||೫೭||

---

ಎತ್ತಿ ತೊಡೆಯ ಮೇಲೆ ಮಲಗಿಸಿಕೊಂಡು ಸ್ನೇಹದಿಂದ ಸ್ತನ್ಯವನ್ನು ಪಾನ ಮಾಡಿಸಿದಳು. ಇತ್ತ ಅದಿತಿಯು ಇದನ್ನು ನೋಡಿ ಝುರ್ರನೆ ಇಳಿದು ಹೋದಳು. ಅವಳಿಗೆ ಯಾವ ವಿಧವಾದ ಆಶೆಯೂ ಉಳಿಯಲಿಲ್ಲ. ||೫೫||

ಅದಿತಿ :—

ನಿಜ, ಇವನು ನನ್ನ ಮಗನಲ್ಲ. ನನಗೆ ಮಗನಾಗಿ ಅವತರಿಸಿದ್ದ ವಿನಾಯಕನು ಬಹಳ ಹಿಂದೆಯೇ ಆನಂದಧಾಮಕ್ಕೆ ತೆರಳಿದನು. ಇವನು ನಿಜವಾಗಿಯೂ ನನ್ನ ಮಗನೇ ಆಗಿದ್ದರೆ, ಮತ್ತೊಬ್ಬಳನ್ನು 'ತಾಯಿ' ಎಂದು ತಿಳಿದು ಅವಳ ಬಳಿಗೆ ಹೋಗುತ್ತಿದ್ದನೇ ? ನಾನೇ ಭ್ರಾಂತಿಪಟ್ಟೆನು. ಮತ್ತೊಬ್ಬರ ಮಗನನ್ನು 'ನನ್ನ ಮಗ' ಎಂದು ತಿಳಿದು ವಾದಿಸಿದುದು ನಿರರ್ಥಕವಾಯಿತು. ||೫೬||

ಬ್ರಹ್ಮ :—

ಎಂದು ತನ್ನೊಳಗೆ ತಾನು ನುಡಿದುಕೊಂಡು ಸಮಾಧಾನಪಟ್ಟಳು. ಸ್ವಲ್ಪವೂ ಉದ್ವೇಗಗೊಳ್ಳಲಿಲ್ಲ. ಇದೇ ಸಾತ್ತ್ವಿಕರಾದವರ ಸರಳ ಸ್ವಭಾವ. ಅನಂತರ ಉಪನಯನಕ್ಕಾಗಿ ಬಂದು ನೆರೆದಿದ್ದ ಇತರ ಮುನಿಗಳು, ಕಶ್ಯಪಮಹರ್ಷಿ ಎಲ್ಲರೂ ಸೇರಿ ಭಗವಂತನಾದ ಗುಣೇಶ್ವರನನ್ನು ಭಕ್ತಿಯಿಂದ ಪೂಜಿಸಿದರು. ಸಾಷ್ಟಾಂಗವೆರ

**ಭವಾನೀ ಚ ಗೃಹಂ ಯಾತಾ ಪುತ್ರಮಾದಾಯ ಹರ್ಷಿತಾ ।**
**ತತಸ್ಸಭಾಗತಾಸ್ಸರ್ವೇ ಸ್ವಾಗಮನ್ನಿಲಯಾನ್ ಸ್ವಕಾನ್ ॥೫೮॥**

**ಇತಿ ಶ್ರೀ ಗಣೇಶ ಪುರಾಣೇ ಉತ್ತರಖಂಡೇ 'ಉಪನಯನ ವರ್ಣನಂ, ವಿಶ್ವರೂಪ ಪ್ರದರ್ಶನಂ' ನಾಮ ಷಣ್ಣವತಿತಮೋಽಧ್ಯಾಯಸ್ಸಮಾಪ್ತಃ**

---

ಗಿದರು. ಆಗಜಾನಂದನನಾದ ಗಣಪತಿಯು ಅನುಮತಿಯನ್ನು ಪಡೆದು ತಮ್ಮ ತಮ್ಮ ಆವಾಸಸ್ಥಾನಗಳಿಗೆ ತೆರಳಿದರು. ॥೫೭॥

ಇತ್ತ ಭಗವತೀ ಭವಾನೀದೇವಿಯೂ ಸಹ ಅದಿತಿಯೊಡನೆ ವಿನದಿಸಿ ಗೆದ್ದುದಕ್ಕಾಗಿಯೂ, ತನ್ನ ಮಗ ಗಣಪತಿಯು ಒಬ್ಬೊಬ್ಬರಿಗೆ ಒಂದೊಂದು ರೂಪವನ್ನು ತೋರಿಸುವಷ್ಟು ಮಹಿಮಾವಂತನಾದುದಕ್ಕಾಗಿಯೂ ಬಹಳ ಸಂತೋಷಿಸಿ, ಬಾಲಕನನ್ನು ಕೌಂಕುಳಲ್ಲೆತ್ತಿಕೊಂಡು ತನ್ನ ಅಂತರ್ಗೃಹವನ್ನು ಸೇರಿದಳು. ಉಪನಯನ ಮಹೋತ್ಸವವು ಸಾಂಗೋಪಾಂಗವಾಗಿ ನೆರವೇರಿದ್ದಿತಾದುದರಿಂದ ಸಭೆಗೆ ಬಂದಿದವರೆಲ್ಲರೂ ಫಲ-ತಾಂಬೂಲಾದಿಗಳಿಂದ ಸತ್ಕೃತರಾಗಿ, ತಮ್ಮ ತಮ್ಮ ನಿಲಯಗಳಿಗೆ ಹೊರಟುಹೋದರು. ॥೫೮॥

ಇಲ್ಲಿಗೆ ಶ್ರೀ ಗಣೇಶ ಪುರಾಣ, ಉತ್ತರಖಂಡದಲ್ಲಿ 'ಉಪನಯನ ವರ್ಣನೆ ಮತ್ತು ವಿಶ್ವರೂಪಪ್ರದರ್ಶನ' ಎಂಬಲ್ಲಿಗೆ ತೊಂಭತ್ತಾರನೆಯ ಅಧ್ಯಾಯಾನುವಾದವು ಮುಗಿದುದು.



|| ಶ್ರೀ ಗಣೇಶಾಯ ನಮಃ ||

# ಅಥ ಸಪ್ತನವತಿತಮೋಽಧ್ಯಾಯಃ

**ವ್ಯಾಸ ಉವಾಚ :—**

**ತ್ವಯಾ ವಿನಾಯಕೋ ದೇವೋ 'ಮಯೂರೇಶ್ವರ'ಸಂಜ್ಞಿತಃ ।**
**ತತೋ ಗುಣೇಶನಾಮ್ನಾ ಮೇ ಮಹಿಮಾಯಂ ನಿರೂಪಿತಃ ॥೧॥**

**ಸ ಕಥಂ ಪ್ರಾಪ ತನ್ನಾಮ ? ಕಿಂಚ ತೇನ ಕೃತಂ ಮಹತ್ ।**
**ಕರ್ಮ ತನ್ಮೇ ಸಮಾಚಕ್ಷ್ವ ಸಾಂಪ್ರತಂ ವಿಶ್ವಸೃಗ್ವಿಭೋ ! ॥೨॥**

---

|| ಶ್ರೀ ಗಣೇಶಾಯ ನಮಃ ||

## ೯೭ ನೆಯ ಅಧ್ಯಾಯ.

**ವ್ಯಾಸ :—**

ಭಗವನ್, ಕಮಲಾಸನ! ಈ ಅವತಾರಿಕ ಚರಿತ್ರೆಯನ್ನು ಹೇಳಲು ಉಪಕ್ರಮಿಸುವಾಗ ದೇವನು ಮಯೂರೇಶ್ವರನಾಗಿ ಅವತಾರವನ್ನೆತ್ತಿದ ಕಥೆಯನ್ನು ಹೇಳುವುದಾಗಿ ತಾವು ತಿಳಿಸಿ ಚರಿತ್ರೆಯನ್ನಾರಂಭಿಸಿದಿರಲ್ಲವೇ ? ಈಗ ಇಪ್ಪತ್ತುನಾಲ್ಕು ಅಧ್ಯಾಯಗಳಲ್ಲಿ ಒಮ್ಮೆಯಾದರೂ ದೇವನು ಮಯೂರೇಶ್ವರನೆಂಬ ಹೆಸರನ್ನು ಪಡೆದ ಸಂದರ್ಭ ಬರಲೊಲ್ಲದು. ದೇವನನ್ನು 'ಗುಣೇಶ' ನೆಂಬ ಹೆಸರಿನಿಂದ ಕರೆಯುತ್ತಲೇ ಅವನ ಮಹಿಮೆಗಳನ್ನೆಲ್ಲ ನಿರೂಪಿಸುತ್ತಿರುವಿರಿ. ||೧||

ಗಣಪತಿಗೆ 'ಮಯೂರೇಶ್ವರ' ಎಂಬ ಹೆಸರು ಏತಕ್ಕಾಗಿ ಉಂಟಾಯಿತು? ಈ ಹೆಸರು ದೇವನಿಗೆ ಬರಬೇಕಾದರೆ ಮಹತ್ತ್ವವಾದ ಯಾವುದಾದರೊಂದು ಅಂತಹ ಕೆಲಸವನ್ನು ದೇವನು ಮಾಡಿರಲೇಬೇಕಲ್ಲವೇ? ಹಾಗಿದ್ದರೆ, ಆ ಕೆಲಸ ಯಾವುದು? ಇದನ್ನು ತಿಳಿಯಬೇಕೆಂಬ ಕುತೂಹಲ ನನ್ನಲ್ಲಿ ಅತಿಯಾಗಿ ಉಂಟಾಗಿದೆ. ಆದುದ

ಕ ಉವಾಚ :—

ಯಥಾ ತೇನ ಕೃತಂ ಕರ್ಮ ಮಯೂರೇಶ್ವರನಾಮ ಚ ।
ಪ್ರಾಪದ್ವಿನಾಯಕೋ ದೇವೋ ನಿರೂಪಿಷ್ಯೇಽಖಿಲಂ ತವ ॥೩॥

ಪಾತಾಲಭವನೇ ಶೇಷಃ ಸಭಾಮಧ್ಯಗತೋಽಭವತ್ ।
[1] ವಾಸುಕಿಪ್ರಮುಖೈಸ್ಸರ್ವೈಸ್ಸಮಂತಾತ್ಪರಿವಾರಿತಃ ॥೪॥

---

ರಿಂದ ಪ್ರಕೃತ ದಯೆ ಇಟ್ಟು ಆ ಭಾಗದ ಚರಿತ್ರೆಯನ್ನೇ ಮುಂದುವರೆಸಿ ಹೇಳೋಣವಾಗಲಿ. ನೀವು ವಿಶ್ವವನ್ನೇ ಸೃಜಿಸಿದ ವಿಭೂತಿಪುರುಷರು, ಎಂದ ಮೇಲೆ, ನಿಮಗೆ ಯಾವ ವಿಷಯವೂ ಪರೋಕ್ಷವಲ್ಲ. ॥೨॥

ಬ್ರಹ್ಮ :—

ನಿಜ, ವ್ಯಾಸ ! ನೀನು ನೆನಪು ಮಾಡಿದುದು ಒಳ್ಳೆಯದೇ ಆಯಿತು. ಭಗವಾನ್ ಗಣೇಶನು ಯಾವ ಮಹತ್ಕಾರ್ಯವನ್ನು ಮಾಡಿ 'ಮಯೂರೇಶ್ವರ' ಎಂಬ ಅನ್ವರ್ಥವಾದ ಹೆಸರನ್ನು ಪಡೆದನೋ, ಅದನ್ನೆಲ್ಲ ವಿಸ್ತರಿಸಿ ನಿನಗೆ ತಿಳಿಸುವೆನು. ॥೩॥

ಸರ್ಪಜಾತಿಯವರೆಲ್ಲ ಪಾತಾಲ ಲೋಕದಲ್ಲಷ್ಟೇ ವಾಸಮಾಡುತ್ತಿರುವುದು? ಈ ವರ್ಗಕ್ಕೆ ಒಬ್ಬ ಅಧಿಪತಿ ಇದ್ದಾನೆ. ಅವನೇ ಸಹಸ್ರಫಣನಾದ 'ಆದಿಶೇಷ' ಆ ಆದಿಶೇಷನೊಮ್ಮೆ ತನ್ನ ಅರಮನೆಯ ಸಭಾವಿಭಾಗದಲ್ಲಿ ಉಚ್ಚಾಸನವನ್ನೇರಿ ಕುಳಿತಿದ್ದನು. ಇವನ ಅನುಜನೇ ವಾಸುಕಿ. ಇವನೂ ಸಹ ಮಹಾಬಲಿಷ್ಠನೂ, ರಾಜ್ಯ ಸಂರಕ್ಷಣಾಕಾರ್ಯದಲ್ಲಿ ಧುರೀಣನೂ ಆದವನು. ಇಂಥವನೇ ಮೊದಲಾದ ಅನೇಕ ಮಂದಿ ನಾಗಜಾತಿಯವರು ಆದಿಶೇಷನ ಆಸ್ಥಾನಮಂಟಪಕ್ಕೆ ಬಂದು ತಮ್ಮ ತಮ್ಮ ಆಸನಗಳಲ್ಲಿ ಕುಳಿತಿದ್ದರು. ರಾಜಕೀಯ ವಿಷಯಗಳ ಬಗ್ಗೆ ಚರ್ಚೆ, ಅಭಿಪ್ರಾಯ ವಿನಿಮಯ, ಚರ್ಚಾಸ್ಪದವಾದ ವಿಷಯಗಳ ತೀರ್ಮಾನ ಇವು ಒತ್ತರದಿಂದ ನಡೆಯುತ್ತಲಿದ್ದವು. ॥೪॥

---

[1] ಸಂಖ್ಯಾಚಿಹ್ನಿತನ ಪರಿಚಯವನ್ನು ಪರಿಶಿಷ್ಟದಲ್ಲಿ ಕೊಟ್ಟಿದೆ.

ತತಃ [೯]ಕದ್ರೂಃ ಸ್ಸಮಾಯಾತಾ ತೇಜೋರೂಪಾ ಸುರೂಪಿಣೀ ।
ಮುಕ್ತಾಮಣಿಯುತಂ ಚಾರು ಬಿಭ್ರತೀ ಕಂಚುಕಂ ಶುಭಮ್ ॥೫॥

ಬಿಂಬೋಷ್ಠೀ ಚಂದ್ರವದನಾ ದಿವ್ಯಭೂಷಾಂಬರಾನ್ವಿತಾ ।
ತಾಂ ದೃಷ್ಟ್ವಾ ಜನನೀಂ ಶೇಷೋ ವಾಸುಕಿಪ್ರಮುಖಾಶ್ಚ ಯೇ ॥೬॥

ನೇಮುಃ

ತ ಊಚುಃ :—

ಮಾತರ್ಬಹುದಿನೈರಭವದ್ದರ್ಶನಂ ತವ ।

---

ಅಷ್ಟರಲ್ಲಿ ಅಹಿಜಾತಿಗೆ ಪರಮಪೂಜ್ಯಳಾದವಳೂ, ಮಹಾಶೇಷನ ಜನ ಯಿತ್ರಿಯೂ ಆದ ಕದ್ರು ಎಂಬುವಳು ಆಸ್ಥಾನವನ್ನು ಪ್ರವೇಶಿಸಿದಳು. ಅವಳು ಮಹಾ ತೇಜೋವಂತಳು. 'ನಾಗರಮಣಿ' ಎಂದ ಮೇಲೆ ಪರಮಸುಂದರಿ ಎಂಬು ದನ್ನು ಒತ್ತಿ ಹೇಳಬೇಕಾಗಿರುವುದಿಲ್ಲ. ಅವಳು ಧರಿಸಿದ್ದ ಕುಪ್ಪಸವು ಮುತ್ತು-ರತ್ನ ಗಳಿಂದ ನಿರ್ಮಿತವಾದುದು. ಮತ್ತು ಬಹಳ ಶ್ಲಾಘ್ಯವಾದುದು. ॥೫॥

ತೊಂಡೆಯ ಹಣ್ಣು, ಹವಳ ಇವುಗಳಂತೆ ಇವಳ ತುಟಿಗಳು ಕೆಂಪಾಗಿ ಹೊಳೆಯುತ್ತಿದ್ದವು. ಚಂದ್ರನಂತಹ ಮುಖವುಳ್ಳವಳಿವಳು. ರತ್ನಖಚಿತ ವಿವಿಧ ದಿವ್ಯಾಭರಣಗಳನ್ನು ಇವಳು ಧರಿಸಿದ್ದಳು. ಧರಿಸಿದ ಪೀತಾಂಬರ ಬಹಳ ಬೆಲೆ ಬಾಳುವುದು. ಇದ್ದಕ್ಕಿದ್ದಂತೆಯೇ ರಾಜಮಾತೆಯು ರಾಜಸಭೆಯವರೆಗೂ ಬಂದು ದನ್ನು ನೋಡಿ, ಶೇಷ, ವಾಸುಕಿ ಮೊದಲಾದವರೆಲ್ಲ ॥೬॥

ಎದ್ದು ಭಕ್ತಿ-ವಿನಯಗಳಿಂದ ನಮಸ್ಕರಿಸಿದರು. ಮತ್ತು ಅವಳನ್ನು ಸಂದ ರ್ಶಿಸಿದ್ದರಿಂದ ತಮಗುಂಟಾದ ಆನಂದವನ್ನು ಹೀಗೆಂದು ವಿಜ್ಞಾಪಿಸಿದರು.

ಎಲ್ಲರೂ :—

ಜನನಿ ! ನಮಗೆ ನಿನ್ನ ದರ್ಶನ ದೊರೆತು ಬಹಳ ದಿನಗಳಾದವು. ನಿನ್ನನ್ನು

---

ಸಂಖ್ಯಾಚಿನ್ಹಿತಳ ಪರಿಚಯವನ್ನು ಪರಿಶಿಷ್ಟದಿಂದ ತಿಳಿಯಿರಿ.

ಕಾಂಕ್ಷಂತೇ ದರ್ಶನಂ ಸರ್ವೇ ತ್ವಂ ತು ನಿಷ್ಠುರತಾಂಗತಾ ||೭||

ಋಷಿರುವಾಚ :—

ಇತ್ಯೂಚುಸ್ತಾಂ ಕರೇ ಧೃತ್ವಾಸ್ಥಾಪಯನ್ ಪೈತ್ರ್ಯ ಆಸನೇ ।
ಪುಪೂಜುಃ ಪರಯಾ ಭಕ್ತ್ಯಾ ತತಶ್ಶೇಷೋಽಬ್ರವೀತ್ತು ತಾಮ್ ||೮||

ಶೇಷ ಉವಾಚ :—

ತ್ವಂ ಮಾತಃ ! ಕಶ್ಯಪಸ್ಯಾಸಿ ಪತ್ನೀ ಚಾರುತರಾ ಸತೀ ।
ಸರ್ವವಿದ್ಯಾನಿಧಾನಸ್ಯ ಸೃಷ್ಟಿ-ಸ್ಥಿತ್ಯಂತಕಾರಿಣಃ ||೯||

ನೋಡಬೇಕೆಂದು ನಮ್ಮ ಪೈಕಿ ಪ್ರತಿಯೊಬ್ಬನೂ ತವಕಪಡುತ್ತಲೇ ಇದ್ದೇವೆ ನೀನು ಮಾತ್ರ ನಮ್ಮೆಲ್ಲರ ವಿಷಯದಲ್ಲೂ ಬಹಳ ನಿಷ್ಠುರಳಾಗಿರುವೆ. ||೭||

ಬ್ರಹ್ಮ :—

ಹೀಗೆ ಹೇಳುತ್ತ ಬಹಳ ಸಲಿಗೆಯಿಂದ ತಾಯಿಯ ಬಳಿಗೆ ಹೋಗಿ ಅವಳಿಗೆ ಹಸ್ತಲಾಘವವನ್ನಿತ್ತು, ಆನುವಂಶಿಕವಾಗಿ ಬಂದ ರತ್ನ ಸಿಂಹಾಸನದಲ್ಲಿ ಅವಳನ್ನು ಕುಳ್ಳಿರಿಸಿದರು. ಮತ್ತು ಬಹಳ ಭಕ್ತಿಯಿಂದ ಪೂಜಿಸಿದರು. ಅನಂತರ ಇವರಿಗೆಲ್ಲ ಮುಖಂಡನಾದ ಶೇಷನು ಎದ್ದು ನಿಂತು ವಿನಯದಿಂದ ತಾಯಿಯನ್ನು ಕುರಿತು ಈ ರೀತಿಯಾಗಿ ಪ್ರಶ್ನಿಸಿದನು. ||೮||

ಶೇಷ :—

ತಾಯೇ ! ಚರಾಚರವಾದ ಈ ಪ್ರಪಂಚಕ್ಕೆಲ್ಲ ಯಾರು ಜನಕನೋ, ಅಂತಹ ಕಶ್ಯಪಬ್ರಹ್ಮನ ಪ್ರೀತಿಯ ರಾಣಿ ನೀನು. ಲೋಕದಲ್ಲೆಲ್ಲ ಪರಮ ಸುಂದರಿ ಎನಿಸಿದವಳು. ಸಾಧ್ವೀಶಿರೋಮಣಿಗಳಿಗೆಲ್ಲ ಪರಮಪೂಜ್ಯಳಾದವಳು. ನಮ್ಮ ಜನಕನಾದ ಕಶ್ಯಪನು ಸಾಮಾನ್ಯನಾದವನೇನೂ ಅಲ್ಲ. ತ್ರಿಮೂರ್ತಿಗಳ ಕರ್ತವ್ಯಗಳಾದ ಸೃಷ್ಟಿ-ಸ್ಥಿತ್ಯಂತಗಳನ್ನು ಸಹ ಕ್ಷಣಮಾತ್ರದಲ್ಲಿ ತಾನೊಬ್ಬನೇ ಬಿಡುವಷ್ಟು ಮಹಿಮಾವಂತನು. ||೯||

ಬ್ರಹ್ಮಾದಯೋ ದೇವಗಣಾಸ್ತತ್ತ್ವಂ ಯಸ್ಯ ನ ವೈ ವಿದುಃ ।
ತ್ವಂ ಚಾಪಿ ಸಹಸಾ ಶಾಪಾನುಗ್ರಹೇ ಚ ಕ್ಷಮಾಹ್ಯಸಿ ॥೧೦॥

ತವ ಪುತ್ರಾ ವಯಂ ಮಾತಃ! ತ್ರೈಲೋಕ್ಯಗ್ರಾಸಸಾಹಸಾಃ ।
ಸಾ ಕಥಂ ತ್ವಮಿಹಾಯಾತಾಽಕಿಮುದ್ದಿಶ್ಯ ಪ್ರಯೋಜನಮ್ ? ॥೧೧॥

ಕದ್ರೂರುವಾಚ :—

ವಿನಾ ಪ್ರಯೋಜನಂ ಪುತ್ರ! ಕೋಽಪಿ ನಾಯಾತಿ ಕಿಂಚನ ।
ತಚ್ಚ ತೇ ಕಥಯಿಷ್ಯೇಽಹಂ ಶೃಣು ಸಾದರಮಾತ್ಮಜ! ॥೧೨॥

ಬ್ರಹ್ಮಾದಿ ಮೂವತ್ತು ಮೂರು ಕೋಟಿ ದೇವತೆಗಳ ಪೈಕಿ ಯಾರೊಬ್ಬ ನಿಗೂ ನಮ್ಮ ಜನಕನ ನಿಜರೂಪವು ತಿಳಿದಿರುವುದಿಲ್ಲ. ನೀನೂ ಸಹ ಸಾಮಾನ್ಯಳಾದವಳೇನೂ ಅಲ್ಲ. ಕ್ಷಣಮಾತ್ರದಲ್ಲಿ ಶಪಿಸಿಬಿಡಬಲ್ಲೆ, ಹಾಗೂ ಅನುಗ್ರಹಿಸಲೂ ಸಮರ್ಥಳಾದವಳು. ॥೧೦॥

ತಾಯೇ! ಇದನ್ನು ಆತ್ಮಸ್ತುತಿ ಎಂದು ಮಾತ್ರ ಭಾವಿಸಬೇಡ. ನಿನ್ನ ಆಶೀರ್ವಚನದ ಬಲದಿಂದ ನಿನ್ನ ಮಕ್ಕಳಾದ ನಾವು ಇಂದು ಮೂರು ಲೋಕಗಳನ್ನು ಬೇಕಾದರೂ ಏಕಾಪೋಶನದಲ್ಲಿ ನುಂಗಿ ಬಿಡುವಷ್ಟು ಸಾಮರ್ಥ್ಯ ಉಳ್ಳವರಾಗಿದ್ದೇವೆ. ಇಷ್ಟೆಲ್ಲ ಸುಖಸಂಪತ್ತಿ ನಿನಗೆ ಇರುವಾಗ ಇಲ್ಲಿಯ ವರೆಗೂ ನಡೆದು ಬರುವಂತಹ ಶ್ರಮವನ್ನು ತೆಗೆದುಕೊಳ್ಳಲಿಕ್ಕೆ ಕಾರಣವೇನು ? ಯಾವ ಪ್ರಯೋಜನವನ್ನು ಉದ್ದೇಶಿಸಿ ಇಲ್ಲಿಯುವರೆಗೂ ಬಂದಿರುವೆ ? ॥೧೧॥

ಕದ್ರೂ :—

ವತ್ಸ, ಆದಿಶೇಷ! ಕೇಳು. 'ಪ್ರಯೋಜನಮನುದ್ದಿಶ್ಯ ನ ಮಂದೋಽಪಿ ಪ್ರವರ್ತತೇ' ಎಂಬುದು ಲೋಕನಿಯಮವಲ್ಲವೇ ? ಆದುದರಿಂದ ನಾನೂ ಸಹ ಒಂದು ಪ್ರಯೋಜನವನ್ನು ಉದ್ದೇಶಿಸಿಯೇ ಇಲ್ಲಿಗೆ ಬಂದಿದ್ದೇನೆ. ಅದೇನೆಂಬುದನ್ನು ಹೇಳುವೆನು, ಕುಮಾರ! ಆದರದಿಂದ ಅದನ್ನು ಕೇಳು ॥೧೨॥

[1]ವಿನತಾ ಮೇ ಸಪತ್ನೀ ಯಾ ಜನನೀ ಪುತ್ರ! ಪಕ್ಷಿಣಾಮ್ ।
ತಸ್ಯಾ ದರ್ಶನಕಾಂಕ್ಷಾ ಮೇ ಕದಾಚಿತ್ಸಂಬಭೂವ ಹ ॥೧೩॥

ಅನಾದೃತಾ ತಯಾಹಂ ತು ತದ್ಗೃಹಂ ಸಹಸಾಗತಾ ।
ನಾಸನಂ ನ ಚ ಸತ್ಕಾರಂ ಸ್ವಾಗತಂ ನ ಚ ಸಾಕರೋತ್ ॥೧೪॥

ಪೂರ್ವನ್ವೈರಂ ಸ್ಮರಂತೀ ಸಾ [2]ಜಟಾಯುಂ ಪುತ್ರಮಾದಿಶತ್ ।
ತೇನ ಚಾಕರ್ಷಿತಾ ವೇಣೀ ವಿವಸ್ತ್ರಾಹಂ ಕೃತಾ ಕ್ಷಣಾತ್ ॥೧೫॥

ಪಕ್ಷಿವರ್ಗಕ್ಕೆಲ್ಲ ಜನಯಿತ್ರಿಯಾದ 'ವಿನತೆ' ಎಂಬುವಳು ನನಗೆ ಸವತಿಯಾಗ ಬೇಕಷ್ಟೇ ? ಕುಮಾರ ! ಅವಳ ಯೋಗ-ಕ್ಷೇಮವನ್ನು ವಿಚಾರಿಸಿಕೊಂಡು ಬರೋಣವೆಂದು ಒಮ್ಮೆ ಅಪೇಕ್ಷೆಯುಂಟಾಯಿತು. ಆಮದರಿಂದ ಸಹಜವಾಗಿ ನಾನು ಅವಳ ಆವಾಸಸ್ಥಾನಕ್ಕೆ ಹೋದೆನು. ॥೧೩॥

ನಾನೇನೋ ಸರಳ ಸ್ವಭಾವದಿಂದ ಅವಳ ಮನೆಗೆ ಹೋದರೆ, ಕ್ರೂರಳೂ ಅಹಂಕಾರಿಣಿಯೂ ಮತ್ತು ಮತ್ಸರಶೀಲಳೂ ಆದ ವಿನತೆಗೆ ಇದು ಸಹಿಸಬೇಕಲ್ಲ? ನಾನು ಅವಳ ಮನೆಯನ್ನು ಮುಟ್ಟುವುದೇ ತಡ,ಅವಳು ಅವಸರವಸರದಿಂದ ಬಂದು ನನ್ನನ್ನು ಅನಾದರಿಸಿದುದು ಮಾತ್ರವಲ್ಲದೇ ಒಂದು ಬಗೆಯಿಂದ ಹಾಸ್ಯವನ್ನೂ ಮಾಡಿಬಿಟ್ಟಳು. ನಾನು ಅಲ್ಲಿಗೆ ಹೋದರೆ ನನ್ನನ್ನು ಸ್ವಾಗತಿಸಬೇಡವೇ ? ಅರ್ಘ್ಯ-ಪಾದ್ಯಾದಿಗಳನ್ನರ್ಪಣೆಮಾಡಿ ಸತ್ಕರಿಸಬೇಡವೇ ? ದುರಹಂಕಾರಿಣಿಯಾದ ವಿನತೆಯು ಯಾವುದನ್ನೂ ಮಾಡಲೇ ಇಲ್ಲ. ॥೧೪॥

ಅದೂ ಸಾಲದೇ. ತನ್ನ ಸು-ಕುಮಾರ ಉದ್ದ ಮೂಗಿನ ಹದ್ದನ್ನು ಕರೆದು ನನ್ನನ್ನು ಮನೆಯಿಂದಾಚೆಗೆ ತಳ್ಳಿ ಓಡಿಸಿ ಬಿಡುವಂತೆ ಆಜ್ಞಾಪಿಸಿದಳು. ಅವನ ಹೆಸರು :' ಜಟಾಯು 'ವಂತೆ. ಏನು ಅವನ ಸ್ಫುರದ್ರೂಪವೋ, ಆಹಾ ! ಏನೆಂದು ಹೇಳಲಿ ? ಇರಲಿ, ಆ ದುರ್ವೃತ್ತನು ಆ ತಾಯಿಯ ಮಗನಷ್ಟೇ ?

ಮಾಮುವಾಚ

ಜಟಾಯುರುವಾಚ :—

ಮಹಾದುಷ್ಟೇ ! ನಾವಲೋಕ್ಯಂ ಮುಖಂ ತವ ।
ಮಮ ಮಾತುಸ್ತ್ವ ದಾಸೀ ತ್ವಂ [1] ಪೂರ್ವಮಾಸೀಃ ಕೃತಂ ತ್ವಯಾ ॥೧೬॥
ತದಾ ನ ಕರುಣಾಲೇಶೋ ಧೃತೋ ಮನಸಿ ಕರ್ಹಿಚಿತ್ ।
ಇತೋ ಗಚ್ಛ, ನ ಚೇತ್ಪ್ರಾಣಾನ್ ಗ್ರಹೀಷ್ಯಾಮಿ ಮಹಾಖಲೇ ! ॥೧೭॥

---

ಅವಳಿಗಿಂತಲೂ ಮತ್ಸರಿಯಾದವನು. ಕೃತ್ಯಾಕೃತ್ಯಗಳ ವಿವೇಕ ಅವನಿಗಿಲ್ಲ. ಅವನು ಭರ್ರನೆ ಹಾರಿ ಬಂದು, ಮೊದಲು ನನ್ನ ಮುಡಿಯನ್ನು ಹಿಡಿದು ಎಳೆದನು. ನಾನು ಉಟ್ಟಿದ್ದ ಸೀರೆಯನ್ನು ಸೆಳೆದು ಒಂದು ಕ್ಷಣದೊಳಗಾಗಿಯೇ ನನ್ನನ್ನು ದಿಗಂಬರಳನ್ನಾಗಿ ಮಾಡಿಬಿಟ್ಟನು. ॥೧೫॥

ಅವನೆಂತಹ ನಿರ್ಲಜ್ಜನಿರಬಹುದು ? ಎಷ್ಟೆಂದರೂ ನಾನು ಅವನಿಗೆ ತಾಯಿಯಲ್ಲವೇ? ಅವಿವೇಕಿ, ಅವನಿಗೆಲ್ಲ ಈ ಪರಿಜ್ಞಾನ ಎಲ್ಲಿಂದ ಬರಬೇಕು. ಇರಲಿ, ಇಷ್ಟರಿಂದಲೂ ಆ ದುರ್ವೃತ್ತನಿಗೆ ಸಂಪೂರ್ಣ ತೃಪ್ತಿಯುಂಟಾಗಲಿಲ್ಲ. ನನ್ನನ್ನು ಗದ್ದರಿಸುತ್ತ ಹೀಗೆಂದು ಬೊಗಳಿದನು.

ಜಟಾಯು :—

ನೀನು ಎಂತಹ ದುಷ್ಟಾತ್ಮಳೇ ! ನಿನ್ನ ಮುಖವನ್ನು ಸಹ ಯಾರೂ ನೋಡಬಾರದು. ನೀನು ಸಾಮಾನ್ಯಳೇನು ? ಮೊದಲು ನೀನು ನಮ್ಮ ತಾಯಿಗೆ ದಾಸಿಯಾಗಿದ್ದವಳು. ಹೀಗಿದ್ದರೂ ಸರಳ ಮನಸ್ಸಿನವಳಾದ ನಮ್ಮ ಜನನಿ; ವಿನತಾದೇವಿಯನ್ನು ಮೋಸಗೊಳಿಸಿ, ಮಾತಿಗೆ ಸಿಕ್ಕಿಸಿಕೊಂಡು ನಿನ್ನ ದಾಸಿಯಾಗುವಂತೆ ಮಾಡಿ ಹಿಂಸಿಸಿದಳಲ್ಲವೇ ? ॥೧೬॥

ಇಂತಹ ನಾಗಿನಿಯ ವಿಷಯದಲ್ಲಿ ದಯೆ ತೋರಲಾದೀತೇ ? ಎಂದೆಂದಿಗೂ ಸಾಧ್ಯವಿಲ್ಲ. ಪರಮ ನೀಚಳೇ ! ಈ ಸ್ಥಳವನ್ನು ಬಿಟ್ಟು ಮೊದಲು ತೊಲಗು. ಇಲ್ಲವಾದರೆ ನಿನ್ನ ಪ್ರಾಣಗಳನ್ನು ಕ್ಷಣಮಾತ್ರದಲ್ಲೇ ಹೀರಿಬಿಟ್ಟೇನು. ತಿಳಿಯಿತೇ ? ॥೧೭॥

---

[1] ಪೂರ್ವಕಥೆಯನ್ನು ಪರಿಶಿಷ್ಟದಿಂದ ತಿಳಿಯಬಹುದು.

ಕದ್ರೂರುವಾಚ :—

ಶ್ರುತ್ವಾ ತದೀಯವಾಕ್ಯಾನಿ ದುಃಖಿತಾಹಂ ಫಣೀಶ್ವರ ! ।
ಆಕ್ರಂದಂ ಪರಮಂ ಪ್ರಾಪ್ತಾ ಪ್ರಾಣತ್ಯಾಗೇ ಕೃತ ನಿಶ್ಚಿತಾ ||೧೮||

ಆಗತಾಹಂ ತತೋ ಯುಷ್ಮದ್ದರ್ಶನಾರ್ಥಂ ಸು-ದುಃಖಿತಾ ।
ಯದಿ ವೋ ಮಯಿ ಭಕ್ತಿಸ್ಸ್ಯಾತ್ಸಾಹಾಯ್ಯಂ ಕ್ರಿಯತಾಂ ಮಮ ||೧೯||

---

ಕದ್ರೂ :—

ಅವಿವೇಕಿಯೂ, ನಿರ್ಘೃಣನೂ ಆದ ಜಟಾಯುವಿನ ಮರ್ಮಭೇದಕ ಮಾತುಗಳನ್ನು ಕೇಳಿ ಫಣೀಶ್ವರ! ನಾನು ಬಹಳ ದುಃಖಿತಳಾದೆನು. ಕೋಪದಿಂದ ಅವನನ್ನು ಶಪಿಸಿಬಿಡಬಹುದಾಗಿದ್ದಿತು. ಆದರೆ ಅವನು ಎಷ್ಟೆಂದರೂ ಚಿಕ್ಕವನು. ಆದುದರಿಂದಲೇ ಸುಮ್ಮನಾಗಿಬಿಟ್ಟೆ. ಮಕ್ಕಳಿಂದ ಅವಹೇಳನವನ್ನು ಹೊಂದಿದ ಬಳಿಕ ಅಭಿಮಾನಿಯಾದವನು ಖಂಡಿತವಾಗಿಯೂ ಜೀವದೊಂದಿಗೆ ಇರಬಾರದು. ನನ್ನ ಸವತಿ; ವಿನತೆಯ ಮಕ್ಕಳಾದರೇನು ? ನನ್ನ ಮಕ್ಕಳೇ ತಾನೇ ? ನನಗೆ ಬಹಳ ಅಳು ಬಂದಿತು. ಯಾರಿಂದ ನಾವು ಗೌರವಿಸಲ್ಪಡಬೇಕಾದವರೋ ಮತ್ತು ಯಾರ ಏಳಿಗೆಗಾಗಿ ನಾವು ಅಹರ್ನಿಶಿ ಕಷ್ಟಪಟ್ಟುದೂ ಅಲ್ಲದೇ ಕಂಡ ಕಂಡವರಿಂದ ಅನೇಕ ಸಣ್ಣ ಮಾತುಗಳನ್ನು ಕೇಳಬೇಕಾಗಿ ಬಂದಾಗಲೂ, ಅದನ್ನು ಯಾರ ಪೋಷಣೆಗಾಗಿ ಸಹನೆಯಿಂದಲೇ ನುಂಗಿರುವೆವೋ ಅಂಥವರಿಂದ ಮನಸ್ವೀ ಮಾತುಗಳನ್ನು ಕೇಳಿದ ಬಳಿಕ ಸತ್ತೇ ಹೋಗಬೇಕು ಎಂದು ನಿಶ್ಚಯಿಸಿಬಿಟ್ಟೆನು. ||೧೮||

ಅವನಂತೂ ಸವತಿಯ ಮಗ. ನನ್ನನ್ನು ಅಗೌರವಿಸಿದನು. ನೀವು ನನಗೆ ಸಾಕ್ಷಾತ್ಪುತ್ರರು. ನೀವೂ ಸಹ ಅವನ ಹಾಗೆಯೇ ಮಾಡಲಾರಿರಿ ಎಂದು ತಿಳಿದು ದುಃಖವನ್ನು ತೋಡಿಕೊಂಡು ಹೋಗೋಣವೆಂದು ಇಲ್ಲಿಯ ವರೆಗೆ ಬಂದಿರುವೆನು. ನಿಮಗೇನಾದರೂ ನನ್ನ ವಿಷಯದಲ್ಲಿ ‘ ಜನನಿ ’ ಎಂಬ ಗೌರವಾಭಿಮಾನಗಳಿರುವುವಾದರೆ, ನನಗೀಗ ಉಂಟಾಗಿರುವ ಅಪಮಾನವನ್ನು ಹೋಗಲಾಡಿಸಿ ಸಾಹಾಯ್ಯವನ್ನು ಮಾಡಿರಿ. ||೧೯||

ಸತ್ಪುತ್ರಾ ಯದಿ ಮನ್ಯಾಹಂ ತದಾ ತಸ್ಯಾ ವಿನಾಶನಮ್ ।
ಕರ್ತವ್ಯಂ ಚ ಸಪತ್ನ್ಯಾಶ್ಚ ಮೇ ತತೋ ಹೃದಿ ಸುಖಂ ಭವೇತ್ ॥೨೦॥

ಕ ಉವಾಚ :—

ಏವಮಾಕರ್ಣ್ಯ ತದ್ವಾಕ್ಯಂ ಶೇಷೋ ರೋಷಸಮನ್ವಿತಃ ।
ಜಜ್ವಾಲ ಸಹಸಾ ವಹ್ನಿರ್ಘೃತೇನೇವ ಪ್ರದೀಪಿತಃ ॥೨೧॥

---

ನಾನು ಸತ್ಪುತ್ರರನ್ನು ಪಡೆದವಳು ಎಂಬುದನ್ನು ನೀವಾದರೂ ಒಪ್ಪಿಕೊಳ್ಳು ವಿರಾದರೆ, ನನ್ನ ಇಷ್ಟವನ್ನು ಮೊದಲು ನೆರವೇರಿಸಿ ಕೊಡಿ. ನನ್ನ ಸವತಿಯಾದ ದುಷ್ಟಾತ್ಮೆ; ವಿನತೆಯ ಹೆಸರೇ ಇಲ್ಲದಂತೆ ಅವಳನ್ನು ಧ್ವಂಸಗೊಳಿಸಿ ಬಿಡಿ. ಎಂದರೆ ಮಾತ್ರ ನನ್ನ ಮನಸ್ಸಿಗೆ ಸ್ವಲ್ಪ ನೆಮ್ಮದಿ ಉಂಟಾಗುವುದು. ನನ್ನನ್ನು ಅಪಮಾನ ಗೊಳಿಸಿದವನು ಜಟಾಯುವೇ ಆದರೂ, ಅವನು ಇದನ್ನು ಸ್ವ-ಬುದ್ಧ್ಯಾ ಮಾಡಿ ದವನೇನೂ ಅಲ್ಲ. ವಿನತೆಯ ಮಾತ್ಸರ್ಯವು ಬಾಲಕನ ಮೂಲಕ ಹೊರಹೊರ ಟಿತು. ಆದುದರಿಂದ ಈ ಪ್ರಸಂಗದಲ್ಲಿ ಬಾಲಕ ಜಟಾಯುವೇನೂ ಅಪರಾಧಿಯಲ್ಲ. ಅವನಿಗಿಂತಲೂ ವಿನತೆಯೇ ಶಿಕ್ಷಾರ್ಹಳು ಎಂಬುದೇ ನನ್ನ ನಿಶ್ಚಯ. ॥೨೦॥

ಬ್ರಹ್ಮಾ :—

ತಾಯಿಯ ಮಾತುಗಳನ್ನು ಕೇಳಿದೊಡನೆಯೇ ಆದಿಶೇಷನ ಅಂಗಾಂಗಗಳೆಲ್ಲ ಕ್ರೋಧಾಗ್ನಿಯಿಂದ ಉರಿಯಲಾರಂಭಿಸಿದವು. ಮೊದಲೇ ಅವನು ದಾಯಾದ ಮಾತ್ಸರ್ಯದಿಂದ ತುಂಬಿದ್ದನು. ತನ್ನ ತಾಯಿಗೆ ಈ ದುರವಸ್ಥೆಯನ್ನು ತಂದೊ ಡ್ಡಿದ ಕಥೆಯನ್ನು ಕೇಳಿದ ಬಳಿಕಂತೂ ಅವನ ಕೋಪಕ್ಕೆ ಮಿತಿಯೇ ಉಳಿಯಲಿಲ್ಲ. ಉರಿವ ಬೆಂಕಿಗೆ ಗಟ್ಟಲೆ ತುಪ್ಪವನ್ನು ಸುರಿದರೆ, ಜ್ವಾಲೆಯು ಹೆಚ್ಚಾಗ ವಂತೆ ತಾಯಿಯ ಈ ಅವಸ್ಥೆಯಿಂದ ಇವನ ಕೋಪಾಗ್ನಿಯು ಭುಗಿಲೆಂದೆದ್ದಿತು. ॥೧೨॥

**ಶೇಷ ಉವಾಚ :—**

**ಮಮ ಮಾತುಃ ಕೃತಾ ಪೀಡಾ ವಿನತಾತನಯೈರ್ಯದಿ ? ।**
**ತದಾಹಂ ತತ್ಪ್ರತೀಕಾರಂ ಕರಿಷ್ಯಾಮಿ ನ ಸಂಶಯಃ ॥೨೨॥**

**ಕ ಉವಾಚ :—**

**ಏವಮುಕ್ತ್ವಾ ಸ ಶೇಷೋಽಥ ವಾಸುಕಿಪ್ರಮುಖೈರ್ಯುತ ।**
**ತತ್ರ ಗಂತುಂ ಮನಶ್ಚಕ್ರೇ ಯತ್ರ ಸಾ ವಿನತಾಭವತ್ ॥೨೩॥**

**ವಾಸುಕಿರುವಾಚ :—**

**ಅಹಮೇವ ಗಮಿಷ್ಯಾಮಿ ಕೋಟಿನಾಗಯುತೋಽನಘ ! ।**
**ವಿನತಾಮಾಸಯಿಷ್ಯಾಮಿ ತಿಷ್ಠ ತ್ವಂ ಭುಜಗಾಧಿಪ ! ॥೨೪॥**

---

ಶೇಷ :—

ವೀರಾಧಿವೀರಪುತ್ರಿಣಿಯಾದ ನನ್ನ ತಾಯಿಗೆ ಕ್ಷುದ್ರಳಾದ ವಿನತೆಯ ಮಕ್ಕಳಿಂದ ಪೀಡೆಯುಂಟಾಗಿರುವ ಪಕ್ಷದಲ್ಲಿ ಇದನ್ನು ನಾನು ಎಂದೆಂದಿಗೂ ಸಹಿಸತಕ್ಕವನಲ್ಲ. ಸ್ವಲ್ಪವೂ ತಡೆ ಇಲ್ಲದೇ ನಾನು ಇದಕ್ಕೆ ಪ್ರತೀಕಾರವನ್ನು ಮಾಡತಕ್ಕವನೇ ಸರಿ. ಇದರಲ್ಲಿ ಸ್ವಲ್ಪವೂ ಸಂದೇಹವಿರುವುದಿಲ್ಲ. ೨೨॥

ಬ್ರಹ್ಮ :—

ಹೀಗೆ ಹೇಳಿ ಕೂಡಲೇ ಶೇಷನು ತನ್ನ ಅನುಜರೂ, ಅನುಚರರೂ ಆದ ಸರ್ಪಗಳೊಂದಿಗೆ ವಿನತೆಯು ವಾಸವಾಗಿರುವ ಪ್ರದೇಶಕ್ಕೆ ಹೊರಡಲು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡನು. ॥೨೩॥

ವಾಸುಕಿ :—

ಪಾಪರಹಿತನೇ ! ನಮಗೇನು ಸೈನ್ಯಕ್ಕೆ ಕೊರತೆಯೇ ? ಯಾವುದೂ ಇಲ್ಲವಲ್ಲ? ನಾನಿರುವಾಗ ರಾಜನಾದ ನೀನೇಕೆ ದಣಿಯಬೇಕು. ಕೋಟಿಗಟ್ಟಲೆ ಇರುವ ನಮ

ಕ ಉವಾಚ :—

ಏವಮುಕ್ತ್ವಾ ಯಯೌ ಶೀಘ್ರಂ ವಾಸುಕಿರ್ವಿನತಾಶ್ರಮಮ್
ಅಸಂಖ್ಯಾನುರಗಾನ್ ದೃಷ್ಟ್ವಾ ಬಿಭಾಯ ವಿನತಾ ತದಾ ||೨೫||

ತದೈವ ವೇಷ್ಟಿತಾ ಸರ್ಪೈಃ ಕ್ರೂರೈರ್ದುಷ್ಟಸ್ವಭಾವಕೈಃ |
ನಿನ್ಯುಸ್ತೇ ಶೇಷನಿಕಟಂ ಸಾ ಚ ತಾನಬ್ರವೀತ್ತದಾ ||೨೬||

---

ಈ ನಾಗಸೈನಿಕರನ್ನು ಸಂಗಡ ಕರೆದುಕೊಂಡುಹೋಗಿ ಭುಜಗರಾಜ ! ಸೊಕ್ಕಿನಿಂದ ಸಿಡಿದುಹೋಗುತ್ತಿರುವ, ನಮ್ಮ ತಾಯಿಯ ಸವತಿ ವಿನತೆಯನ್ನು ಹಿಡಿವೆಳೆದು ತಂದು ಇಲ್ಲಿ ನಿಲ್ಲಿಸುವೆನು. ನಿನ್ನ ಪಾಡಿಗೆ ನೀನು ಇಲ್ಲಿಯೇ ಸುಖವಾಗಿ ಇರು, ||೨೪||

ಬ್ರಹ್ಮ :—

ವಾಸುಕಿಯು ಹೀಗೆ ವೀರವಾದವನ್ನು ನುಡಿದು ಒಡನೆಯೇ ತನ್ನ ನೆಚ್ಚಿನ ಸೈನಿಕರನ್ನು ಸಂಗಡ ಕರೆದುಕೊಂಡು ವಿನತೆಯು ವಾಸವಾಗಿದ್ದ ಆಶ್ರಮವನ್ನು ಸೇರಿದನು. ಇದ್ದಕ್ಕಿದ್ದಂತೆಯೇ ತನ್ನ ಆಶ್ರಮದ ಬಳಿ ಚಿತ್ರ ವಿಚಿತ್ರ ಆಕೃತಿಯುಳ್ಳ ಭಯಂಕರಾಕಾರದ ಸರ್ಪಸಮುದಾಯವು ಹರಿದಾಡುತ್ತಿರುವುದನ್ನು ಕಂಡು ವಿನತೆಯು ಬಹಳ ಘಾಬರಿಗೊಂಡಳು. ||೨೫||

ಇವಳು ಸುತ್ತ-ಮುತ್ತಲೂ ನೋಡುತ್ತಿರುವಷ್ಟರಲ್ಲೇ ಅತಿ ದುಷ್ಟಸ್ವಭಾವವುಳ್ಳವೂ, ಕ್ರೂರ ವಿಷದಿಂದ ತುಂಬಿದವೂ ಆದ ಸರ್ಪಗಳೆಲ್ಲ ಮುಂದೆ ಬಂದು ವಿನತೆಯನ್ನು ಮುತ್ತಿಬಿಟ್ಟವು. ಮತ್ತು ಎಳೆದಾಡುತ್ತ ಸರಸರನೆ ನಡೆದು ಆದಿಶೇಷನ ಬಳಿಗೆ ಕರೆದೊಯ್ಯಲಾರಂಭಿಸಿದವು. ವಿನತೆಗಂತೂ ಈ ಆಕಸ್ಮಿಕಕ್ಕೆ ಕಾರಣವೇ ಗೊತ್ತಾಗಲಿಲ್ಲ. ಆಗ ಸರ್ಪಗಳನ್ನು ಕುರಿತು ಈ ರೀತಿ ಗದ್ದರಿಸುತ್ತ ನುಡಿದಳು. ||೨೬||

**ವಿನತೋವಾಚ :—**

**ಕಿಮರ್ಥಂ ಬಂಧನಂ ಕೃತ್ವಾ ಮಮ ನೇತುಂ ಸಮುದ್ಯತಾಃ ।**
**ಅಪರಾಧವಿಹೀನಾಯಾಃ ಪಾಪಿಷ್ಠಾ ! ಗದತಾಶು ಮೇ ॥೨೭॥**

**ಮಮ ಪುತ್ರಸ್ಯಾನುಭವೋ ಜ್ಞಾತೋಽಸ್ತಿ ಸರ್ಪಪನ್ನಗೈಃ ।**
**ಅತೋ ಮುಂಚಂತು ಮಾಂ ನೋ ಚೇತ್ಸ ಸಂಹಾರಂ ಕರಿಷ್ಯತಿ ॥೨೮॥**

**ಕ ಉವಾಚ :—**

**ಧಾರ್ಷ್ಟ್ಯಂ ತೇಷಾಂ ಸಮೀಕ್ಷ್ಯೈವ ಸಸ್ಮಾರ ಗರುಡಂ ತು ಸಾ ।**

---

ವಿನತೆ :—

ಪಾಪಾತ್ಮರಾದ ಪನ್ನಗರುಗಳೇ ? ನಿರಪರಾಧಿನಿಯಾದ ನನ್ನನ್ನೇಕೆ ಹೀಗೆ ಒಮ್ಮಿಂದೊಮ್ಮೆಲೇ ಬಂಧಿಸಿದಿರಿ ? ಮತ್ತು ಈಗೆಲ್ಲಿಗೆ ಕರೆದುಕೊಂಡು ಹೋಗುತ್ತಲಿರುವಿರಿ ? ಮೊದಲು ಬೊಗಳಿರಿ ಇಲ್ಲವಾದರೆ ನಿಮ್ಮ ಪರಿಣಾಮ ನೆಟ್ಟಗೆ ಆಗಲಿಕ್ಕಿಲ್ಲ. ॥೨೭॥

ನನ್ನ ಮಗ ; ಗರುಡನ ಪ್ರತಾಪವೆಂತಹುದು ಎಂಬುದು ಈಗಾಗಲೇ ನಿಮ್ಮೆಲ್ಲರ ಅನುಭವಕ್ಕೆ ಸಂಪೂರ್ಣವಾಗಿ ಬಂದಿರುವುದು. ಇಷ್ಟರಲ್ಲೇ ಅವನ್ನು ಮರೆತುಹೋಗಿದ್ದೀರಲ್ಲವೋ ? ಈಗಲೂ ಕಾಲ ಮೀರಿಲ್ಲ. ನೀವು ಬುದ್ಧಿವಂತರಾಗಿದ್ದರೆ, ಹಾಗೂ ಬದುಕಿರಬೇಕೆಂದು ಬಯಸುತ್ತಲಿದ್ದರೆ ಈ ಕೂಡಲೇ ನನ್ನನ್ನು ಬಂಧನ ವಿಮುಕ್ತಳನ್ನಾಗಿ ಮಾಡಿರಿ. ಇಲ್ಲವಾದರೆ, ಗರುಡನು ಬಂದು ನಿಮ್ಮೆಲ್ಲರನ್ನೂ ನಿಮಿಷಮಾತ್ರದಲ್ಲಿಯೇ ಕೊಂದುಹಾಕಿ ಬಿಡುವನು. ಎಚ್ಚರ. ॥೨೮॥

ಬ್ರಹ್ಮಾ :—

ಸೊಕ್ಕಿನಿಂದ ಜೃಂಭಿಸುತ್ತಲಿದ್ದ ಸರೀಸೃಪಗಳು ಇವಳ ಬೆದರಿಕೆಯ ಮಾತುಗಳನ್ನು ಗಮನಕ್ಕೇ ತಾರದೇ, ಗಹಗಹಿಸಿ ನಗುತ್ತ ಮತ್ತಷ್ಟೂ ಒತ್ತರದಿಂದ ಮುಂದೆ

ಸೋಽಪಿ ಜ್ಞಾತ್ವಾ ಸ್ಮೃತಿಂ ತಸ್ಯಾ ಆಗತಃ ಪಕ್ಷಿಭಿಃ ಸಹ ॥೨೯॥

[1] ಶ್ಯೇನಸ್ಸಂಪಾತಿರಥ ಚ ಜಟಾಯುಃ ಪಕ್ಷಿಪುಂಗವಃ ।
ಯೇಷಾಂ ಪಕ್ಷಸಮೀರೇಣ ಕಂಪಿತಂ ಭುವನತ್ರಯಮ್ ॥೩೦॥

ಭುಜಗಾಸ್ತೇ ತು ಸರ್ವೇಽಪಿ ವಮದ್ವಿಷಕಣಾಭರ್ವ ।
ಯುದ್ಧಮಾಸೀನ್ಮಹಾಘೋರಂ ಭುಜಗೇಂದ್ರ-ಪತತ್ರಿಣಾಮ್ ॥೩೧॥

ತತೋ ಜಟಾಯುಂ ಸಂಪಾತಿಂ ಶ್ಯೇನಂ ಬದ್ಧ್ವಾನಯಂಸ್ತು ತೇ ।

ಸಾಗಿದವು. ಸರ್ಪಗಳ ಹುಂಬತನವನ್ನು ನೋಡಿ ವಿನತೆಯು ಸಹನೆ ಮೀರಿದವಳಾದಳು. ಮತ್ತು ಒಡನೆಯೇ ತನ್ನ ಪುತ್ರನಾದ ಪಕ್ಷಿರಾಜ : ಗರುಡನನ್ನು ಮನಸ್ಸಿನಿಂದಲೇ ಸ್ಮರಿಸಿದಳು. ತನ್ನ ತಾಯಿಯು ತನ್ನನ್ನು ಸ್ಮರಿಸುತ್ತಿದ್ದುದನ್ನು ತಿಳಿದೊಡನೆಯೇ ಗರುಡನು ತನ್ನ ಅನುಯಾಯಿಗಳಾದ ಇತರ ಪಕ್ಷಿಗಳನ್ನೂ ಸಂಗಡ ಕರೆದುಕೊಂಡು ವಿನತೆ ಇದ್ದಲ್ಲಿಗೆ ಹಾರಿಬಂದು ಸೇರಿದನು. ॥೨೯॥

ಇವನ ಸಂಗಡ ಗಿಡಗ, ಸಂಪಾತಿ ಮತ್ತು ಪಕ್ಷಿಶ್ರೇಷ್ಠನಾದ ಜಟಾಯು ಇವರೂ ಹಾರಿಬಂದರು. ಈ ಪಕ್ಷಿಗಳ ಪಕ್ಷಾಘಾತದಿಂದ ಬಿರುಗಾಳಿ ಎದ್ದು ಮೂರು ಭುವನಗಳನ್ನೂ ಗಡಗಡನೆ ನಡುಗಿಸಿಬಿಟ್ಟಿತು. ॥೩೦॥

ಭುಜಗಗಳೂ ಹೆದರದೇ ಪಕ್ಷಿಗಳೊಡನೆ ಹೋರಾಟಕ್ಕೆ ಸಿದ್ಧವಾಗಿ ನಿಂತವು. ಜ್ವಾಲಾಮುಖಿಯು ಅಗ್ನಿಕಣಗಳನ್ನು ವಿಪುಲವಾಗಿ ಉಗುಳುವಂತೆ ಈ ನಾಗಗಳು ಅಗ್ನಿಗಿಂತಲೂ ತೀಕ್ಷ್ಣಗಳಾದ ವಿಷಕಣಗಳನ್ನು ಉಗುಳಲಾರಂಭಿಸಿದವು. ಭುಜಗ ಮತ್ತು ಪತತ್ರಿ (ಪಕ್ಷಿ) ಇವಕ್ಕೆ ಉಂಟಾದ ಘನ-ಘೋರ ಸಮರವು ವರ್ಣನೀಯವಾಗಿದ್ದಿತು. ॥೩೧॥

ಕೆಲವೊಂದಂಶದಿಂದ ಭುಜಗಗಳ ಕೈವಾಡವೇ ಮೇಲಾಯಿತು. ಆಗ ಸರ್ಪಗಳು ಜಟಾಯು, ಸಂಪಾತಿ ಮತ್ತು ಶ್ಯೇನ ಎಂಬ ಈ ಮೂರು ಪ್ರಮುಖ ಪಕ್ಷಿವೀರರನ್ನು ಹಿಡಿದು ಬಂಧಿಸಿ, ತಮ್ಮ ರಾಜನ ಬಳಿಗೆ ಎಳೆದೊಯ್ದುವು. ಇಷ್ಟರಲ್ಲಿ

ಮಾತುಃ ಸ್ಮೃತೇ ತು ಸಂಪ್ರಾಪ್ತೋ ಗರುಡಃ ಪಕ್ಷವಾತತಃ ||೩೨||

ಕಂಪಯನ್ ಜಗತೀಂ ಸರ್ವಾಂ ಪಾತಯನ್ ದ್ರುಮ-ಪರ್ವತಾನ್ |
ತದ್ಗಂಧಂ ಭುಜಗಾ ಘ್ರಾತ್ವಾ ಪಲಾಯನಪರಾ ಯಯುಃ ||೩೩||

ಪಕ್ಷವಾತೇನ ಗಗನೇ ಬಭ್ರಮುರ್ಭುಜಗಾಃ ಪರೇ |
ಮುಕ್ತಾ ತು ವಿನತಾ ಬಂಧಾತ್ಸ್ವಸ್ಥಾನಂ ಗಂತುಮುದ್ಯತಾ ||೩೪||

ತಾಂ ದೃಷ್ಟ್ವಾ ವಾಸುಕಿಃ ಕ್ರುದ್ಧೋ ದಹನ್ನಿವ ವಮನ್ವಿಷಮ್ |

---

ತಾಯಿಯ ಕರೆಯನ್ನು ಕೇಳಿದ ಗರುಡನು ಅಲ್ಲಿಗೆ ಬಂದು ಬಿಟ್ಟನು. ಮತ್ತು ಅಗಲವಾದ ತನ್ನ ರೆಕ್ಕೆಗಳನ್ನು ಪಟ ಪಟ ಬಡಿದು ದೊಡ್ಡ ಗಾಳಿಯನ್ನೆಬ್ಬಿಸಿದನು. ||೩೨||

ಇದರಿಂದ ಜಗತೀತಲವೆಲ್ಲ ಗಡ ಗಡ ನಡುಗಿತು. ಗಿಡ-ಮರ-ಪರ್ವತಗಳೆಲ್ಲ ತುಪು ತುಪು ಉರುಳಿದವು. ಗರುಡನ ದೇಹದ ಗಂಧವನ್ನು ಆಘ್ರಾಣಿಸಿದೊಡನೆಯೇ ಇನ್ನು ತಮ್ಮ ಆಟ ನಡೆಯಲಾರದೆಂಬುದೂ, ಸ್ವಲ್ಪ ಕಾಲವೇನಾದರೂ ಇಲ್ಲಿ ನಿಂತರೆ, ತಮ್ಮ ಆಯುಷ್ಯವೇ ಮುಗಿದು ಹೋಗುವುದೆಂಬುದೂ ಖಚಿತವಾಗಿ ಹೋಗಲು ಒಂದೊಂದಾಗಿ ಎಲ್ಲೆಲ್ಲಿಗೋ ಹರಿದು ಹೋದವು. ||೩೩||

ಮತ್ತೆ ಕೆಲವು ಸರ್ಪಗಳು ಗರುಡನ ರೆಕ್ಕೆಯ ಬಡಿತದಿಂದುಂಟಾದ ಗಾಳಿಗೆ ಸಿಲುಕಿ ಎಂಜಲು ಹಾಳೆಗಳಂತೆ ಗಗನದಲ್ಲಿ ಹಾರಾಡತೊಡಗಿದವು. ಗರುಡನಿಗೆ ಹೆದರಿ ಭುಜಗಗಳು ಎತ್ತೆತ್ತಲೋ ಹೊರಟು ಹೋದುದರಿಂದ ವಿನತೆಯು ನಾಗ ಪಾಶಬಂಧನದಿಂದ ಬಿಡುಗಡೆಯನ್ನು ಹೊಂದಿದಳು. 'ಇನ್ನೇಕೆ ಇಲ್ಲಿ ನಿಂದಿರಬೇಕೆಂ'ದೆಣಿಸಿ ತನ್ನ ಆವಾಸ ಸ್ಥಳಕ್ಕೆ ತೆರಳಲು ಉಜ್ಜುಗಿಸಿದಳು. ||೩೪||

ತಮ್ಮ ಹಿಡಿತಕ್ಕೆ ಸಿಲುಕಿದ್ದ ತಮ್ಮ ತಾಯಿಯ ಸವತಿಯು ಗರುಡನ ಪ್ರಭಾವದಿಂದ ಬಿಡುಗಡೆಯನ್ನು ಪಡೆದು ಸುರಕ್ಷಿತಳಾಗಿ ಹೊರಟು ಹೋಗುತ್ತ

**ಪಕ್ಷಾಘಾತೇನ ಗರುಡೋಽಪಾತಯದ್ಭೂತಲೇ ಚ ತಮ್ ||೩೫||**

**ವಿನತಾ ತು ಗತಾ ವೇಗಾಸ್ಸ್ವಸ್ಥಾ ಸ್ವ-ಸ್ಥಾನಮುತ್ತಮಮ್ ।**
**ಪ್ರತಾಪಂ ವಾಸುಕೇರ್ದೃಷ್ಟ್ವಾ ಗರುಡಃ ಸೂಕ್ಷ್ಮರೂಪಧೃಕ್ ||೩೬||**

**ವಿನತಾಂ ರಕ್ಷಿತುಂ ಯಾತೋ ಯಾತೇ ತಸ್ಮಿಂಶ್ಚುಕೋಪ ಹ ।**
**ವಾಸುಕಿರ್ವಿಷಮತ್ಯಂತಮಸೃಜಜ್ಜಗತೀಂ ದಹನ್ ||೩೭||**

---

ಲಿರುವುದನ್ನು ನೋಡಿ, ವಾಸುಕಿಗೆ ಸಹಿಸಲಾರದಷ್ಟು ಕೋಪವು ಉಂಟಾಯಿತು. ಕ್ರೋಧದಿಂದ ಬುಸುಗುಟ್ಟುತ್ತ ವಿಷವನ್ನು ಉಗುಳಲಾರಂಭಿಸಿದನು. ವಿಷವು ಜಾಜ್ವಲ್ಯಮಾನವಾಗಿ ಉರಿಯಲಾರಂಭಿಸಿ ಗಗನವನ್ನೇ ದಹಿಸಲಾರಂಭಿಸಿತು. ಇದನ್ನು ತಿಳಿದಕೂಡಲೇ ಗರುಡನು ತನ್ನ ರೆಕ್ಕೆಗಳನ್ನು ಬಲವಾಗಿ ಬಡಿದು ವಾಸುಕಿಯನ್ನು ನೆಲಕ್ಕೆ ಕೆಡಹಿದನು. ||೩೫||

ವಾಸುಕಿಯು ನೆಲಕ್ಕೆ ಉರುಳಿದ ಬಳಿಕ ವಿನತೆಗೆ ಬಹುಮಟ್ಟಿಗೆ ನೆಮ್ಮದಿಯುಂಟಾಯಿತು. ಸ್ವಲ್ಪವೂ ವಿಲಂಬಮಾಡದೆ ತಕ್ಷಣವೇ ಸುರಕ್ಷಿತವಾದ ತನ್ನ ಸ್ಥಳಕ್ಕೆ ಹೋಗಿ ಸೇರಿಕೊಂಡಳು. ಇತ್ತ ಗರುಡನು ವಾಸುಕಿಯ ಪ್ರತಾಪವನ್ನು ನೋಡಿ ಕೂಡಲೇ ತನ್ನ ಗಡುತರದ ದೇಹವನ್ನು ಬಹಳ ಮಟ್ಟಿಗೆ ಸೂಕ್ಷ್ಮಗೊಳಿಸಿದನು. ||೩೬||

ವಾಸುಕಿಯ ವಿಷಜ್ವಾಲೆಯು ಯಾವ ರೀತಿಯಿಂದಲೂ ತನ್ನ ತಾಯಿಯನ್ನು ಪೀಡಿಸದಿರಲೆಂದು ಗರುಡನು ವಿನತೆಯು ಆವಾಸಸ್ಥಾನದ ವರೆಗೂ ಅವಳನ್ನು ಅನುಸರಿಸಿಯೇ ಹೋದನು. ರೆಕ್ಕೆಗಳಿಂದ ತನ್ನನ್ನು ಬಡಿದು ನೆಲಕ್ಕೆ ಉರುಳಿಸಿದ ಗರುಡನ ಬಗ್ಗೆ ವಾಸುಕಿಗೆ ಬಹಳ ಕೋಪ ಉಂಟಾಯಿತು. ಆದರೆ ಏನನ್ನು ಮಾಡುತ್ತಾನೆ. ಹೊಟ್ಟೆಯಲ್ಲಿದ್ದ ಸಿಟ್ಟು ರಟ್ಟೆಯಲ್ಲಿರಲಿಲ್ಲ. 'ಅತ್ತೆಯ ಮೇಲಿನ ಸಿಟ್ಟನ್ನು ಕೊತ್ತಿಯ ಮೇಲೆ ಬೀರಿದಂ'ತೆ ಇತರ ಪಕ್ಷಿಗಳು, ಲೋಕ ಇವನ್ನೆಲ್ಲ ತನ್ನ ವಿಷಜ್ವಾಲೆಯಿಂದ ಪೀಡಿಸತೊಡಗಿದನು. ಇದರಿಂದ ಇಡೀ ಜಗತ್ತೇ ದಹಿಸಿ ಹೋಗುವಂತಾಯಿತು. ||೩೭||

ನಾಗಲೋಕಂ ನಿನಾಯಾಶು ಬದ್ಧ್ವಾ ತಾನ್ವಿವರೇಽಕ್ಷಿಪತ್ ।
ಪಿಧಾಯ ದ್ವಾರಂ ಶಿಲಯಾ ತತೋ ಮಾತರಮಭ್ಯಗಾತ್ ॥೩೮॥

ಉದಂತಂ ಸರ್ವಮಾಚಖ್ಯೌ ಮಾತ್ರೇ ಶೇಷಾಯ ಚಾರುಧೀಃ ।
ಶುಶೋಚ ವಿನತಾ ಶ್ರುತ್ವಾ ಬದ್ಧ್ವಾ ನೀತಾನ್ ಸುತಾಂಸ್ತು ತಾನ್ ॥೩೯॥

ಪ್ರಯಯೌ ಕಶ್ಯಪಂ ಶೀಘ್ರಂ ನಮಸ್ಕೃತ್ಯಾಬ್ರವೀದಿದಮ್ ।

ಅನಂತರ ಕೈಗೆ ಸಿಕ್ಕಿದ ಜಟಾಯು, ಸಂಪಾತಿ, ಶ್ಯೇನ ಈ ಮೂವರನ್ನೂ ಬಂಧಿಸಿ ಪಾತಾಲ ನಗರಕ್ಕೆ ಕೊಂಡೊಯ್ದನು. ಮತ್ತು ಅಲ್ಲಿದ್ದ ಇಕ್ಕಟ್ಟಿನ ಒಂದು ಬಿಲವಲ್ಲಿ ಅವರನ್ನು ತುರುಕಿ, ಅವರು ಈಚೆಗೆ ಬಾರದಂತೆ ಬಿಲದ ಬಾಗಿಲಿಗೆ ದೊಡ್ಡದಾದ ಒಂದು ಬಂಡೆಯನ್ನು ನಿಲ್ಲಿಸಿದನು. ಇಷ್ಟೆಲ್ಲ ಭದ್ರಪಡಿಸಿದ ಒಳಿಕ ತನ್ನ ತಾಯಿಯ ಸಮೀಪಕ್ಕೆ ಧಾವಿಸಿ ಬಂದನು. ॥೩೮॥

ಯುದ್ಧದಲ್ಲಿ ನಡೆದ ಅದ್ಭುತ ಸಂಗತಿಗಳನ್ನೆಲ್ಲ ತನ್ನ ತಾಯಿ ; ಕದ್ರುವಿಗೂ, ತನ್ನ ಅಗ್ರಜನಾದ ಆದಿಶೇಷನಿಗೂ ವಿವರಿಸಿ ಹೇಳಿದನು. ಅವನು ಬಹಳ ಬುದ್ಧಿಶಾಲಿಯಾದುದರಿಂದ ಗರುಡನಿಂದ ತನಗುಂಟಾದ ಪರಾಜಯವನ್ನೂ, ವಿನತೆಯು ತಪ್ಪಿಸಿಕೊಂಡು ಹೋದುದನ್ನೂ ಕೇಳಿ ಇವರು ವಾಸುಕಿಯ ಬಗ್ಗೆ ತಪ್ಪುಗ್ರಹಿಕೆ ಮಾಡಿಕೊಳ್ಳದಂತೆ ಅವನ ಮಾತಿನ ಸರಣಿ ಇದ್ದಿತು. ಇತ್ತ ವಿನತೆಗೆ ತನ್ನ ಮಕ್ಕಳು ಮೂವರೂ ಬದ್ಧರಾದ ಸಂಗತಿ ತಿಳಿಯಿತು. ಬಹಳವಾಗಿ ಶೋಕಿಸಲಾರಂಭಿಸಿದಳು. ॥೩೯॥

ಅವಳಿಂದ ಈ ದುಃಖವನ್ನು ಸ್ವಲ್ಪ ಸಹ ಸಹಿಸಲಿಕ್ಕೆ ಸಾಧ್ಯವಾಗಲಿಲ್ಲ. ಆಗುದರಿಂದ ತತ್ಕ್ಷಣವೇ ತನ್ನ ಪತಿದೇವ ; ಕಶ್ಯಪಬ್ರಹ್ಮನಿದ್ದ ಸ್ಥಳಕ್ಕೆ ಧಾವಿಸಿ ನಡೆದಳು. ಮೊದಲು ಅವನ ಚರಣಕಮಲಗಳಿಗೆ ವಂದಿಸಿದಳು. ಮತ್ತು ಅವನ ಎದುರು ತನ್ನ ಹೊಟ್ಟೆಯ ಸಂಕಟವನ್ನು ಹೀಗೆಂದು ತೋಡಿಕೊಂಡಳು.

ವಿನತೋವಾಚ :—

ವಿಪರೀತಮಿದಂ ಜಾತಂ ಪ್ರತ್ಯಕ್ಸೂರ್ಯೋದಯೋ ಯಥಾ ॥೪೦॥

ಗೃಹೇ ಸ್ಥಿತಾಂ ಮಾಮನಯತ್ಸಹಸಾ ವಾಸುಕೀ ರಿಪುಃ ।
ಪೃಷ್ಠತೋಽನುಯಯೌ ಶ್ಯೇನೋ ಜಟಾಯುರ್ಮೋಚಿತುಂ ಚ
ಮಾಮ್ ॥೪೧॥

ಸಂಪಾತಿಸ್ಸರ್ವಸಂಘಾಂಸ್ತೇ ಮಾರಯಾಮಾಸುರೋಜಸಾ ।
ಪರಾಜಿತೇಷು ತೇಷ್ವಾಶು ಭುಜಗೈರ್ಬಹುಭಿರ್ಮನೇ ! ॥೪೨॥

---

ವಿನತೆ :—

ಭಗವನ್, ಪತಿದೇವ ! ಇದೇನು, ಕಾಲವೇ ಬದಲಾಯಿಸಿ ಹೋಯಿತೇ? ಪೂರ್ವ ದಿಗ್ಭಾಗದಲ್ಲಿ ಉದಿಸಬೇಕಾದ ಸೂರ್ಯನಾರಾಯಣನು ಪಶ್ಚಿಮ ದಿಕ್ಕಿನಲ್ಲಿ ಉದಿಸುವಂತಾಯಿತೇ ? ಏನೀ ವಿಪರೀತ ? ॥೪೦॥

ಕದ್ರುವಿನ ಮಕ್ಕಳು ಬಹಳ ಹೆಚ್ಚಿ ಹೋಗಿದ್ದಾರಲ್ಲ ? ಮುಂದೇನು ಗತಿ ? ಅವರು ತಮ್ಮ ಸಾಹಸಗಳನ್ನು ಲೋಕದ ಜನರ ಮೇಲೆ ತೋರಿಸುವುದು ನ್ಯಾಯ ವಾಗಿದೆಯೋ ಹೊರತು, ನಿರಪರಾಧಿನಿಯೂ, ಅವರಿಗೆ ಪೂಜ್ಯಳೂ ಮತ್ತು ನಿಮ್ಮ ಅರ್ಧಾಂಗಿಯೂ ಆದ ನನ್ನ ಮೇಲೆ ಅವರು ಕೈಮಾಡೋಣವೆಂದರೆ, ಇದಕ್ಕೆ ಅರ್ಥ ವೇನು, ಪತಿದೇವ ! ನನ್ನ ಪಾಡಿಗೆ ನಾನು ಆಶ್ರಮದಲ್ಲಿ ಕುಳಿತಿದ್ದೆ. ನಮ್ಮ ಕುಲವನ್ನೇ ದ್ವೇಷದೃಷ್ಟಿಯಿಂದ ನೋಡುವವನಾದ ಅಧಮ, ಆ ವಾಸುಕಿಯು ನಾನಿದ್ದಲ್ಲಿಗೆ ಸದ್ದಿಲ್ಲದೆ ಬಂದು, ನನ್ನನ್ನು ಬಂಧಿಸಿ ಎಳೆದೊಯ್ಯಲಾರಂಭಿಸಿದನು. ಇದನ್ನು ನೋಡಿದ ಜಟಾಯು-ಶ್ಯೇನರು ನನ್ನನ್ನು ಬಂಧಮುಕ್ತಳನ್ನಾಗಿ ಮಾಡ ಲಿಕ್ಕೆ ಸರ್ಪಗಳನ್ನು ಬೆನ್ನಟ್ಟಿ ಬಂದರು. ॥೪೧॥

ಇವರೊಡನೆ ಸಂಪಾತಿಯೂ ಕಲೆತು ಭುಜಗರೊಂದಿಗೆ ಹೋರಾಡಿದನು. ಆದ ರೇನು ? ಭುಜಗಗಳು ಇವರಾರನ್ನೂ ಲಕ್ಷಿಸದೇ, ತಮ್ಮ ವಿಷಜ್ವಾಲೆಯಿಂದ ಎಲ್ಲ

**ಗರುಡಂ ಚಾಸ್ಮರಂ ತೇನ ಜಿತ್ವಾ ಸರ್ಪಗಣಾಂಸ್ತು ತಾನ್ ।**
**ನೋಚಿತಾಚಾಣುರೂಪೇಣ ತೇನಾಪ್ಯಾಗಮನಂ ಕೃತಮ್ ॥೪೩॥**

**ಜಟಾಯುಸ್ತೇನ ಸಂಪಾತಿಶ್ಶ್ಯೇನೋ ವಾಸುಕಿನಾ ಬಲಾತ್ ।**
**ನೀತಾಃ ಪಾತಾಲವಿವರಂ ಪಿಧಾಯ ಸ್ಥಾಪಿತಾ ದೃಢಮ್ ॥೪೪॥**

ರನ್ನೂ ಸೋಲಿಸಿ, ನನ್ನನ್ನು ಎಳೆದೊಯ್ಯಲಾರಂಭಿಸಿದರು. ಪಕ್ಷಿಗಳೂ ಸಹ ತಮ್ಮ ಶಕ್ತಿಯನ್ನು ಮೀರಿ ಹೋರಾಡಿದವು. ದುರ್ದೈವದಿಂದ ಶತ್ರುಗಳ ಬಲವೇ ಹೆಚ್ಚಿತು. ಮುನಿರಾಜ! ನನ್ನ ಮಕ್ಕಳಾದ ಪಕ್ಷಿಗಳು ಪರಾಜಯವನ್ನು ಹೊಂದಿದ ಕೂಡಲೇ ನನಗೆ ಬಹಳ ಕಸಿ-ವಿಸಿಯುಂಟಾಯಿತು. ನನ್ನ ಪಕ್ಷದವರಿಗೆ ಪರಾಜಯ ಉಂಟಾಗಲಿಕ್ಕೆ ಪ್ರಬಲತಮವಾದ ಕಾರಣವೂ ಇದೆ. ನಮ್ಮವರು ಅಲ್ಪ ಸಂಖ್ಯಾತರು, ಸರೀಸೃಪಗಳೋ ಅಸಂಖ್ಯಾತವಾದುವು. ॥೪೨॥

ನಾನು ಸ್ವಲ್ಪವೂ ವಿಲಂಬಮಾಡದೇ ಗರುಡನನ್ನು ಸ್ಮರಿಸಿದೆನು. ಅವನು ವೇಗದಿಂದಲೇ ಬಂದು ನನ್ನನ್ನು ಮುತ್ತಿಹಾಕಿದ್ದ ಸರ್ಪಗಳನ್ನೆಲ್ಲ ಒಂದು ಕ್ಷಣದೊಳಗಾಗಿಯೇ ಸದೆಬಡಿದು ಬಿಸುಟನು. ನನ್ನನ್ನು ಬಂಧನದಿಂದ ಬಿಡಿಸಿದ ಬಳಿಕ ಅವನು ಸೂಕ್ಷ್ಮ ರೂಪದೊಡನೆ ನನ್ನ ಸಂಗಡ ಬಂದು ಆಶ್ರಮದ ವರೆಗೂ ನನ್ನನ್ನು ಮುಟ್ಟಿಸಿ ಹೋದನು. ॥೪೩॥

ತಮ್ಮ ವಾಸುಕಿಗೆ ಈ ಘಟನೆಯಿಂದ ಬಹಳ ಕೋಪ ಉಂಟಾಯಿತು. ಆಗ ಅವನು ತನ್ನ ಕೈಗೆ ಸಿಕ್ಕಿದ ಜಟಾಯು, ಸಂಪಾತಿ ಮತ್ತು ಶ್ಯೇನ ಈ ಮೂವರನ್ನೂ ಬಲಾತ್ಕಾರದಿಂದ ಬಂಧನಕ್ಕೆ ಒಳಪಡಿಸಿ ಎಳೆದೊಯ್ದನು. ಮತ್ತು ಅವರನ್ನು ರಸಾತಲದ ಇಕ್ಕಟ್ಟಾದ ಒಂದು ಕುಹರದಲ್ಲಿ ಬಂಧಿಸಿಟ್ಟಿದ್ದಾನೆ. ಅವರು ಎಂದೆಂದಿಗೂ ಬಂಧನದಿಂದ ತಪ್ಪಿಸಿಕೊಳ್ಳವಂತೆ ಅದರ ಬಾಗಿಲನ್ನು ಕಲ್ಲುಗಳಿಂದ ಮುಚ್ಚಿ ಬಿಟ್ಟಿದ್ದಾನೆ. ॥೪೪॥

ಗಮಿಷ್ಯಂತಿ ಮಮ ಪ್ರಾಣಾಸ್ತ್ವಿನಾ ನಿಶ್ಚಿತಂ ಮುನೇ ! ।
ಏತಾವದ್ದುಃಖಮಾಪ್ತಾಹಂ ತ್ವಯಿ ನಾಥೇ ಸತಿ ಪ್ರಭೋ ! ॥೪೫॥

ಕ ಉವಾಚ :—

ಇತಿ ಶ್ರುತ್ವಾ ಪ್ರಿಯಾವಾಕ್ಯಂ ಪ್ರಾಹ ತಾಂ ಕಶ್ಯಪೋ ಮುನಿಃ ।

ಮುನಿರುವಾಚ :—

ಮಾ ಚಿಂತಾಂ ಕುರು ಭದ್ರೇ ! ತ್ವಂ ವ್ಯೇತು ತೇ ಮಾನಸೋ ಜ್ವರಃ ॥೪೬॥

ಭಗವನ್, ಮುನೀಶ್ವರ ! ಆ ಮಕ್ಕಳ ವಿಯೋಗ ದುಃಖವನ್ನು ಸಹಿಸಲಿಕ್ಕೆ ನನ್ನಿಂದಲಂತೂ ಸಾಧ್ಯವಾಗಲೊಲ್ಲದು. ಇದೋ, ನನ್ನ ಪ್ರಾಣಗಳೇ ಹೊಗಟು ಹೋಗುವಂತಾಗಿವೆ. ನಿಮ್ಮಂತಹ ಮಹಾತಪಸ್ವಿದ್ಧರು ಪತಿಯಾಗಿರುವಾಗ ನನಗೆ ಇಂತಹ ಅಸಹನೀಯವಾದ ಶೋಕವು ಉಂಟಾಗಬಹುದೇ ? 'ಹಣವಿದ್ದ ಗಂಡನನ್ನು ಮದುವೆಯಾದರೂ ಋಣವಿದ್ದಷ್ಟೇ' ಎಂಬ ಗಾದೆಯಂತಾಯಿತು, ನನ್ನ ಪರಿಸ್ಥಿತಿ. ನೀವೇನು ಅಸಮರ್ಥರೇ ? ಈ ಚರಾಚರ ಪ್ರಪಂಚಕ್ಕೆಲ್ಲ ಪ್ರಭು ವಾಗಿರುವಿರಿ ? ॥೪೫॥

ಬ್ರಹ್ಮಾ :—

ತನ್ನ ಪ್ರಿಯರಮಣಿ, ವಿನತೆಯಾಡಿದ ಮಾತುಗಳನ್ನು ಕಶ್ಯಪನು ಕೇಳಿದನು. ಕ್ಷಣ ಕಾಲ ಆಲೋಚಿಸಿ ನೋಡಿದನು. ಥಟ್ಟನೆ ಒಂದು ಉಪಾಯ ಹೊಳೆಯಿತು. ಆಗ ತನ್ನ ಹೆಂಡಿತಿಯನ್ನು ಕುರಿತು ಹೀಗೆ ನುಡಿದನು.

ಕಶ್ಯಪ :—

ಮಂಗಳಕರೇ ! ಏತಕ್ಕಾಗಿ ಶೋಕಿಸುವೆ ? ಚಿಂತೆಯನ್ನು ಬಿಟ್ಟುಬಿಡು. ನಿನ್ನ ಮಾನಸಿಕ ಜ್ವರ ಹೊರಟೇ ಹೋಗಲಿ. ॥೪೬॥

ಋತುಂ ತೇಽಹಂ ಪ್ರದಾಸ್ಯಾಮಿ ಪುತ್ರಸ್ತೇಽನ್ಯೋ ಭವಿಷ್ಯತಿ |
ಅಭೇದ್ಯಮಂಡಂ ವಜ್ರೇಣ ಪಾರ್ವತ್ಯಾ ಯದಿ ಬಾಲಕಃ ||೪೭||

ಕ್ರೀಡನ್ ಭೇಕ್ಷ್ಯತಿ ಪಾದಾಭ್ಯಾಂ ತತಃ ಪುತ್ರೋ ಭವೇತ್ತವ |
ಸ ನೀಲಕಂಠೋ ಬಲವಾನ್ ನೀಲಕಂಠ ಇವಾಪರಃ ||೪೮||

ಶ್ರವಣಾತ್ತಸ್ಯ ಶಬ್ದಸ್ಯ ಭುಜಗಾಸ್ತೇ ಪರಾಭವಮ್ |
ಯಾಸ್ಯಂತಿ ಚ ಗಣೇಶೋಽಪಿ ತಮಾರುಹ್ಯ ಭುವೋ ಭರಮ್ ||೪೯||

---

ಈಗ ನೀನು ಋತುಸ್ನಾತಳಷ್ಟೇ ? ನಿನಗೆ ಬಲಿಷ್ಠನಾದ ಪುತ್ರನೊಬ್ಬನನ್ನು ಈಗ ಅನುಗ್ರಹಿಸಿ ಕೊಡುವೆನು. ಅವನೂ ಸಹ ಇತರ ಪಕ್ಷಿಗಳಂತೆ ಅಂಡಜನೇ ಆಗಿರುವನು. ಆ ಅಂಡವ (Egg) ನ್ನು ವಜ್ರಾಯುಧವು ಸಹ ಭೇದಿಸಲಾರದು. ಆದರೆ, ನಿನಗೆ ಪುತ್ರನುದಿಸುವ ಕುರುಹನ್ನೂ ಸೂಚಿಸುತ್ತೇನೆ. ಜಗನ್ಮಾತೆ ; ಪಾರ್ವತೀದೇವಿಯ ಮಗ ಗಣಪತಿಯು ||೪೭||

ತನ್ನ ಸಂಗಡಿಗರಾದ ಮುನಿಬಾಲಕರೊಂದಿಗೆ ಆಟವಾಡುತ್ತ ನಿನ್ನ ಆಶ್ರಮದ ಬಳಿಗೆ ಬರುವನು. ಅವನು ಕ್ರೀಡಿಸುತ್ತ ಈ ಅಂಡವನ್ನು ಒಡೆದು ಬಿಡುವನು. ಅವನಿಗೆ ಮಾತ್ರ ಇದು ಸಾಧ್ಯ. ನೀನು ಅವನು ಬರುವ ಕಾಲವನ್ನೇ ನಿರೀಕ್ಷಿಸುತ್ತಲಿರು, ತಿಳಿಯಿತೇ ? ಅವನು ಯಾವಾಗ ತನ್ನ ಪುಟ್ಟ ಪಾದಗಳಿಂದ ಒದೆದು ಈ ಅಂಡವನ್ನು ಭೇದಿಸುವನೋ, ಆಗಲೇ ನಿನಗೆ ತನ್ಮೂಲಕ ಪುತ್ರನು ಜನಿಸುವನು. ಆ ಪುತ್ರನು ಸಾಮಾನ್ಯನೆಂದು ಭಾವಿಸಬೇಡ, ಅವನ ಕಂಠಪ್ರದೇಶದಲ್ಲಿ ನೀಲೀ ಬಣ್ಣವು ರಾಜಿಸುತ್ತಿರುವುದು. ಮತ್ತು ಅವನು ಮಹಾ ಬಲಾಢ್ಯನಾಗಿರುವನು. ಅವನನ್ನು ನೋಡಿದರೆ, ಸಾಕ್ಷಾನ್ನೀಲಕಂಠನೋ ಎಂಬುವಂತೆ ತೋರುವುದು.||೪೮||

ಅವನ ಕೂಗನ್ನು ಕೇಳಿದ ಕೂಡಲೇ ಸರ್ಪಗಳೆಲ್ಲ ಪರಾಭವವನ್ನು ಹೊಂದುವುವು. ಇದರಲ್ಲಿ ಸ್ವಲ್ಪವೂ ಸಂದೇಹವಿಲ್ಲ. ಪಾರ್ವತೀ ಪ್ರಿಯನಂದನನಾದ ಗಣೇಶನು ಅದನ್ನು ತನ್ನ ವಾಹನವನ್ನಾಗಿ ಮಾಡಿಕೊಳ್ಳುವನು. ಗಣಪತಿಯು ಅವತರಿಸಿರುವುದು ಏತಕ್ಕಾಗಿ, ಎಂಬುದಾದರೂ ಗೊತ್ತೇ ? ಭೂಮಿಯ ಹೊರೆ

**ಹರಿಷ್ಯತಿ ತದ್ಧಾ ಪುತ್ರಾ ಮೋಕ್ಷ್ಯಂತೇ ನಾಗಬಂಧನಾತ್ ।**

**ಕ ಉವಾಚ :—**

**ಏವಮುಕ್ತ್ವಾ ಮುನಿಸ್ತಸ್ಯೈ ರಹೋ ನೀತ್ವಾ ಖುತಂ ದದೌ ॥೫೦॥**

**ವಿನತಾಥ ಯುಯಿರೌ ಹರ್ಷಾತ್ಕಾನನಂ ಜಂತುವರ್ಜಿತಮ್ ।**
**ಕಾಲೇನ ಸುಷುವೇ ಚಾಂಡಮಭೇದ್ಯಂ ವಜ್ರ-ಪರ್ವತೈಃ ॥೫೧॥**

ಯನ್ನು ಹರಣ ಮಾಡುವುದಕ್ಕಾಗಿ. ಅವನಿಗೊಂದು ಸರಿಯಾದ ವಾಹನ ಬೇಕಾಗಿದೆ. ಆದುದರಿಂದಲೇ ಇದನ್ನು ನಾನು ಸೃಜಿಸುವುದು. ಇದನ್ನು ಏರಿ ಗುಣೇಶನು ಭೂ-ಭಾರವನ್ನೆಲ್ಲ ಇಳುಹುವನು. ॥೪೯॥

ಗಣಪತಿಯು ಪ್ರತಾಪಕ್ಕೆ ಹೆದರಿ ನಾಗಗಳೆಲ್ಲ ಶರಣು ಬರುವುವು. ಆಗ ನಿನ್ನ ಮಕ್ಕಳಾದ ಜಟಾಯು, ಸಂಪಾತಿ ಮತ್ತು ಶ್ಯೇನರು ಬಂಧನದಿಂದ ಮುಕ್ತಿಯನ್ನು ಪಡೆಯುವರು.

ಬ್ರಹ್ಮ :—

ಹೀಗೆ ಹೇಳಿ ಅವಳನ್ನು ಸಮಾಧಾನಪಡಿಸಿದನು. ಮತ್ತು ಅವಳನ್ನು ರಹಸ್ಯವಾದ ಪ್ರದೇಶಕ್ಕೆ ಕರೆದುಕೊಂಡು ಹೋಗಿ, ರತಿಸೌಖ್ಯವನ್ನು ಕೊಟ್ಟು ಅನುಗ್ರಹಿಸಿದನು. ॥೫೦॥

ವಿನತೆಯು ರತಿಸೌಖ್ಯದಿಂದಲೂ, ಬಲಿಷ್ಠನಾದ ಪುತ್ರನುದಿಸಿ ಬದ್ಧರಾದ ತನ್ನ ಮಕ್ಕಳನ್ನು ಬಿಡುಗಡೆ ಮಾಡುವನೆಂಬ ದೃಢ ವಿಶ್ವಾಸದಿಂದಲೂ ಬಹಳ ಹರ್ಷಿತಳಾದಳು. ಯಾವ ಯಾವ ಪ್ರಾಣಿಗಳ ಕಾಟವೂ ಇಲ್ಲದಿರುವಂತಹ ಅರಣ್ಯದ ಒಂದು ಏಕಾಂತವಾದ ಪ್ರದೇಶವನ್ನು ಹುಡುಕಿ, ಅಲ್ಲಿ ವಾಸಮಾಡತೊಡಗಿದಳು. ಕಶ್ಯಪ ಮಹರ್ಷಿಯ ವೀರ್ಯವು ವಿನತೆಯ ಗರ್ಭದಲ್ಲಿ ವೃದ್ಧಿಯನ್ನು ಹೊಂದಿತು. ಸಕಾಲದಲ್ಲಿ ವಿನತೆಯು ಒಂದು ಮೊಟ್ಟೆಯನ್ನು ಪ್ರಸವಿಸಿದಳು.

ಮೃದ್ಭಾಂಡೇ ವಲ್ಕಲೈರ್ವೇಷ್ಟ್ಯ ನಿಕ್ಷಿಪ್ಯಾಂಡಂ ಸ್ಥಿರಾಭವತ್ ।
ಯಥಾ ಭೂಮಿಗತಂ ದ್ರವ್ಯಂ ಭುಜಗೋ ಬಲವತ್ತರಃ ॥೫೨॥

ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ 'ವಿನತಾಪ್ರಸೂತಿ'
ರ್ನಾಮ ಸಪ್ತನವತಿತಮೋಽಧ್ಯಾಯಃ
ಸಮಾಪ್ತಃ

ಆ ಮೊಟ್ಟೆಯ ಮೇಲೆ ಸಿಡಿಲೇ ಬೀಳಲಿ, ಅಥವಾ ದೊಡ್ಡ ದೊಡ್ಡ ಪರ್ವತಗಳು ಬೇಕಾದರೂ ಉರುಳಲಿ, ಅದು ಸ್ವಲ್ಪ ಕೂಡ ಮುಕ್ಕಾಗುವಂತಿರಲಿಲ್ಲ. ॥೫೧॥

ಆಗ ವಿನತೆಯು ಆ ಮೊಟ್ಟೆಯನ್ನು ಮಣ್ಣಿನ ಒಂದು ಮಡಕೆಯಲ್ಲಿ ಇರಿಸಿ, ಅದರೊಳಗೆ ಸ್ವಲ್ಪ ಕೂಡ ಗಾಳಿ ಪ್ರವೇಶಿಸದಂತೆ ನಾರುಮಡಿಯ ತುಂಡುಗಳನ್ನು ಹೊದ್ದಿಸಿದಳು. ಯಾವ ಪ್ರಾಣಿಯೂ ಅದನ್ನು ಮುಟ್ಟದಂತೆ ಒಂದೆಡೆ ಭದ್ರವಾಗಿ ಇರಿಸಿದಳು. ಇಷ್ಟಾದ ಬಳಿಕ ಅವಳಿಗೆ ಬಹಳ ನೆಮ್ಮದಿ ಎನಿಸಿತು- ಭೂಮಿಯಲ್ಲಿ ಹೂತಿಟ್ಟ ಹಣ, ಹುತ್ತದಲ್ಲಿ ಹೊಕ್ಕಿದ್ದ ಹಾವು ಹೇಗೆ ಸುರಕ್ಷಿತವಾಗಿರುವುವೋ, ಅದರಂತೆ ಈ ಅಂಡವು ಯಾವ ಬಾಧೆಗೂ ಬಲಿಯಾಗದೇ ಸುರಕ್ಷಿತವಾಗಿ ಬೆಳೆಯಲಾರಂಭಿಸಿತು ॥೫೨॥

ಇಲ್ಲಿಗೆ ಶ್ರೀ ಗಣೇಶಪುರಾಣ, ಉತ್ತರಖಂಡದಲ್ಲಿ 'ವಿನತಾಪ್ರಸೂತಿ'
ಎಂಬಲ್ಲಿಗೆ ತೊಂಭತ್ತೇಳನೆಯ ಅಧ್ಯಾಯಾನುವಾದವು
ಮುಗಿದುದು.



॥ ಶ್ರೀ ಗಣೇಶಾಯ ನಮಃ ॥

# ಅಥಾಷ್ಟನವತಿತಮೋಽಧ್ಯಾಯಃ

**ಕ ಉವಾಚ :—**

**ಏವಂ ಗತೇ ಸಪ್ತಮೋಽಬ್ದೇ ತ್ವಷ್ಟಮೋ ಸ ಗುಣೇಶ್ವರಃ ।**
**ಉಷಃ ಸ್ನಾತ್ವಾ ಸ್ಥಿತೋ ಬ್ರಹ್ಮ ಜಪೇ ವೇದಚತುಷ್ಟಯಮ್ ॥೧॥**

**ಕಸ್ತೂರೀತಿಲಕೋ ನಾನಾ ಭೂಷಣೈಸ್ಸು-ವಿರಾಜಿತಃ ।**
**ದಿವ್ಯಾಂಬರಧರೋ ದಿವ್ಯಗಂಧ-ಮಾಲಾವಿಭೂಷಿತಃ ॥೨॥**

---

॥ ಶ್ರೀ ಗಣೇಶಾಯ ನಮಃ ॥

## ೯೮ ನೆಯ ಅಧ್ಯಾಯ.

ಬ್ರಹ್ಮ :—

ವ್ಯಾಸ ! ಇತ್ತ ಗಣಪತಿಗೆ ಈ ರೀತಿಯಾಗಂತೂ ಏಳು ಸಂವತ್ಸರಗಳು ಕಳೆದುಹೋಗಿ ಎಂಟನೆಯ ಸಂವತ್ಸರವು ಆರಂಭವಾಯಿತು. ಗಣಪತಿಯು ಪ್ರತಿ ದಿನದಂತೆ ಒಂದು ದಿವಸ ಉಷಃಕಾಲದಲ್ಲಿಯೇ ಎದ್ದು ಸ್ನಾನಾದಿ ಸತ್ಕರ್ಮಗಳನ್ನು ಅನುಷ್ಠಿಸಿ ಬ್ರಹ್ಮಯಜ್ಞಾಂಗವಾಗಿ ನಾಲ್ಕು ವೇದಗಳನ್ನೂ ಅಧ್ಯಯನ ಮಾಡ ತೊಡಗಿದನು. ॥೧॥

ಹಣೆಯಲ್ಲಿ ಕಸ್ತೂರೀ ತಿಲಕವನ್ನು ಧರಿಸಿದ್ದನು. ಅನೇಕ ಬಗೆಯ ದಿವ್ಯ ಭೂಷಣಗಳನ್ನು ಧರಿಸಿದ್ದರಿಂದ ಅತಿಯಾಗಿ ವಿರಾಜಿಸುತ್ತಲಿದ್ದನು. ದಿವ್ಯವಾದ ಪೀತಾಂಬರವನ್ನು ಉಟ್ಟಿದ್ದನು. ಅಂತೆಯೇ ದಿವ್ಯ ಪರಿಮಳ ಸುಗಂಧಿ ದ್ರವ್ಯವನ್ನು ದೇಹಕ್ಕೆಲ್ಲ ಲೇಪಿಸಿಕೊಂಡಿದ್ದನು. ನಾನಾಜಾತಿಯ ಸುಗಂಧಿ ಕುಸುಮಗಳಿಂದ ಚಿತ್ರ-ವಿಚಿತ್ರವಾಗಿ ನಿರ್ಮಿತವಾದ ಮಾಲೆಗಳನ್ನು ಕೊರಳಿನಲ್ಲಿ ಧರಿಸಿದ್ದನು. ॥೨॥

ತತಸ್ತೇ ತಾಪಸಸುತಾ ಆಗತಾಸ್ತಂ ಗುಣೇಶ್ವರಮ್ ।
ತದ್ದೀಪ್ತ್ಯಾ ಭಾಸಿತಾಸ್ಸರ್ವೇಽರುಣದೀಪ್ತ್ಯಾ ಯಥಾ ಘನಾಃ ॥೩॥

ತಾನ್ ದೃಷ್ಟ್ವಾಧ್ಯಯನೇ ಬುದ್ಧಿರ್ಜಾತಾ ತಸ್ಯಾರ್ಭಕೈಸ್ಸಹ ।
ಸರ್ವೇಷಾಂ ಮಸ್ತಕೇ ಹಸ್ತಂ ನ್ಯಧಾತ್ತತ್ಸಮಯೇ ವಿಭುಃ ॥೪॥

ತ್ರಿ-ಚತುಃ-ಪಂಚವರ್ಷಾಣಾಂ ವೇದಸ್ಫೂರ್ತಿಸ್ತತೋಽಭವತ್ ।

---

ಸ್ವಲ್ಪ ಹೊತ್ತು ಏರುವುದರ ಒಳಗಾಗಿ ಮುನಿಬಾಲಕರೆಲ್ಲ ಮಕ್ಕಳು ತಾಯಂದಿರನ್ನು ಅರೆಸಿಕೊಂಡು ಬರುವಂತೆ ಗಣಪನನ್ನು ಹುಡುಕಿಕೊಂಡು ಬಂದುಬಿಟ್ಟರು. ಪರಮಾತ್ಮನಾದ ಗಣೇಶನ ದೇಹದ ಸ್ವರ್ಣ ಚ್ಛಾಯೆಯು ಬಾಲಕರ ಮೇಲೆಲ್ಲ ಪಸರಿಸಿ ಅವ ನ್ನು ಬೆಳಗಿತು. ಮೇಘಗಳು ಕಪ್ಪಾಗಿದ್ದರೂ ಸೂರ್ಯನ ಛಾಯೆಗೆ ಹೊಂಬಣ್ಣವಾಗಿ ತೋರುವಂತೆ ಬಾಲಕರು ಕಂಗೊಳಿಸಿದರು.
॥೩॥

ತನ್ನ ಬಳಿಗೆ ಬಾಲಕರು ಬಂದುದನ್ನು ನೋಡಿದೊಡನೆಯೇ ಗಣಪತಿಗೆ ಆ ಬಾಲಕರೊಂದಿಗೆ ತಾನು ವೇದಾಧ್ಯಯನವನ್ನು ಮಾಡಬೇಕೆಂದು ಅಭಿಲಾಷೆ ಉಂಟಾಯಿತು. ಆದರೆ ಆ ಬಾಲಕರಲ್ಲಿ ಅನೇಕರು ಇನ್ನೂ ಅನುಪನೀತರಾಗಿದ್ದರು. ಅಲ್ಲದೇ ಬಾಯಿಯಿಂದ ಸ್ಪಷ್ಟವಾಗಿ ಅಕ್ಷರಗಳು ಉಚ್ಚರಿಸಲಾರದಷ್ಟು ಚಿಕ್ಕ ವಯಸ್ಸಿನವರಾಗಿದ್ದರು. ಹೀಗಿರುವಾಗ ಅವರೊಂದಿಗೆ ಕ್ಲಿಷ್ಟೋಚ್ಚಾರಗಳಾದ ವೇದಾಕ್ಷರಗಳನ್ನು ಹೇಳಿಸುವುದು ಹೇಗೆ ? ಎಂದು ಆಲೋಚಿಸಿ ವಿದ್ಯಾಧೀಶ್ವರನಾದ ಗಣಪತಿಯು ತನ್ನ ವರದಹಸ್ತವನ್ನು ಆ ಬಾಲಕರ ಮಸ್ತಕಗಳ ಮೇಲಿರಿಸಿ ಸಂಪೂರ್ಣವಾಗಿ ಅನುಗ್ರಹಿಸಿಬಿಟ್ಟನು. ॥೪॥

ಏನಾಶ್ಚರ್ಯ! ಕೇವಲ ಮೂರು, ನಾಲ್ಕು, ಐದು ವರ್ಷ ವಯಸ್ಸಿನ ಬಾಲಕರಿಗೆ ಸಹ ವೇದಗಳು ಸ್ಫುರಿಸಲಾರಂಭಿಸಿದವು. ಸ್ವರ, ವರ್ಣಗಳಲ್ಲಿ ಸ್ವಲ್ಪವೂ ವ್ಯತ್ಯಾಸವಿಲ್ಲದಂತೆ ಅವರು ಗಣಪತಿಯೊಂದಿಗೆ ವೇದಗಳನ್ನು ಉಚ್ಚ ಸ್ವರಗಳಿಂದ ಪಠಿಸಲಾರಂಭಿಸಿದರು. ವೇದಶಬ್ದಗಳನ್ನು ಉಚ್ಚರಿಸುವಾಗ ಆ ಬಾಲಕರಿಗೆ ಬಾಹ್ಯವಿಷಯಕ

ವಿನಾ ತು ಚೇತನಾಂ ಶಬ್ದೋ ನಭೋವಾಣ್ಯಾ ಹಿ ಶ್ರೂಯತೇ ||೫||

ಚತುರ್ಣಾಮಪಿ ವೇದಾನಾಂ ಸರ್ವೇ ಪಾರಾಯಣಂ ವ್ಯಧುಃ |
ನಾಭಕ್ಷಯನ್ ಪಶುಗಣಾ ಗ್ರಾಸಂ ಮುಖಗತಂ ತದಾ ||೬||

ಶ್ರವಣೇ ತತ್ಪರಾ ಜಾತಾಶ್ಶಬ್ದಾನಾಂ ವೇದಚಾರಿಣಾಮ್ |
ಸಮಾಪ್ತೇ ವೇದದ್ವಿತಯೇ ಸಾಮಗಾನಮಥಾರಭನ್ ||೭||

ಹರಿಣಾಸ್ಸಿಂಹ-ಶಾರ್ದೂಲಾ ಭುಜಗಾಃ ಪಕ್ಷಿಜಾತಯಃ |

---

ಜ್ಞಾನವೇ ಶೂನ್ಯವಾಗಿ ಹೋಗಿದ್ದಿತು. ಬಿಂಬದ ಚಲನೆಗನುಸರಿಸಿ ಪ್ರತಿಬಿಂಬವು ಹೇಗೆ ಚಲಿಸುವುದೋ, ಆದರಂತೆ ಇವರು ಪರ (ಗಣಪತಿಗೆ) ವಶರಾಗಿ ವೇದಾಕ್ಷರಗಳನ್ನು ಉಚ್ಚರಿಸುತ್ತಿದ್ದರು. ಇವರೆಲ್ಲರೂ ಸೇರಿ ಏಕಕಂಠದಿಂದ ಮಂತ್ರಗಳನ್ನು ಪಠಿಸುತ್ತಿದ್ದರು. ಈ ಧ್ವನಿಯು ನಭೋಮಂಡಲವನ್ನೆಲ್ಲ 'ವ್ಯಾಪಿಸಿ ಪ್ರತಿಧ್ವನಿಯನ್ನುಂಟುಮಾಡಿತು. ಪರೋಕ್ಷದಲ್ಲಿದ್ದು ಯಾರು ಇದನ್ನು ಕೇಳಿದರೋ, ಅವರು ನಭಸ್ಸೇ ಹೀಗೆ ವೇದವನ್ನು ನುಡಿಯುತ್ತಲಿದೆ ಎಂದು ಗ್ರಹಿಸಿದರು.

ಈ ಬಾಲಕರು ಗಣಪತಿಯ ಸಂಗಡ ನಾಲ್ಕು ವೇದಗಳನ್ನೂ ನಿರರ್ಗಳವಾಗಿ ಪಾರಾಯಣವನ್ನು ಮಾಡಿದರು. ಈ ಧ್ವನಿಯ ಮಾಧುರ್ಯ ಎಷ್ಟರಮಟ್ಟಿಗೆ ಇದ್ದಿತೆಂದರೆ, ಆಶ್ರಮದ ಸಮೀಪದಲ್ಲಿ ವಾಸವಾಗಿದ್ದ ಪಶು-ಪಕ್ಷಿಗಳೂ ಸಹ ತಮ್ಮ ಬಾಯಿಯಲ್ಲಿದ್ದ ಆಹಾರವನ್ನು ಪೂರ್ಣವಾಗಿ ತಿನ್ನದೇ ಸುಮ್ಮನೇ ವೇದಘೋಷವನ್ನು ಆಲಿಸತೊಡಗಿದವು. ||೬||

ಈ ಧ್ವನಿಯನ್ನು ಕೇಳುವುದರಲ್ಲೇ ಆಸಕ್ತವಾದವು. ಎಂದ ಮೇಲೆ ಈ ವೇದಾಧ್ಯಾಯಿಗಳ ಸ್ವರ ಎಷ್ಟರ ಮಟ್ಟಿಗೆ ಶ್ರವಣಮಧುರವಾಗಿದ್ದಿತೆಂಬುದನು ನೀನೇ ಆಲೋಚಿಸಿ ತಿಳಿ. ಋಗ್ಯಜುರ್ವೇದಗಳ ಪಾರಾಯಣವು ಪರಿಸಮಾಪ್ತಿಗೊಂಡ ಬಳಿಕ ಮೂರನೆಯದಾದ ಸಾಮವೇದವನ್ನು ಗಾನಮಾಡತೊಡಗಿದರು. ||೭||

ಜಿಂಕೆ-ಸಾರಂಗಗಳು, ಸಿಂಹ-ಹುಲಿಗಳು, ಸರ್ಪಗಳು, ಶುಕ-ಪಿಕ-ಹಂಸ

ಗಾನಸ್ಯ ಶ್ರವಣೇ ಸಕ್ತಾ ಅಶ್ರುಪಾತಾರ್ ಪ್ರಸುಸ್ರುವುಃ ॥೮॥

ಅಷ್ಟಾಶೀತಿಸಹಸ್ರಾಣಿ ಮುನಯಃ ಶ್ರವಣೇ ರತಾಃ ।
ಆನಂದಹ್ರದಸಮ್ಮಗ್ನಾಶ್ಶೇರತೇ ಸ್ಮ ಯಥಾ ನಿಶಿ ॥೯॥

ಪ್ರಮಥಾದ್ಯಾ ಗಣಾಸ್ಸರ್ವೇ ಶಿವಾದ್ಯಾ ಹರ್ಷನಿರ್ಭರಾಃ ।
ಅಸ್ರವಚ್ಚಾಮೃತಂ ಚಂದ್ರಃ ಶಿವಭಾಲಸ್ಥಿತಸ್ತದಾ ॥೧೦॥

ತತ್ಸಂಸರ್ಗಾದ್ರುಂಡಮಾಲಾರುಂಡಾನಿ ಪುರುಷಾ ಬಭುಃ ।
ಲಜ್ಜಿತಾಃ ಕಿನ್ನರಾಸ್ಸರ್ವೇ ಗಂಧರ್ವಾಶ್ಚಾಸ್ಯ ಗಾನತಃ ॥೧೧॥

---

ಕಾರಂಡಾದಿ ನಾನಾವಿಧ ಪಕ್ಷಿಗಳು, ಹೆಚ್ಚೇನು? ಸಕಲ ಜೀವಜಂತುಗಳೂ ಸಹ ಈ ಧ್ವನಿಯನ್ನು ಕೇಳುವುದರಲ್ಲಿ ಆಸಕ್ತವಾದವು. ॥೮॥

ಮೂಕಪ್ರಾಣಿಗಳು ಸಹ ಈ ಶಬ್ದಶ್ರವಣದಲ್ಲಿ ಆಸಕ್ತವಾಗಿದ್ದನಂತರ ಬಳಿಕ ಸ್ವಯಂ ಸಾಂಗೋಪಾಂಗವಾಗಿ ವೇದವನ್ನು ಅಭ್ಯಸಿಸಿದವರೂ ಮತ್ತು ಪ್ರತಿ ದಿವಸ ಬ್ರಹ್ಮಯಜ್ಞಾಂಗವಾಗಿ ವೇದಗಳನ್ನು ಪಾರಾಯಣಮಾಡತಕ್ಕವರೂ, ಪಾಠಪ್ರವಚನಗಳಲ್ಲೇ ಆಯುಷ್ಯವನ್ನೆಲ್ಲ ಕಳೆದವರೂ ಆದ ಮುನಿಗಳು ಪರವಶರಾದುದರಲ್ಲಿ ಆಶ್ಚರ್ಯವೇನು ? ಎಂಭತ್ತೆಂಟು ಸಹಸ್ರ ಮಂದಿ ಋಷಿಗಳೂ ತಲೆದೂಗುತ್ತ ಸುಷುಪ್ತ್ಯವಸ್ಥೆಯಲ್ಲಿ ಪ್ರತಿಯೊಂದು ಪ್ರಾಣಿಯೂ ನಿಜಾನಂದದಲ್ಲಿ ಮಗ್ನವಾಗುವಂತೆ ಆನಂದದ ಮಡುವಿನಲ್ಲಿ ನಿಮಗ್ನರಾದರು. ॥೯॥

ಮುನಿಗಳಂತೆ ಪ್ರಮಥಗಣದವರೂ ಶ್ರವಣಮಗ್ನರಾದರು. ಶಿವನು ಹರ್ಷಾತಿರೇಕದಿಂದ ಶಿರಃಕಂಪನವನ್ನು ಮಾಡಿದನು. ಪರಶಿವನ ಕಪರ್ದಪ್ರದೇಶದಲ್ಲಿದ್ದ ಶೀತಕಿರಣ; ಚಂದ್ರಮನು ಅಮೃತರಸವನ್ನು ಪ್ರವಾಹರೂಪವಾಗಿ ಸ್ರವಿಸಿದನು. ॥೧೦॥

ಅಮೃತವರ್ಷವು ಸ್ರವಿಸಲಾರಂಭಿಸಿದೊಡನೆಯೇ ಪರಶಿವನ ಕೊರಳಿನಲ್ಲಿದ್ದ ಮಾಲಾಕಾರದ ರುಂಡಗಳೆಲ್ಲ ಪುನರುಜ್ಜೀವನಗೊಂಡು ಪುರುಷರಾಗಿ ಪರಿಣಮಿಸಿ

ಸ್ಮರತಪ್ತಾಸ್ಸ್ತ್ರಿಯಶ್ಶಾಂತಾ ಆರಾರ್ತಿಕ್ಯಂ ವ್ಯಧುಸ್ತದಾ ।
ತತ್ರಾಜಗಾಮ ಸಹಸಾ ದೈತ್ಯಶ್ಚಾಭಿನವಾಕೃತಿಃ ॥೧೨॥

ಯಸ್ಯ ಶಬ್ದೇನ ದೀರ್ಣಾಸ್ತಾ ಮಂದರಾದ್ರಿಗುಹಾಸ್ತದಾ ।
ಹಲದಂತೋ ವಾಪಿನಾಸಸ್ತಡಾಗನಯನೋಽರಿಹಾ ॥೧೩॥

ಸ ತು ಶ್ವಾಪದರೂಪೇಣ ಬಭ್ರಾಮ ತತ್ರ ತತ್ರ ಹ ।
ಪಂಚನೇತ್ರಶ್ಚತುಶ್ಶೃಂಗೋ ವಸುಪಾದಶ್ಚತುಶ್ಶ್ರುತಿಃ ॥೧೪॥

ಉಜ್ವಲರೂಪದಿಂದ ಶೋಭಿಸಿದವು. ದೇವಗಾಯಕ, ವಾದ್ಯಗಾರರಾದ ಕಿನ್ನರರೇ ಮೊದಲಾದ ಗಂಧರ್ವರು ಈ ಸಾಮಗಾನದಿಂದ ನಾಚಿಹೋದರು. ॥೧೧॥

ಕಾಮಸಂತಪ್ತರಾದ ಯುವತೀ ಜನರ ಕಾಮವಾಸನೆಯು ಸಹ ಈ ಗಾನಶ್ರವಣದಿಂದ ತೃಪ್ತವಾಯಿತು. ಆಗ ಆ ನಾರಿಯರು ದೇವನಿಗೂ, ದೇವನೊಂದಿಗೆ ವೇದಮಂತ್ರಗಳನ್ನು ಪಠಿಸುತ್ತಲಿದ್ದ ಮುನಿಬಾಲಕರಿಗೂ ದೃಷ್ಟಿಯಾಗದಿರಲೆಂದು ಕದಲಾರತಿಗಳನ್ನು ಎತ್ತಿದರು. ಇಷ್ಟೆಲ್ಲ ಪವಿತ್ರವಾತಾವರಣವೇರ್ಪಟ್ಟಿದ್ದ ಆ ಸು-ಸಮಯದಲ್ಲಿ ಅಲ್ಲಿಗೊಬ್ಬ ಹೊಸ ದೈತ್ಯನು ಬಂದನು. ಅವನ ರೂಪ–ರೇಷೆಗಳು ಬಹಳ ಅಪೂರ್ವವಾಗಿದ್ದವು, ॥೧೨॥

ದೈತ್ಯನನ್ನು ವರ್ಣಿಸದಿದ್ದರೆ ವ್ಯಾಸ ! ಸಾಧ್ಯವೇ ಇಲ್ಲ. ಅವನ ಧ್ವನಿಯು ಮಂದರ ಮೊದಲಾದ ಕುಲಪರ್ವತಗಳನ್ನೂ, ತದಂತರ್ಗತ ಗುಹೆಗಳನ್ನೂ ಸೀಳಿ ಬಿಡುವಂತಹದು. ಇವನ ಹಲ್ಲುಗಳು ನೇಗಿಲಿನಂತೆ ಮೊನೂಚಾಗಿಯೂ, ಬಾಗಿರುವುವೂ ಆಗಿದ್ದವು. ಅವನ ಮೂಗನ್ನು ಆಳವಾದ ಹಾಳುಭಾವಿಗೆ ಹೋಲಿಸಬಹುದಾಗಿದ್ದಿತು. ಜೊಂಡು, ಪಾಚಿ' ಬದಿ ಮೊದಲಾದ ಕಶ್ಮಲಗರ್ಭಿತ ಕೆರೆ-ಕುಂಟೆಗಳಂತೆ ಜಿಬುರು ಕಟ್ಟಿದ ಕಣ್ಣುಗಳುಳ್ಳವನು. 'ಶತ್ರುಗಳು ಸಿಕ್ಕಾರೆಯೋ ? ಕೊಂದೇನೆಯೋ?' ಎಂದು ಸರ್ವದಾ ಅವನು ಹವಣಿಸುತ್ತಲೇ ಇರುವನು. ॥೧೩॥

ದೈತ್ಯನು ತನ್ನ ಸ್ವಾಭಾವಿಕ ರೂಪವನ್ನು ಮರೆಮಾಚಿಕೊಂಡು ಹಿಂಸ್ರ ಪಶುವಿನ ಹಾಗೆ ರೂಪವನ್ನು ತಳೆದು ಇಲ್ಲಿಗೆ ಬಂದು, ಸುತ್ತು-ಮುತ್ತಲೂ ಸಂಚರಿಸ

ತ್ರಿ-ಮುಖಶ್ಚ ದ್ವಿ-ಪುಚ್ಛೋಽಸೌ ಜಹಾಸೋಚ್ಚೈರ್ನಿರೀಕ್ಷ್ಯ ತಮ್ ।
ಗುಣೇಶ ಉವಾಚ:—

ಪಶ್ಯಂತು ಕೌತುಕಂ ಬಾಲಾಃ !

ಕ ಉವಾಚ :—

ಪ್ರೋವಾಚೇತಿ ಶಿಶೂನ್ ವಿಭುಃ ॥೧೫॥

ಬಾಲಕಾ ಊಚುಃ :—

ಅತ್ಯದ್ಭುತಂ ದೃಷ್ಟಮಿದಂ

---

ತೊಡಗಿದನು. ಇವನು ಧರಿಸಿದ್ದ ಪ್ರಾಣಿಯ ರೂಪವು ಬಹಳ ವಿಚಿತ್ರವಾಗಿದ್ದಿತು. ಆ ಪ್ರಾಣಿಗೆ ಐದು ಕಣ್ಣುಗಳೂ ನಾಲ್ಕು ಕೊಂಬುಗಳೂ, ಇದ್ದವು. ಅದು ಎಂಟು ಪಾದಗಳುಳ್ಳ ಪ್ರಾಣಿ. ನಾಲ್ಕು ಕಿವಿಗಳಿದ್ದವು. ॥೧೪॥

ಮೂರು ಮೂತಿಗಳಿದ್ದವು. ಎರಡು ಬಾಲಗಳು. ವ್ಯಾಸ! ಈ ಬಗೆಯ ಪ್ರಾಣಿಯನ್ನು ಪ್ರಾಯಃ ಯಾರೂ ನೋಡಿರಲಾರರಷ್ಟೇ? ಇಂತಹ ವಿಕಾರಾಕೃತಿಯುಳ್ಳ ವಿಚಿತ್ರ ಪ್ರಾಣಿಯನ್ನು ನೋಡಿದೊಡನೆಯೇ ಗಣಪತಿಯು ಘಟ್ಟಿಯಾಗಿ ನಗಲಾರಂಭಿಸಿದನು,

ಗುಣೇಶ :—

ಮಿತ್ರರೇ : ಇತ್ತ ನೋಡಿ, ಇದೆಂತಹ ಚಮತ್ಕಾರವಾದ ಪ್ರಾಣಿ ಎಂಬುದನ್ನು

ಬ್ರಹ್ಮಾ :—

ಎಂದು ಮುನಿಬಾಲಕರನ್ನು ಕುರಿತು ಈ ಪ್ರಾಣಿಯನ್ನು ಬೆರಳಿನಿಂದ ನಿರ್ದೇಶಿಸುತ್ತ ದೇವನು ನುಡಿದನು. ॥೧೫॥

ಬಾಲಕರು :—

ಇದೆಂತಹ ಅದ್ಭುತಪ್ರಾಣಿ? ದೇವ! ನಾವು ಇಂತಹ ಪ್ರಾಣಿಯನ್ನು ಇದುವರೆಗೂ

ಕ ಉವಾಚ :—

ಇತ್ಯೂಚುಸ್ತೇ ಗುಣೇಶ್ವರಮ್ ।

ತತೋ ದೈತ್ಯೋ ನನರ್ತೋಚ್ಚೈರುಡ್ಡಿಯೋ ನ್ಯಪತದ್ಭುವಿ ॥೧೬॥

ಕ್ಷಣಂ ಲೀನಃ ಕ್ಷಣಂ ತಿರ್ಷ್ಠ ದೃಶ್ಯಾದೃಶ್ಯಸ್ವರೂಪಧೃಕ್ ।

ಗುಣೇಶ ಉವಾಚ :—

ಧ್ರಿಯತಾಂ, ಧ್ರಿಯತಾಮೇಷ

ನೋಡಿಯೇ ಇರಲಿಲ್ಲ, ಇಂದೇ ಇದನ್ನು ನೋಡಿದ್ದು

ಬ್ರಹ್ಮಾ :—

ಎಂದು ಆಶ್ಚರ್ಯಚಕಿತನಯನರಾಗಿ ಗಣೇಶನನ್ನು ಕುರಿತು ಉತ್ತರಿಸಿದರು. ಇಷ್ಟರಲ್ಲಿ ವನ್ಯಪ್ರಾಣಿಯ ರೂಪದಿಂದಿದ್ದ ಆ ದೈತ್ಯನು ಮೇಲ್ಮೇಲೆ ನೆಗೆದಾಡುತ್ತ ಮನಸ್ವೀ ಕುಣಿಯಲಾರಂಭಿಸಿದನು. ಒಮ್ಮೆ ಬಹಳ ಎತ್ತರದ ವರೆಗೂ ಹಾರಿ ನೆಲಕ್ಕೆ ಬಿದ್ದು ಕುಪ್ಪಳಿಸಿದನು. ॥೧೬॥

ಕ್ಷಣಮಾತ್ರದಲ್ಲಿಯೇ ಯಾರ ಕಣ್ಣಿಗೂ ಕಾಣದಂತಾಗುವನು. ಉತ್ತರ ಕ್ಷಣದಲ್ಲಿ ಎದುರಿಗೇ ನಿಂತಿರುವಂತಿರುವನು. ಹೀಗೆ ಕಂಡೂ ಕಾಣದ ರೂಪ ಉಳ್ಳವನಾಗಿ ಕುಣಿಯುತ್ತ ಬಾಲಕರು ಮತ್ತು ಇತರರು ಇವರನ್ನೆಲ್ಲ ತನ್ನ ನೃತ್ಯದಿಂದ ಆಕರ್ಷಿಸಿದನು.

ಗಣಪತಿ :—

ಬಾಲಕರೇ! ಈ ಪ್ರಾಣಿಯು ಎಲ್ಲಿಗಾದರೂ ಓಡಿಹೋದೀತು? ಬಿಡಬೇಡಿ, ಹಿಡಿಯಿರಿ.

ಕ ಉವಾಚ :—

ಇತ್ಯುವಾಚ ಶಿಶೂನ್ ವಿಭುಃ ||೧೭||

ಇತ್ಯುಕ್ತ್ವಾ ದೈತ್ಯಮಗಮದ್ವೇಗೇನ ಚ ಗುಣೇಶ್ವರಃ !
ಪಲಾಯತಿ ಮಹಾದೈತ್ಯೋ ಯಾತಿ ಪೃಷ್ಠೇ ಸ ಬಾಲಕೈಃ ||೧೮||

ಮಹಾರಣ್ಯಂ ಗತಾಸ್ಸರ್ವೇ ಯತ್ರ ವಾಯುರ್ನ ಸರ್ಪತಿ ।
ಗರ್ಜಂತಿ ಸಿಂಹ-ಶಾರ್ದೂಲಾ ಗಜ-ಸೂಕರ-ವಾನರಾಃ ||೧೯||

ಬ್ರಹ್ಮ :—

ಎಂದು ವಿಭು ಹುಡುಗರಿಗೆ ಕೂಗಿ ಹೇಳಿದನು. ||೧೭||

ಗಣಪತಿಯು ಹುಡುಗರನ್ನು ಪ್ರೇರಿಸಿದುದು ಮಾತ್ರವಲ್ಲದೇ, ತಾನೂ ಸಹ ಧಾವಿಸುತ್ತ ಆ ಪ್ರಾಣಿಯ ಬಳಿಗೆ ಓಡಿ ಹೋದನು. ಇವನು ತನ್ನನ್ನು ಹಿಡಿಯಲು ಬಂದಕೂಡಲೇ ಆ ದೈತ್ಯನು ಬಹಳ ವೇಗದಿಂದ ಓಡಿ ನಡೆದನು. ಗಣೇಶನೂ ನಿರುತ್ಸಾಹಗೊಳ್ಳದೇ ಬಾಲಕರನ್ನು ಸಂಗಡ ಕರೆದುಕೊಂಡು ಆ ಪ್ರಾಣಿಯ ಬೆನ್ನು ಹಿಂದೆಯೇ ಓಡಲಾರಂಭಿಸಿದನು. ||೧೮||

ಪ್ರಾಣಿಯು ಓಡುತ್ತಲೋಡುತ್ತ ಗಹನವಾದ ಒಂದು ಅರಣ್ಯವನ್ನು ಪ್ರವೇಶಿಸಿತು. ಬಾಲಕರು, ಗಣೇಶ ಇವರೂ ಸಹ ಅದನ್ನು ಅನುಸರಿಸಿ ಅರಣ್ಯವನ್ನು ಪ್ರವೇಶಿಸಿದರು. ಆ ಅರಣ್ಯ ಬಹಳ ಭೀಕರವಾದುದು. ಸರ್ವಗನಾದ ಮಾತರಿಶ್ವನು ಸಹ ಅಲ್ಲಿ ಸಂಚರಿಸಲು ಹೆದರುತ್ತಲಿದ್ದನು, ಆ ಅರಣ್ಯವು ವನ್ಯ ಪ್ರಾಣಿಗಳಿಗೆ ಆಕರವಾಗಿದ್ದಿತು. ಸಿಂಹ, ಹುಲಿ, ಆನೆ ಇವು ಸ್ವೇಚ್ಛೆಯಾಗಿ ಗರ್ಜಿಸುತ್ತಲಿದ್ದವು. ಎಲ್ಲಿ ನೋಡಿದರೂ ಮುಳ್ಳುಹಂದಿಗಳು ತಂಡ ತಂಡವಾಗಿ ಕಂಡು ಬರುತ್ತಲಿದ್ದವು. ಕಪಿಗಳಿಗಂತೂ ಲೆಖ್ಖವೇ ಇರಲಿಲ್ಲ. ಎಲ್ಲ ಪ್ರಾಣಿಗಳೂ ಬಗೆ

ತಂ ಧರ್ತುಂ ಯತ್ರ ಯಾತೋಽಸಾವುಡ್ಡೀಯ ದೈತ್ಯಪುಂಗವಃ ।
ಕ್ವಾಪಿ ಯಾತೋ ದೂರದೇಶಂ ತತಃ ಖಿನ್ನೋ ಗಜಾನನಃ ॥೨೦॥

ಕ್ರೋಧ-ಸಂರಕ್ತನಯನೋ ಮುಮೋಚ ಪಾಶಮುಲ್ಬಣಮ್ ।
ಚಕಂಪೇ ಧರಣೀ ವ್ಯೋಮ ಭ್ರಮನ್ಮೇಘಮಭೂತ್ತದಾ ॥೨೧॥

ನ್ಯಪತನ್ ಭಾನಿ ಖಾತ್ಪೃಥ್ವೀಂ ಕಕುಭೋ ವ್ಯನದನ್ ಸ್ವನಾತ್ ।
ಸ ಪಾಶೋ ದೈತ್ಯಮಾಕ್ರಮ್ಯ ಕ್ಷಣೇನಾಯಾದ್ಗಣೇಶ್ವರಮ್ ॥೨೨॥

---

ಬಗೆಯ ಧ್ವನಿಯಿಂದ ಕೂಗುತ್ತಲಿದ್ದುದಾಗಿ ಆ ಅರಣ್ಯದ ವಾತಾವರಣವೆಲ್ಲ ಶಬ್ದಮಯವಾಗಿದ್ದಿತು. ॥೧೯॥

ಈ ವಿಚಿತ್ರ ಪ್ರಾಣಿಯನ್ನು ಹಿಡಿಯಬೇಕೆಂದು ಇವರು ಸಾಹಸಮಾಡಿ ಸಮೀಪಕ್ಕೆ ಬರುವ ವೇಳೆಗೆ ಸರಿಯಾಗಿ ಅದು ನೆಗೆದು ಬಹು ದೂರ ಓಡಿಹೋಗುವುದು. ಹೀಗೆ ಕುಣಿದಾಡುತ್ತ ಆ ಮೃಗವು ಎಲ್ಲಿಗೋ ಬಹಳ ದೂರ ಹೋಗಿ ಕಣ್ಣಿಗೇ ಕಾಣದಂತಾಯಿತು. ಆಗ ಮಾತ್ರ ಗಣಪತಿಯು ಖಿನ್ನನಾಗಿ ಬಹಳ ಮಟ್ಟಿಗೆ ನಿರುತ್ಸಾಹಗೊಂಡನು. ॥೨೦॥

ಕೋಪವು ಮಿತಿಮೀರಿ ಬಂದಿತು. ಕಣ್ಣುಗಳು ಕೆಂಪಡರಿದವು. ಆಗ ತನ್ನ ಬಳಿ ಇದ್ದ ಪಾಶವನ್ನು ಅಭಿಮಂತ್ರಿಸಿ ಮೃಗವು ಓಡಿಹೋದ ದಿಕ್ಕಿಗೆ ಬೀಸಿ ಎಸೆದನು. ಪಾಶಾಯುಧ ಧರನ ಶಕ್ತಿ ಸಾಮಾನ್ಯವಾದುದೇ? ಗಣಪತಿಯು ಪಾಶವನ್ನೆಸೆದ ಬಿರುಸಿಗೆ ಇಡೀ ಭೂಮಿಯೇ ಗಡಗಡ ನಡುಗಿತು. ಮೇಘಗಳೆಲ್ಲ ಚಲಿಸಿ ನಭೋಮಂಡಲವನ್ನು ಆಚ್ಛಾದನಮಾಡಿದವು. ॥೨೧॥

ಮಳೆಯ ಹನಿಗಳಂತೆ ಅಂತರಿಕ್ಷದಿಂದ ನಕ್ಷತ್ರಗಳು ಭೂಮಿಗೆ ಉದುರಿ ಬೀಳಲಾರಂಭಿಸಿದವು. ದಿಕ್ಕುಗಳು ವಿಕಾರವಾಗಿ ಧ್ವನಿಗೈದವು. ಗಣಪತಿಯಿಂದ ಪ್ರಯುಕ್ತವಾದ ಪಾಶವು ಸರ್ರನೆ ಹೋಗಿ ಒಂದು ಕ್ಷಣದೊಳಗಾಗಿಯೇ ಮೃಗರೂಪಿಯಾದ ದೈತ್ಯನನ್ನು ಆಕ್ರಮಿಸಿ ಎಳೆದುಕೊಂಡು ಗಣಪತಿಯ ಸಮೀಪಕ್ಕೆ ಬಂದು ಸೇರಿತು. ॥೨೨॥

ಶ್ವಾಸರೋಧಾತ್ಪಪಾತೋರ್ವ್ಯಾಂ ಲುಂಠನ್ ಪಾದಾನ್ ಭುಜಾನ್ ಮುಖಮ್ ।
ನೇತ್ರದ್ವಾರಾಗತಾಃ ಪ್ರಾಣಾಃ ಪಶ್ಯತ್ಸು ಬಾಲಕೇಷ್ವಪಿ ॥೨೩॥

ಪತಿತೋ ರೂಪಮಾಸ್ಥಾಯ ಚತುರ್ವಿಂಶತಿಯೋಜನಮ್ ।
ಸಪಾಶಕಂಠಂ ತಂ ಕೇಚಿದ್ವಿಚಕರ್ಷುರಿತಸ್ತತಃ ॥೨೪॥

ಗುದೇ ಕಾಷ್ಠಂ ಮುಖೇ ಧೂಲಿಂ ಪ್ರಾಕ್ಷಿಪನ್ನಪರೇಽರ್ಭಕಾಃ ।
ಕೇಚಿನ್ಮೂತ್ರ-ಪುರೀಷಂ ಚ ಚಕ್ರುಸ್ತನ್ಮಸ್ತಕೇಽರ್ಭಕಾಃ ॥೨೫॥

ಪಾಶವು ದೈತ್ಯನ ಕಂಠನಾಳವನ್ನು ಬಿಗಿದುಬಿಟ್ಟಿದ್ದಿತಾದುದರಿಂದ ಅವನಿಗೆ ಸಂಪೂರ್ಣವಾಗಿ ಉಸಿರು ಕಟ್ಟಿಹೋಯಿತು. ತಟಪಟ ಒದೆದಾಡುತ್ತ ಕೆಳಕ್ಕೆ ಬಿದ್ದು ನೆಲದಲ್ಲಿ ಉರುಳಾಡಲಾರಂಭಿಸಿದನು. ಕೈ-ಕಾಲು-ಮೂತಿಗಳನ್ನೆಲ್ಲ ವಿಕಾರವಾಗಿ ಕೊಡವಿದನು. ಪಾಶದ ಬಿಗಿತವನ್ನು ಬಿಡಿಸಿಕೊಳ್ಳಲು ಅವನು ಒದೆದಾಡಿದಂತೆಲ್ಲ ಪಾಶವು ಇನ್ನೂ ಬಿಗಿಯತೊಡಗಿತು. ಬಾಲಕರು ಸುತ್ತಲೂ ನಿಂತು ಈ ದೃಶ್ಯವನ್ನು ನೋಡುತ್ತಲಿದ್ದರು ಅಷ್ಟರಲ್ಲೇ ದೈತ್ಯನ ಪ್ರಾಣಗಳು ನೇತ್ರದ್ವಾರಾ ಹೊರಕ್ಕೆ ಹೊರಟು ಹೋದವು. ॥೨೩॥

ದೈತ್ಯನು ಮೃತಿಯನ್ನೈದುವಾಗ ಈ ಮೊದಲು ತಾತ್ಕಾಲಿಕವಾಗಿ ತಳೆದಿದ್ದ ಮೃಗದ ರೂಪವನ್ನು ತ್ಯಜಿಸಿ, ತನ್ನ ಪ್ರಾಕೃತ ದೇಹವನ್ನು ಹೊಂದಿದನು. ಇಪ್ಪತ್ತು ನಾಲ್ಕು ಯೋಜನಗಳಷ್ಟು ಮಾತ್ರ ಅದು ಉದ್ದಗಲ ಉಳ್ಳದ್ದಾಗಿದ್ದಿತು, ಅಷ್ಟೇ. ಹೆಚ್ಚೇನೂ ಇರಲಿಲ್ಲ. ಪಾಶವಿನ್ನೂ ಅವನ ಕಂಠವನ್ನು ಬಿಗಿದೇ ಇದ್ದಿತು. ಮುನಿಬಾಲಕರಲ್ಲಿ ಕೆಲವರು ಪಾಶದ ಮೂಲಕ ದೈತ್ಯನ ದೇಹವನ್ನು ಅತ್ತಿತ್ತ ಎಳೆದಾಡಿದರು. ॥೨೪॥

ದೈತ್ಯನ ಗುದದ್ವಾರಕ್ಕೆ ಕೆಲವರು ಕಡ್ಡಿಗಳನ್ನು ಚುಚ್ಚಿದರು. ಮತ್ತೆ ಕೆಲವರು ಅವನ ತೆರದ ಬಾಯಿಯಲ್ಲಿ ಮಣ್ಣನ್ನು ಹಾಕಿದರು. ಕೆಲವು ಪುಂಡು ಹುಡುಗರಂತೂ ರಾಕ್ಷಸನ ಮೃತ ಕಳೇಬರದ ಮೇಲೆ ಮಲ-ಮೂತ್ರಗಳನ್ನೂ ವಿಸರ್ಜಿಸಿದರು. ಹುಡುಗರ ಚೇಷ್ಟೆ ಎಂದ ಮೇಲೆ ಅದಕ್ಕೇನಾದರೂ ನೀತಿ-ನಿಯಮಗಳುಂಟೇ ? ॥೨೫॥

ಗುಣೇಶನಿಕಟೇ ಯಾತಾಃ ಸರ್ವೇ ಬಾಲಾಃ ಕ್ಷುಧಾತುರಾಃ ।
ರಸಾಲಾನಿ ಬಭಕ್ಷುಸ್ತೇ ಕೇಚಿತ್ತನ್ಮಸ್ತಕೇ ಗತಾಃ ॥೨೬॥

ಆಜಘ್ನುಃ ಫಲಘಾತೇನ ಭೂಮಿಷ್ಠಾ ಉಪರಿ ಸ್ಥಿತಾನ್ ।
ಪತಿತಾನ್ಯಪರೇ ಖಾದನ್ ದದೃಶುರ್ವಿನತಾಂ ತತಃ ॥೨೭॥

ಅಂಡಮಾಚ್ಛಾದ್ಯ ತಿಷ್ಠಂತೀ ಸಾಧಾವದ್ಬಾಲಕಾನ್ ಪ್ರತಿ ।
ಪಲಾಯಮಾನಾಂಸ್ತಾನ್ ದೃಷ್ಟ್ವಾ ವಿನತಾ ಪೃಷ್ಠತೋ ಯಯೌ ॥೨೮॥

---

ಹುಡುಗರು ದೈತ್ಯನನ್ನು ಮೃತಮಾರಣಮಾಡುತ್ತಿರುವಷ್ಟರಲ್ಲಿ ಅವರಿಗೆ ಹಸಿವು ಹೆಚ್ಚಾಯಿತು. ಇದರಿಂದ ಹುಡುಗರು ಕಂಗೆಟ್ಟು ಗಣೇಶನ ಬಳಿಗೆ ಓಡಿ ಬಂದರು. ಅರಣ್ಯದಲ್ಲಿ ಬೆಳೆದಿದ್ದ ಮಾವಿನ ಗಿಡಗಳನ್ನು ಹತ್ತಿ ಪಕ್ವವಾದ ಹಣ್ಣುಗಳನು ಕಿತ್ತು ಯಥೇಷ್ಟವಾಗಿ ತಿಂದರು. ಕುಳ್ಳಾಗಿದ್ದ ಕೆಲವು ಹುಡುಗರು ಹಣು ಗಳನ್ನು ಕೀಳಲಿಕ್ಕಾಗಿ ರಾಕ್ಷಸನ ತಲೆಯ ಮೇಲೆ ಹತ್ತಿದರು. ॥೨೬॥

ಮರವನ್ನೇರಿ ಹಣ್ಣು ಕಾಯ್ಕುತ್ತಲಿದ್ದ ಹುಡುಗರನ್ನು ಕೆಳಕ್ಕಿದ್ದವರು ತಮ್ಮ ಕೈಯ್ಯಲ್ಲಿದ್ದ ಹಣ್ಣುಗಳಿಂದ ಹೊಡೆಯಲಾರಂಭಿಸಿದರು. ಮೇಲಿದ್ದವರು ಹಣ್ಣು ಕಾಯಿಗಳನ್ನು ಕಿತ್ತು ಕಿತ್ತು ಕೆಳಗಡೆ ನಿಂತವರ ಮೇಲೆ ಎಸೆದಾಡಿದರು. ಕೆಳಕ್ಕಿದ್ದ ವರು ಮೇಲಿನವರಿಂದ ಏಟುಗಳನ್ನು ತಪ್ಪಿಸಿಕೊಳ್ಳುತ್ತ ಹಣ್ಣುಗಳು ಕೆಳಕ್ಕೆ ಬೀಳು ವಷ್ಟರಲ್ಲೇ ಅವನ್ನು ತಮ್ಮ ಕೈಗಳಿಂದ ಹಿಡಿದು ಹಾಗೆಯೇ ತಿನ್ನತೊಡಗಿದರು. ಹೀಗೆ ಇವರು ಯಥೇಷ್ಟವಾಗಿ ಆಟವಾಡುತ್ತಿರುವಾಗ ಅಲ್ಲಿಯೇ ಒಂದು ಕಡೆಗೆ ಕುಳಿ ತಿದ್ದ ಕಶ್ಯಪಪತ್ನಿ ; ವಿನತೆಯನ್ನು ಕಂಡರು. ॥೨೭॥

ತನ್ನ ಮೊಟ್ಟೆಯು ಯಾರ ಕಣ್ಣಿಗೂ ಬೀಳದಿರಲೆಂದು ಅದನ್ನು ಸಂರಕ್ಷಿಸುತ್ತ ಅದರ ಸಮೀಪದಲ್ಲೇ ವಿನತೆಯು ಕುಳಿತಿದ್ದಳು. ಬಾಲಕರ ಮರವನ್ನೇರುವಿಕೆ, ಕೂ ಗಾಟ ಮೊದಲಾದ ಧಾಂದಲೆಯನ್ನು ಕೇಳಿ ಈ ಹುಡುಗರು ತನ್ನ ಮೊಟ್ಟೆಗೆ ಏನಾ ದರೂ ಧಕ್ಕೆಯನ್ನುಂಟುಮಾಡಿಯಾರೆಂದು ಹೆದರಿ,ಅವರನ್ನುದೂರಓಡಿಸುವುದಕ್ಕಾಗಿ ಅಟ್ಟಿಸಿಕೊಂಡು ರಭಸದಿಂದ ಬಂದಳು. ಇವಳು ಓಡಿ ಬರುತ್ತಿರುವುದನ್ನು ನೋಡಿ

**ನಿಘ್ನತೀ ಪಕ್ಷವಾತೇನ ಶ್ವಾಪದಾನಿ ದ್ರುಮಾನಪಿ ।**
**ಗುಣೇಶಸ್ತತ್ಸಮಾಲೋಕ್ಯ ಲೀನೋ ವೃಕ್ಷಸ್ಯ ಕೋಟರೇ ॥೨೯॥**

**ದದರ್ಶಾಂಡಂ ಶ್ವೇತತರಂ ಮಂಡಲಂ ಶಶಿನೋ ಯಥಾ ।**
**ದಧಾರ ಹಸ್ತೇ ಸಹಸಾ ಗುಣೇಶೋ ಬಲವತ್ತರಮ್ ॥೩೦॥**

**ಆಸ್ಫೋಟಿತ್ತತ್ರ ದದೃಶೇ ಪತತ್ರೀ ನೀಲಕಂಠವಾನ್ ।**

---

ದೊಡನೆಯೇ ಬಾಲಕರು 'ಇವಳಾರೋ ರಾಕ್ಷಸಿಯಾಗಿರಬೇಕೆ'ಂದು ಹೆದರಿ ದಿಕ್ಕು ಪಾಲಾಗಿ ಓಡಲಾರಂಭಿಸಿದರು. ವಿನತೆಯೂ ಅಷ್ಟಕ್ಕೇ ಬಿಡದೇ ಅವರನ್ನು ಹಿಂಬಾಲಿಸಿಕೊಂಡು ಓಡತೊಡಗಿದಳು. ॥೨೮॥

ಅವಳು ತನ್ನ ರೆಕ್ಕೆಗಳನ್ನು ಪದೇ ಪದೇ ಬಲವಾಗಿ ಬೀಸಿ ಆ ಅರಣ್ಯದಲ್ಲಿದ್ದ ಮಹಾ ಮಹಾ ಶ್ವಾಪದಗಳನ್ನೂ ಅನೇಕ ವೃಕ್ಷಗಳನ್ನೂ ಪಕ್ಷಾಘಾತದಿಂದ ಬಡಿದು ನೆಲಕ್ಕೆ ಕೆಡಹಿದಳು. ಇದನ್ನೆಲ್ಲ ಗುಣೇಶನು ನೋಡಿದನು. ಮೊದಮೊದಲು 'ಇದೇನೆಂ'ಬುದು ಖಚಿತವಾಗಿ ತಿಳಿಯಲಿಲ್ಲ. ಪರೀಕ್ಷಿಸಿಯೇ ನೋಡೋಣವೆಂದು ನಿಶ್ಚಯಿಸಿ ತಾನು ವಿನತೆಯ ಕಣ್ಣುಗಳಿಗೆ ಕಾಣಿಸಿಕೊಳ್ಳದೇ ಒಂದು ಮರದ ಪೊಟರೆಯಲ್ಲಿ ಅಡಗಿ ಕುಳಿತನು. ॥೨೯॥

ಯಾವ ಮರದ ಸಂದಿಯಲ್ಲಿ ಗುಣೇಶನು ಅಡಗಿ ಕುಳಿತಿದ್ದನೋ, ಅದಕ್ಕೆ ಬಹಳ ಸಮೀಪದಲ್ಲೇ ವಿನತೆಯು ಪ್ರಸವಿಸಿ ಕಾಪಾಡುತ್ತಲಿದ್ದ ಮೊಟ್ಟೆಯು ಇದ್ದಿತು. ಅದನ್ನು ದೇವನು ನೋಡಿದನು. ಚಂದ್ರಮಂಡಲದಂತೆ ಬಹಳ ಶುಭ್ರವಾಗಿ ಹೊಳೆಯುತ್ತಲಿದ್ದ ಆ ಅಂಡವು ದೇವನ ಮನಸ್ಸನ್ನು ಬಹುಮಟ್ಟಿಗೆ ಆಕರ್ಷಿಸಿತು. 'ಇದೇನು ?' ಎಂದು ತಿಳಿಯಲು ಗಣಪತಿಯು ಅದನ್ನು ತನ್ನ ಕೈಗೆ ತೆಗೆದುಕೊಂಡನು. ಆ ಮೊಟ್ಟೆಯೂ ಸಾಮಾನ್ಯವಾದುದಾಗಿರಲಿಲ್ಲ. ಬಹಳ ಘನವಾಗಿದ್ದಿತು. ॥೩೦॥

ಎಷ್ಟೆಷ್ಟು ತಿರುಗಿಸಿ ನೋಡಿದರೂ ಅದರ ತತ್ತ್ವ ತಿಳಿಯದಿರಲು, ಅದನ್ನು ಒಡೆದುಬಿಟ್ಟನು. ಆಗ ಅದರಲ್ಲೊಂದು ಬಹು ಮುದ್ದಾದ ಪಕ್ಷಿಯು ಕಂಡುಬಂದಿತು.

ದೀರ್ಘಪಕ್ಷೋ ವಿಶಾಲಾಕ್ಷೋ ವಮನ್ ಜ್ವಾಲಾಕಣಾನ್ ಮುಖಾತ್ ॥೩೧॥

ವ್ಯಾಧೂನಯದುಭೌ ಪಕ್ಷೌ ಕಂಪಯನ್ ಜಗತೀತಲಮ್ ।
ಚೇಲುರ್ವೇಲಾಮತಿಕ್ರಮ್ಯ ಸಮುದ್ರಾಸ್ತಸ್ಯ ಶಬ್ದತಃ ॥೩೨॥

ಚಚಾಲ ಮಂಡಲಂ ಭಾನೋರರ್ಭಕಾಸ್ತೇ ಪಲಾಯಿತಾಃ ।
ಪೃಷ್ಠತೋಽನುಯಯೌ ಸೋಽಥ ಪಕ್ಷಘಾತೇನ ತಾಡಯನ್ ॥೩೩॥

ತದ್ದೃಷ್ಟ್ವಾ ಕದನಂ ತೇಷಾಂ ಯೋದ್ಧುಕಾಮೋ ಗುಣೇಶ್ವರಃ ।

ಅದರ ಕತ್ತಿನ ಭಾಗವು ನೀಲಿಮೂವರ್ಣದಿಂದ ಹೊಳೆಯುತ್ತಲಿದ್ದಿತು. ಅದಕ್ಕೆ ಬಹಳ ಉದ್ದವಾದ ರೆಕ್ಕೆಗಳಿದ್ದವು. ಅದರ ಕಣ್ಣುಗಳು ವಿಶಾಲವಾದುವು. ಅದು ಕೋಪದಿಂದ ತನ್ನ ಚಂಚುವಿನ ಮೂಲಕ ಬೆಂಕಿಯ ಕಣಗಳನ್ನು ಉಗುಳುತ್ತಲಿದ್ದಿತು. ॥೩೧॥

ಅದು ತನ್ನ ಎರಡೂ ರೆಕ್ಕೆಗಳನ್ನು ಒಮ್ಮೆ ಬಲವಾಗಿ ಬಡಿಯಿತು. ಇದರ ರಭಸಕ್ಕೆ ಈ ಜಗತ್ತೇ ಕಂಪಿಸಿಹೋಯಿತು. ಒಮ್ಮೆ ಅದು ಕೇಕಾಧ್ವನಿಯನ್ನು ಮಾಡಿತು. ಅದಕ್ಕೆ ಅಂಜಿ ಚತುಸ್ಸಮುದ್ರಗಳೂ ಪ್ರಕ್ಷೋಭಗೊಂಡವು ಮತ್ತು ದಡವನ್ನು ಮೀರಿ ಬರಲಾರಂಭಿಸಿದವು. ॥೩೨॥

ಸೂರ್ಯಮಂಡಲವು ಗರಗರ ತಿರುಗಿತು, ಉತ್ಪಾತದಂತಹ ಈ ಅದ್ಭುತವನ್ನು ಕಂಡ ಕೂಡಲೇ ಬಾಲಕರಾರೂ ಅಲ್ಲಿ ನಿಲ್ಲದೇ ಓಡಿಯೇ ನಡೆದರು. ಈ ಪಕ್ಷಿಯೂ ಸುಮ್ಮನೆ ಇರಲಿಲ್ಲ. ತನ್ನ ರೆಕ್ಕೆಗಳನ್ನು ಬೀಸಿ ಬಾಲಕರನ್ನೆಲ್ಲ ಬಡಿಯುತ್ತ ಅವರ ಬೆನ್ನಟ್ಟಿತು. ॥೩೩॥

ತನ್ನ ಸಂಗಡಿಗರಾದ ಸಣ್ಣ ಸಣ್ಣ ಮುನಿಬಾಲಕರೊಡನೆ ಈಗಿನ್ನೂ ಹೊಸದಾಗಿ ಹುಟ್ಟಿದ ಪಕ್ಷಿಯು ಈ ರೀತಿ ಹೋರಾಡುತ್ತಿರುವುದನ್ನು ನೋಡಿ, ಗುಣೇಶ್ವರನು

ಜಗ್ರಾಹ ಪಕ್ಷೇ ತಂ ಕ್ರೂರಂ ತತೋ ಯುದ್ಧಮವರ್ತತ ॥೩೪॥

ಪಕ್ಷಘಾತೈಶ್ಚಂಚುಪುಟೈರ್ಜಘಾನ ಪಕ್ಷಿಪುಂಗವಃ ।

ಆರಕ್ತನಯನಸ್ಸೋಽಪಿ ತಂ ಜಘ್ನೇ ಮುಷ್ಟಿಘಾತತಃ ॥೩೫॥

ಅತಿದಾರ್ಢ್ಯಂ ತಸ್ಯ ದೃಷ್ಟ್ವಾ ಚತುರ್ಭಿರಸ್ತ್ರೈಥಾಯುಧೈಃ ।

ಗುಣೇಶಸ್ತಂ ಜಘಾನಾಶು ತಾನಿ ಪೇತುರ್ಧರಾತಲೇ ॥೩೬॥

ಅಚ್ಚರಿಗೊಂಡು ತಾನೂ ಸಹ ಅದರೊಂದಿಗೆ ಕದನವಾಡೋಣವೆಂದು ಬಯಸಿದನು. ಆ ಕೂಡಲೇ ಅವರ ಸಮೀಪಕ್ಕೆ ಹೋಗಿ ಆದರ ರೆಕ್ಕೆಗಳೆರಡನ್ನೂ ಬಲವಾಗಿ ಹಿಡಿದು ಅದು ಮುಂದಕ್ಕೆ ಹಾರಿ ಹೋಗದಂತೆ ಮಾಡಿದನು. ಆ ಪಕ್ಷಿಯೋ, ಬಹಳ ಕ್ರೂರ ಸ್ವಭಾವವುಳ್ಳದ್ದು. ಈ ಅಪಮಾನವನ್ನು ಸಹಿಸಿಕೊಂಡು ಸುಮ್ಮನೆ ಇದ್ದೀತೇ ? ಗಣಪತಿಯನ್ನು ಭರದಿಂದ ಎದುರಿಸಿತು. ಸರಿ ಮಯೂರ-ಗಣಪತಿಗಳಿಗೆ ಹೋರಾಟ ಮೊದಲಾಯಿತು. ॥೩೪॥

ರೆಕ್ಕೆಗಳಿಂದ ಪಟ ಪಟ ಹೊಡೆಯುತ್ತಲೂ, ತನ್ನ ಅತಿ ತೀಕ್ಷ್ಣವಾದ ಚಂಚ್ವಗ್ರದಿಂದ ಕುಕ್ಕುತ್ತಲೂ ಗಣಪತಿಯನ್ನು ಹಿಂಸಿಸಲಾರಂಭಿಸಿತು. ಮೊದ-ಮೊದಲು ಗಣಪತಿಯು ಆಟವಾಡಿದಂತೆ ಮಯೂರದೊಂದಿಗೆ ಹೋರಾಡಿದನಾದರೂ, ಬರ-ಬರುತ್ತ ಮಯೂರದ ಇರಿತವು ಬಲವಾಗಲು, ಅವನಿಗೆ ಕೋಪವು ಮಿತಿಮೀರಿ ಬಂದಿತು. ದೇವನ ಕಣ್ಣಾಲಿಗಳು ಕೆಂಪಡರಿದವು. ವಜ್ರದಂತೆ ಕಠಿಣವಾದ ತನ್ನ ಮುಷ್ಟಿಯಿಂದ ಮಯೂರವನ್ನು ಬಲವಾಗಿ ಗುದ್ದಲಾರಂಭಿಸಿದನು. ॥೩೫॥

ಎಷ್ಟು ಸಲ ಘಟ್ಟಿಯಾಗಿ ಗುದ್ದಿದರೂ ಮಯೂರವು ಸ್ವಲ್ಪ ಕೂಡ ಚಲಿಸದೆ, ಸಮಬಲದೊಡನೆ ಹೋರಾಡುತ್ತಿದ್ದುದನ್ನು ನೋಡಿ, ದೇವನು ತನ್ನ ನಾಲ್ಕು ಆಯುಧಗಳನ್ನೂ ಒಮ್ಮೆಲೇ ಅದರ ಮೇಲೆ ಪ್ರಯೋಗಿಸಿದನು. ಆದರೇನು ? ಆ ಆಯುಧಗಳೂ ಸಹ ಕುಂಠಿತವಾಗಿ ನೆಲಕ್ಕೆ ಉರುಳಿ ಬಿದ್ದವು. ॥೩೬॥

ಉಡ್ಡೀಯ ಸ ಪಪಾಲಾಶು ಬಾಲಾನಾದಾಯ ಸತ್ವರಃ ।
ಗುಣೇಶಸ್ತಾನ್ಸಮುನ್ಮುಚ್ಯ ಸಮಾರೂಢೋಽಂಡಜಂ ತತಃ ॥೩೭॥

ವಶೇ ತಮಂಡಜಂ ಕೃತ್ವಾ ಚಾರುರೋಹ ಗುಣೇಶ್ವರಃ ।
ತತಸ್ತಮಾಯಯುರ್ಬಾಲಾ ವಿನತಾಪಿ ಸಮಾಯಯೌ ॥೩೮॥

ತುಷ್ಟಾವ ಪರಮಾತ್ಮಾನಂ ಗುಣೇಶಂ ತಂ ಧಿಯಾ ಸ್ವಯಾ ।

ಆ ಅಂಡಜವು ಮುನಿಬಾಲಕರನ್ನೆಲ್ಲ ಎತ್ತಿಕೊಂಡು ಮೇಲಕ್ಕೆ ನೆಗೆದು ಬಹು ವೇಗಗತಿಯಿಂದ ಹಾರಿತು. ಇದನ್ನು ನೋಡಿದ ಕೂಡಲೇ ಗಣಪತಿಯು ಮುನ್ನುಗ್ಗಿ ಬಂದು, ಅದರ ಹಿಡಿತದಿಂದ ಬಾಲಕರನ್ನು ಮುಕ್ತರನ್ನಾಗಿ ಮಾಡಿದನು. ಮತ್ತು ಅಂಡಜವು ಅತ್ತಿತ್ತ ಚಲಿಸದಂತೆ ಬಿಗಿಹಿಡಿದು ಅದರ ಮೇಲೆ ಏರಿ ಕುಳಿತನು. ॥೩೭॥

ಇವನ ಹಿಡಿತಕ್ಕೆ ಸಿಕ್ಕ ಪಕ್ಷಿಯು ನಿರ್ವಿಣ್ಣವಾಯಿತು. ಮತ್ತು ಇವನಿಗೆ ಸರ್ವಾತ್ಮನಾ ಅಧೀನವಾಯಿತು. ಇಷ್ಟಾದ ಬಳಿಕ, ಗಣಪತಿಯು ಮಯೂರವನ್ನು ಅಶ್ವಾದಿಗಳನ್ನು ಸವಾರಿಮಾಡುವಂತೆ ಏರಿ ಕುಳಿತು ಸವಾರಿಮಾಡಲಾರಂಭಿಸಿದನು. ಮಯೂರವು ಗಣಪತಿಗೆ ಅಧೀನವಾದುದನ್ನು ದೂರದಿಂದಲೇ ನಿಂತು ನೋಡುತ್ತಲಿದ್ದ ಮುನಿಬಾಲಕರು ಮೆಲ್ಲ-ಮೆಲ್ಲಗೆ ಹೆಜ್ಜೆಗಳನ್ನಿಕ್ಕುತ್ತ ಒಬ್ಬೊಬ್ಬರಾಗಿ ಗಣಪತಿಯ ಸಮೀಪಕ್ಕೆ ಬಂದರು. ಈ ಸನ್ನಿವೇಶವನ್ನೆಲ್ಲ ನೋಡುತ್ತಲಿದ್ದ ವಿನತೆಯೂ ಬಾಲಕರೊಂದಿಗೆ ಗಣಪತಿಯನ್ನು ಸಮೀಪಿಸಿದಳು. ॥೩೮॥

ಪತಿಯ ವಚನವು ಯಥಾರ್ಥವಾದುದನ್ನು ಕಂಡು ವಿನತೆಯು ಬಹಳ ಹರ್ಷಗೊಂಡಳು, ಮತ್ತು ಪರಮಾತ್ಮನಾದ ಗುಣೇಶನನ್ನು ತನಗೆ ತಿಳಿವು ಇದ್ದಷ್ಟು ಸು-ಶಬ್ದಗಳಿಂದ ಹೀಗೆಂದು ವರ್ಣಿಸಿದಳು.

**ವಿನತೋವಾಚ :—**

**ತ್ವಂ ಸೃಷ್ಟಿಕರ್ತಾ ರಜಸಾ ಬ್ರಹ್ಮಾ, ಸತ್ತ್ವೇನ ಪಾಲಕಃ ||೩೯||**

**ವಿಷ್ಣುಸ್ತ್ವಮಸಿ, ತಮಸಾ ಸಂಹರ್ತಾ ಶಂಕರೋಽಪಿ ಚ ।**

**ನ ದೇವಾ, ನರ್ಷಯಸ್ತತ್ತ್ವಂ ವಿದುಸ್ತೇ ಸಗುಣಸ್ಯ ಹ ||೪೦||**

**ನಿರ್ಗುಣಸ್ಯ ತು ಕೋ ವೇದ ? ಚರಾಚರಗುರೋರಪಿ ।**

**ಕ ಉವಾಚ :—**

**ಏವಂ ಸ್ತುತ್ವಾವದೀತ್ಸಾ ತಂ ಪ್ರಣತಾ ಭಕ್ತಿತತ್ಪರಾ ||೪೧||**

---

ವಿನತೆ :—

ಭಗವನ್, ನೀನು ರಜೋಗುಣ ಪ್ರಧಾನವಾಗಿ ಸೃಷ್ಟೀಶ ; ಬ್ರಹ್ಮನಾಗಿರುವೆ. ಸತ್ತ್ವಗುಣವನ್ನು ಪ್ರಧಾನವಾಗಿರಿಸಿರಿಸಿಕೊಂಡು ವಿಷ್ಣುವಿನ ರೂಪದಿಂದ ಸೃಜಿಸಿದ ಈ ಪ್ರಪಂಚವನ್ನು ಸಂರಕ್ಷಿಸುವೆ. ||೩೯||

ಅದೇ ನೀನು ತಮೋಗುಣವನ್ನೇ ಪ್ರಕೃತಿಯನ್ನಾಗಿ ಮಾಡಿಕೊಂಡು ಶಿವನೆನಿಸುವೆ, ಮತ್ತು ಈ ಪ್ರಪಂಚವನ್ನು ಲಯಗೊಳಿಸುವೆ. ನೀನು ಬ್ರಹ್ಮ, ವಿಷ್ಣು ಮತ್ತು ಶಿವರೂಪಗಳಿಂದ ಅರ್ಥಾತ್ ಸಗುಣನಾಗಿ ತೋರುತ್ತಿದ್ದರೂ ದೇವತೆಗಳಾಗಲೀ, ದೇವೋತ್ತಮರಾಗಲೀ ಯಾರೂನಿನ್ನ ನೈಜವಾದ ಸ್ಥಿತಿಯನ್ನು ತಿಳಿಯುದವರಾಗಿದ್ದಾರೆ. ||೪೦||

ಎಂದ ಮೇಲೆ ನಿರ್ಗುಣನಾದ ನಿನ್ನ ತತ್ತ್ವವನ್ನು ತಿಳಿಯಲು ಯಾರಿಂದಲಾದರೂ ಸಾಧ್ಯವೇ ? ನೀನು ಚರಾಚರವಾದ ಈ ಪ್ರಪಂಚಕ್ಕೆಲ್ಲ ಮಾರ್ಗದರ್ಶಕನಾದ ಗುರುವಾಗಿರುವೆ.

ಬ್ರಹ್ಮ :—

ವಿನತೆಯು ಹೀಗೆ ಮನಃಪೂರ್ವಕವಾಗಿ ಸ್ತುತಿಸಿದಳು. ಅನಂತರ ದೇವನ

ವಿನತೋವಾಚ :—

ಕಶ್ಯಪಸ್ಯ ಮುನೇರ್ಭಾರ್ಯಾಂ ವಿನತಾಂ ವಿದ್ಧಿ ಮಾಮಿಹ ।
ತಸ್ಯ ಪುತ್ರಃ ಶಿಖಂಡೀ ಚ ಸೇವಕಸ್ತೇ ಭವಿಷ್ಯತಿ ॥೪೨॥

ಮುನಿನಾ ಪೂರ್ವಮುಕ್ತಂ ಮೇ ಯೋಽಂಡಮೇತದ್ಭಿನತ್ತಿ ಚ।
ಸೋಽಸ್ಯ ಸ್ವಾಮೀ ನ ಸಂದೇಹೋಮೋ ಚಯಿಷ್ಯತಿ ತೇ ಸುತಾನ್ ॥೪೩॥

ಪ್ರತೀಕ್ಷಂತ್ಯಾ ಮಯಾ ದೃಷ್ಟಂ ಪಾದಪದ್ಮಂ ಚಿರಂ ತವ ।
ಜಟಾಯುಶ್ಶ್ಯೇನಸಂಪಾತೀ ನೀತಾ ಕದ್ರೂಸುತೈಸ್ತ್ರಯಃ ॥೪೪॥

---

ಚರಣಕಮಲಗಳಿಗೆ ಸಾಷ್ಟಾಂಗವೆರಗಿ ಭಕ್ತಿಪರವಶಳಾಗಿ ತನ್ನ ಪರಿಚಯವನ್ನು ತಿಳಿಸುತ್ತ ಪುನಃ ಹೀಗೆಂದು ಪ್ರಾರ್ಥಿಸಿದಳು- ॥೪೧॥

ವಿನತೆ :—

ಜಗದೀಶ್ವರ ! ಕಶ್ಯಪ ಮಹರ್ಷಿಯ ಪತ್ನಿಯರ ಪೈಕಿ ನಾನೂ ಒಬ್ಬಳು ಎಂದು ತಿಳಿ. ನನ್ನ ಹೆಸರು ವಿನತೆ ಪಕ್ಷಿಜಾತಿಯೇ ನನ್ನ ಸಂತತಿ. ಈ ಶಿಖಂಡಿಯು (ಮಯೂರವು) ಆ ಮಹರ್ಷಿಯ ಔರಸ ಪುತ್ರ. ಇವನು ಭಗವನ್! ನಿನಗೆ ಸೇವಕನಾಗುವನು. ॥೪೨॥

ಈ ಅಂಶವನ್ನು ಮೊದಲೇ ಮಹರ್ಷಿಯು ನನ್ನೆದುರಿಗೆ ಹೀಗೆಂದು ಹೇಳಿದ್ದನು. ' ವಿನತೆ ! ನೀನು ಪ್ರಸವಿಸಿದ ಈ ಮೊಟ್ಟೆಯನ್ನು ಯಾರು ಒಡೆಯುವರೋ, ಆ ಮಹಾತ್ಮನೇ ನಿನ್ನ ಮಗನಿಗೆ ಸ್ವಾಮಿಯಾ (ಯಜಮಾನನಾ) ಗುವನು. ಇದರಲ್ಲಿ ಸಂದೇಹವೇ ಇಲ್ಲ. ' ಇದೇ ಋಷಿಯಾಡಿದ ಮಾತಿನ ಸಾರಾಂಶ. ॥೪॥

ಬಹಳ ಕಾಲದಿಂದಲೂ ನಾನು ನಿನ್ನ ಬರುವನ್ನೇ ನಿರೀಕ್ಷಿಸುತ್ತ ಕುಳಿತಿದ್ದೆನು. ಇಂದಿಗೆ ನನ್ನ ಪುಣ್ಯಫಲಿಸಿತು; ಆದುದರಿಂದಲೇ ನಿನ್ನ ಚರಣ ಕಮಲಗಳ ಸಂದರ್ಶನವು ನನಗೆ ಲಭಿಸಿತು. ಸ್ವಾಮಿನ್ ! ನನ್ನ ಮಕ್ಕಳ ಪೈಕಿ ಜಟಾಯು,

ತಾನ್ಮೋಚಯ ಜಗನ್ನಾಥ! ಶೀಘ್ರಂ ದರ್ಶಯ ಮೇ ಸುತಾನ್ |

ಗಣೇಶ ಉವಾಚ :--

ಮಾ ಚಿಂತಾಂ ಕುರು ಮಾತಸ್ತ್ವಂ ದರ್ಶಯಿಷ್ಯೇ ಸುತಾಂಸ್ತವ ||೪೫||

ಕ ಉವಾಚ :—

ಏವಮುಕ್ತ್ವಾ ತು ವಿನತಾಂ ಬಹುಹರ್ಷಸಮನ್ವಿತಃ |
ಶಿಖಿನಂ ಚ ತತಃ ಪ್ರಾಹ

ಶ್ಯೇನ ಹಾಗೂ ಸಂಪಾತಿ ಎಂಬ ಮೂರು ಮಕ್ಕಳನ್ನು ಕದ್ರುವಿನ ಮಕ್ಕಳು ಕೊ ಡೊಯ್ದು ಬಂಧನದಲ್ಲಿರಿಸಿದ್ದಾರೆ. ||೪೪||

ಅವರನ್ನು ಬಂಧನದಿಂದ ವಿಮುಕ್ತಿಗೊಳಿಸು. ಜಗನ್ನಾಥ! ಅವರನ್ನು ನಾನು ಬಹಳ ಬೇಗನೆ ನೋಡುವಂತೆ ಮಾಡು.

ಗಣೇಶ :—

ತಾಯೇ! ಹೀಗೆ ಸಂಬೋಧಿಸಿದ್ದಕ್ಕೆ ನೀನು ಆಶ್ಚರ್ಯ ಪಡಬೇಡ. ಕಾರ ವನ್ನು ಹೇಳುವೆನು, ಕೇಳು. ಹಿಂದೆ ನಾನು ವಿನಾಯಕನಾಗಿ ಅವತರಿಸಿದಾಗ ನಿನ್ನ ಹಿರಿಯಕ್ಕ ಅದಿತೀ ದೇವಿಯು ನನಗೆ ಜನ್ಮವನ್ನಿತ್ತಿದ್ದಳು. ಆ ದೃಷ್ಟಿಯಿಂದ ನೀನು ನನಗೆ ತಾಯಿಗೆ ಸಮಾನಳಲ್ಲವೇ? ಇರಲಿ. ನೀನು ಶೋಕಿಸಬೇಕಾಗಿಲ್ಲ. ಮಕ್ಕಳನ್ನು ನಿನಗೆ ತೋರಿಸುತ್ತೇನೆ. ||೪೫||

ಬ್ರಹ್ಮಾ :—

ಎಂದು ವಿನತೆಯನ್ನು ಕುರಿತು ನುಡಿದಾಗ ದೇವನು ಪರಮ ಹರ್ಷಿ ನಾಗಿದ್ದನು. ಹಾಗೆಯೇ ಮಯೂರನನ್ನು ಕುರಿತು ಹೀಗೆ ನುಡಿದನು.

**ಗಣೇಶ ಉವಾಚ :—**

**ವರಂ ಮತ್ತೋ ವೃಣೀಷ್ವ ಹ ||೪೬||**

**ಮಯೂರ ಉವಾಚ:—**

**ಯದಿ ಮೇ ತ್ವಂ ಪ್ರಸನ್ನೋಽಸಿ ? ಯದಿ ದೇಯೋ ವರೋ ಮಮ ? ।**
**ತದಾ ಮನ್ನಾಮ ಪೂರ್ವಂ ತೇ ನಾಮಾಖ್ಯಾತಂ ಭವೇದ್ಭುವಿ ||೪೭||**

**ಏತನ್ಮೇ ದೇಹಿ ಸರ್ವೇಶ । ತವ ಭಕ್ತಿಂ ದೃಢಾಂ ತಥಾ ।**

**ಗಣೇಶ ಉವಾಚ :—**

**ಸಾಧು ಸಾಧು ತ್ವಯಾ ಪ್ರೋಕ್ತಂ ನಿರ್ಲೋಭೇನಾಂತರಾತ್ಮನಾ ||೪೮||**

---

ಗಣೇಶ :—

ನನ್ನಿಂದ ಯಾವ ವರ ಬೇಕಾಗಿದ್ದರೂ ಅದನ್ನು ಬೇಡು. ||೪೬||

ಮಯೂರ :—

ಭಗವನ್ ! ನೀನು ನನ್ನ ವಿಷಯದಲ್ಲಿ ಪ್ರಸನ್ನನಾಗಿದ್ದುದೇ ನಿಜವಾದರೆ, ಮತ್ತು ನನಗೆ ವರವನ್ನು ಕೊಡುವುದೇ ಆದರೆ, ನಿನ್ನ ಹೆಸರಿಗೆ ಮೊದಲು ನನ್ನ ಹೆಸರು ಸೇರಿರಬೇಕು. ಅಂತಹ ನಾಮಧೇಯವನ್ನು ನೀನು ಇರಿಸಿಕೊಳ್ಳಬೇಕು. ಈ ಹೆಸರು ಭೂಮಂಡಲದಲ್ಲೆಲ್ಲ ಪ್ರಖ್ಯಾತವಾಗಬೇಕು. ||೪೭||

ಇದನ್ನೇ ನನಗೆ ವರವನ್ನಾಗಿ ಅನುಗ್ರಹಿಸು. ಮತ್ತು, ಸರ್ವೇಶ್ವರ ! ನಿನ್ನ ವಿಷಯದಲ್ಲಿ ನನಗೆ ದೃಢವಾದ ಭಕ್ತಿಯು ಸರ್ವದಾ ಜಾಗ್ರತವಾಗಿ ಇರಬೇಕು, ಹಾಗೆ ಅನುಗ್ರಹಿಸು.

ಗಣೇಶ :—

ಸಾಧು, ಸಾಧು ಮಯೂರ ! ಬಹಳ ಯೋಗ್ಯವಾದ ವರಗಳನ್ನೇ ನೀನು

ತ್ವನ್ನಾಮಪೂರ್ವಂ ಮನ್ನಾಮ 'ಮಯೂರೇಶ್ವರ' ಇತ್ಯಥ ।
ವಿಖ್ಯಾತಂ ತ್ರಿಷು ಲೋಕೇಷು ಭಕ್ತಿರ್ಮಯಿ ದೃಢಾ ಭವೇತ್ ॥೪೯॥

ಕ ಉವಾಚ :—

ಏವಮಾಕರ್ಣ್ಯ ಸಾ ಸರ್ವಂ ವಿನತಾ ಸ್ವಾಶ್ರಮಂ ಯಯೌ ।
ಶಿಖಂಡಿನಂ ಸಮಾರೂಢೋ ಮಯೂರೇಶೋ ನಿಜಂ ಗೃಹಮ್ ॥೫೦॥

'ಮಯೂರೇಶ, ಮಯೂರೇಶ, ಮಯೂರೇಶೇ' ತಿ ಚಾಸಕೃತ್ ।
ಗೃಣದ್ಭಿರ್ಮುನಿಬಾಲೈಸ್ತ್ರೈರನ್ವಿತಃ ಶೋಭಯನ್ ದಿಶಃ ॥೫೧॥

---

ಯಾಚಿಸಿರುವೆ. ಐಹಿಕ ಭೋಗ-ಭಾಗ್ಯಗಳನ್ನು ನೀನು ಮನಸ್ಸಿನಿಂದ ಸಹ ಬಯಸ ಲಿಲ್ಲವಲ್ಲವೇ ? ಎಂತಹ ದೃಢಮನಸ್ಕನಪ್ಪ, ನೀನು ? ॥೪೮॥

ಅಗತ್ಯವಾಗಿ ಹಾಗೆಯೇ ಆಗಬಹುದು. ಮೊದಲು ನಿನ್ನ ಹೆಸರೇ ಬರುವಂತೆ ನನ್ನ ಹೆಸರನ್ನು 'ಮಯೂರೇಶ್ವರ' ಎಂದು ಇಟ್ಟುಕೊಳ್ಳುವೆನು. ಸರಿಯಷ್ಟೇ ? ಈ ಹೆಸರು ಇಂದಿನಿಂದ ಮೂರು ಲೋಕಗಳಲ್ಲೂ ಪ್ರಸಿದ್ಧಿಗೆ ಬರಲಿ, ನಿನಗೆ ನನ್ನ ವಿಷಯದಲ್ಲಿ ಭಕ್ತಿಯು ದೃಢವಾಗಿ ನೆಲೆಗೊಳ್ಳುವುದು. ॥೪೯॥

ಬ್ರಹ್ಮ :—

ದೇವನಾಡಿದ ಈ ಅನುಗ್ರಹ ವಾಣಿಯನ್ನು ಕೇಳಿದೊಡನೆಯೇ ತಲೆಯ ಮೇಲಿದ್ದ ಪರ್ವತದಂತಹ ಭಾರವನ್ನು ಕೆಳಕ್ಕಿಳಿಸಿದಷ್ಟು ವಿನತೆಯ ಮನಸ್ಸು ಹಗುರಾಯಿತು. 'ಇನ್ನು ನನ್ನ ಕೆಲಸ ಕೈಗೂಡಿತು' ಎಂದು ನಿಶ್ಚಯಿಸಿಕೊಂಡು ಸಂತೋಷದಿಂದ ತನ್ನ ಆಶ್ರಮವನ್ನು ಕುರಿತು ಪ್ರಯಾಣಮಾಡಿದಳು. ಇತ್ತ ಮಯೂರೇಶ ; ಗಣಪತಿಯು ಮಯೂರಪಕ್ಷಿಯನ್ನೇರಿ ತನ್ನ ಗೃಹವನ್ನು ಕುರಿತು ಪ್ರಯಾಣಮಾಡಿದನು. ॥೫೦॥

'ಮಯೂರೇಶ, ಮಯೂರೇಶ, ಮಯೂರೇಶ' ಎಂಬುದಾಗಿ ಮುನಿಬಾಲಕರು ಮೂರು ಮೂರು ಸಲ ಜಯಕಾರವನ್ನು ಮಾಡುತ್ತ ದೇವನನ್ನು ಸುತ್ತುವರೆದು

**ಮಾತರಂ ಪ್ರಣಿಪತ್ಯಾಹ ವೃತ್ತಾಂತಂ ಸರ್ವಮಂಜಸಾ |**
**ವರ್ಣಯಂತೋ ಮಯೂರೇಶಂ ಮುನಿಪುತ್ರಾ ಗೃಹಾನ್ ಯಯುಃ ||೫೨||**

**ಇತ್ಥಂ ಮಯೂರೇಶನಾಮ ಪ್ರಾಪ ಚಾಸೌ ಗಣೇಶ್ವರಃ ||೫೩||**

**ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ 'ಮಯೂರೇಶನಾಮ ಪ್ರಾಪ್ತಿಕಥನಂ' ನಾಮಾಷ್ಟನವತಿತಮೋಽಧ್ಯಾಯಃ ಸಮಾಪ್ತಃ**

ನಡೆದರು. ಗಣಪತಿಯು ಇವರಿಂದೊಡಗೂಡಿ ನಡೆವಾಗ ತನ್ನ ಸ್ವಾಭಾವಿಕ ತೇಜಸ್ಸಿನಿಂದ ದಶ ದಿಕ್ಕುಗಳನ್ನೂ ಬೆಳಗಿದನು. ||೫೧||

ಮಂದಿರವನ್ನು ತಲುಪಿದೊಡನೆಯೇ ತಾಯಿಯಾದ ಪಾರ್ವತೀ ದೇವಿಯ ಪಾದಾರವಿಂದಗಳಿಗೆ ಭಕ್ತಿ-ಶ್ರದ್ಧೆಗಳಿಂದ ಬಾಲಕನು ಪ್ರಣಮಿಸಿದನು. ಇದುವರೆಗೂ ನಡೆದ ವೃತ್ತಾಂತವನ್ನೆಲ್ಲ ಸಾಂಗೋಪಾಂಗವಾಗಿ ವಿವರಿಸಿ ಹೇಳಿದನು. ಅತ್ತ ಮುನಿ ಬಾಲಕರು ತಮ್ಮ ಪ್ರಿಯಮಿತ್ರ ಮಯೂರೇಶನನ್ನು ಬಾಯಿತುಂಬ ವರ್ಣಿಸುತ್ತ ತಮ್ಮ ತಮ್ಮ ಮನೆಗಳಿಗೆ ತೆರಳಿದರು. ||೫೨||

ವತ್ಸ, ವ್ಯಾಸ! ಗಣಪತಿಗೆ 'ಮಯೂರೇಶ' ಎಂಬ ಅನ್ವರ್ಥವಾದ ಹೆಸರು ಉಂಟಾದುದಕ್ಕೆ ಕಾರಣ ಗೊತ್ತಾಯಿತಷ್ಟೇ? ಆದುದರಿಂದಲೇ ನಾನು ಸಹ ಈ ಅವತಾರಿಕ ಚರಿತ್ರೆಯನ್ನು ಹೇಳುವುದಕ್ಕೆ ಮೊದಲು 'ಮಯೂರೇಶನ ಚರಿತ್ರೆಯನ್ನು ಹೇಳುವೆನೆ'ಂದು ಪ್ರತಿಜ್ಞೆ ಮಾಡಿದುದು. ಇಂದಿಗೂ ಮಹಾ ಗಣಪತಿಗೆ ಆ ಹೆಸರೇ ಪ್ರಖ್ಯಾತವಾಗಿದೆ. ||೫೩||

ಇಲ್ಲಿಗೆ ಶ್ರೀ ಗಣೇಶಪುರಾಣ ಉತ್ತರಖಂಡದಲ್ಲಿ 'ಮಯೂರೇಶ ಎಂಬ ಹೆಸರು ಬಂದ ಬಗೆಯ ವರ್ಣನೆ' ಎಂಬಲ್ಲಿಗೆ ತೊಂಭತ್ತೆಂಟನೆಯ ಅಧ್ಯಾಯಾನುವಾದವು ಸಂಪೂರ್ಣವಾದುದು.

ಮುಂದಿನ ಸಂಪುಟದ ಆದಿಮ ಶ್ಲೋಕ :—

ಕ ಉವಾಚ :—

ಅದ್ಭುತಂ ಕೃತವಾನ್ ವರ್ಷೇ ನವಮೇಽಸೌ ಗುಣೇಶ್ವರಃ ।
ಶಿಖಂಡಿನಂ ಸಮಾರುಹ್ಯ ಚತುರಾಯುಧಭೂಷಿತಃ ॥೧॥

# ಪರಿಶಿಷ್ಟ



**ಪುಟ ೩**

**೧. ಮೈಥಿಲ :—**

ವಿದೇಹದ ಅರಸರು ರಾಜ್ಯವಾಳಿದ ಭೂಮಿ. ಇಕ್ಷ್ವಾಕುವಿನ ಮಗನಾದ ನಿಮಿ' ಎಂಬ ರಾಜನನ್ನು ಮಥಿಸಿದ್ದರಿಂದ 'ಮಿಥಿ' ಎಂಬ ಅರಸನು ಜನಿಸಿದನು. ಇವನೇ ಈ ಪ್ರದೇಶವನ್ನು ಕಂಡುಹಿಡಿದು ಅದನ್ನು ರಾಜಧಾನಿಯನ್ನಾಗಿ ಮಾಡಿದವನು. ಅವನು ರಾಜ್ಯವಾಳಿದ ಪ್ರದೇಶಕ್ಕೆಲ್ಲ 'ಮೈಥಿಲ' ಎಂದು ಹೆಸರು. 'ಮಿಥಿಲೆ' ಎಂಬುದೇ ಈ ರಾಜ್ಯಕ್ಕೆ ರಾಜಧಾನಿ. ಈಗಲೂ ಇದು 'ಜನಕಪುರ' ಎಂದು ಪ್ರಸಿದ್ಧವಾಗಿದೆ. ಮಿಥಿಯ ಜನ್ಮವೃತ್ತಾಂತವು ರಾಮಾಯಣ ಉತ್ತರಕಾಂಡ ೫೫ ರಿಂದ ೫೭ ಸರ್ಗಗಳಲ್ಲೂ, ಭಾರತದ ವನಪರ್ವ ೨೧೦ನೆಯ ಅಧ್ಯಾಯದಲ್ಲೂ ವಿಶದೀಕೃತವಾಗಿದೆ.

**೨. ಗಂಡಕೀ :—**

(a) ಇದು ಒಂದು ನದಿಯ ಹೆಸರು. ಇದರ ತೀರ ಪ್ರದೇಶದಲ್ಲಿರುವ ದೇಶವನ್ನು ಅರ್ಥಾತ್ ವಿದೇಹ ರಾಜರು ಆಳಿದ ಭೂಮಿಯನ್ನು ಈ ಹೆಸರಿನಿಂದ ಕರೆಯುತ್ತಾರೆ. ಈ ನದಿಯಲ್ಲಿ ಸಿಕ್ಕುವ ಕಲ್ಲುಗಳನ್ನು 'ಸಾಲಿಗ್ರಾಮ' ಎಂದು ಕರೆಯುತ್ತಾರೆ. ಈ ನದಿ ಹಿಮವತ್ಪರ್ವತದಿಂದ ಹುಟ್ಟಿ ದಕ್ಷಿಣದಿಗಭಿಮುಖವಾಗಿ ಪ್ರವಹಿಸುತ್ತದೆ. ಈ ಪ್ರದೇಶಕ್ಕೆಲ್ಲ ಇದೇ ಹೆಸರು ಉಂಟಾಗಿದೆ. ಈ ಕಥೆಯು ಮತ್ಸ್ಯಪುರಾಣದ ೧೧೩ನೆಯ ಅಧ್ಯಾಯದಲ್ಲಿ ಬರುವುದು.

(b) ಗಂಡಕ ಎಂಬ ಹೆಸರಿನ ದೇಶವೂ ಒಂದಿದೆ. ಇದು ಪಾಂಚಾಲ ದೇಶಕ್ಕೆ ಪೂರ್ವ ದಿಗ್ಭಾಗದಲ್ಲಿದೆ. ಎಂದು ಭಾರತ ಸಭಾಪರ್ವ 30ನೆಯ ಅಧ್ಯಾಯದಲ್ಲಿ ವರ್ಣಿತವಾಗಿದೆ.

ಇವೆರಡರಲ್ಲಿ ಈ ಹೆಸರಿನ ನದೀತೀರದಲ್ಲಿರುವ ವಿದೇಹ ರಾಜ್ಯವನ್ನೇ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆಂಬುದಕ್ಕೆ ' ಮೈಥಿಲೇ ದೇಶೇ ' ಎಂಬ ವಿಶೇಷಣ ದಿಂದ ತಿಳಿಯಬಹುದಾಗಿದೆ.

**ಪುಟ ೧೧ ಶೌನಕ :—**

(a) 'ಭೃಗು ' ವಂಶದಲ್ಲಿ ಜನಿಸಿದವನು. ಇವನು ಮಹರ್ಷಿ, ಹಾಗೂ ಕುಲ ಪತಿ. ಇವನು ನೈಮಿಷಾರಣ್ಯದಲ್ಲಿ ವಾಸವಾಗಿದ್ದನು. 'ಸೂತ' ಪೌರಾಣಿಕನಿಂದ ಪುರಾಣೇತಿಹಾಸಗಳನ್ನು ಕೇಳಲು ಇವನೇ ಉತ್ಸಾಹಪಟ್ಟವನು. ಇವನ ವಂಶ ವರ್ಣನೆ ಇತ್ಯಾದಿ ಕಥಾಭಾಗಗಳು ಭಾರತದ ಆದಿಪರ್ವ ೫ ನೆಯ ಅಧ್ಯಾಯದಲ್ಲಿ ಬಂದಿದೆ.

(b) ಇದೇ ಹೆಸರಿನವನು ಮತ್ತೊಬ್ಬ ಋಷಿ ಇದ್ದನು. ಈತನಿಗೆ ' ಇಂದ್ರೋತ '. ಎಂಬುದು ಮತ್ತೊಂದು ಹೆಸರು. ' ಪೂರು ' ರಾಜನ ಪುತ್ರನಾದ ' ಜನಮೇಜಯ ' ಎಂಬ ಹೆಸರಿನ ರಾಜನೊಬ್ಬನು ಬ್ರಹ್ಮಹತ್ಯಾಪಾತ ಕಕ್ಕೆ ಗುರಿಯಾದಾಗ ಈ ಋಷಿಯು ಅವನಿಂದ ಅಶ್ವಮೇಧಕ್ರತುವನ್ನು ಮಾಡಿಸಿ ಪಾಪವಿಮುಕ್ತನನ್ನಾಗಿ ಮಾಡಿದ ಕಥಾಭಾಗವು ಭಾರತದ ಶಾಂತಿಪರ್ವ ೧೫೪ ರಿಂದ ೧೫೧ ಪೂರ್ತಿ ಬರುವುದು.

**ಪುಟ ೨೩ ಸೂರ್ಯಮಂತ್ರ :—**

ಈ ಮಂತ್ರದ ಸ್ವರೂಪ, ನ್ಯಾಸಕ್ರಮ, ಧ್ಯಾನ ಮೊದಲಾದ ವಿಷಯಗಳು ' ಶಾರದಾ ತಿಲಕ ' ಎಂಬ ತಂತ್ರಶಾಸ್ತ್ರ ಗ್ರಂಥದ ೧೪ ನೆಯ ಪಟಲದಲ್ಲೂ, ' ಪ್ರಪಂಚಸಾರ ' ಎಂಬ ತಂತ್ರಸಾರ ಗ್ರಂಥದ ೧೫ ನೆಯ ಪಟಲದಲ್ಲೂ ವಿಸ್ತಾರ ವಾಗಿ ಉಲ್ಲಿಖಿತವಾಗಿವೆ. ಗ್ರಂಥಬಾಹುಲ್ಯಭಯದಿಂದ ಅವನ್ನು ಇಲ್ಲಿ ವಿವರಿಸಿಲ್ಲ. ಅಪೇಕ್ಷೆಯುಳ್ಳವರು ಮೇಲ್ಕಂಡ ಗ್ರಂಥಗಳ ಆಯಾ ಭಾಗಗಳಿಂದ ವಿಷಯ ವನ್ನು ವಿಶದವಾಗಿ ತಿಳಿಯಬಹುದಾಗಿದೆ. (ಶಾರದಾತಿಲಕ, ಚೌಖಂಬಾ ಗ್ರಂಥ

ಮಾಲಾ ಪುಟ ೩೪೧.೩೪೨, ತಾರನಾಥ ವಿದ್ಯಾರತ್ನ ಸಂಗ್ರಹೀತ 'ಪ್ರಪಂಚಸಾರ' ಗ್ರಂಥದ ೧೧೧.೧೧೨ ಪುಟ)

**ಪುಟ ೩೭ ಉಪದಾ :—**

'ಉಪಾಯನಮುಪಗ್ರಾಹ್ಯಮುಪಹಾರಸ್ತಥೋಪದಾ' (ಕ್ಷತ್ರಿಯವರ್ಗ ೨೮ ನೆಯ ಶ್ಲೋಕ.)ಉಡುಗರೆ. ಇದರಲ್ಲಿ ಅನೇಕ ಬಗೆ, ರಾಜಾ, ಗುರು-ಹಿರಿಯರು ಇವರನ್ನು ಸಂದರ್ಶಿಸಲು ಹೋಗುವಾಗ ಅವರಿಗೆ ಒಪ್ಪಿಸತಕ್ಕ ವಸ್ತುಗಳಿಗೆ **ಉಪಾಯನ, ಉಪಗ್ರಾಹ್ಯ, ಉಪಹಾರ, ಉಪದಾ** ಎಂದು ಹೆಸರು. **ಇದಕ್ಕೆ 'ಭೇಟ್-ನಜರಾಣಾ'** ಎಂಬುದಾಗಿ ಮಹಾರಾಷ್ಟ್ರ ಭಾಷೆಯಲ್ಲಿ ಕರೆಯುತ್ತಾರೆ.

**ಪುಟ ೪೨. ಶುಕ್ರೋಪದಿಷ್ಟ ಸೂರ್ಯಮಂತ್ರ:—**

ಇದು ಮೂರಕ್ಷರದ ಮಂತ್ರ. ಇದನ್ನು ತಿಳಿಯಲು ಅಪೇಕ್ಷಿಪಡುವರು ಶಾರದಾತಿಲಕ ಗ್ರಂಥದ ೧೪ ನೆಯ ಪಟಲ ೫೯ ರಿಂದ ಆರಂಭವಾಗುವ ಶ್ಲೋಕಗಳ ಮೂಲಕ ತಿಳಿಯಬಹುದಾಗಿದೆ. ಪುಟಸಂಖ್ಯಾ ೩೪೬.

**ಪುಟ ೫೩- ಸ್ವಾತ್ಮಸಾಧನ :...**

ತಾನಲ್ಲದ ದೇಹ, ಇಂದ್ರಿಯ, ಮನಸ್ಸು, ಪ್ರಾಣ, ಪತ್ನೀ, ಪುತ್ರ, ಗೃಹಾ-ರಾಮ ಕ್ಷೇತ್ರ ಧನ ಕನಕ ವಾಹನಾದಿ ವಸ್ತುಗಳು, ಬಂಧುಗಳು, ಇಷ್ಟ-ಮಿತ್ರರು ಸೇವಕ ವರ್ಗದವರು ಇವೇ ಮೊದಲಾದ ವಸ್ತುಗಳಲ್ಲಿ 'ತಾನು ಮತ್ತು ತನ್ನದು' ಎಂಬ ಅಹಂಕಾರ-ಮಮಕಾರಗಳನ್ನು ಬಲಪಡಿಸಿಕೊಂಡಿದ್ದರಿಂದ ಪ್ರಾಣಿಸಾಮಾನ್ಯವು ತನಗೆ ಬೇಕೆನಿಸಿದುದನ್ನು ಪಡೆಯಲಾಗದೆಯೂ, ಬೇಡವಾದುದನ್ನು ಅತ್ಯನಿವಾರ್ಯವಾಗಿ ಅನುಭವಿಸಬೇಕಾಗಿಯೂ ಇರುವಂತಹ ಪ್ರಸಂಗಗಳು ಪದೇ ಪದೇ ಬರುತ್ತಲೇ ಇರುತ್ತವೆ- ಇದನ್ನೇ ಪ್ರಾರಬ್ಧಭೋಗ ಎಂದು ಕರೆಯುತ್ತಾರೆ. ಇದರಲ್ಲಿ ತನ್ಮಯತೆಯನ್ನು ತೋರಿಸಿದಷ್ಟೂ ಪ್ರಾಣಿಯು ಹೆಚ್ಚು ಹೆಚ್ಚು ಬಂಧನಕ್ಕೆ ಸಿಕ್ಕುವುದು. ಬಂಧನವನ್ನೇ ಬಲಪಡಿಸಿಕೊಂಡರೆ 'ಕುರ್ವತೇ ಕರ್ಮ ಭೋಗಾಯ ಕರ್ಮಕರ್ತುಂ ಚ ಭುಂಜತೇ | ನದ್ಯಾಂ ಕೀಟಾ ಇವಾವರ್ತಾದಾವರ್ತಾಂತರ-ಮಾಶು ತೇ' ಎಂದರೆ ಹಸಿವನ್ನು ತಣಿಸುವುದಕ್ಕಾಗಿ ದುಡಿಯುವುದು, ದುಡಿಯಲು

ತ್ರಾಣ ಬರಲಿಕ್ಕಾಗಿ ಭುಜಿಸುವುದು ಎಂತಾದರೆ ಪ್ರವಾಹದ ಸುಳಿಗೆ ಸಿಲುಕಿದ ಹುಳು ಕಷ್ಟಪಟ್ಟು ಒಂದು ಸುಳಿಯಿಂದ ತಪ್ಪಿಸಿಕೊಂಡರೂ ಮತ್ತೊಂದು ಸುಳಿಗೆ ಸಿಕ್ಕಿ ನರಳುವಂತೆ ಪ್ರಾಣಿಯ ಪರಿಸ್ಥಿತಿಯು ಆಗುವುದರಲ್ಲಿ ಸಂದೇಹವಿಲ್ಲ. ಹೀಗಾದರೆ ಅನುಭವಿಸಲಿಕ್ಕಾಗಿ ಹುಟ್ಟಲೇ ಬೇಕಾಗುತ್ತದೆ. ಅಂತೆಯೇ ಸಾಯಲೂ ಬೇಕಾಗುತ್ತದೆ. ಆಗ ಲಭಿಸಿದ ದೇಹಕ್ಕೆ ಸ್ವಾಭಾವಿಕವಾಗಿರುವ ಕ್ಷುತ್ಪಿಪಾಸಾದಿಗಳನ್ನೂ ವಿಶೇಷ ಸಂದರ್ಭಗಳಲ್ಲಿ ಬರುವ ರೋಗಾದಿಬಾಧೆಗಳನ್ನೂ ಅನುಭವಿಸಬೇಕಾದುದು ಅನಿವಾರ್ಯವಾಗುವುದು. ಶರೀರದ ಅವಸಾನ ಕಾಲದಲ್ಲಂತೂ ಅನುಭವಿಸಬೇಕಾಗಬಹುದಾದ ಯಾತನೆಯನ್ನು ವರ್ಣಿಸುವುದಕ್ಕೆ ಸಾಧ್ಯವಾಗುವುದಿಲ್ಲ ಎಂಬುದನ್ನು ಶಾಸ್ತ್ರಗಳು ಸಾರಿ ಸಾರಿ ಹೇಳುತ್ತವೆ. ಮತ್ತು ಲೋಕಾನುಭವದಿಂದಲೂ ಊಹಿಸಬಹುದಾಗಿದೆ. ಬಾಹ್ಯ ವಸ್ತುಗಳಾದ ದೇಹೇಂದ್ರಿಯಾದಿಗಳು ದೇಹಾದ್ಯಭಿಮಾನಿಗೆ ಹೊಸದಾಗಿ ಬಂದಿರುವುವಾದುದರಿಂದ ಒಂದಿಲ್ಲೊಂದು ದಿವಸ ನಾವು ಅವನ್ನು ಬಿಡಲೇ ಬೇಕಾಗುವುದು. ಒಂದು ವೇಳೆ ವ್ಯಾಮೋಹಾತಿಶಯದಿಂದ ನಾವು ಅವನ್ನು ಬಿಡಲಾರೆವೆಂದು ಹಟತೊಟ್ಟರೂ ಅವಾದರೂ ನಮ್ಮನ್ನಗಲಿ ಹೋಗಿಯೇ ಬಿಡುವುವು. ಆದುದರಿಂದ 'ನಾನು, ನನ್ನದು' ಎಂಬ ಅಭಿಮಾನದ ಮೂಲಕವಾಗಿ ಪ್ರಾಣಿಗೆ ಬಂದೊದಗಿರುವ ಜನನ–ಮರಣಗಳ ಶೃಂಖಲೆಯನ್ನು ತಪ್ಪಿಸಿಕೊಳ್ಳಲು 'ತಾನು ಯಾರು? ದೇಹೇಂದ್ರಿಯಾದಿಗಳೇ, ಅಥವಾ ಅದಕ್ಕಿಂತಲೂ ಬೇರೆಯಾದವನೇ?' ಎಂಬುದನ್ನು ಶಾಸ್ತ್ರಾಧ್ಯಯನ ಗುರೂಪದೇಶಗಳಿಂದ ತಿಳಿದು, ಇದುವರೆಗೂ 'ನಾನು' ಎಂದು ತಿಳಿದಿದ್ದ ದೇಹೇಂದ್ರಿಗಳಲ್ಲಿನ ನಾಮರೂಪಗಳನ್ನು 'ನಾನಲ್ಲ' ಎಂದೂ, ಅವಶಿಷ್ಟಗಳಾದ 'ಅಸ್ತಿ, ಭಾತಿ, ಪ್ರಿಯ'ಗಳೇ ಅರ್ಥಾತ್ ಸಚ್ಚಿದಾನಂದನೇ 'ನಾನು' ಎಂದೂ ದೃಢವಾಗಿ ತಿಳಿದು ಪದೇ ಪದೇ ಅದನ್ನು ಅನುಸಂಧಾನಮಾಡುವುದೇ 'ಆತ್ಮಾನುಸಂಧಾನ' ಹೊಸ ವರ್ಷ ಆರಂಭವಾದರೂ ಅಭ್ಯಾಸವಿಶೇಷದಿಂದ ಕೆಲಕಾಲ ಹಳೆಯ ವರ್ಷವೇ ಸ್ಮೃತಿಪಥಕ್ಕೆ ಬರುತ್ತಲಿರುವುದು. ಸ್ವಾಭಾವಿಕವಾಗಿದೆ. ಹೀಗೆ ಬರುತ್ತಿರುವ ನೆನಪನ್ನು ಅಳಿಸಿ ಹೊಸ ವರ್ಷದ ಹೆಸರನ್ನೇ ಉಚ್ಚರಿಸಲು ಮಾನವನು ಪ್ರಯತ್ನಪಡುವಂತೆ ಕೋಟ್ಯವಧಿ ಜನ್ಮಗಳಿಂದಲೂ ಬಾಹ್ಯವಸ್ತುಗಳಲ್ಲಿ ಬೇರೂರಿರುವ 'ನಾನು' ಎಂಬ ಗ್ರಹಿಕೆಯನ್ನು ತನ್ನ ಸ್ವರೂಪ ಅರ್ಥಾತ್ ಸಚ್ಚಿದಾನಂದದಲ್ಲಿ ಸ್ಥಿರಗೊಳಿಸಿದರೆ

ಆಗ ಆತ್ಮಸಾಕ್ಷಾತ್ಕಾರವಾಗುವುದು. ಆ ಕ್ಷಣದಲ್ಲಿಯೇ ಸಾಧಕನ ಸಾಂಸಾರಿಕ ಶೃಂಖಲೆಯು ಸಡಲಿಹೋಗುವುದು. ಇಂಥವನು 'ಮುಕ್ತ' ಎನಿಸಿಕೊಳ್ಳುವನು. ಇದನ್ನೇ 'ಆತ್ಮಸಾಧನ' ಎಂದು ಇಲ್ಲಿ ಹೇಳಿದ್ದಾರೆ. 'ಆತ್ಮಸಾಧನ' ಎಂದರೆ ಇಲ್ಲದ ವಸ್ತುವನ್ನು ಸಾಧಿಸುವುದು ಎಂದು ಅರ್ಥವಲ್ಲ. ಕ್ಷೀರದಲ್ಲಿ ಸ್ವತಃ ಸಿದ್ಧವಾಗಿದ್ದರೂ ಅದರಲ್ಲಿ ಅಡಗಿರುವ ಬೆಣ್ಣೆಯನ್ನು ಪ್ರತ್ಯೇಕಿಸಲಿಕ್ಕೆ ಹಾಲನ್ನು ಘನಿಭೂತವಾದ ಮೊಸರನ್ನಾಗಿಯೂ, ಅದನ್ನು ಕಡೆದು ಮಜ್ಜಿಗೆಯನ್ನಾಗಿಯೂ ವಿರೂಪಗೊಳಿಸಿದರೆ, ಇದ್ದ ನವನೀತವೇ ಹೇಗೆ ಅಭಿವ್ಯಕ್ತವಾಗುವುದೋ, ಆದರಂತೆ ಅಣು, ರೇಣು, ತೃಣ, ಕಾಷ್ಠಗಳಲ್ಲೂ ಹಾಸು-ಹೊಕ್ಕಾಗಿರುವ ಆತ್ಮವಸ್ತುವನ್ನು ಶ್ರವಣ, ಮನನ, ನಿದಿಧ್ಯಾಸನಾದಿ ಸಾಧನಗಳಿಂದ ಸಾಧಿಸಿಕೊಂಡರೆ ಆತ್ಮಾನಂದವು ತನ್ನ ಅನುಭವಕ್ಕೆ ಬರುವುದು. ಇದೇ 'ಆತ್ಮಸಾಧನ' ಎಂಬ ಪದಕ್ಕೆ ಅರ್ಥ.

**ಪುಟ ೫೮. (1) ಶುಂಭ-ನಿಶುಂಭರು :—**

ಈ ಹೆಸರಿನ ಇಬ್ಬರು ರಾಕ್ಷಸ ಸಹೋದರರು. ಮಹಾ ತಪಸ್ವಿಗಳು. ತಮ್ಮ ತಪಃಪ್ರಭಾವದಿಂದ ಅಯೋನಿಜೆಯಾದ ಕನ್ಯೆಯೊಬ್ಬಳನ್ನುಳಿದು ಮತ್ತಾರಿಂದಲೂ ತಮಗೆ ಮರಣ ಬಾರದಿರುವಂತೆ ವರವನ್ನು ಪಡೆದವರು. ಲೋಕಕಂಟಕರಾದ ಇವರಿಬ್ಬರನ್ನೂ ನಿಗ್ರಹಿಸುವಂತೆ ದೇವತೆಗಳು ಆದಿಶಕ್ತಿಯನ್ನು ಪ್ರಾರ್ಥಿಸಲು, ದೇವಿಯು ತನ್ನ ದೇಹದಿಂದ 'ಕೌಶಿಕಿ' ಎಂಬ ಹೆಸರಿನ ಸುಂದರ ಬಾಲೆಯನ್ನು ಸೃಜಿಸಿದಳು. ಕೌಶಿಕಿಯು ಒಮ್ಮೆ ತನ್ನ ಸಖಿಯರೊಂದಿಗೆ ಹಿಮವತ್ಪರ್ವತದ ತಪ್ಪಲಿನಲ್ಲಿ ವಿಹರಿಸುತ್ತಿರುವಾಗ ಶುಂಭ ಸಹೋದರರ ಅನುಚರರು; ಚಂಡ-ಮುಂಡರೆಂಬ ದೈತ್ಯವೀರರು ಈಕೆಯ ರೂಪರಾಶಿಗೆ ಬೆರಗಾಗಿ ಈ ಸುದ್ದಿಯನ್ನು ತಮ್ಮ ಪ್ರಭು ; ಶುಂಭನಲ್ಲಿ ನಿವೇದಿಸಿದರು. ಶುಂಭನು 'ಸುಗ್ರೀವ' ಎಂಬ ದೈತ್ಯನನ್ನು ಅವಳ ಬಳಿಗೆ ಪ್ರೇಮಸಂಧಾನಕ್ಕಾಗಿ ನಿಯೋಜಿಸಿ 'ಅಣ್ಣ-ತಮ್ಮಂದಿರಾದ ತಮ್ಮಿಬ್ಬರಲ್ಲಿ ಯಾರೊಬ್ಬರನ್ನಾದರೂ ವರಿಸಬೇಕೆ"ಂದು ಹೇಳಿ ಕಳಿಸಿದನು. 'ನನ್ನನ್ನು ಯುದ್ಧದಲ್ಲಿ ಯಾರು ಪರಾಜಯಗೊಳಿಸುವರೋ, ಅವರನ್ನು ನಾನು ಮದುವೆಯಾಗುವೆನು." ಎಂದು ಕೌಶಿಕಿಯು ದೂತನ ಮೂಲಕ ಮಾರುತ್ತರವನ್ನು ಹೇಳಿಕಳಿಸಿದಳು. ಉನ್ಮತ್ತನಾದ ಶುಂಭನು ಅವಳನ್ನು ಹಿಡಿದೆಳೆದು ತರುವಂತೆ ತನ್ನ ಸೈನಿಕರನ್ನು ಕಳಿಸಿ ವಿಫಲ

ನಾದನು. ಆಗ ಕೋಪಗೊಂಡ, ಪೂರ್ವಾಪರ ವಿವೇಚನೆ ಇಲ್ಲದೇ ಅಣ್ಣ-ತಮ್ಮಂದಿರಿಬ್ಬರೂ ತಮ್ಮ ಸಮಸ್ತ ಸೇನೆಯೊಡನೆ ಯುದ್ಧಕ್ಕೆ ಹೋಗಿ ದೇವಿಯನ್ನು ಎದುರಿಸಿ, ಕೊನೆಗೆ ಧಾರಾತೀರ್ಥದಲ್ಲಿ ದೇಹಗಳನ್ನು ವಿಸರ್ಜಿಸಿದರು. ಮೊದಲು ಸತ್ತವನು ನಿಶುಂಭ. ಅನಂತರ ಅವನ ಅಗ್ರಜ. ಈ ಕಥೆಯು ದೇವೀಭಾಗವತ ೫,೨೧-೩೧ರಲ್ಲೂ ಮಾರ್ಕಂಡೇಯ ಪುರಾಣ ೮೦-೮೫ರಲ್ಲೂ ಮತ್ತು ಕಾಲಿಕಾ ಪುರಾಣ ಉತ್ತರ ಖಂಡ ೬೦ ನೆಯ ಅಧ್ಯಾಯದಲ್ಲೂ ಬರುತ್ತದೆ.

(೨) **ವೃತ್ರ :—**

ಈ ಹೆಸರಿನ ದೈತ್ಯರು ಇಬ್ಬರು. ಇವರ ಪೈಕಿ

(i) ಕಶ್ಯಪ ಪತ್ನಿಯರಲ್ಲಿ 'ದನು' ಎಂಬುವಳಲ್ಲಿ ಜನಿಸಿದ ರಾಕ್ಷಸ ವೀರನು. ಇವನ ಚರಿತ್ರೆಯು ಮಹಾಭಾರತದ ಆದಿಪರ್ವ; ೬೬ ನೆಯ ಅಧ್ಯಾಯದಲ್ಲಿ ಬರುತ್ತದೆ.

(ii) ಮಹೇಂದ್ರನನ್ನು ಕೊಲ್ಲುವುದಕ್ಕಾಗಿ 'ತ್ವಷ್ಟೃ' ಎಂಬ ಪ್ರಜಾಪತಿಯು ತಪೋಽನುಷ್ಠಾನದ ಮೂಲಕ ಪಡೆದ ಮಗನು. ಈ ಅಸುರನು ಅನೇಕ ವೇಳೆ ಇವನು ಮಹೇಂದ್ರನನ್ನು ಸದೆಬಡಿಯಲು ಹೋರಾಡಿ ಕೊನೆಗೆ ಅವನಿಂದಲೇ ತಾನು ಹತನಾದನು. ಈ ಕಥೆಯು ಭಾರತ ಉದ್ಯೋಗಪರ್ವ ೯; ವನಪರ್ವ, ೯೯; ಶಾಂತಿಪರ್ವ ೨೮೭; ಅನುಶಾಸನಪರ್ವ ೧೧ ನೆಯ ಅಧ್ಯಾಯಗಳಲ್ಲೂ, ಭಾಗವತ ೬.೯ ; ಮಾರ್ಕಂಡೇಯ ಪುರಾಣ ೫ ನೆಯ ಅಧ್ಯಾಯಗಳಲ್ಲೂ ಬಂದಿದೆ. ವೃತ್ರನಿಗೆ ಹಿಂದಿನ ಜನ್ಮದ ಹೆಸರು 'ಚಿತ್ರಕೇತು' ಎಂದಿದ್ದಿತು.

(3) **ಪ್ರಚಂಡ, ಕಾಲರು :—**

ಇವರು ಶುಂಭನ ಸೇನಾನಾಯಕರು.

ಪುಟ ೫೭.

ಕದಂಬಾಸುರ, ಕೋಲಾಸುರರ ಚರಿತ್ರೆಯು ಅನ್ಯತ್ರ ಉಪಲಬ್ಧವಾಗುವುದಿಲ್ಲ.

ಪುಟ ೭೫. **ನಾಸತ್ಯೌ :—**

ಅಶ್ವಿನೀದೇವತೆಗಳ ನಾಮಾಂತರ. ಇವರು ದೇವವೈದ್ಯರು. ಇವರ ಉತ್ಪತ್ತ್ಯಾದಿ ಕಥೆಯು ಇಲ್ಲಿಯೇ ಬಂದಿದೆ. ಇವರು ಹಿಂದೊಮ್ಮೆ ಶರ್ಯಾತಿರಾಜನ ಪುತ್ರಿ ; ಚ್ಯವನ ಮಹರ್ಷಿಯ ಪತ್ನಿ ; ಸುಕನ್ಯೆಯ ರೂಪಕ್ಕೆ ಮರುಳಾಗಿ ಅವಳನ್ನು ಕಾಮಿಸಿದುದು, ಮತ್ತು ಅವಳ ಪಾತಿವ್ರತ್ಯಪ್ರಭಾವಕ್ಕೆ ಮೆಚ್ಚಿ ಅವಳ ಪತಿ ; ಚ್ಯವನರಿಗೆ ನವತಾರುಣ್ಯವನ್ನು ಅನುಗ್ರಹಿಸಿ ಅದಕ್ಕೆ ಪ್ರತಿಯಾಗಿ ಯಾಗಗಳಲ್ಲಿ ಹವಿರ್ಭಾಗವನ್ನು ಪಡೆಯುವಂತಹ ಅರ್ಹತೆಯನ್ನು ಚ್ಯವನರಿಂದ ಪಡೆದುದು. ಅಲ್ಲದೇ ' ಅಪೋದ ' ಎಂಬ ಮುನಿಯ ಶಿಷ್ಯನಾದ ಉಪಮನ್ಯು ಹಸಿವನ್ನು ತಾಳಲಾರದೆ. ಅರ್ಕಪತ್ರಗಳನ್ನು ತಿಂದು ತೀಕ್ಷ್ಣತಿಶಯದಿಂದ ಕಣ್ಣುಗಳನ್ನು ಕಳೆದುಕೊಂಡಾಗ ಅವನಿಗೆ ನೇತ್ರವನ್ನನುಗ್ರಹಿಸಿದುದು. ಪಾಂಡುವಿನ ದ್ವಿತೀಯ ಪತ್ನಿಯಾದ ಮಾದ್ರೀದೇವಿಗೆ ನಕುಲ-ಸಹದೇವರೆಂಬ ಪುತ್ರರನ್ನು ಇವರೇ ಅನುಗ್ರಹಿಸಿದವರು. ದೇವತೆಗಳ ದೃಷ್ಟಿಯಲ್ಲಿ ಇವರು ಶೂದ್ರಜಾತಿಗೆ ಸೇರಿದವರು. ಇದು ಭಾರತ ಶಾಂತಿಪರ್ವದ ೨೦೭ ನೆಯ ಅಧ್ಯಾಯದಲ್ಲಿ ವಿಸ್ತರಿಸಲ್ಪಟ್ಟಿದೆ.

ಪುಟ ೧೦೧.

೧. ದೈತ್ಯರು:—

ಕಶ್ಯಪ ಬ್ರಹ್ಮನ ಹೆಂಡಿತಿಯರಲ್ಲಿ ' ದಿತಿ ' ಎಂಬುವಳ ಗರ್ಭದಲ್ಲಿ ಜನಿಸಿದವರು. ಇವರ ಹೆಸರು, ವಂಶದ ವರ್ಣನೆ ಮೊದಲಾದ ಕಥಾಭಾಗವು ಆದಿಪರ್ವ ೬೬, ಶಾಂತಿಪರ್ವ ೨೬೪, ಭಾಗವತ ೬,೧೮., ವಿಷ್ಣುಧರ್ಮೋತ್ತರ ಪುರಾಣ ೧,೨೧ ರಲ್ಲಿ ಬರುವುದು. ಇವರು ಅಸುರರಲ್ಲಿ ರಾಜವಂಶಗವರೆನಿಸಿದವರು. ಅರ್ಥಾತ್ ಕ್ಷತ್ರಿಯರು.

೨. ರಾಕ್ಷಸರು :—

ಇವರ ಸ್ವರೂಪವನ್ನು ಹಿಂದಿನ ಸಂಪುಟಗಳಲ್ಲಿ ವರ್ಣಿಸಿದೆ.

**ಪುಟ ೧೧೩- ಚಿದಾಭಾಸ :....**

**ಜೀವ.** ಇವನ ಸ್ವರೂಪವನ್ನು ಶ್ರೀ ವಿದ್ಯಾರಣ್ಯ ಮಹಾಸ್ವಾಮಿಗಳು ತಮ್ಮ ಪಂಚದಶೀ ಗ್ರಂಥದ ಕೂಟಸ್ಥದೀಪ ಪ್ರಕರಣದ ೫೨ ನೆಯ ಶ್ಲೋಕದಲ್ಲಿ ಹೀಗೆಂದು ವರ್ಣಿಸಿದ್ದಾರೆ. ' ಕರ್ತೃತ್ವಾದೀನ್ ಬುದ್ಧಿಧರ್ಮಾನ್ ಸ್ಫೂರ್ತ್ಯಾಖ್ಯಾಂ ಚಾತ್ಮರೂಪತಾಮ್ ॥ ದಧದ್ವಿಭಾತಿ ಪುರತಃ ಆಭಾಸಃ.......' ಎಂದರೆ ಬುದ್ಧಿಯ ಧರ್ಮಗಳಾದ ಕರ್ತೃತ್ವ ಭೋಕ್ತೃತ್ವಾದಿಗಳಿಂದಲೂ, ತನ್ನದಾದ ಸ್ಫೂರ್ತಿಯಿಂದಲೂ ಕೂಡಿ ತೋರಿಬರುವವನೇ ಆಭಾಸನು.

**ಪುಟ ೧೨೧. ಧೂಮಕೇತು :....**

ಇದು ಮಹಾಗಣಪತಿಯ ನಾಮಾಂತರ. ಇದರ ವಿವರಣೆಯನ್ನು ಹಿಂದಿನ ಸಂಪುಟಗಳಿಂದ ತಿಳಿಯಬಹುದು.

**ಪುಟ ೧೨೫- ತ್ರಿಸಂಧ್ಯಾಕ್ಷೇತ್ರ :—**

ಇದರ ವಿವರಣೆಯನ್ನು ಹಿಂದಿನ ಸಂಪುಟಗಳಲ್ಲಿ ಕೊಟ್ಟಿದೆ.

**ಪುಟ ೧೨೭ ಧ್ವಾಂತಃ :—**

ಕತ್ತಲೆ. 'ಧ್ವಾಂತೇ ಗಾಢೇಽಂಧತಮಸಂ... ...ಪಾತಾಲವರ್ಗ, ಶ್ಲೋಕ ೩.

**ಪುಟ ೧೨೯. ಜಗದೀಶಿತುಃ :—**

ಈ ಶ್ಲೋಕಾಭಿಪ್ರಾಯವನ್ನು ವಿಮರ್ಶಿಸಿದರೆ ಪ್ರತಿಯೊಬ್ಬರಿಗೂ ವಿಡಂಬನೆಯಂತೆ ತೋರುವ ಹಾಗಿದೆ. ಲೋಕಕ್ಕೆಲ್ಲ ಪ್ರಭುವೆನಿಸಿದ ಶೂಲಿಯು ' ಜಗದ್ರಕ್ಷಕನನ್ನು ನಾನು ಧ್ಯಾನಿಸುತ್ತಿರುವೆನು ' ಎಂದು ನುಡಿದರೆ, ಅವನಿಗಿಂತಲೂ ಹೆಚ್ಚಿನವರು ಯಾರಿರುವರು ? ಎಂಬ ಪ್ರಶ್ನೆಯು ಸಹಜವಾಗಿ ಉದ್ಭವವಾಗುವುದು.

ಶಿವ, ವಿಷ್ಣ್ವಾದಿ ಮೂರ್ತಿಗಳು ಸಗುಣಗಳೆಂಬುದನ್ನು ನಾವು ಮರೆಯಬಾರದು. ನಿತ್ಯಂ ಬುದ್ಧ-ಮುಕ್ತಸ್ವರೂಪವೂ, ಗುಣರಹಿತವೂ ಆದ ಆತ ಜ್ಯೋತಿಯೇ ಸಾಕಾರವಾಗಿ ಅಪ್ರಾಕೃತ ನಾಮ-ರೂಪಗಳಿಂದ ತೋರಿಬರು

ತ್ತಿದ್ದರೂ, ತೋರುವ ಸಾಕಾರವು ಶುದ್ಧ ಚೈತನ್ಯಕ್ಕಿಂತಲೂ ಅಪರಿಪೂರ್ಣವಾದುದ ರಿಂದ ಅಸ್ಥಿರವೆನಿಸುವುದು. ಆದುದರಿಂದ ತನ್ನ ಸ್ವರೂಪವಾದ ಸಚ್ಚಿದ್ಘನವೂ, ನಿತ್ಯ ನಿರತಿಶಯವಾದುದೂ ಆದ ಆನಂದವೇ 'ನಾನು' ಎಂದೂ ಅದನ್ನೇ ತಾನು 'ಧ್ಯಾನಿ ಸುವೆನು' ಎಂದೂ ಸಾಕಾರರೂಪವು ಹೇಳಿದುದಕ್ಕೆ ತಾತ್ಪರ್ಯ. ಇದು ಅನ್ಯರ ನಾಮವೇನೂ ಅಲ್ಲ. ' ಸ ತಪೋಽತಪ್ಯತ, ಸ ತಪಸ್ತಪ್ತ್ವಾ ' ಏವಮಾದಿ ಶ್ರುತಿ ವಾಕ್ಯಗಳನ್ನು ಅನುಸಂಧಿಸಿರಿ.

**ಪುಟ ೧೩೧. ಘಾಸ :—**

ಮೃದುವಾದ ಹಸಿರು ಹುಲ್ಲು.'........ಬಾಲತೃಣಂ, ಘಾಸೋ ಯವಸಂ ತೃಣಮರ್ಜುನಮ್ ' (ವನೌಷಧಿ ವರ್ಗ ; ೧೬೭ ನೆಯ ಶ್ಲೋಕ.)

**ಪುಟ ೧೩೩. ಅಷ್ಟಮೂರ್ತಿ :—**

' ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವ ಚ ||
ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ' ||

ಎಂದು ಶ್ರೀಮದ್ಭಗವದ್ಗೀತೆಯ ಏಳನೆಯ ಅಧ್ಯಾಯ ನಾಲ್ಕನೆಯ ಶ್ಲೋಕದಲ್ಲಿ ಹೇಳಿರುವಂತೆ ಪಂಚಭೂತಗಳು, ಮನಸ್ಸು ಬುದ್ಧಿ ಹಾಗೂ ಅಹಂಕಾರ ಈ ರೂಪ ಗಳಿಂದ ದೇವನು ತೋರಿಬರುವನಾದುದರಿಂದ ಅಷ್ಟವಿಧವಾದ ಸ್ವರೂಪ ಉಳ್ಳ ವನು ಎಂದರ್ಥ. ಅಥವಾ

೧. ಭವ, ೨. ಶರ್ವ ; ೩. ಈಶಾನ ; ೪. ಪಶುಪತಿ ; ೫. ಭೀಮ ; ೬. ಉಗ್ರ ; ೭. ಮಹಾದೇವ ಮತ್ತು ೮. ರುದ್ರ ಈ ಎಂಟು ಹೆಸರನ್ನು ಪರ ಮೇಶ್ವರ; ಮಹಾಗಣಪತಿಗೆ ಪ್ರಯೋಗಿಸಿದ್ದಾರೆ-

ಪುಟ ೧೫೩

ಆಧಿಕಾರಿಕ ವೃತ್ತದಲ್ಲಿ ನಿಯಮಿತರಾಗಿರುವ ದೇವತೆಗಳು, ದೇವೋತ್ತಮರು ಅಕಾಮಹತ, ಶ್ರೋತ್ರಿಯ ಬ್ರಹ್ಮನಿಷ್ಠರಾದ ಬ್ರಾಹ್ಮಣೋತ್ತಮರಿಗಿಂತಲೂ ಅಧಿ ಕರಲ್ಲ ಎಂಬ ಅಂಶವನ್ನು ತೈತ್ತಿರೀಯೋಪನಿಷತ್ತಿನ ಆನಂದವಲ್ಲಿಯ ಎಂಟನೆಯ

ಅನುವಾಕದಲ್ಲಿ ನಿರೂಪಿಸಿದ್ದಾರೆ. ಇದನ್ನು ಮೇಲ್ಕಂಡ ಅನುವಾಕಗತಮಂತ್ರಗಳಿಂದ ತಿಳಿಯಬಹುದು. ‘ ಉಚ್ಚೈರ್ಗತಿರ್ಜಗತಿ ಸಿದ್ಧ್ಯತಿ ಧರ್ಮತಶ್ಚೇತ್ತಸ್ಯ ಪ್ರಮಾ ಚ ವಚನೈಃ ಕೃತಕೇತರೈಶ್ಚೇತ್ ॥ ತೇಷಾಂ ಪ್ರಕಾಶನದಶಾ ಚ ಮಹೀಸುರೈಶ್ಚೇ-ತ್ತಾನಂತರೇಣ ನಿಪತೇತ್ಕ್ವನು ಮತ್ಪ್ರಣಾಮಃ ? ’ ಎಂದು ಭೋಜರಾಜ ಸಾರ್ವಭೌಮನು ಚಂಪೂರಾಮಾಯಣ ಗ್ರಂಥದಲ್ಲಿ ಹೇಳಿದ್ದಾನೆ. ಆದುದರಿಂದ ಯಾರೇ ಆಗಲಿ, ಮಂತ್ರವೇತ್ತರಾದ ಸದ್ಬ್ರಾಹ್ಮಣರನ್ನು ಗೌರವಿಸಿ ವಂದಿಸುವುದು. ಮತ್ತು ಅವರಿಂದ ಶುಭಾಶೀರ್ವಾದಗಳನ್ನು ಹೊಂದಲಪೇಕ್ಷಿಸುವುದು ಸಹಜವಾಗಿದೆ. ಋಷಿಗಳು, ಪತಿವ್ರತೆಯರು ಮೊದಲಾದವರ ಶಾಪವಚನದ ಹಿಡಿತಕ್ಕೆ ಸಿಕ್ಕು ಮಹಾವಿಷ್ಣು ರಾಮಾವತಾರವನ್ನು ಎತ್ತುವ ಹಾಗೂ ಶಾಲಿಗ್ರಾಮ ರೂಪನಾಗಿ ಮಾರ್ಪಡುವ ಪರಿಸ್ಥಿತಿಗೆ ಇಳಿದನೆಂಬುದಾಗಿ ಅನೇಕ ಪುರಾಣೇತಿಹಾಸಗಳು ಉದ್ಘೋಷಿಸುತ್ತವೆ.

ಪುಟ ೧೫೯.

ಒಂದು ವಸ್ತುವನ್ನು ತದೇಕಾಯತ್ತ ಚಿತ್ತದಿಂದ ಧ್ಯಾನಿಸತೊಡಗಿದರೆ ಕಂಡ ಕಂಡ ವಸ್ತುಗಳೆಲ್ಲ ತನ್ನ ಧ್ಯೇಯದಂತೆಯೇ ತೋರಿಬರುವುದು ಸ್ವಭಾವವಾಗಿದೆ. ಅದರಲ್ಲೂ ಸುತವತ್ಸಲೆಯರಾದ ತಾಯಿಯರಿಗೆ ಈ ಮೋಹವು ಅನಿವಾರ್ಯವಾದುದು.

ಪುಟ ೨೧೫. ಚೈತ್ಯ :—

(a) ‘ ಚೈತ್ಯಮಾಯತನಂ............’ ಪುರವರ್ಗ, ೭ ನೆಯ ಶ್ಲೋಕ ‘ಯಾಗಶಾಲೆ’ ಎಂದು ವ್ಯಾಖ್ಯಾನಕಾರರು ಬರೆದಿದ್ದಾರೆ.

(b) ಬೌದ್ಧರು, ಜೈನರು ಮೊದಲಾದವರ ಆರಾಧ್ಯ ವಿಗ್ರಹಗಳಿರುವ ಆಲಯಗಳಿಗೆ ‘ ಚೈತ್ಯ ’ ಎಂದು ಹೆಸರು ಎಂಬುದಾಗಿ ಲಿಂಗಪುರಾಣದಲ್ಲಿ ಉಕ್ತವಾಗಿದೆ.

(c) A funeral monument or Stoopa. The Hall or

Temple or the place of worship especially with Buddha & Jain and generally containing a Monument.

**ಪುಟ ೨೨೭. ಓತುಃ :—**

'............ ಓತುರ್ಬಿಡಾಲೋ ಮಾರ್ಜಾರಃ' ಸಿಂಹಾದಿವರ್ಗ, ಶ್ಲೋ. ೬
ಓತುಃ = ಬೆಕ್ಕು.

**ಪುಟ ೨೩೩. ದಾಕ್ಷಾಯಣೀ :—**

ದಕ್ಷಬ್ರಹ್ಮನ ಮಗಳು. ಇವನ ಪತ್ನಿಯ ಹೆಸರು ಪ್ರಸೂತಿ. ಇವಳು ಸ್ವಾಯಂಭುವ ಮನುವಿನ ಮಗಳು. ಇವಳ ಮಗಳೇ ದಾಕ್ಷಾಯಣಿ. ದಕ್ಷನು ಇವಳನ್ನು ಪರಶಿವನಿಗೆ ಕೊಟ್ಟು ಲಗ್ನವನ್ನು ಮಾಡಿದ್ದನು. ದೇವಲೋಕದಲ್ಲಿ ಒಮ್ಮೆ ದೊಡ್ಡದೊಂದು ಯಜ್ಞಸಮಾರಂಭ ನಡೆಯಿತು. ದಕ್ಷನು ಯಾಗಶಾಲೆಯನ್ನು ಪ್ರವೇಶಿಸಿದೊಡನೆಯೇ ಚತುರ್ಮುಖ, ಪರಶಿವರನ್ನುಳಿದು ಎಲ್ಲ ದೇವತೆಗಳೂ, ದೇವೋತ್ತಮರೂ ಅವನಿಗೆ ಗೌರವವನ್ನು ಸಲ್ಲಿಸಿದರು. ಮಹಾ ಅಭಿಮಾನಿಯಾದ ದಕ್ಷನು ಸಿಟ್ಟಿಗೆದ್ದು "ಇಂತಹ ಅವಿಧೇಯರಿಗೆ ಇಂದಿನಿಂದ ಯಾವ ಯಾಗದಲ್ಲೂ ಹವಿರ್ಭಾಗವನ್ನು ಯಾರೂ ಕೊಡತಕ್ಕದ್ದಲ್ಲ" ಎಂದು ಕಟ್ಟುಮಾಡಿ, ಯಾರು ಎಷ್ಟು ತಡೆದರೂ ತಾನು ಅಲ್ಲಿ ನಿಲ್ಲದೆ ನೆಟ್ಟಗೆ ತನ್ನ ಮನೆಗೆ ಬಂದುಬಿಟ್ಟನು. ಈ ಘಟನೆಯಿಂದ ಸಿಟ್ಟುಗೊಂಡ ಸ್ವಾಮಿಭಕ್ತ ನಂದಿಯು "ನೀನು ಸರ್ವದಾ ಕರ್ಮವನ್ನು ಮಾಡುತ್ತಲೇ ಕಾಲವನ್ನು ಕಳೆ' ಎಂದು ದಕ್ಷನಿಗೆ ಪ್ರತಿಯಾಗಿ ಶಾಪವನ್ನಿತ್ತನು. ಇದೆಲ್ಲ ನಡೆದು ಬಹಳ ಕಾಲ ಕಳೆದ ಬಳಿಕ ದಕ್ಷನು ಹಿಂದೆ ತಾನು ಮಾಡಿದ ಕಟ್ಟುಪಾಡನ್ನು ಕಾರ್ಯರೂಪಕ್ಕೆ ತಂದು ತೋರಿಸೋಣವೆಂದು ಇಚ್ಛೆಯುಳ್ಳವನಾಗಿ 'ಬೃಹಸ್ಪತಿಸವ' ಎಂಬ ಯಜ್ಞವನ್ನು ಉಪಕ್ರಮಿಸಿ, ಶಿವನನ್ನುಳಿದು ಎಲ್ಲ ದೇವತೆಗಳನ್ನೂ, ಮುನಿಗಳನ್ನೂ ಯಾಗಕ್ಕೆ ಬರಮಾಡಿಕೊಂಡನು. ಇವರು ಗುಂಪು ಗುಂಪಾಗಿ ಯಾಗಕ್ಕೆ ಹೋಗುತ್ತಿರುವುದನ್ನು ನೋಡಿ ದಾಕ್ಷಾಯಣಿಯು ತಾನೂ ಯಾಗಕ್ಕೆ ಹೋಗಿ ಬರಲು ಅನುಜ್ಞೆಯನ್ನೀಯುವಂತೆ ಪತಿಯನ್ನು ಒತ್ತಾಯದಿಂದ ಒಡಂಬಡಿಸಿ ಯಾಗಮಂಟಪಕ್ಕೆ ಬಂದು ಸೇರಿದಳು. ಇವಳೊಂದಿಗೆ ನಂದಿ ಮೊದಲಾದ ಸಾವಿ

ರಾರು ಮಂದಿ ಪ್ರಮಥರು ಅಂಗರಕ್ಷಕರಾಗಿ ಹೊರಟರು. ಇವಳಿಗೆ ಅಲ್ಲಿ ಯಾವ ಪುರಸ್ಕಾರವೂ ದೊರೆಯಲಿಲ್ಲ. ಅಷ್ಟೇ ಅಲ್ಲದೇ 'ಶಿವನಿಗೆ ಹವಿರ್ಭಾಗವನ್ನು ಸರ್ವಥಾ ಕೊಡುವುದಿಲ್ಲ' ಎಂಬ ದಕ್ಷನ ಕಠೋರವಾಣಿಯೂ ಕಿವಿಗೆ ಬಿದ್ದಿತು. ಮೊದಲೇ ಅವಮಾನಿತಳಾಗಿದ್ದ ದಾಕ್ಷಾಯಣಿಯು ಪತಿನಿಂದಾವಚನಶ್ರವಣದಿಂದ ಮತ್ತಷ್ಟು ಕ್ರುದ್ಧಳಾಗಿ ದಕ್ಷಜನ್ಯವಾದ ಆ ದೇಹವನ್ನು ಹೋಮಕುಂಡದಲ್ಲಿ ತ್ಯಜಿಸಿದಳು. ಅನಂತರ ಇವಳೇ ಪರ್ವತರಾಜನಾದ ಹಿಮವಂತ-ಮೇನೆಯರಿಗೆ ಪುತ್ರಿಯಾಗಿ ಜನಿಸಿ, ಪರಶಿವನನ್ನೇ ಪತಿಯನ್ನಾಗಿ ಪಡೆದಳು.

**ಪುಟ ೨೩೭- ಗೃಂಜಕ :—**

Turnip or ಕೆಂಪು ಗೆಣಸು.

**ಪುಟ ೨೩೮. ಕ್ರೋಷ್ಟಾ :—**

ನರಿ. 'ಶೃಗಾಲ ವಂಚುಕಕ್ರೋಷ್ಟು ಫೇರು ಫೇರವ ಜಂಬುಕಾಃ ॥' ಸಿಂಹಾದಿವರ್ಗ ಶ್ಲೋಕ ೫.

**ಪುಟ ೨೪೭. ಮರೀಚಿಃ :—**

(a) ಬ್ರಹ್ಮಮಾನಸಪುತ್ರರಲ್ಲಿ ಒಬ್ಬನು. ಇವನು ಸ್ವಾಯಂಭುವ ಮನ್ವಂತರದವನು. ಈತನ ಮಗನೇ ಕಶ್ಯಪಬ್ರಹ್ಮನು. ಮರೀಚಿಮಹರ್ಷಿಯು ಕರ್ದಮಮುನಿಯ ಮಗಳಾದ ಕಲಾದೇವಿಯನ್ನು ಮದುವೆಯಾಗಿದ್ದನು. ಇವಳೇ ಈತನ ಹಿರಿಯ ಹೆಂಡತಿ. ಈ ಅಂಶವು ಶ್ರೀಮದ್ಭಾಗವತ ಚತುರ್ಥಸ್ಕಂಧ ೧ ನೆಯ ಅಧ್ಯಾಯದಲ್ಲಿ ಬರುತ್ತದೆ. 'ಊರ್ಣೆ' ಎಂಬುವಳು ಕಿರಿಯ ಪತ್ನಿ. ಈಕೆಯಲ್ಲಿ ಸ್ಮರ, ಉದ್ಗೀಥ, ಪರಿಷ್ವಂಗ, ಪತಂಗ, ಕ್ಷುದ್ರಭೃತ್ ಮತ್ತು ಘೃಣಿ ಎಂಬ ಆರು ಮಂದಿ ಮಕ್ಕಳನ್ನು ಮರೀಚಿಯು ಪಡೆದನು. ಈ ಮಕ್ಕಳ ದೌಷ್ಟ್ಯ ತತ್ಪರಿಣಾಮ ಮುಂತಾದ ಕಥೆಗಳು ಭಾಗವತ ದಶಮಸ್ಕಂಧ ೮೫ ನೆಯ ಅಧ್ಯಾಯದಲ್ಲೂ ದೇವೀಭಾಗವತ ೪,೨೦ ರಲ್ಲೂ ಬರುವುವು- ಅಪೇಕ್ಷೆಯುಳ್ಳವರು ತನ್ಮೂಲಕ ತಿಳಿಯಬಹುದಾಗಿದೆ.

(b) ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದಲ್ಲಿ ಬ್ರಹ್ಮಮಾನಸ ಪುತ್ರರಾಗಿ ಜನಿಸಿದವರ ಪೈಕಿ ಈತನೂ ಒಬ್ಬ. ಈತನು ಮಂತ್ರಗಳನ್ನು ಕಂಡು ಹಿಡಿದವನು ಎಂಬುದು ಮತ್ಸ್ಯಪುರಾಣ ೧೪೫ ನೆಯ ಅಧ್ಯಾಯದಿಂದ ತಿಳಿದು ಬರುವುದು.

**ಪುಟ ೨೫೧. ಷಟ್ಚಕ್ರಭೇದನರತಾ :—**

ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಆಜ್ಞಾ, ಅನಾಹತ ಮತ್ತು ವಿಶುದ್ಧ ಚಕ್ರಗಳನ್ನು ಭೇದಿಸಿಕೊಂಡು ಸುಷುಮ್ನಾನಾಡಿಯ ದ್ವಾರಾ ಪರಶಿವ ತತ್ತ್ವದ ವರೆಗೂ ಹೋಗಬಲ್ಲವಳು- ಷಟ್ಚಕ್ರಭೇದನ ಕ್ರಮವು ಶಾರದಾತಿಲಕ ಎಂಬ ತಂತ್ರಶಾಸ್ತ್ರಗ್ರಂಥದ ಐದನೆಯ ಪಟಲ ೧೩೦ ನೆಯ ಶ್ಲೋಕದಿಂದ ವರ್ಣಿತ ವಾಗಿದೆ- ಬುಭುತ್ಸುಗಳು ಮೇಲ್ಕಂಡ ಗ್ರಂಥವನ್ನು ವಿಮರ್ಶಿಸಬಹುದು

**ಪುಟ ೨೫೨. ಸಪ್ತವಿಂಶತಿತತ್ತ್ವಕೃತ್ :—**

ತ್ರಯೋವಿಂಶತಿತತ್ತ್ವೇಭ್ಯಃ ಪರಾ ಪ್ರಕೃತಿರುಚ್ಯತೇ ॥ ಪ್ರಕೃತೇಸ್ತು ಪರ) ಪ್ರಾಹುಃ ಪುರುಷಂ (ಜೀವಂ) ಪಂಚವಿಂಶಕಮ್॥ ತಸ್ಯ ಪ್ರಕೃತಿಲೀನಸ್ಯ(ಜೀವಸ್ಯಂ ಯಃ ಪರಃ ಸ (ಸಗುಣಃ) ಮಹೇಶ್ವರಃ ॥ ೨೭ ನೆಯ ತತ್ತ್ವವೇ ನಿರ್ಗುಣ ಬ್ರಹ್ಮ

**ಪುಟ ೨೫೫. ತಿಷ್ಯ :—**

'ತಿಷ್ಯಃ ಪುಷ್ಯೇ .... ... ... ...' ಪುಷ್ಯಮಾಸ ಪೂರ್ವಾಷಾಢಾ ನಕ್ಷತ್ರಕ್ಕೆ 'ತಿಷ್ಯ' ಎಂದು ಸಂಜ್ಞೆ, ನಾನಾರ್ಥವರ್ಗ ಶ್ಲೋ. ೧೪೬.

**ಪುಟ ೨೯೯. (1) ರಾಕ್ಷಸರು :—**

ಇವರು ಕ್ರೂರಸ್ವಭಾವದವರು ಇವರ ತಾಯಿ ಗರ್ಭವನ್ನು ಧರಿಸಿದ ಕೂಡಲೇ ಮಕ್ಕಳನ್ನು ಪ್ರಸವಿಸುವಳು. ಇವರು ಹುಟ್ಟುವಾಗ ಹೆತ್ತ ತಾಯಿಗೆ ಸಮಾನವಾದ ವಯೋದಾರ್ಢ್ಯವುಳ್ಳವರಾಗಿರುವಂತೆ ಪಾರ್ವತೀದೇವಿಯು ಇವ ರನ್ನು ಅನುಗ್ರಹಿಸಿರುವಳು. ರಾಮಾಯಣ ಉತ್ತರಕಾಂಡ ೪ ನೆಯ ಸರ್ಗದಿಂದಲೂ

ಭಾರತ ಆದಿಪರ್ವ ೬೫, ೧೬೯ ಹಾಗೂ ೧೯೭ ನೆಯ ಅಧ್ಯಾಯಗಳಿಂದಲೂ ಈ ವಿಷಯವನ್ನು ಸ್ಪಷ್ಟವಾಗಿ ತಿಳಿಯಬಹುದಾಗಿದೆ-

(2) **ಅಸುರರು** :—

ಇವರು ಚತುರ್ಮುಖನ ಜಘನಪ್ರದೇಶದಿಂದ ಜನಿಸಿ ಬಂದವರು. ಹೀಗಿದ್ದರೂ ಬ್ರಹ್ಮನು ಹಿರಿಯನೆಂಬ ಗೌರವವನ್ನೂ ತೋರಿಸದೆ ಸಮಾನಸ್ಕಂಧರಂತೆ ಅವನೊಡನೆ ಯಥೇಷ್ಟವಾಗಿ ಕ್ರೀಡಿಸತೊಡಗಲು ಅವನು ಅಸಹ್ಯಗೊಂಡು ಮಹಾವಿಷ್ಣುವನ್ನು ಶರಣುಹೋದನು. ಮತ್ತು ಆತನ ಸಲಹೆಯಂತೆ ತನ್ನದೇಹವನ್ನು ತ್ಯಾಗಮಾಡಿದನ್ನು ಆಗ ಅವನ ದೇಹದಿಂದ ಸುಂದರಾಕಾರಳಾದ ಲಲನಾಮಣಿಯೋರ್ವಳು ಉದ್ಭವಿಸಿ ಬರಲು ಅಸುರರು ಅವಳ ಮೇಲಿನ ವ್ಯಾಮೋಹದಿಂದ ಬ್ರಹ್ಮದೇವನನ್ನು ಮರೆತು ಆಕೆಯನ್ನು ಸ್ವೀಕರಿಸಿ ಹಿಂದಿರುಗಿದರು. ಇವರ ವಂಶಾವಳಿ ಅದ್ಭುತಕೃತ್ಯ ಮೊದಲಾದ ಚರಿತ್ರೆಗಳು ಭಾರತದ ಆದಿಪರ್ವ ೬೫, ೬೬; ಶಾಂತಿಪರ್ವ ೨೩೪; ಭಾಗವತ ೬, ೧೮ ವಿಷ್ಣುಧರ್ಮೋತ್ತರ ಪುರಾಣ ೧.೨೧ ರಲ್ಲೂ ಬರುವುವು.

(3) **ವೇತಾಲ**:—

ಇವಕ್ಕೆ ಸ್ವತಂತ್ರವಾಗಿ ದೇಹಗಳಿರುವುದಿಲ್ಲ. ವಾಯುಮಂಡಲದಲ್ಲಿ ಸುತ್ತಾಡುವ ಈ ಭೂತಗಳು ಸಂಸ್ಕಾರವನ್ನು ಪಡೆಯದೇ ಇರುವ ಮೃತಶರೀರಗಳನ್ನು ಆಶ್ರಯಿಸುವುವು. ಆದುದರಿಂದಲೇ ಹೆಚ್ಚು ಕಾಲ ಶವಗಳನ್ನು ಇರಿಸಿಕೊಳ್ಳುವುದಿಲ್ಲ. ಮತ್ತು ಅವನ್ನು ಏಕಾಕಿಯಾಗಿರುವಂತೆ ಬಿಟ್ಟಿರುವುದೂ ಇಲ್ಲ.

(4) **ಗ್ರಹಗಳು** :—

ಸೂರ್ಯನೇ ಮೊದಲಾದ ೯ ಬಗೆಯ ದೇವತೆಗಳು. ಇವರ ಉತ್ಪತ್ತಿ ಮಹಿಮೆ ಮೊದಲಾದ ವಿವರಗಳನ್ನು ಭಾರತ ಸಭಾಪರ್ವ ೧೧ ನೆಯ ಅಧ್ಯಾಯ, ಲಿಂಗಪುರಾಣ ೬೧ ನೆಯ ಅಧ್ಯಾಯಗಳಿಂದ ತಿಳಿಯಬಹುದಾಗಿದೆ.

(5) **ಭೂತಗಳು** :—

ಪೃಥಿವ್ಯಪ್ತೇಜೋವಾಯ್ವಾಕಾಶಗಳು. ಭೂತಗಳ ಸೃಷ್ಟಿ, ಗುಣ ಮುಂತಾ

ದುವನ್ನು ಭಾರತ ವನಪರ್ವ ೨೧೫, ಭೀಷ್ಮಪರ್ವ ೫, ಶಾಂತಿಪರ್ವ ೧೯೨, ೨೫೮, ೨೬೧, ೩೧೫, ಅನುಶಾಸನಪರ್ವ ೩೯, ೨೪೫, ಭಾಗವತ ೩.೨೬ ವಿಷ್ಣುಧರ್ಮೋತ್ತರ ೧, ೨, ೩ , ಮತ್ಸ್ಯ ೨-೭ ಈ ಭಾಗಗಳಿಂದ ತಿಳಿಯಬಹುದಾಗಿದೆ.

(6) **ಪಿಶಾಚಗಳು :—**

ವೇತಾಳಗಳಂತೆ ಇವೂ ವಾಯುವೀಯ ಶರೀರಿಗಳಾದರೂ ಇವು ಸಜೀವ ದೇಹಗಳನ್ನೇ ಹೆಚ್ಚಾಗಿ ಆಶ್ರಯಿಸುವ ಸ್ವಭಾವ ಉಳ್ಳವು. ಇವಕ್ಕೆ ಮಾಂಸವೇ ಆಹಾರ. ಸ್ವಯಂ ಭೋಗಶಕ್ತಿ ಇವಕ್ಕೆ ಇಲ್ಲವೇ ಇಲ್ಲ. ಆದುದರಿಂದ ಇತರ ಭೂತಗಳು ಉಪಭೋಗಿಸುವುದನ್ನು ನೋಡಿ ಇವು ತೃಪ್ತಿಪಡುವವು. ಮತ್ತು ತಾವು ಆವೇಶಗೊಳ್ಳುವ ಶರೀರಗಳಲ್ಲಿರುವ ರಕ್ತ-ಮಾಂಸಗಳನ್ನೆಲ್ಲ ಹೀರಿಹಾಕಿ, ಆ ದೇಹಗಳನು ಕ್ಷೀಣದಶೆಗೆ ತರುವವು. ಸ್ಥಿರವಾಗಿ ಒಂದೆಡೆ ಇರಲಿಕ್ಕೆ ಇವಕ್ಕೆ ಬರುವುದಿಲ್ಲ. ಆದುದರಿಂದ ಮನುಷ್ಯನ ದೇಹದಲ್ಲಿ ಕೆಲವು ಕಾಲ ಮಾತ್ರ ಆವೇಶಗೊಳ್ಳುವವು.

ಪುಟ ೨೬೦ **ಭೂರ್ಜಪತ್ರ :—**

ಇದನ್ನು ಹಿಂದಿನ ಸಂಪುಟದಲ್ಲಿ ವಿವರಿಸಿದೆ.

ಪುಟ ೨೬೩. **ಮಾಂಡವ್ಯ ಮಹರ್ಷಿಗಳು :—**

ಈ ಮಹರ್ಷಿಗಳಿಗೆ ' ಅಣಿಮಾಂಡವ್ಯ ' ಎಂದೂ ಒಂದು ಹೆಸರು. ಇವರು ಬಾಲ್ಯದಲ್ಲಿ ನೊಣಗಳನ್ನು ಹಿಡಿದು ಕೊಲ್ಲುತ್ತಲಿದ್ದರು. ವಯಸ್ಕರಾದ ಮೇಲೆ ತಪೋನಿಷ್ಠರಾದರು. ಆಗೊಮ್ಮೆ ಕೆಲವು ಮಂದಿ ಕಳ್ಳರು ಕಳುವನ್ನು ಮಾಡಿ ಯಾಮಿಕರಿಂದ ತಪ್ಪಿಸಿಕೊಳ್ಳಲು ಈ ಋಷಿಗಳ ಆಶ್ರಮದಲ್ಲಿ ಬಚ್ಚಿಟ್ಟುಕೊಂಡರು. ರಾಜಭಟರು ಕಳ್ಳರ ಬಗ್ಗೆ ಮುನಿಯನ್ನು ವಿಚಾರಿಸಿದರೂ ಅವರು ಮೌನವಾಗಿದ್ದುದನ್ನು ನೋಡಿ ಇವರೂ ಕಳ್ಳರ ಪೈಕಿ ಒಬ್ಬರೆಂಬ ಭ್ರಮೆಯಿಂದ ಅವರೊಂದಿಗೆ ಇವರನ್ನೂ ಎಳೆದೊಯ್ದು ರಾಜನೆದುರಿಗೆ ನಿಲ್ಲಿಸಿದರು. ಮತ್ತು ಅವನ ಆಜ್ಞೆಯಂತೆ ಋಷಿಯನ್ನು ಶೂಲಕ್ಕೇರಿಸಿದರು. ಈ ಶಿಕ್ಷೆಯಿಂದ ಕಳ್ಳರು ಸತ್ತಾಗ್ಯೂ ಋಷಿಯು ಮಟ್ಟಿಗೆ ಜೀವಿಸಿರುವುದನ್ನು ಕಂಡು ಹೆದರಿದ ದೂತರು ರಾಜನಿಗೆ ಸುದ್ದಿಯನ್ನು ತಿಳಿಸಲು, ಅರಸನು ಘಾಬರಿಯಿಂದ ಓಡಿಬಂದು ತನ್ನ ಅವಿಚಾರಕೃತ್ಯಕ್ಕಾಗಿ ಕ್ಷಮೆಯನ್ನು ಯಾಚಿಸಲು, ಋಷಿಗಳು

ಯಾವ ಮಾತನ್ನೂ ಆಡದೇ, ಶೂಲವನ್ನು ಮುರಿದು ಹಾಕಿ ತಮ್ಮ ದೇಹವನ್ನು ತ್ಯಜಿಸಿದರು. ಆಗ ಯಮದೂತರು ಋಷಿಯ ಲಿಂಗಶರೀರವನ್ನು ಯಮಧರ್ಮನ ಸನ್ನಿಧಿಗೆ ಕೊಂಡೊಯ್ದರು. 'ಪಾಪಸಂಪರ್ಕರಹಿತನಾದ ತನ್ನನ್ನು ನರಕಕ್ಕೇಕೆ ತಂದಿರಿ?' ಎಂದು ಯಮನನ್ನು ಪ್ರಶ್ನಿಸಲು ಯಮನು ಅವರ ಬಾಲ್ಯಚೇಷ್ಟೆಯನ್ನು ಜ್ಞಾಪಿಸಿದನು. 'ಅಜ್ಞಾನದಶೆಯಲ್ಲಿ ಚರಿಸಿದ ಕೆಲಸವು ಉದ್ದೇಶಶೂನ್ಯವಾದುದರಿಂದ ಶಿಕ್ಷಾರ್ಹವಲ್ಲವೆಂದು ವಾದಿಸಿ, ಇದನ್ನು ವಿಮರ್ಶಿಸದೇ ತನ್ನನ್ನು ಶಿಕ್ಷಿಸಲವಾದ ನೀನು ಶೂದ್ರನಾಗಿ ಭೂಮಿಯಲ್ಲಿ ಜನ್ಮವನ್ನೆತ್ತೆಂ'ದು ಯಮನಿಗೆ ಶಾಪವನ್ನಿತ್ತರು. ಆದುದರಿಂದಲೇ ಯಮನು ವಿದುರನಾಗಿ ಜನಿಸಿದನು. ಇವರ ಚರಿತ್ರೆಯು ಭಾರತದ ಆದಿಪರ್ವ ೬೩. ೧೦೭, ಸಭಾಪರ್ವ ೧೪, ಮಾರ್ಕಂಡೇಯ ೧೬ ಸ್ಕಾಂದಪುರಾಣ ರೇವಾಖಂಡ ೧೭೦ ನೆಯ ಅಧ್ಯಾಯಗಳಿಂದ ತಿಳಿಯಬಹುದು.

ಪುಟ ೨೬೭. **ಪೌಷ್ಣ ನಕ್ಷತ್ರ**

ಸೂರ್ಯ ನಕ್ಷತ್ರ. 'ಹಸ್ತ' ಎಂಬುದಾಗಿ ಜ್ಯೋತಿರ್ವಿದರು ಹೇಳುವರು.

ಪುಟ ೨೭೧

ಭೂತ ಎಂದರೆ ಅತೃಪ್ತಜೀವಿಗಳಾದ ಪಿಶಾಚಗಳು. ಇವು ವಾಯವೀಯ ದೇಹಿಗಳು. ಅಶುಚಿಯೂ ದುಷ್ಕರ್ಮಿಯೂ ಆದವನ ದೇಹವನ್ನು ವಿಶೇಷತಃ ಸ್ತ್ರೀಯರ ದೇಹಗಳನ್ನು ಪ್ರವೇಶಿಸಿ ಹಿಂಸಿಸುವುದೇ ಇವಕ್ಕೆ ಜೀವನ ವೃತ್ತಿ. ಇವು ಪ್ರಾಣಿಯ ದೇಹವನ್ನು ಹೊಗುವಾಗ ಅವನ ದೃಷ್ಟಿಯನ್ನೇ ದ್ವಾರವನ್ನಾಗಿ ಮಾಡಿಕೊಳ್ಳುತ್ತವೆ. ಆದುದರಿಂದಲೇ ಎಳೆಯ ಮಕ್ಕಳಿಗೆ ದೃಷ್ಟಿದೋಷವನ್ನು ಹಾಗೂ ಬಿದ್ದಬೀಳನ್ನು ತೆಗೆದಾಗ ನಿವ್ವಳಿಸಿದ ವಸ್ತುಗಳನ್ನು ಮೂರು ದಾರಿಗಳು ಸೇರುವ ಎಡೆ ಇಟ್ಟು ಬರುವಾಗ ಅದನ್ನು ಹಿಂದಿರುಗಿ ನೋಡಬಾರದೆಂದು ಹಿರಿಯರು ಹೇಳುತ್ತಾರೆ. ದೃಷ್ಟಿಮೂಲಕ ಪ್ರವೇಶಿಸುವ ವಿಷಯವಾಗಿ ದಂತಕಥೆಯೊಂದು ಇದೆ. ರಾವಣಾಸುರನು ತನ್ನ ಬಲ-ದರ್ಪಗಳಿಂದ ನವಗ್ರಹಗಳನ್ನೆಲ್ಲ ಸಿಂಹಾಸನದ ಮೆಟ್ಟಿಲುಗಳ ಸ್ಥಾನದಲ್ಲಿ ಕೆಡಹಿ, ಅವರ ಬೆನ್ನನ್ನು ತುಳಿಯುತ್ತ ಆಸನವನ್ನೇರುತ್ತಲಿದ್ದನಂತೆ. ಆಗೊಮ್ಮೆ ನಾರದರು ಸಭಾಮಂಟಪಕ್ಕೆ ಬಂದು ಗ್ರಹಗಳಿಗೊದಗಿದ ಈ ದುರವಸ್ಥೆಗಾಗಿ ಮರುಗಿ 'ಇದಕ್ಕೆ ಪರಿಹಾರೋಪಾಯವಾವುದೆಂ'ದು ಶನಿಗ್ರಹವನ್ನು ಪ್ರಶ್ನಿಸಿದರಂತೆ, 'ನಮ್ಮನ್ನು ರಾವಣನು ಮುಖ ಅಡಿಯಾಗಿರುವಂತೆ ಇಲ್ಲಿ ಕೆಡಹಿದ್ದಾನೆ. ಆದುದರಿಂದ ನಾವು ನಮ್ಮ ಶಕ್ತಿ

ಯನ್ನು ಅವನ ಮೇಲೆ ಬೀರಲು ಬರುವಂತಿಲ್ಲ. ನಮ್ಮ ಹಾಗೂ ರಾವಣನ ದೃಷ್ಟಿಗಳು ಸಂಧಿಸುವಂತೆ ನೀವೇನಾದರೂ ಯುಕ್ತಿಯನ್ನು ಮಾಡಿದರೆ ಆಗ ನಮ್ಮ ಪ್ರಭಾವ-ಪ್ರತಾಪಗಳನ್ನು ತೋರಿಸಬಲ್ಲೆವು' ಎಂದು ಹೇಳಿದನಂತೆ. ಅದರಂತೆ ನಾರದರು ರಾವಣನ ಬಳಿ ಹೋಗಿ 'ಶತ್ರುವಿನ ಎದೆಯನ್ನು ತುಳಿಯುವುದು ವೀರಪುರುಷರ ಲಕ್ಷಣವೇ ಹೊರತು, ಬೆನ್ನನ್ನು ತುಳಿಯುವುದು ಭೂಷಣವಲ್ಲ, ಆದುದರಿಂದ ನಿನ್ನ ಸಿಂಹಾಸನದ ಅಡಿಗೆ ಮೆಟ್ಟಲಿನಂತೆ ಜೋಡಿಸಿರುವ ನವಗ್ರಹಗಳನ್ನೆಲ್ಲ ಮೇಲ್ಮುಖವಾಗಿ ಮಲಗಿಸಿ ಅವರ ಎದೆಯನ್ನು ತುಳಿದು ನಿನ್ನ ಪ್ರಭಾವವನ್ನು ಬೆಳಗು' ಎಂದು ಉಬ್ಬಿಸಿದರಂತೆ. ಮೊದಲೇ ಶತಹುಂಬನಾದ ರಕ್ಕಸನು ನಾರದರ ಪ್ರೋತ್ಸಾಹವಚನಗಳಿಂದ ಮತ್ತಿಷ್ಟು ಉನ್ಮಾದಗೊಂಡು ಅವರನ್ನೆಲ್ಲ ತಿರುವಿಹಾಕಿಸಿ ಅವರ ಎದೆಯನ್ನು ತುಳಿಯುತ್ತ ಆಸನಾರೂಢನಾದನಂತೆ, ಹಾಗೂ ಗ್ರಹಗಳ ಎದೆಗಳನ್ನು ತುಳಿವಾಗ 'ಇವನಾರು' ಎಂದು ಪ್ರಶ್ನಿಸುತ್ತಲೂ, ತನ್ನ ಇಪ್ಪತ್ತು ಕಣ್ಣುಗಳಿಂದ ಕೆಕ್ಕರಿಸಿ ನೋಡುತ್ತಲೂ ನಡೆದನಂತೆ. ಮಂಗಳ ಹಾಗೂ ಶನಿಗ್ರಹಗಳ ದೃಷ್ಟಿಗಳು ಇವನ ಕಣ್ಣುಗಳನ್ನು ಆಕ್ರಮಿಸಿದೊಡನೆಯೇ ಈ ಎರಡೂ ಗ್ರಹಗಳು ಇವನನ್ನಡರಿಬಿಟ್ಟವಂತೆ. ಸರಿ, ಮಾರನೆಯ ಸಂಜೆಗೇ ಲಂಕಾಪಟ್ಟಣಕ್ಕೆ ಮಾರುತಿಯು ಪ್ರವೇಶಿಸಿ ಬಹಳ ಹಾವಳಿಯನ್ನೆಬ್ಬಿಸಿ ರಾಕ್ಷಸ ಕುಮಾರನನ್ನು ಕೊಂದುಹಾಕಿದುದು ಮಾತ್ರವಲ್ಲದೇ ಇಡೀ ಲಂಕೆಯನ್ನೇ ದಹಿಸಿಬಿಟ್ಟನಂತೆ. ಪ್ರಸ್ತುತ ಈ ಕಥೆಗೆ ಆಹಾರ ದೊರೆಯದಿದ್ದರೂ ಬಹು ಹಿಂದಿನಿಂದಲೂ ಒಬ್ಬರ ಬಾಯಿಯಿಂದ ಮತ್ತೊಬ್ಬರಿಗೆ ಹಬ್ಬುತ್ತ ಬಂದಿದೆ.

ಪುಟ ೨೭೩. **ಕ್ರಮುಕ :—**

"ಘೋಂಟಾ ತು ಪೂಗಃ ಕ್ರಮುಕಃ ..............." ಸಿಂಹಾದಿವರ್ಗ, ೧೬೯ನೆಯ ಶ್ಲೋಕ, ಕ್ರಮುಕ= ಅಡಿಕೆ.

ಪುಟ ೨೭೯. **ದರ್ಶದಿನ :—**

"ಅಮಾವಾಸ್ಯಾತ್ವಮಾವಸ್ಯಾ ದರ್ಶಃ ಸೂರ್ಯೇಂದುಸಂಗಮಃ" ಕಾಲವರ್ಗ, ೮ನೆಯ ಶ್ಲೋಕ., ದರ್ಶ= ಅಮಾವಾಸ್ಯಾ.

**ಪುಟ ೨೯೬. ಪಾರ್ವಣಶ್ಚಂದ್ರಮಾಃ :—**

ಪರ್ವಣಿ= ಪೂರ್ಣಿಮಾಯಾಂ, ಭವಃ= ಪಾರ್ವಣಃ ಅರ್ಥಾತ್ ಪೂರ್ಣಿಮೆಯ ದಿವಸ ಷೋಡಶಕಲೆಗಳಿಂದ ಕೂಡಿದ ಚಂದ್ರ

ಪುಟ ೩೦೬. **ಅಶೋಕ ವೃಕ್ಷ :—**

ಇದು ಒಂದು ಜಾತಿಯ ವೃಕ್ಷ. ರಮ್ಯವಾದ ರಕ್ತವರ್ಣದ ಪುಷ್ಪಗಳನ್ನು ಬಿಡುತ್ತದೆ. (a Tree of moderate size belonging to the leguminous class with magnificient red flowers.)

ಪುಟ ೩೪೩. **ಸ್ವರ್ಗ :—**

ಈ ಅಂಶವನ್ನು ಹಿಂದಿನ ಸಂಪುಟಗಳಲ್ಲಿ ವಿವರಿಸಿದೆ.

ಪುಟ ೩೬೩. **ನಾಸ್ತಿಕರು :—**

ದೃಗ್ಗೋಚರವಾಗುವ ವಸ್ತುಗಳೇ ಸತ್ಯವೆಂತಲೂ, ತದ್ಭಿನ್ನವಾದ ವಸ್ತ್ವಂತರವೇ ಇಲ್ಲವೆಂದೂ ವಾದಿಸತಕ್ಕವರು. ಇವರನ್ನು ಚಾರ್ವಾಕರೆಂದೂ ಕರೆಯುತ್ತಾರೆ. ಇವರ ವಾದವು ಹೀಗಿದೆ :—

ಯಾವಜ್ಜೀವಂ ಸುಖಂ ಜೀವೇನ್ನಾಸ್ತಿ ಮೃತ್ಯೋರಗೋಚರಃ ||
ಭಸ್ಮೀಭೂತಸ್ಯ ದೇಹಸ್ಯ ಪುನರಾಗಮನಂ ಕುತಃ ? ||೧||

ಅಂಗನಾಲಿಂಗನಾಜ್ಜನ್ಯಸುಖಮೇವ ಪುಮರ್ಥತಾ ||
ಕಂಟಕಾದಿವ್ಯಥಾಜನ್ಯಂ ದುಃಖಂ ನಿರಯ ಉಚ್ಯತೇ ||೨||

ಲೋಕಸಿದ್ಧೋ ಭವೇದ್ರಾಜಾ ಪರೇಶೋ ನಾಪರಃ ಸ್ಮೃತಃ |
ದೇಹಸ್ಯ ನಾಶೋ ಮುಕ್ತಿಸ್ತು ನ ಜ್ಞಾನಾನ್ಮುಕ್ತಿರಿಷ್ಯತೇ ||೩||

ಅತ್ರ ಚತ್ವಾರಿ ಭೂತಾನಿ ಭೂಮಿವಾರ್ಯನಲಾನಿಲಾಃ |
ಚತುರ್ಭ್ಯಃ ಖಲು ಭೂತೇಭ್ಯಶ್ಚೈತನ್ಯಮುಪಜಾಯತೇ ||೪||

ಕಿಣ್ವಾದಿಭ್ಯಸ್ಸಮೇತೇಭ್ಯೋ ದ್ರವ್ಯೇಭ್ಯೋ ಮದಶಕ್ತಿವತ್ ||
'ಅಹಂ ಸ್ಥೂಲಃ ಕೃಶೋಽಸ್ಮೀ'ತಿ ಸಾಮಾನಾಧಿಕರಣ್ಯತಃ ||೫||

ದೇಹಃಸ್ಥೌಲ್ಯಾದಿ ಯೋಗಾಚ್ಚ ಸ ಏವಾತ್ಮಾ ನ ಚಾಪರಃ ॥
ಅಗ್ನಿರುಷ್ಣೋ ಜಲಂ ಶೀತಂ ಸಮಸ್ಪರ್ಶಸ್ತಥಾನಿಲಃ ॥೬॥

ಕೇನೇದಂ ಚಿತ್ರಿತಂ ತಸ್ಮಾತ್ಸ್ವಭಾವಾತ್ತದ್ವ್ಯವಸ್ಥಿತಿಃ ॥
ನ ಸ್ವರ್ಗೋ ನಾಪವರ್ಗೋ ವಾ ನೈವಾತ್ಮಾ ಪಾರಲೌಕಿಕಃ ॥೭॥

ನೈವ ವರ್ಣಾಶ್ರಮಾದೀನಾಂ ಕ್ರಿಯಾಶ್ಚ ಫಲದಾಯಿಕಾಃ ।
ಅಗ್ನಿಹೋತ್ರಂ ತ್ರಯೋ ವೇದಾಸ್ತ್ರಿದಂಡಂ ಭಸ್ಮಗುಂಠನಂ ॥೮॥

ಬುದ್ಧಿ-ಪೌರುಷಹೀನಾನಾಂ ಜೀವಿಕೇತಿ ಬೃಹಸ್ಪತಿಃ ॥
ಯಾವಜ್ಜೀವೇತ್ಸುಖಂ ಜೀವೇದೃಣಂ ಕೃತ್ವಾ ಘೃತಂ ಪಿಬೇತ್ ॥೯॥

ಇತ್ಯಾದಿ ಆಬಾಲಗೋಪಾಲ ಸಾಧಾರಣವಾದ ವಾದಗಳನ್ನೇ ಮುಂದೆ ಮಾಡು ತ್ತಲಿರುವ ಸ್ವೇಚ್ಛಾಚಾರಿಗಳು,

ಪುಟ ೩೬೯.

ಕುಲೀನರೂ, ಸತ್ಸಂಪ್ರದಾಯದವರೂ ಆದ ಸುವಾಸಿನೀ ಸ್ತ್ರೀಯರು ಮೇಲ್ಸೆರಗನ್ನು ಹೊದ್ದುಕೊಳ್ಳುತ್ತಿರುವುದು ವಾಡಿಕೆಯಾಗಿದೆ. ಈ ಸಂಪ್ರದಾಯವು ದಕ್ಷಿಣದೇಶದಲ್ಲಿ ಸಾಮಾನ್ಯವಾಗಿ ತೋರಿಬರುವುದಿಲ್ಲ. ಉತ್ತರ ಕರ್ಣಾಟಕ ಹಾಗೂ ಮಹಾರಾಷ್ಟ್ರ, ಗುಜರಾಥ್, ಸಿಂಧ್, ಬಂಗಾಲ, ಪರ್ಷಿಯಾ ಮೊದಲಾದ ಸ್ಥಳಗಳಲ್ಲಿ ಇಂದಿಗೂ ಈ ಸಂಪ್ರದಾಯವನ್ನು ನೋಡಬಹುದಾಗಿದೆ. ಐರೋಪ್ಯರಲ್ಲು ಸಹ ಸಂಪ್ರದಾಯ ಬದ್ಧ ಜೀವಿಗಳಾದ Nuns ಹಾಗೂ ಅರಸುಮನೆತನದವರು ಮೇಲ್ಹೊದ್ದಿಕೆಯನ್ನು (Gown) ಉಪಯೋಗಿಸುತ್ತಾರೆ. ಇದೊಂದು ಬಗೆಯ 'ದೀಕ್ಷೆ' ಎಂದು ತೋರುತ್ತದೆ. ವಿವಾಹಾತ್ಪೂರ್ವ ಈ ಹೊದ್ದಿಕೆ ಇರುವುದಿಲ್ಲ. ದಕ್ಷಿಣ ಕರ್ಣಾಟಕದಲ್ಲೂ ಸಹ ಪೂರ್ವಾಚಾರದ ಬ್ರಾಹ್ಮಣೇತರ ಸ್ತ್ರೀಯರು ಇದನ್ನಾಚರಿಸುತ್ತಾರೆ.

ಪುಟ ೩೮೬. **ಲಿಂಗಪೂಜಾ :—**

ಸೌಭಾಗ್ಯವೃದ್ಧಿಗಾಗಿ ಮೃತ್ತಿಕೆಯಲ್ಲಿ ಪರಶಿವನ ಲಿಂಗಾಕೃತಿಯನ್ನು ನಿರ್ಮಿಸಿ ಅದನ್ನು ಅಂಜಲಿಯಲ್ಲಿ ಇರಿಸಿಕೊಂಡು ಪೂಜಿಸುತ್ತಾರೆ. ಕಲ್ಪೋಕ್ತವಾದ ಈ ಪೂಜಾ ವಿಧಾನವು ಮುಗಿದ ಬಳಿಕ ಅದನ್ನು ಜಲದಲ್ಲಿ ವಿಸರ್ಜಿಸುತ್ತಾರೆ. ಇದಕ್ಕೆ 'ಪಾರ್ಥಿ

ವೇಶ್ವರ ಪೂಜೆ ' ಎಂದು ಹೆಸರು. ಈ ಅಂಶವನ್ನು ' ಧರ್ಮಸಿಂಧು ' ಗ್ರಂಥದ 110 ನೆಯ ಪುಟದಿಂದ ವಿವರವಾಗಿ ತಿಳಿಯಬಹುದು.

ಪುಟ ೩೯೪ **ಅಪಸ್ಮಾರ :—**

ಬೈಗಳ ಪೈಕಿ ಇದೊಂದು ಬಗೆ. ಅಪಸ್ಮಾರ (ಮೂರ್ಛೆ, ಮಲರೋಗ, ಗ್ರಸ್ತನು ದೇಹದ ಮೇಲಿನ ಭಾಗವನ್ನು ಕಳೆದುಕೊಂಡು ಕೈ-ಕಾಲುಗಳನ್ನು ಮನಸ್ವೀ ಬಡಿಯುತ್ತಲೂ ಬಾಯಿಗೆ ಬಂದಂತೆ ಬೊಗಳುತ್ತಲೂ ಇರುವಂತೆ ಆಚರಿಸುವ ಸ್ವೇಚ್ಛಾಪ್ರವರ್ತಕರನ್ನು ಈ ಪದದಿಂದ ನಿಂದಿಸುವುದು ರೂಢಿಯಲ್ಲಿದೆ. ಅಪಸ್ಮಾರಿಯು ಹೇಗೆ ವ್ಯವಹಾರಾನರ್ಹನೋ, ಉನ್ಮತ್ತರಾದವರನ್ನೂ ಅದರಂತೆ ಭಾವಿಸುವುದೇ ವ್ಯವಹಾರದಲ್ಲಿ ಈ ಶಬ್ದಕ್ಕೆ ಅರ್ಥ.

ಪುಟ ೪೦೪. **ಗರುತ್ಮಾನ್ :—**

ಪಕ್ಷಿರಾಜ. ಇವನು ಮಹಾವಿಷ್ಣುವಿಗೆ ವಾಹನನಾದವನು. ಕಶ್ಯಪಮಹರ್ಷಿಯ ಪತ್ನಿಯರ ಪೈಕಿ 'ವಿನತೆ' ಎಂಬುವಳೇ ಇವನ ತಾಯಿ. ಸೂರ್ಯನ ಸಾರಥಿ; ಅರುಣನು ಈತನ ಅಣ್ಣ. ವಿನತೆಯು ತನ್ನ ಸವತಿಯಾದ ಕದ್ರೂವಿಗೆ ಯಾವುದೋ ಒಂದು ಪಣದಲ್ಲಿ ಸೋತು ದಾಸಿಯಾಗಿದ್ದಳು. ಇವಳ ಮಗನಾದುದರಿಂದ ಗರುಡನೂ ಕದ್ರು ಹೇಳಿದಂತೆ ಕೇಳಿಕೊಂಡು ನಡೆಯಬೇಕಾಗಿ ಬಂದಿತು. ಒಮ್ಮೆ ಕದ್ರು ತನ್ನ ಮಕ್ಕಳಾದ ಸರ್ಪಗಳನ್ನು ಇವನು ತನ್ನ ಹೆಗಲ ಮೇಲೆ ಕೂರಿಸಿಕೊಂಡು ಸುತ್ತಾಡಿ ಬರುವಂತೆ ಆಜ್ಞೆಮಾಡಿದಳು. ಇವನು ' ಹಾಗೆಯೇ ಆಗಲಿ ' ಎಂದು ಒಪ್ಪಿಕೊಂಡು ತನ್ನ ಚಿಕ್ಕಮ್ಮನ ಮಕ್ಕಳನ್ನು ಎತ್ತಿಕೊಂಡು ಸೂರ್ಯಮಂಡಲದ ಸಮೀಪದವರೆಗೂ ಹಾರಿಹೋಗಿ ಬಹಳ ಹೊತ್ತು ಸುತ್ತಾಡುತ್ತಲಿದ್ದನು. ಹಿಂದಿರುಗಿ ಬರುವಷ್ಟರಲ್ಲೆ ಕದ್ರುವಿನ ಮಕ್ಕಳ ಪೈಕಿ ಅನೇಕ ಮಂದಿ ಸೂರ್ಯನ ಝಳಕ್ಕೆ ಸಿಕ್ಕು ಸುಟ್ಟು ಸತ್ತುಹೋಗಿದ್ದರು. ಇದನ್ನು ಕಂಡು ಕದ್ರು ಗರುಡನನ್ನು ಅತಿಯಾಗಿ ನಿಂದಿಸಲು ಮನನೊಂದ ಗರುಡನು ತನ್ನ ಹಾಗೂ ತನ್ನ ತಾಯಿಯ ದಾಸ್ಯವೃತ್ತಾಂತವನ್ನು ಕೇಳಿ ತಿಳಿದು, ಅದರಿಂದ ಮುಕ್ತರಾಗಲು ಪರಿಹಾರವೇನೆಂದು ಕದ್ರುವನ್ನು ಕೇಳಲು 'ಅಮೃತವನ್ನು ತಂದುಕೊಟ್ಟರೆ ಬಿಡುಗಡೆ ಮಾಡುವೆನೆ'ಂದು ಕದ್ರು ಹೇಳಿದಳು. ಅದರಂತೆ ಗರುಡನು ದೇವಲೋಕಕ್ಕೆ ಹಾರಿಹೋಗಿ ರಕ್ಷಿಗಳನ್ನೆಲ್ಲ ಕೊಂದು ಅಮೃತಕಲಶವನ್ನು ತಂದು ಚಿಕ್ಕಮ್ಮನಿಗೆ ಕೊಟ್ಟು, ತಮ್ಮಿಬ್ಬ

ರನ್ನೂ ಬಿಡುಗಡೆಮಾಡಿಕೊಂಡನು. ಈ ಕಥೆಯು ಭಾರತದ ಆದಿಪರ್ವ ೨೩, ೨೫, ೩೨, ೩೪, ೬೬ ರಲ್ಲೂ, ಸಭಾಪರ್ವ ೯ ರಲ್ಲೂ, ಮಹಾಭಾರತದ ಮತ್ತಿತರ ಪರ್ವಗಳಲ್ಲೂ ವಿಸ್ತಾರವಾಗಿ ಬರುತ್ತದೆ. ಉತ್ಸಾಹಿಗಳು ನೋಡಿ ತಿಳಿಯಬಹುದಾಗಿದೆ.

**ಪುಟ ೪೧೯. ವೈಶ್ವದೇವ :—**

ಇದು ಪಂಚ ಮಹಾಯಜ್ಞಗಳ ಪೈಕಿ ಒಂದು.

ವೈಶ್ವದೇವಃ ಪ್ರಕರ್ತವ್ಯಃ ಪಂಚಸೂನಾಪನುತ್ತಯೇ ।
ಕಂಡನೀ ಪೇಷಣೀ ಚುಲ್ಲೀ ಜಲಕುಂಭೋಽಥ ಮಾರ್ಜನೀ ॥೧॥

ಎಂದು ೫ ಬಗೆಯ ಹಿಂಸಾಸ್ಥಾನಗಳು. ಅಲ್ಲಿ ಉಂಟಾಗಬಹುದಾದ ಪಾತಕಗಳ ಪರಿಮಾರ್ಜನೆಗಾಗಿ ಮಾಡತಕ್ಕ ಅನ್ನ ಸಂಸ್ಕಾರ ವಿಶೇಷ. ಇದು 'ಧರ್ಮಸಿಂಧು' ಗ್ರಂಥದ ತೃತೀಯ ಪರಿಚ್ಛೇದ ಪೂರ್ವಾರ್ಧದಲ್ಲಿ 'ಪಂಚಮಹಾಯಜ್ಞಕೃತ್ಯ' ಎಂಬ ಶಿರೋನಾಮೆಯಲ್ಲಿ ಉಕ್ತವಾಗಿದೆ, ಅಪೇಕ್ಷೆಪಡುವವರು ಈ ಭಾಗವನ್ನು ನೋಡಬಹುದು, PP. 260-265.

**ಪುಟ ೪೫೨. ವಿಶ್ವಕರ್ಮ :—**

ಈತನು 'ಪ್ರಭಾಸ' ಎಂಬ ವಸುವಿನ ಮಗ. ದೇವಗುರು; ಬೃಹಸ್ಪತ್ಯಾಚಾರ್ಯನ ತಂಗಿಯಾದ 'ಬ್ರಹ್ಮವಾದಿನಿ' ಯು ಈತನ ಜನನಿ. 'ತ್ವಷ್ಟೃ' ಎಂದೂ ಈತನಿಗೆ ಮತ್ತೊಂದು ಹೆಸರು. ಇವನ ವೃತ್ತಿ, ದೇವತೆಗಳ ಬಡಗಿತನ. ಈತನು ರಾಕ್ಷಸರಾಜನಾದ ಪ್ರಹ್ಲಾದರಾಜನ ಮಗಳು; 'ವಿರೋಚನೆ' ಎಂಬುವಳನ್ನು ಲಗ್ನವಾಗಿ 'ವಿಶ್ವರೂಪಾಚಾರ್ಯ' ಎಂಬ ಸು-ಪುತ್ರನನ್ನು ಪಡೆದನು. ಈ ವಿಶ್ವರೂಪಾಚಾರ್ಯನಿಗೆ 'ತ್ರಿಶಿರಸ್' ಎಂದೂ ನಾಮಾಂತರ. ಪಾಂಡವರಿಗೆ 'ಇಂದ್ರಪ್ರಸ್ಥ' ವನ್ನು ಈತನು ನಿರ್ಮಿಸಿಕೊಟ್ಟವನು. ಸುಂದೋಪಸುಂದರನ್ನು ನಿಗ್ರಹಿಸುವುದಕ್ಕಾಗಿ ಈತನು 'ತಿಲೋತ್ತಮೆ' ಯನ್ನು ಸೃಜಿಸಿದನು. ತ್ರಿಪುರಾಸುರ ಸಂಹಾರ ಕಾಲದಲ್ಲಿ ಪರಶಿವನಿಗೆ ಲೋಕೋತ್ತಮವಾದ ರಥವನ್ನು ನಿರ್ಮಿಸಿಕೊಟ್ಟನು. ಇವನ ಚರಿತ್ರೆಯು ಭಾರತದ ಆದಿಪರ್ವ ೬೭, ೨೨೭, ೨೩೧ ನೆಯ ಅಧ್ಯಾಯಗಳಲ್ಲೂ, ಕರ್ಣಪರ್ವ ೨೬ ನೆಯ ಅಧ್ಯಾಯದಲ್ಲೂ, ವಿಷ್ಣುಧರ್ಮೋತ್ತರ ಪುರಾಣ ೧.೧೫ ರಲ್ಲೂ, ಹರಿವಂಶ ೧, ೩ ರಲ್ಲೂ, ವಾಯುಪುರಾಣ ೮೪ ರಲ್ಲೂ ಭಾಗವತ ೬-೬ ರಲ್ಲೂ ವಿಸ್ತಾರವಾಗಿ ಬರುತ್ತದೆ.

**ಪುಟ ೪೫೩. ಚಿತ್ರಾಸನ :—**

a Seat covered with various or variegated carpets.

**ಪುಟ ೪೬೯. 1. ಶಚೀ :—**

ಇವಳು 'ಪುಲೋಮ' ಎಂಬ ಅಸುರನ ಮಗಳು. ದೇವೇಂದ್ರನ **ಹೆಂಡತಿ.** ಜಯಂತನೆಂಬುವನು ಇವಳ ತನಯ. ನಹುಷಚಕ್ರವರ್ತಿಯು ದೇವೇಂದ್ರನ ಪದವಿಗೇರಿದ್ದಾಗ ಈಕೆಯನ್ನು ಕಾಮಿಸಿದನು. ಆಗ ಇವಳು ಅಗಸ್ತ್ಯಮಹರ್ಷಿಯನ್ನು ಮರೆಹೊಕ್ಕು ನಹುಷನು ಸರ್ಪವಾಗಿ ನೆಲಕ್ಕುರುಳುವಂತೆ ಶಾಪವನ್ನು ಕೊಡಿಸಿದಳು. ಪತಿವ್ರತಾಸ್ತ್ರೀಯರ ಮಾಹಾತ್ಮ್ಯದ ವಿಷಯವಾಗಿ ಇವಳು ಸೂರ್ಯನೊಂದಿಗೆ ಸಂವಾದ ಮಾಡಿದಳು. ಇವಳ ಚರಿತ್ರೆಯು ಭಾರತದ ಸಭಾಪರ್ವ ೭, ೧೧ ವನ ಪರ್ವ ೧೫೦.೧೫೩, ಉದ್ಯೋಗಪರ್ವ ೧೧, ೧೭, ಅನುಶಾಸನ ಪರ್ವ ೧೪, ೧೫೭ ನೆಯ ಅಧ್ಯಾಯಗಳಲ್ಲಿ ವಿಸ್ತಾರವಾಗಿ ಬರುತ್ತದೆ.

**2 ಸಾವಿತ್ರೀ :—**

i ದೇವತಾತ್ಮಕಳು. ಗಾಯತ್ರೀದೇವಿಯ ರೂಪಾಂತರಕ್ಕೆ ಈ ಹೆಸರು ಎಂದು ಭಾರತದ ವನಪರ್ವ ೨೯೪ ನೆಯ ಅಧ್ಯಾಯದಲ್ಲಿ ವರ್ಣಿಸಿದ್ದಾರೆ.

ii ಆದಿಶಕ್ತಿಯ ಪಂಚಪ್ರಕೃತಿಗಳಲ್ಲಿ ಒಬ್ಬಳಿಗೆ ಈ ಹೆಸರು ಸಲ್ಲುತ್ತದೆ ಎಂದು ದೇವೀಭಾಗವತ ಪುರಾಣದ ೫-೧ ನೆಯ ಅಧ್ಯಾಯದಲ್ಲಿ ಉಕ್ತವಾಗಿದೆ.

iii ಮೂರನೆಯವಳೇ ಅಶ್ವಪತಿ ಮಹಾರಾಜನ ಸುಪುತ್ರಿ. ತನ್ನ ಪತಿ, ಅಲ್ಪಾಯುವಾದ ಸತ್ಯವಂತನನ್ನು ಯಮಪಾಶದಿಂದ ಬಿಡಿಸಿ ತಂದ ಪತಿವ್ರತಾ ಶಿರೋಮಣಿ. ಇವಳ ಚರಿತ್ರೆಯು ಭಾರತವನಪರ್ವದ ೨೯೩ ರಿಂದ ೩೦೦ ನೆಯ ಅಧ್ಯಾಯಗಳವರೆಗೂ, ಮತ್ಸ್ಯಪುರಾಣ ೨೦೮ ರಿಂದ ೨೧೪ ನೆ ಅಧ್ಯಾಯಗಳ ವರೆಗೂ ವರ್ಣಿತವಾಗಿದೆ. ಈ ಮೂವರೂ ಲೋಕೈಕ ಸುಂದರಿಯರೆನಿಸಿದವರು.

**3. ಅರುಂಧತೀ :—**

ಈ ಪುಣ್ಯಶ್ಲೋಕಳು ವಸಿಷ್ಠ ಮಹರ್ಷಿಗಳ ಧರ್ಮಪತ್ನಿ. ಈಕೆಗೆ 'ಅಕ್ಷಮಾ-

ಲೆ' ಎಂಬ ನಾಮಾಂತರವೂ ಉಂಟು. ಶಕ್ತಿಯು ಈಕೆಯ ಮಗ. ಈಕೆಯು ಕರ್ದಮ ಮುನಿಯಿಂದ ಸ್ವಾಯಂಭುವ ಮನುಪುತ್ರಿಯಾದ 'ದೇವಹೂತಿ'ಯಲ್ಲಿ ಜನಿಸಿದವಳು. ಇವಳಿಗೆ 'ಊರ್ಜೆ' ಎಂಬುದೂ ಒಂದು ಹೆಸರು. ಮರೀಚಿ ಮಹರ್ಷಿಯ ಪತ್ನಿಯಾದ 'ಕಲೆ'ಯೂ, ಅಂಗಿರಸನ ಪತ್ನಿಯಾದ 'ಶ್ರದ್ಧೆ'ಯೂ, ಪುಲಸ್ತ್ಯನ ಹೆಂಡತಿಯಾದ 'ಹವಿರ್ಭುಕ್' ಎಂಬುವಳೂ, ಪುಲಹ ಮಹರ್ಷಿಯ ಮಡದಿಯಾದ 'ಗತಿ' ಎಂಬುವಳೂ, ಕ್ರತುವಿನ ಭಾರ್ಯೆ; 'ಕ್ರಿಯೆ' ಎಂಬುವಳೂ, ಭೃಗುಪತ್ನಿಯಾದ 'ಖ್ಯಾತಿ'ಯೂ, ಅಥರ್ವಾಂಗಿರಸನ ರಮಣಿಯಾದ 'ಶಾಂತಿ'ಯೂ, ಅತ್ರಿಪತ್ನಿ; 'ಅನಸೂಯೆ'ಯೂ, ಕಪಿಲಮಹರ್ಷಿಯೂ ಈಕೆಗೆ ಒಡಹುಟ್ಟಿದವರು. ಒಮ್ಮೆ ಈಕೆಯು ಪತಿದ್ರೋಹವನ್ನು ಮಾಡಿದಳಾದ ಕಾರಣ ಅತಿ ಸೂಕ್ಷ್ಮರೂಪವುಳ್ಳವಳಾದಳು. ತನ್ನ ಪಾತಿವ್ರತ್ಯ ಪ್ರಭಾವದಿಂದ ಉಕ್ಕಿನ್ನಬದರ ಫಲಗಳನ್ನು ಪಾಕಮಾಡಿ ಪರಮೇಶ್ವರನಿಗೆ ಬಡಿಸಿ ಅವನಿಂದ ಅಮೋಘ ವರಗಳನ್ನು ಪಡೆದ ಮಹಾತ್ಮಳು. ಈ ಸಾಧ್ವಿಯು ನಕ್ಷತ್ರರೂಪವನ್ನು ತಳೆದು ಸಪ್ತರ್ಷಿಮಂಡಲದಲ್ಲಿ ವಸಿಷ್ಠ ನಕ್ಷತ್ರದ ಅಡಿಗೆ ಇಂದಿಗೂ ಕಾಣುವಳು. ಆಯುಷ್ಯ ತುಂಬಿ ಬಂದ ಮನುಷ್ಯನ ಕಣ್ಣುಗಳಿಗೆ ಮರಣ ಕಾಲಕ್ಕೆ ೬ ತಿಂಗಳು ಮೊದಲಿನಿಂದಲೂ ಈ ನಕ್ಷತ್ರ ಕಾಣಿಸುವುದಿಲ್ಲವೆಂದು 'ಯೋಗರತ್ನಾಕರ' ಎಂಬ ವೈದ್ಯಗ್ರಂಥದಲ್ಲಿ ಹೇಳಿದೆ. ನೂತ್ನ ವಿವಾಹಿತ ದಂಪತಿಗಳಿಗೆ ವಿವಾಹಾಂಗ ಸಪ್ತಪದೀ ಸಂಸ್ಕಾರ ನಡೆದ ಕೂಡಲೇ ಅರುಂಧತೀ-ವಸಿಷ್ಠರ ನಕ್ಷತ್ರಗಳನ್ನು ತೋರಿಸಿ 'ನೀವೂ ಅವರಂತೆಯೇ ಸರ್ವದಾ ಅನ್ಯೋನ್ಯವಾಗಿರಿ' ಎಂದು ಹರಸುವುದು ತ್ರಿವರ್ಣದವರಲ್ಲೂ ಇಂದಿಗೂ ವಾಡಿಕೆಯಾಗಿರುತ್ತೆ.

4 **ರತಿ :—**

ಇವಳ ಪರಿಚಯವನ್ನು ಹಿಂದಿನ ಸಂಪುಟಗಳಲ್ಲಿ ಕೊಟ್ಟಿದೆ.

**ಪುಟ ೪೮೨. ವ್ರತಬಂಧ**

ಉಪನಯನ ಸಂಸ್ಕಾರ.: ನಿತ್ಯ, ನೈಮಿತ್ತಿಕಾದಿ ಕರ್ಮ ಹಾಗೂ ವ್ರತಗಳನ್ನಾಚರಿಸಲಿಕ್ಕೆ ಅರ್ಹನನ್ನಾಗಿಮಾಡುವ ಸಂಸ್ಕಾರ.

**ಪುಟ ೮. ಇಂದ್ರಕರಿ.**

ಮಹೇಂದ್ರನ ಪಟ್ಟದ ಆನೆ. ಇದರ ಹೆಸರು 'ಐರಾವತ'! 'ಭದ್ರಮನಸ'

ಎಂಬ ಗಜೋತ್ತಮನಿಂದ ಇದು ಜನಿಸಿದೆ. ಇದರ ವಾಸ, ಪೂರ್ವದಿಕ್ಕು. ಈ ಕಥೆ ಭಾರತದ ಅನುಶಾಸನಿಕ ಪರ್ವ ೧೮ ನೆಯ ಅಧ್ಯಾಯದಲ್ಲಿ ವಿಸ್ತೃತವಾಗಿದೆ.

ಪುಟ ೪೯೫. 1. **ಶೋಚಿಷ್ಕೇಶಃ**

ಜ್ವಾಲೆಯಂತೆ ಕೆಂಪಾದ ತಲೆಗೂದಲು ಉಳ್ಳವನು. ಸಾಮಾನ್ಯವಾಗಿ ಈ ಪದವನ್ನು ಅಗ್ನಿದೇವನಿಗೂ, ಸೂರ್ಯನಿಗೂ ಪ್ರಯೋಗಿಸುವ ವಾಡಿಕೆ ಇದೆ.

2 **ಚಿಂತಾಮಣಿ** :—

'Thought-gem' a fabulous gem supposed to yield its possessor all desires.

ಪುಟ ೫೦೯. **ವಾಸುಕಿಃ** :—

ಕಶ್ಯಪನಿಂದ ಕದ್ರುವಿನಲ್ಲಿ ಜನಿಸಿದ ಸರ್ಪನು. ಇವನು ಸರ್ಪಜಾತಿಯವರಿಗೆಲ್ಲ ಶ್ರೇಷ್ಠನೆನಿಸಿದವನು. ಈತನ ಹೆಂಡತಿ 'ಶತಶೀರ್ಷೆ' ಇವನನ್ನು ಹಗ್ಗವನ್ನಾಗಿ ಮಾಡಿ ದೇವ-ದಾನವರು ಕ್ಷೀರೋದಧಿಯನ್ನು ಕಡೆದರು. ಇವನ ಚರಿತ್ರೆ ಭಾರತ ಆದಿಪರ್ವ ೩೫, ೩೭, ೩೮, ೫೪, ೬೬ರಲ್ಲೂ, ಸಭಾಪರ್ವ ೯ರಲ್ಲೂ, ಉದ್ಯೋಗ ಪರ್ವ ೧೦೯ ನೆಯ ಅಧ್ಯಾಯದಲ್ಲೂ ಬರುವುದು.

ಪುಟ ೫೧೦. **ಕದ್ರೂಃ** :—

ಇವಳು ದಕ್ಷ ಪ್ರಜಾಪತಿಯ ಮಗಳು. ಕಶ್ಯಪಮುನಿಯ ಹದಿಮೂರು ಮಂದಿ ಪತ್ನಿಯರಲ್ಲಿ ಇವಳೂ ಒಬ್ಬಳು. ಸರ್ಪಸಂತತಿಗೆ ಇವಳು ಜನನಿ. ಬಹಳ ಚಲುವೆ. ಒಂದು ದಿನ ಇವಳು ತನ್ನ ಸವತಿಯಾದ ವಿನತೆಯೊಂದಿಗೆ ವಿಹಾರಕ್ಕಾಗಿ ಸಮುದ್ರ ತೀರಕ್ಕೆ ಹೋಗಿದ್ದಾಗ, ಅಲ್ಲಿ ಮೇಯುತ್ತಲಿದ್ದ ಉಚ್ಚೈಶ್ರವಸ್ಸನ್ನು ತೋರಿಸಿ ವಿನತೆಯು 'ಕುದುರೆ ಎಷ್ಟು ಬೆಳ್ಳಗಿದೆ ? ನೋಡು' ಎಂದು ಹೇಳಿದೊಡನೆಯೇ ಕದನ ಕುತೂಹಲಿಯಾದ ಕದ್ರು 'ನಿನಗೆ ಕಣ್ಣು ಕಾಣುವುದಿಲ್ಲವೇನು ? ಅದರ ಬೆನ್ನಿನ ಮೇಲೆ ಕರಿ ಗೆರೆಗಳಿವೆ, ನೋಡು' ಎಂದು ವ್ಯಂಗ್ಯವಾಗಿ ಮೂದಲಿಸಿದಳು. ಇದರಿಂದ ಸ್ವಲ್ಪ ಕೆಣಕಿದಂತಾದ ವಿನತೆಯು ಸ್ಪರ್ಧೆಗೊಂಡು 'ಕಪ್ಪು ಗೆರೆ ಇದ್ದರೆ ನಾನು ನಿನಗೆ ದಾಸಿಯಾಗುವೆನು, ಇಲ್ಲವಾದರೆ ನೀನು ನನಗೆ ದಾಸಿಯಾಗುವೆಯ ?' ಎಂದು ಪರ

ತ್ತನ್ನು ಹಾಕಿದಳು. ಅಷ್ಟರಲ್ಲಿ ಕತ್ತಲಾದ್ದರಿಂದ 'ಪ್ರಭಾತದಲ್ಲಿ ಇವನ್ನು ಪರೀಕ್ಷಿ ಸೋಣ'ವೆಂದು ನಿಶ್ಚಯಿಸಿ, ಇಬ್ಬರೂ ತಮ್ಮ ತಮ್ಮ ವಸತಿಗಳಿಗೆ ಹಿಂದಿರುಗಿದರು. ಕದ್ರುವಿಗೆ 'ತಾನು ಹೇಗೆ ಗೆದಿಯುವುದು ? ' ಎಂದು ಚಿಂತೆಯುಂಟಾಗಿ ರಾತ್ರಿ ತನ್ನ ಮಕ್ಕಳಾದ ಕೃಷ್ಣ ವರ್ಣದ ಸರ್ಪಗಳನ್ನು ಕರೆದು ಸವತಿಯೊಂದಿಗೆ ತನಗುಂಟಾದ ಪಂಥವನ್ನು ವಿವರಿಸಿ 'ನಿಮ್ಮಲ್ಲಿ ಯಾರಾದರೂ ಆ ಕುದುರೆಯ ಕುತ್ತಿಗೆಯಿಂದ ಹಿಡಿದು ಬಾಲದ ವರೆಗೂ ಜೋತುಬಿದ್ದು, ನಾವಿಬ್ಬರೂ ಬಂದು ನೋಡಿ ನಮ್ಮ ನಮ್ಮ ವಿವಾದವನ್ನು ತೀರ್ಮಾನಮಾಡಿಕೊಳ್ಳುವವರೆಗೂ ಕುದುರೆಯ ಬೆನ್ನಿನ ಮೇಲೆ ಕಪ್ಪು ಗೆರೆ ಇರುವ ಹಾಗೆ ಮಾಡಬೇಕು ' ಎಂದು ಆಜ್ಞಾಪಿಸಿದಳು. ಈ ಬಗೆಯ ಅಧರ್ಮಾ ಚರಣೆಗೆ ಕೆಲವು ಸರ್ಪಗಳು ಒಡಂಬಡದಿರಲು, ಅವರೆಲ್ಲರನ್ನು ಮಕ್ಕಳೆಂದೂ ಗಣಿಸದೆ 'ಹಾಳಾಗಿ ಹೋಗಿ ' ಎಂದು ಶಪಿಸಿದಳು. ಇದನ್ನು ಕೇಳಿ ಹೆದರಿದ ಕರ್ಕೋಟಕ ಗಳು ತಾಯಿಯ ಮಾತನ್ನು ನಡೆಸಲು ಒಪ್ಪಿಕೊಂಡವು. ಬೆಳಗಾಗುತ್ತಲೇ ಕದ್ರು ವಿನತೆಯನ್ನು ಕರೆದೊಯ್ದು ಕುದುರೆಯನ್ನು ತೋರಿಸಿದಳು. ಸರ್ಪಗಳ ಕೃತ್ರಿಮ ದಿಂದ ಕುದುರೆಯ ಬೆನ್ನು ಕಪ್ಪುಗೆರೆಯುಳ್ಳದ್ದಾಗಿದ್ದಿತು. ಸಾತ್ತ್ವಿಕಳಾದ ವಿನತೆಯು ಕದ್ರುವಿನ ಕೃತ್ರಿಮವನ್ನರಿಯದೇ ಅವಳಿಗೆ ದಾಸಿಯಾದಳು. ಕದ್ರುವಿಗೆ ಶೇಷ, ವಾಸುಕಿ, ಧನಂಜಯ, ಮುಂತಾದ ಅನೇಕ ಮಂದಿ ಪುತ್ರರೂ, ಜರತ್ಕಾರು ಎಂಬ ಕನ್ಯೆಯೂ ಜನಿಸಿದರು. ಈ ಕಥೆಯು ಭಾರತದ ಆದಿಪರ್ವ ೧೭ ನೆಯ ಅಧ್ಯಾಯ ದಲ್ಲಿ ವಿಸ್ತಾರವಾಗಿ ಬರುತ್ತದೆ.

# ಶುದ್ಧಿಪತ್ರಮ್

| ಪುಟ | ಅಶುದ್ಧ | ಶುದ್ಧ |
|---|---|---|
| ೪ | ನಂ | ನ |
| ೫ | ಭಾಸಯ | ಭಾಸರ್ಯ |
| ೧೦ | ಅನೀಕ್ಷಿತ | ಅನಿರೀಕ್ಷಿತ |
| ೨೦ | ಕುಂಟುಂಬಿನೇ | ಕುಟುಂಬಿನೇ |
| ೩೭ | ಸ್ಪೃರ್ಶ | ಸ್ಪೃಶ |
| ೪೬ | ಜಗದು ಎತ್ತಿ | ಜಗದುತ್ಪತ್ತಿ |
| ೫೩ | ಬುದ್ಧಿವತಂ | ಬುದ್ಧಿಮಂತಂ |
| ೫೯ | ವಿಜತ್ಯ | ವಿಜಿತ್ಯ |
| ,, | ಯುಚ್ಛಾ | ಯುಚ್ಛಾ |
| ೭೪ | ಕ್ಷಪ್ರ | ಕ್ಷುದ್ರ |
| ೮೩ | ಜಘನ | ಜಘಾನ |
| ೮೪ | ಭೂಶ | ಭೂತ |
| ೯೩ | ನುವಂತಿ | ಸ್ತುವಂತಿ |
| ೯೭ | ಕಾಲಂ | ಕಾಲ |
| ೯೮ | ಹಂತವೋ | ಹಂತವ್ಯೋ |
| ೧೦೮ | ಸಪ್ರದಾಸ್ಯತಿ | ಪ್ರದಾಸ್ಯತಿ |
| ೧೩೩ | ಸರ್ವೇ | ಸರ್ವೇ |
| ,, | ಸರ್ವೇ | ಸರ್ವ |
| ೧೪೬ | | ಯುಂ ಧ್ಯಾಯಸಿ ದಿವಾ-ನಿಶಂ |
| ೧೫೭ | ತೀಶಿ | ತೀತಿ |
| ೧೯೦ | ತ್ರಿಸಂಧಾ | ತ್ರಿಸಂಧ್ಯಾ |
| ೧೯೫ | ಮೃತ್ಯು | ಮೃತ್ಯುಃ |
| ೨೦೪ | ಮೇಲೆಬೆಳೆ | ಮೇಲೆ ಮುಳೆ-ಬೆಳೆ |
| ೨೦೫ | ಶೋರಸ್ಯ | ಶಿಶೋರಸ್ಯ |
| ೨೧೬ | ಲಘ | ಲಘು |
| ೨೧೭ | ನಿಚಯುಂ | ನಿಚಯಂ |

| ಪುಟ | ಅಶುದ್ಧ | ಶುದ್ಧ |
|---|---|---|
| ೨೪೫ | ಆಸುರೀಂ | ಆಸುರೀಂ |
| ೨೮೫ | ಪಾಲನಾಯ | ಪಾಲನಾಯ ಚ |
| ೩೨೫ | ದೃತ್ಯ | ದೈತ್ಯ |
| ೩೩೦ | ಕ್ಷಣೋ | ಕ್ಷಣಂ |
| ೩೩೮ | ಮಮುಚುಃ | ಮುಮುಚುಃ |
| ೩೪೫ | ಮದಯತಂ | ಮದಯುತಂ |
| ೩೫೦ | ರರುಹುಃ | ರುರುಹುಃ |
| ೩೫೨ | ಬರುದಂ | ಬಿರುದಂ |
| ೩೬೨ | ಪಾಣಿಲ್ಪೈಃ | ಪಾಣಿತಲ್ಪೈಃ |
| ೩೭೦ | ಅನ್ವಯಃ | ಅನ್ವಯುಃ |
| ೩೮೪ | ಮತ ಃ | ಮರ್ತ್ಯೈಃ |
| ೩೯೨ | ಧಾನವಮಾನಾ | ಧಾವಮಾನಾ |
| ೪೦೬ | ದೃಷ್ವಾ | ದೃಷ್ಟ್ವಾ |
| ೪೦೭ | ತತ್ಪ್ರಸಸಾದಾತ್ | ತತ್ಪ್ರಸಾದಾತ್ |
| ೪೦೯ | | ಸ್ತುವಂತ್ಯಾಂ |
| ೪೧೧ | ಷೆ | ಶೇಷೇ |
| ೪೨೧ | ಶಮ್ | ನಿಶಮ್ |
| ೪೬೧ | ಗೌರ್ಯುವಾಚ | ಕ ಉವಾಚ |
| ೪೭೩ | ದ್ಗಹೇ | ದ್ಗೃಹೇ |
| ೪೭೫ | ನಾಸತ್ಯಾ | ನಾಸತ್ಯಾ |
| ೪೮೦ | ಗೌರ್ಯವಾಚ | ಗೌರ್ಯುವಾಚ |
| ೫೦೮ | ಗ್ವಿಭೋ | ಡ್ವಿಭೋ |
| ೫೩೩ | ಮಲಾ | ಮಾಲಾ |
| ೫೩೫ | ಸೊಚ್ಚೈಃ | ಸೋಚ್ಚೈಃ |
| ,, | ನ್ನೀರೀಕ್ಷ್ಯ | ನ್ನಿರೀಕ್ಷ್ಯ |
| ೫೩೬ | ಉಡ್ಡೀಯಯೋ | ಉಡ್ಡೀಯ |
| ೫೩೭ | ಇತ್ಯುಕ್ತ್ಪಾ | ಇತ್ಯುಕ್ತ್ವಾ |
| ೫೩೯ | ಪಾದಾರ್ | ಪಾದಾರ್ |
| ೫೪೯ | ತಿಷು | ತ್ರಿಷು |